# ಕೆಲವು ಸಣ್ಣ ಕತೆಗಳು

ಶ್ರೀನಿವಾಸ

ಜೀವನ ಕಾರ್ಯಾಲಯ
ಬಸವನಗುಡಿ
ಬೆಂಗಳೂರು

ಮೊದಲನೆಯ ಮುದ್ರಣ ೧೯೩೦
ಎರಡನೆಯ ಮುದ್ರಣ ೧೯೩೬
ಮೂರನೆಯ ಮುದ್ರಣ ೧೯೫೪
ನಾಲ್ಕನೆಯ ಮುದ್ರಣ ೧೯೪೫
ಐದನೆಯ ಮುದ್ರಣ ೧೯೪೭

ಆರನೆಯ ಮುದ್ರಣ ೧೯೫೬


ರೂ. ೨—೪—೦

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೬

# ಮೊದಲ ಮುದ್ರಣದ ಮುನ್ನುಡಿ

ಈ ಸಣ್ಣ ಪುಸ್ತಕದಲ್ಲಿ ಹತ್ತು ಸಣ್ಣ ಕತೆಗಳಿವೆ. ಕೆಲವು ಶಾಮಣ್ಣನವರು ನಮ್ಮೂರಿನಲ್ಲಿ ನಮಗೆ ಹೇಳಿದ ಕತೆಗಳು. ಮಿಕ್ಕವು ನಾನು ಬರೆದವು. ಕೆಲವು ಮೊದಲೇ ಮಧುರವಾಣಿಯಲ್ಲಿ ಪ್ರಕಟವಾಗಿವೆ. ಉಳಿದುವು ಅಚ್ಚಾಗುವುದು ಇದೇ ಮೊದಲು.

ಈ ಮುನ್ನುಡಿಯಲ್ಲಿ ನಮ್ಮೂರಿನ ವಿಚಾರವನ್ನೂ ಶಾಮಣ್ಣನವರ ವಿಚಾರವನ್ನೂ ನನ್ನ ಮತ್ತು ಈ ಕತೆ ಕೆಲವದರಲ್ಲಿ ಬರುವ ನಮ್ಮೂರಿನವರ ವಿಚಾರವನ್ನೂ ಸ್ವಲ್ಪ ವಿಶದವಾಗಿ ಬರೆಯಬೇಕೆಂದು ಉದ್ದೇಶಮಾಡಿದ್ದೆವು. ಆದರೆ ನನ್ನ ಸ್ನೇಹಿತರು ಅನೇಕರು ಅದು ಈಗ ಅವಶ್ಯಕವಿಲ್ಲ ಎಂದದ್ದರಿಂದ ಸುಮ್ಮನಾಗಿದೇನೆ. ಶಾಮಣ್ಣನವರೂ ಕೂಡ "ನನ್ನ ನಿನ್ನ ಮಾತೇಕೆ? ಬೇಡಪ್ಪ ಎಂದರೆ ಅಚ್ಚು ಹಾಕಿಸಬೇಕೆಂದು ಹಟ ಹಿಡಿದಿದೀಯೆ; ಹಾಗೆಯೇ ಮಾಡು. ಆದರೆ ನಮ್ಮ ಹೆಸರು ಊರು ಕುಲ ಗೋತ್ರ ಓದುವವರಿಗೇನು ಬೇಕಾಗುತ್ತದೆ?" ಎಂದರು. ಆದ್ದರಿಂದ ನನ್ನ ಪ್ರಾರ್ಥನೆಯೊಂದು; ನಾನು ಶಾಮಣ್ಣನವರ ವಿಚಾರವನ್ನೂ ನಮ್ಮೆಲ್ಲರ ವಿಚಾರವನ್ನೂ ತಿಳಿಸುವತನಕ ನಮ್ಮ ಕುಲಗೋತ್ರಗಳ ವಿಷಯ ನಮ್ಮ ಪಾಠಕರು ಯೋಚನೆ ಹಚ್ಚಿಕೊಳ್ಳಕೂಡದೆಂದು. ಮಹಾಶಯರೆ ಅಷ್ಟನ್ನು ನಡೆಯಿಸಿಕೊಡಿ.

ಕುಲಗೋತ್ರಗಳನ್ನಲ್ಲದೆ ಈ ಕತೆಗಳಿಂದ ನಮ್ಮ ಅಭಿಪ್ರಾಯಗಳನ್ನು ತಿಳಿಯುವೆವೆಂದೂ ಪ್ರಯತ್ನಪಡಬಾರದು. ರಂಗಪ್ಪನ ಕೋರ್ಟ್‌ಷಿಪಿನಲ್ಲಿ ಬರೆದಿರುವ ಕಾಗದಗಳು ನಾನೂ ನನ್ನ ಹೆಂಡತಿಯೂ ಒಬ್ಬರಿಗೊಬ್ಬರು ಬರೆದುಕೊಂಡ ಕಾಗದಗಳೆಂದಾಗಲಿ, ಬಾದಷಹನ ನ್ಯಾಯವನ್ನು ಸ್ತೋತ್ರಮಾಡಿರುವುದರಿಂದ ನಾನು ಮುಸಲಮಾನನೆಂದಾಗಲಿ, ಮಾತಿಯನನ್ನು ಹೊಗಳಿರುವುದರಿಂದ ನಾನು ಕ್ರೈಸ್ತಮತಕ್ಕೆ ಸೇರಿದವನೆಂದಾಗಲಿ, ಇಂದಿರೆಯೊ ಅಲ್ಲವೊ ಎಂಬ ಕತೆಯಿಂದ ನನಗೆ ನಾಲ್ಕನೆಯ ಮದುವೆಯೆಂದಾಗಲಿ, ತಾವು ಊಹಿಸಬಾರದೆಂದು ನನ್ನ ಪ್ರಾರ್ಥನೆ. ಇಲ್ಲಿ ಬರೆದಿರುವುದು ನಮ್ಮ ಅಭಿಪ್ರಾಯಗಳನ್ನು ಸೂಚಿಸುವ

ಉಪನ್ಯಾಸಗಳನ್ನಲ್ಲ; ತಾವು ಓದಿ ಸಂತೋಷಪಡಬೇಕೆಂದು ಕತೆಗಳನ್ನು; ನಮ್ಮ ಜೀವನದ ಚರಿತ್ರೆಯನ್ನಲ್ಲ; ಇತರರು ಅವರವರಿಗೆ ಆದ ಕೆಲವು ಸಂಗತಿಗಳನ್ನು. ಇದನ್ನು ಪಾಠಕರು ಸ್ವಲ್ಪ ಅವಧರಿಸಬೇಕು.

ಮೊದಲು ಮಧುರವಾಣಿಯಲ್ಲಿ ಪ್ರಕಟವಾಗಿದ್ದ ಕತೆಗಳನ್ನು ಇಲ್ಲಿ ಪುನಃ ಅಚ್ಚುಹಾಕಿಸುವುದಕ್ಕೆ ಸಮ್ಮತಿಯನ್ನು ಕೊಟ್ಟುದಕ್ಕೆ ನಾನು ಆ ಪತ್ರಿಕೆಯ ಸಂಪಾದಕರಿಗೆ ಕೃತಜ್ಞನಾಗಿದೇನೆ.

ಈ ಕತೆಗಳಲ್ಲಿ ದೋಷಗಳನೇಕವಿರಬೇಕು. ಅವುಗಳನ್ನು ಎಲ್ಲರೂ ಒಪ್ಪರು. ಆದರೆ ಕತೆಗಳನ್ನು ಚೆನ್ನಾಗಿವೆಯೆಂದೂ ಕೆಲವರು ಹೇಳಿದಾರೆ. ಕೆಲವು ದಿನಗಳ ಹಿಂದೆ ಈ ಕತೆಗೂ ನನಗೂ ಸಂಬಂಧವಿದೆಯೆಂದು ತಿಳಿಯದ ಒಬ್ಬರು—ತಿಳಿದಿದ್ದರೆ, ಇವನನ್ನು ಏಕೆ ನೋಯಿಸಬೇಕು, ಎಂದು ಹಾಗೆ ಹೇಳುತ್ತಿದ್ದರೋ ಇಲ್ಲವೊ ಕಾಣೆ—ಹೇಳಿದರು, "ಈಗ ಬರುತ್ತಿರುವ ಪುಸ್ತಕಗಳನ್ನು ಏನು ಹೇಳಬೇಕೋ! ಮಧುರವಾಣಿಯಲ್ಲಿ ಯಾರೋ ಒಂದು ಕತೆಯಂತೆ, ಕತೆ, ಕತೆಯನ್ನು ಬರೆದಿದ್ದಾರೆ. ಅದರ ಹೆಸರು 'ರಂಗಪ್ಪನ ದೀಪಾವಳಿ.' ಇನ್ನು, ನಾಳೆ ನಾನು ಕೂತು 'ಉಗ್ರಪ್ಪನ ಉಗಾದಿ' ಎಂದು ಒಂದು ಕತೆಯನ್ನು ಬರೆಯಬೇಕೆಂದಿದೇನೆ. ಆಹಾ, ಏನು ಹೇಳಬೇಕೋ!" ಎಂದು. ಈ ಮಾತನ್ನು ಕೇಳಿ ನನಗೆ ನೋವಾಗಲಿಲ್ಲವೆಂದು ನಾನು ಜಂಬಕ್ಕೆ ಹೇಳಿಕೊಳ್ಳಬಹುದು. ಅದು ಜಂಬದ ಮಾತೇ ಹೊರತು ನಿಜದ ಮಾತಲ್ಲ. "ಇವರು ಹೀಗೆ ಹೇಳುವರಲ್ಲ? ಶಾಮಣ್ಣನವರ ಮಾತು ಸರಿಯಾದ ಮಾತು. ಇದನ್ನು ಅಚ್ಚಿಗೆ ಹಾಕದೆ ಇದ್ದಿದ್ದರೆ ಚೆನ್ನಾಗಿತ್ತು," ಎಂದು ಒಂದು ಸಲ ಎಣಿಸಿ ಕೊಂಡೆನು. ಆದರೆ ಕೊಂಚದಿನದಲ್ಲೇ ಮದರಾಸಿನಿಂದ ದೊಡ್ಡ ಮನುಷ್ಯರೊಬ್ಬರು ಅದೇ ಕತೆಯನ್ನು ಕುರಿತು ಬಹಳ ಕೊಂಡಾಡಿ ಕಾಗದ ಬರೆದಿದಾರೆಂದು ಮಧುರವಾಣಿಯ ಸಂಪಾದಕರು ನನಗೆ ತಿಳಿಸಿದರು. ನನ್ನ ಸ್ವಂತ ಕತೆಯ ಸ್ತುತಿಯಾಗಿದ್ದರೆ ನಾನು ಅದನ್ನು ಎತ್ತಿ ಹೇಳಲು ಸಂಕೋಚಪಡಬೇಕು. ಪ್ರಶಂಸೆ ಶಾಮಣ್ಣನವರ ಕತೆಯನ್ನು ಕುರಿತದ್ದಾದ್ದರಿಂದ ಅಂತಹ ಸಂಕೋಚಕ್ಕೆ ಕಾರಣವಿಲ್ಲ. ಅವರು ಬರೆದದೇನೆಂದರೆ, "ತಮ್ಮ ಮಧುರವಾಣಿಯ ನವೆಂಬರ್

ಸಂಚಿಕೆಯೂ ತಲಪಿತು. 'ರಂಗಪ್ಪನ ದೀಪಾವಳಿ'ಯನ್ನು ಓದಿ ಅತ್ಯಾನಂದಪಟ್ಟೆನು. ಇಂಥ ಉತ್ಕೃಷ್ಟವಾದ ಲೇಖನಗಳನ್ನು ಬರೆಯ ಬಲ್ಲವರು ಕನ್ನಡದಲ್ಲಿ ವಿರಳವೆನ್ನಬೇಕು. ಇಂಥ ಲೇಖನಗಳು ತಮ್ಮ ಪತ್ರಿಕೆಯಲ್ಲಿ ಬಂದಷ್ಟೂ ಅದರ ಕೀರ್ತಿಯು ಹೆಚ್ಚುವುದರಲ್ಲಿ ಸಂದೇಹವಿಲ್ಲ." ಉಗ್ರಪ್ಪನ ಉಗಾದಿಯೆಂದವರೂ ನನ್ನನ್ನು ಕಾಣರು. ಹೀಗೆ ಶ್ಲಾಘಿಸಿದವರೂ ನನ್ನನ್ನು ಕಾಣರು. ಆ ಮಾತಿನಿಂದ ಧೈರ್ಯ ಗುಂದಿದರೆ ಈ ಮಾತಿನಿಂದ ಧೈರ್ಯತೆಗೆದುಕೊಳ್ಳುವುದು ನ್ಯಾಯವಲ್ಲವೆ? ಇದನ್ನು ಓದಿ, ಈ ಕತೆಗಳಲ್ಲಿ ನನಗೆ ಮಾತ್ರವೇ ಸುಖವಲ್ಲ, ಇತರರಿಗೂ ಸ್ವಲ್ಪ ಸುಖವಿರುವಂತಿದೆ, ಎಂದುಕೊಂಡು ಉದ್ದೇಶವನ್ನು ಬಿಡದೆ ಶಾಮಣ್ಣನವರ ಕತೆಗಳನ್ನೂ ಆ ಹೂವಿನೊಂದಿಗೆ ನಾರಾಗಿ ನನ್ನ ಕತೆ ಗಳನ್ನೂ ಅಚ್ಚುಹಾಕಿಸಿದ್ದೇನೆ. ತಾವು ಇದನ್ನು ಓದಿ ಸುಖಪಡಬೇಕೆಂದು ನನಗೆ ಬಹಳ ಆಸೆಯಿದೆ. ಸುಖಪಟ್ಟೀರೆಂದು ನಂಬಿಯೂ ಇದೇನೆ. ದೋಷಗಳನ್ನು ಮನ್ನಿಸಬೇಕೆಂದು ಬೇಡುತ್ತೇನೆ.

ಓದುವವರೇ! ತಮ್ಮಲ್ಲಿ ನನ್ನದಿದೇ ವಿಜ್ಞಾಪನೆ. "ರಂಗಪ್ಪನ ದೀಪಾವಳಿಯೋ, ಸರಿ, ಉಗ್ರಪ್ಪನ ಉಗಾದಿ, ವೆಂಕಟರಾಯನ ಪಿಶಾ ಚವೊ, ಸರಿ, ಶ್ರೀಕಂಠಯ್ಯನ ಭೇತಾಳ" ಎಂದು ಮೊದಲಾಗಿ ಧೋರಣೆ ಯಿಂದ ಮಾತನಾಡಿ ಈ ಕತೆಗಳನ್ನು ಎಸೆಯಬೇಡಿ. ನಾನು ರಂಗಪ್ಪನ ದೀಪಾವಳಿಯನ್ನು ಅಚ್ಚುಹಾಕಿಸಿದೇನೆ; ಇದರಿಂದ ಕೆಲವರು ಸಂತೋಷ ಪಟ್ಟಿದ್ದಾರೆ. 'ಉಗ್ರಪ್ಪನ ಉಗಾದಿ' ಎನ್ನುವ ನೀವು ಉಗ್ರಪ್ಪನ ಉಗಾದಿಯನ್ನು ಬರೆದು ಅಚ್ಚುಹಾಕಿಸಿ; ನಾನು ಓದಿ ಸಂತೋಷಪಡು ತ್ತೇನೆ. ಶ್ರೀಕಂಠಯ್ಯನ ಭೇತಾಳನನ್ನು ಅದು ಅಚ್ಚಾಗಿ ಬಂದಾಗ್ಗೆ ನನ್ನ ಒಡಹುಟ್ಟಿದವನಂತೆ ಪ್ರೀತಿಯಿಂದ ಆಲಿಂಗಿಸಿಕೊಳ್ಳುತ್ತೇನೆ. ಈ ಕತೆಗಳು ಸಾಮಾನ್ಯವಾದವು; ಕೆಲವರು ಮಾತ್ರ ಓದಿ ಸಂತೋಷಪಡ ಬಹುದು. ನೀವು ಒಳ್ಳೆಯ ಕತೆಗಳನ್ನು ಬರೆಯಿರಿ; ಅಚ್ಚುಹಾಕಿಸಿ; ಹೆಚ್ಚು ಜನ ಓದಿ ಸಂತೋಷಪಡಲಿ. ಈ ಹತ್ತು ಕತೆಗಳ ಹತ್ತರಷ್ಟು ಕತೆಗಳು, ಇವುಗಳೆಲ್ಲಕ್ಕಿಂತ ನೂರುಪಾಲು ಹೆಚ್ಚಾದವುಗಳನ್ನು, ನಮ್ಮ ನಾಡಿನ ನನ್ನ ಅಣ್ಣಂದಿರಾ, ನನ್ನ ತಮ್ಮಂದಿರಾ, ನೀವು ಬರೆಯ

ಬೇಕೆಂಬುದೇ ನನ್ನ ಮನಸ್ಸಿನ ಅಂತರಾಳದಲ್ಲಿರುವ ಅಧಿಕವಾದ ಆಸೆ. ದೇವರು ಈ ಆಸೆಯನ್ನು ಈಡೇರಿಸಲಿ.

ಈ ಪುಸ್ತಕಕ್ಕೆ ಹೆಸರಿಟ್ಟಿರುವ ವಿಚಾರದಲ್ಲಿ ಒಂದು ಸಮಾಚಾರ ನಡೆಯಿತು. ಅಮ್ಮಯ್ಯ ನಿನ್ನೆ ಶ್ಯಾಮುನನ್ನು ಶ್ಯಾಮಣ್ಣನವರ ಹತ್ತಿರ ಕಳುಹಿಸಿದ್ದಳು. ಶ್ಯಾಮಣ್ಣನವರು ಅವನನ್ನು "ಏನಯ್ಯ ಬಂದೆ" ಎಂದರು. ಅವನು "ತಾತ ನಾನು ಅಗಸನಾಗುತ್ತೇನೆ," ಎಂದನು. "ಅದೇನು?" "ಅಮ್ಮಯ್ಯ ಹೇಳಿದಳು. ನಿನ್ನ ಹತ್ತಿರ ಹೋದರೆ ಬೇಕಾದಷ್ಟು ಸಣ್ಣ ಕತೆ ಸಿಕ್ಕುತ್ತೆ ಹೋಗು ಎಂದಳು." "ನೀನೇ ಸಣ್ಣ ಕತ್ತೆ." "ಅಲ್ಲ ನಾನು ಸಣ್ಣ ಅಗಸ; ಅಚ್ಚಾಗಿ ಬಂದಿದೆಯಂತಲ್ಲ ಸಣ್ಣ ಕತ್ತೆಗಳು?" ಶಾಮಣ್ಣನವರು ನಕ್ಕರು. ನಾನೂ ನಕ್ಕೆ. "ನೋಡಿದೆಯಾ ಅಪ್ಪ, ನೀನು ಪುಸ್ತಕಕ್ಕೆ ಇಟ್ಟಿರುವ ಹೆಸರು, ಎಲ್ಲರೂ ಹೀಗೆಯೇ ಹಾಸ್ಯಮಾಡುವರು" ಎಂದರು. ನಾನು ಸುಮ್ಮನಿದ್ದೆ. ಆಮೇಲೆ ಅವರೇ "ಅಮ್ಮಯ್ಯನಿಗೆ ಸರಿಯಾದ ಮಾತು. ಅಮ್ಮಯ್ಯ ನಂಥವರು ಹಾಸ್ಯಮಾಡುತ್ತಾರಲ್ಲಾ ಎಂತ ಹೆದರಿ ಎಲ್ಲಾ ಕೆಲಸ ವನ್ನೂ ಮಾಡುವುದಕ್ಕಾಗುತ್ತದೆಯೆ" ಎಂದರು. ಅದೇ ಹೆಸರೇ ನಿಂತಿದೆ.

ಇನ್ನೊಂದು ಮಾತು. ಅಚ್ಚಾಗಬಹುದೆಂದು ಕೊನೆಯ ಮಾತು ಹೇಳುವಾಗ ಶ್ಯಾಮಣ್ಣನವರನ್ನು ಕೇಳಿದೆ. ಅವರು "ಬೇಡವೆಂದು ನಾನು ಹೇಳಿದರೆ ನೀನು ಕೇಳುವುದಿಲ್ಲ. ಸಣ್ಣಪುಸ್ತಕ ಎಂದೆ, ಸಣ್ಣ ವಿಷಯ ಎಂದೆ. ಆದರೂ ನೀನು ಅಚ್ಚುಹಾಕೋಣವೆನ್ನುತ್ತೀಯೆ. ಆಗಲಿ ಹಾಗೆಯೇ ಮಾಡು. ನಾನು ಮುದುಕನಾದೆ; ಹೀಗೆ ಮಾಡಿದರೆ ಹೇಗೋ ಹಾಗೆ ಮಾಡಿದರೆ ಹೇಗೋ ಎಂದು ನನಗೆ ಮಾನಮೇಷ ವಾಡಿಕೆಯಾಗಿ ಹೋಗಿದೆ. ನೀನು ಹುಡುಗ; ಧೀರ. ನಿನಗೆ ಅಂಥ ಸಂದೇಹವಿಲ್ಲ. ಒಳ್ಳೆಯದಾಯಿತು; ನಿನ್ನ ಕೈಯಲ್ಲಾದ ಕೆಲಸವನ್ನು ನೀನು ಮಾಡು. ಎಷ್ಟು ಜನ ಸಂತೋಷಪಟ್ಟರೆ ಅಷ್ಟು ನಿನ್ನ ಕೆಲಸ ಸಾರ್ಥಕ. ಉದ್ಗ್ರಂಥವನ್ನೇ ಬರೆಯಬೇಕೆಂಬ ಆಸೆ ಏಕೆ? ಸಣ್ಣ ಕತೆ ಯಾದರೂ ಚೆನ್ನಾಗಿರಲಿ. ರಾಜನಾಗಿರುವವನು ಮುಂದೆ ಬರಲಿ.

ಇಂದು ನೀನು ಭೃತ್ಯನಾಗಿರು. ಭೃತ್ಯನ ಕೆಲಸವನ್ನು ಚೆನ್ನಾಗಿ ಮಾಡು" ಎಂದರು.

ನಾನು ಭೃತ್ಯನಾಗಿರಲು ಒಪ್ಪಿದೇನೆ. ಭೃತ್ಯ ವೃತ್ತಿಯನ್ನು ಚೆನ್ನಾಗಿ ಮಾಡಿದೇನೆಂದು ತಾವು ಹೇಳಿದರೆ ನನ್ನ ಪ್ರಯತ್ನ ಸಫಲ ವಾಯಿತು.

ಹೀಗೆ ದೇಶಬಾಂಧವರ ದಾಸಾನುದಾಸ

**ಶ್ರೀನಿವಾಸ.**

# ವಿಷಯ ಸೂಚಿಕೆ

# ರಂಗನ ಮದುವೆ

ಈ ಹೆಸರನ್ನೋದಿ "ಇದೇನು? 'ರಂಗನ ಮದುವೆ' ಎನ್ನದೆ 'ರಂಗನಾಥ ವಿವಾಹ' 'ರಂಗನಾಥ ವಿಜಯ' ಎನ್ನಬಾರದೆ?" ಎಂದು ನೀವು ಯಾರಾದರೂ ಕೇಳಬಹುದು. ಅಹುದು; "ಜಗನ್ನಾಥ ವಿಜಯ," "ಗಿರಿಜಾ ಕಲ್ಯಾಣ," ಎನ್ನುವಹಾಗೆ "ಶ್ರೀ ರಂಗನಾಥ ವಿಜಯ," ಅಥವಾ ಅದರಂತೆ ಇರುವ ಬಾಯಿತುಂಬ ಬರುವ ಒಂದು ಹೆಸರನ್ನು ನಾನೂ ಇಡಬಹುದಾಗಿತ್ತು. ಅದು ನನಗೆ ತಿಳಿಯದೆ ಇಲ್ಲ. ಆದರೆ, ನೋಡಿ; ಇದು ಜಗನ್ನಾಥನ ವಿಜಯವೂ ಅಲ್ಲ; ಗಿರಿಜೆಯ ಕಲ್ಯಾಣವೂ ಅಲ್ಲ; ನಮ್ಮೂರಿನ ನಮ್ಮ ರಂಗನ ಮದುವೆಯ ವಿಷಯ. ಆದುದರಿಂದ ಆ ರೀತಿಯ ಹೆಸರನ್ನಿಡಲಿಲ್ಲ.

ನಮ್ಮೂರು ಹೊಸಹಳ್ಳಿ. ಅದರ ಹೆಸರನ್ನು ನೀವು ಕೇಳಿರುವಿರಲ್ಲವೆ? ಇಲ್ಲವೆ? ಅಯ್ಯೋ ಪಾಪ. ಅದು ನಿಮ್ಮ ತಪ್ಪಲ್ಲ. ಭೂವಿವರಣೆಗಳಲ್ಲಿ ಅದರ ಹೆಸರು ಇಲ್ಲ. ಇಂಗ್ಲೆಂಡ್ ದೇಶದಲ್ಲಿದ್ದುಕೊಂಡು ಇಂಗ್ಲೀಷಿನಲ್ಲಿ ಭೂವಿವರಣೆ ಬರೆಯುವ ಸಾಹೇಬು ಜನಗಳಿಗೆ ಹೊಸಹಳ್ಳಿ ಗೊತ್ತಿಲ್ಲದೆ, ಅವರು ಸುಮ್ಮನಿದ್ದರೂ ಇರಬಹುದು. ನಮ್ಮ ಜನರೂ ಭೂವಿವರಣೆ ಬರೆಯುವಾಗ ಹೊಸಹಳ್ಳಿಯ ಹೆಸರನ್ನೇ ಮರೆಯುವರು. ಸರಿ; ಕುರಿ ಹಿಂಡಿನ ಸಮಾಚಾರ! ಒಂದು ಹಳ್ಳಕ್ಕೆ ಬಿದ್ದರೆ, ಎಲ್ಲವೂ ಒಂದರ ಹಿಂದೆ ಒಂದು ಕಣ್ಣು ತೆರೆದುಕೊಂಡೇ ಬೀಳುವುವು. ಇಂಗ್ಲೆಂಡಿನ ಸಾಹೇಬರೂ ನಮ್ಮ ಗ್ರಂಥಕರ್ತರೂ ಮರೆತಮೇಲೆ, ಪಾಪ, ಭೂಪಠ ಬರೆಯುವವನು ಅದನ್ನು ನೆನೆಯುವನೇ? ನಕ್ಷೆಯಲ್ಲಿ ನಮ್ಮೂರಿನ ನೆಲೆಯೇ ಇಲ್ಲ.

ಎಲ್ಲಿಯೋ ಪ್ರಾರಂಭಿಸಿ, ಏನೋ ಹೇಳುತ್ತಾ ಬಂದೆ. ಕ್ಷಮಿಸಿ. ಭರತ ವರ್ಷದಲ್ಲಿ ಮೈಸೂರುದೇಶ ಔತನದ ಊಟದಲ್ಲಿ ಕರಗಡಬಿನ ಹಾಗೆ. ಮೈಸೂರು ದೇಶದಲ್ಲಿ ಹೊಸಹಳ್ಳಿ ಕರಗಡಬಿನೊಳಗಣ ಹೂರಣದ ಹಾಗೆ. ಈ ಎರಡು ವಿಷಯಗಳೂ ನಿಸ್ಸಂಶಯವಾಗಿಯೂ ನಿಜವಾದುವು.

ನೀವು ನೂರುಮಾತು ಹೇಳಬಹುದು; ನಾನೇನೂ ಬೇಡವೆನ್ನುವುದಿಲ್ಲ. ಆದರೆ ಈ ಮಾತು ಮಾತ್ರ ನಿಜ. ಹೊಸಹಳ್ಳಿಯನ್ನು ಹೊಗಳುವವನು ನಾನೇ ಅಲ್ಲ. ನಮ್ಮ ಊರಿನಲ್ಲಿ ಒಬ್ಬ ವೈದ್ಯರು ಇರುವರು; ಅವರ ಹೆಸರು ಗುಂಡಾಭಟ್ಟರು. ಅವರೂ ಹೇಳುವರು. ಅವರು ಸ್ವಲ್ಪ ಸೀಮೆಯನ್ನು ಸುತ್ತಿದವರು. ಎಂದರೆ ಇಂಗ್ಲೆಂಡಿಗೆ ಹೋದವರಂತ ಅಲ್ಲ. "ನೀವು ಇಂಗ್ಲೆಂಡಿಗೆ ಹೋಗಿರುವಿರಾ?" ಎಂದು ಯಾರಾದರೂ ಈಗಿನ ಕಾಲದ ಹುಡುಗರು ಕೇಳಿದರೆ, "ಇಲ್ಲ; ಅಣ್ಣಯ್ಯಗಳಿರಾ! ಅದನ್ನು ನಿಮಗೇ ಬಿಟ್ಟಿರುವೆನು. ಇದ್ದಕಡೆ ಇರಲಾರದೆ, ತೊಣಚಿ ಹೊಕ್ಕ ನಾಯಿಯಂತೆ ಅಲೆಯುವುದು ನಿಮಗೇ ಇರಲಪ್ಪ! ನಾನೆಲ್ಲೋ ಸ್ವಲ್ಪ ಸೀಮೆ ಸುತ್ತಿದೇನೆ" ಎಂದು ಹೇಳುವರು. ಆದರೆ ಬೇಕಾದಷ್ಟು ಊರು ನೋಡಿದಾರೆ.

ನಮ್ಮ ಊರಮುಂದೆ ಇರುವ ತೋಪಿನಲ್ಲಿ ಕೆಲವು ಮಾವಿನ ಮರ ಇವೆ. ಒಂದು ದಿನ ನೀವು ನಮ್ಮೂರಿಗೆ ಬನ್ನಿ. ಒಂದು ಕಾಯನ್ನು ಕೊಡುವೆನು. ತಿನ್ನಿ. ತಿನ್ನುವುದು ಬೇಡ; ಸುಮ್ಮನೆ ಕಡಿಯಿರಿ; ಹುಳಿ ಬ್ರಹ್ಮರಂಧ್ರಕ್ಕೇರುವುದು. ನಾನೊಂದು ಸಲ ಆ ಕಾಯನ್ನು ತಂದೆನು. ಚಟ್ಣಿ ಮಾಡಿದ್ದರು; ಎಲ್ಲರೂ ತಿಂದೆವು. ಸಾಲಾಗಿ ಎಲ್ಲರಿಗೂ ಕೆಮ್ಮು ಬರಬೇಕೆ? ಔಷಧಿಯನ್ನು ಕೇಳಲು ವೈದ್ಯರ ಬಳಿಗೆ ಹೋಗಿದ್ದೆ; ಆಗ ಅವರು ಆ ಮಾತನ್ನು ಹೇಳಿದರು.

ಈ ಮಾವಿನಕಾಯಿ ಹೇಗೆ ಶ್ರೇಷ್ಠವೊ, ನಮ್ಮ ಊರಿನ ಹತ್ತಿರ ವಿರುವುದೆಲ್ಲಾ ಹಾಗೆಯೇ ಶ್ರೇಷ್ಠ. ನಮ್ಮೂರಿನ ಕೊಳದಲ್ಲಿರುವ ನೀರು ಎಷ್ಟೋ ಚೆನ್ನಾಗಿದೆ. ಅದರ ಮಧ್ಯೆ ತಾವರೆಯ ಬಳ್ಳಿ ಬೆಳೆದುಕೊಂಡಿದೆ. ನೋಡುವುದಕ್ಕೆ ಪುಷ್ಪಗಳು ಬಹು ರಮ್ಯವಾಗಿವೆ. ಊಟಕ್ಕೆ ಎಲೆ ಇಲ್ಲದಿದ್ದರೆ, ಮಧ್ಯಾಹ್ನದವೇಳೆ ಸ್ನಾನಕ್ಕೆ ಹೋದಾಗ ಎರಡೆಲೆ ತಂದ ರಾಯಿತು, ಎಲೆಯನ್ನು ಹಚ್ಚುವ ಕಷ್ಟವೇ ಇಲ್ಲ! ಏನೇನೋ ಹೇಳುವೆ ನೆನ್ನುವಿರಿ. ನಮ್ಮೂರಿನ ಮಾತನ್ನೆತ್ತಿದರೇನೇ ಹಾಗೆ. ಹೋಗಲಿ; ಇನ್ನು ಸಾಕು. ನೀವು ಯಾರಾದರೂ ನೋಡಲಪೇಕ್ಷಿಸಿದರೆ, ಬರಲು ಇಷ್ಟವಿದ್ದರೆ, ನನಗೆ ಒಂದು ಕಾಗದ ಬರೆಯಿರಿ. ನಾನು ಹೊಸ

ಹಳ್ಳಿ ಎಲ್ಲಿದೆ ಏನು ಹೇಗೆ ಎಂಬುದನ್ನು ಬರೆಯುವೆನು. ನೀವು ಆಮೇಲೆ ಬರಬಹುದು. ಯಾವುದನ್ನಾದರೂ ಕಣ್ಣಾರ ನೋಡುವುದೇ ಮೇಲಲ್ಲವೆ?

ನಾನು ಹೇಳುವುದು ಈಗ ಹತ್ತು ವರ್ಷದ ಹಿಂದಿನ ಮಾತು. ಆಗ ನಮ್ಮ ಊರಿನಲ್ಲಿ ಇಂಗ್ಲೀಷು ಓದಿದವರು ಬಹು ಜನ ಇರಲಿಲ್ಲ. ಕರಣೀಕರೇ ಮೊದಲು ಧೈರ್ಯಮಾಡಿ ಮಗನನ್ನು ಬೆಂಗಳೂರಿಗೆ ಕಳುಹಿಸಿದ್ದರು. ಈಗ ಏನು, ಬಹುಜನರಿದಾರೆ. ರಜಾದಿನದಲ್ಲಂತೂ, ಬೀದಿ ಬೀದಿಯಲ್ಲೆಲ್ಲಾ ಹುಡುಗರು ಇಂಗ್ಲೀಷು ಮಾತನ್ನೇ ಆಡಿಕೊಳ್ಳುವರು. ಆಗ ನಮ್ಮೂರಿನಲ್ಲಿ ಈ ಕೀಷುಬಾಷು ಮಾತು ಇರಲೇ ಇಲ್ಲ. ಜನ ಕನ್ನಡ ದಲ್ಲಿ ಮಾತನ್ನಾಡುವಾಗಲೂ ಇಂಗ್ಲೀಷು ಮಾತನ್ನು ಸೇರಿಸುತ್ತಿರಲಿಲ್ಲ. ಇದೊಂದು ನಗೆಗೇಡು. ಈಗ ನಾಲ್ಕು ದಿನಗಳ ಕೆಳಗೆ, ರಾಮರಾಯರ ಮನೆಯಲ್ಲಿ ಒಂದು ಸೌದೆಯ ಹೊರೆಯನ್ನು ಕೊಂಡರು. ಅವರ ಮಗ ದುಡ್ಡು ಕೊಡುವುದಕ್ಕೆಂದು ಬಂದು "ನಿನಗೆ ಎಷ್ಟು ಕೊಡಬೇಕೆ?" ಎಂದು ಸೌದೆಯವಳನ್ನು ಕೇಳಿದನು. ಅದಕ್ಕೆ ಅವಳು "ಸ್ವಾಮಿ ನಾಲ್ಕು ದುಡ್ಡು ಕೊಡಬೇಕು," ಎಂದಳು. ಅದಕ್ಕೆ ರಾಮರಾಯರ ಮಗ "ಈಗ ಛೇಂಜು ಇಲ್ಲ. ಹೋಗು, ನಾಳೆ ಬಾ," ಎಂದು ಒಳಗೆ ಹೊರಟುಹೋದನು. ಅವಳಿಗೆ ಪಾಪ ಅರ್ಥವೇ ಆಗಲಿಲ್ಲ. ಅವಳು ಗೊಣಗುಟ್ಟುತ್ತ ಹೊರಟುಹೋದಳು. ಆಗ ನಾನೂ ಅಲ್ಲೇ ನಿಂತಿದ್ದೆ. ನನಗೂ ತಿಳಿಯಲಿಲ್ಲ. ಆಮೇಲೆ ರಂಗನ ಮನೆಗೆ ಬಂದು ರಂಗನನ್ನು ಕೇಳಿದೆ. ಅವನು 'ಛೇಂಜ್' ಎಂದರೆ ಚಿಲ್ಲರೆ ಎಂದು ಹೇಳಿಕೊಟ್ಟ.

ಈ ರೀತಿಯಾದ ಅಮೂಲ್ಯವಾದ ಇಂಗ್ಲೀಷು ಭಾಷೆ ಆಗ ನಮ್ಮೂರಿನಲ್ಲಿ ಪ್ರಚುರವಾಗಿರಲಿಲ್ಲ. ಆದುದರಿಂದ ರಂಗನು ಬೆಂಗಳೂರಿನಿಂದ ಬಂದಾಗ ಊರಿನವರೆಲ್ಲ "ಕರಣೀಕರ ಮಗ ಬಂದನಂತೆ!" "ಅಯ್ಯೋ! ಬೆಂಗಳೂರಿಗೆ ಓದುವುದಕ್ಕೆ ಹೋಗಿದ್ದನಲ್ಲಾ, ಆ ಹುಡುಗ ಬಂದನಂತೆ!" "ಲೋ! ರಂಗ ಬಂದನಂತೆ! ನೋಡುವ, ಬಾರೋ!" ಎಂದು ಅವರ ಮನೆಯ ಬಾಗಿಲಿಗೆ ಓಡಿಹೋದರು. ಜನಮರುಳೋ, ಜಾತ್ರೆಮರುಳೋ? ನಾನೂ ಅವರ ಪಡಸಾಲೆಗೆ ಹೋಗಿ ನಿಂತುಕೊಂಡೆ. ಜನರ ಗುಂಪನ್ನು ನೋಡಿ "ಇವರೆಲ್ಲರೂ ಏಕೆ ಬಂದಿರುವರೋ? ಇಲ್ಲೇನು ಕೋತಿ

ಕುಣಿಯುವುದೆ?'' ಎಂದೆ. ಅಲ್ಲಿದ್ದ ಒಬ್ಬ ಹುಡುಗ, ಸ್ವಲ್ಪವೂ ಬುದ್ಧಿಯಿಲ್ಲದವನು, "ನೀನೇಕೆ ಬಂದೆ?'' ಎಂದು ಅಷ್ಟು ಜನರೆದುರಿಗೂ ನನ್ನನ್ನು ಕೇಳಿಬಿಟ್ಟ. ಶುದ್ಧ ಹುಡುಗ; ಮಾನಮರ್ಯಾದೆಯನ್ನರಿಯದ ಪೋರ. ಪೂರ್ವಕಾಲದ ನೀತಿನಯಗಳು ಮರೆಯಾದವೆಂದು ನಾನೂ ಸುಮ್ಮನಾದೆ.

ಇಷ್ಟು ಜನರನ್ನೂ ನೋಡಿದ ರಂಗ ನಗುತ್ತ ಹೊರಗೆ ಬಂದ. ನಾವೆಲ್ಲರೂ ಒಳಗೆ ಹೋಗಿದ್ದರೆ ಕಲಿಕತ್ತೆಯ ಕತ್ತಲೆಯ ಕೋಣೆಯೆಂದು ಹೇಳುವರಲ್ಲಾ, ಅದರಂತೆ ಆಗುತಲಿತ್ತು. ದೇವರ ಕೃಪೆಯಿಂದ ಅದು ತಪ್ಪಿತು. ರಂಗ ಹೊರಗೆ ಬಂದರೆ, ಎಲ್ಲರಿಗೂ ಅತ್ಯಾಶ್ಚರ್ಯ. ಆರು ತಿಂಗಳ ಹಿಂದೆ ನಮ್ಮೂರಿಂದ ಹೋದಾಗ ಹೇಗೆ ಇದ್ದನೋ ಹಾಗೆಯೇ ಇದ್ದನು. ಒಬ್ಬ ಮುದುಕಮ್ಮನವರು ಅವನ ಹತ್ತಿರ ನಿಂತಿದ್ದರು. ಅವರು ಅವನ ಎದೆಯಮೇಲೆ ಕಯ್ಯಾಡಿಸಿ, ದೃಷ್ಟಿಸಿ ನೋಡಿ, "ಜನಿವಾರ ಇನ್ನೂ ಇದೆ! ಜಾತಿ ಕೆಡಿಸಿಲ್ಲ'' ಎಂದು ಹೊರಟುಹೋದರು. ರಂಗ ನಕ್ಕ.

ರಂಗನಿಗೆ ಮೊದಲಿನ ಹಾಗೆಯೇ ಕಯ್ಯಿ, ಕಾಲು, ಕಣ್ಣು, ಮೂಗುಗಳೆಲ್ಲ ಇದ್ದುದರಿಂದ, ಹುಡುಗನ ಬಾಯಲ್ಲಿ ಕಲ್ಲುಸಕ್ಕರೆ ಕರಗುವಂತೆ ಆ ದೊಂಬಿಯ ಗುಂಪು ಕರಗಿಹೋಯಿತು. ನಾನು ನಿಂತುಕೊಂಡೇ ಇದ್ದೆ. ಎಲ್ಲರೂ ಹೋದಮೇಲೆ, "ಏನಯ್ಯಾ! ರಂಗಪ್ಪ! ಸೌಖ್ಯವಾಗಿರುವೆಯಾ?'' ಎಂದು ಕೇಳಿದೆ. ಆಗ ರಂಗ ನನ್ನನ್ನು ನೋಡಿದ. ನೋಡಿ ಹತ್ತಿರಕ್ಕೆ ಬಂದು ನಮಸ್ಕಾರ ಮಾಡಿ "ತಮ್ಮ ಆಶೀರ್ವಾದದಿಂದ ಇಷ್ಟರಮಟ್ಟಿಗೆ ಇದೇನೆ,'' ಎಂದ.

ರಂಗನಲ್ಲಿ ಇದ್ದುದು ಇದೊಂದು ದೊಡ್ಡಗುಣ; ನೋಡಿ. ಯಾರೊಡನೆ ಮಾತನಾಡಿದರೆ ಪ್ರಯೋಜನವುಂಟೆಂದು ಅವನಿಗೆ ತಿಳಿದಿದ್ದಿತು. ಜನರ ಬೆಲೆಯನ್ನು ಅವನು ಚೆನ್ನಾಗಿ ಬಲ್ಲನು. ನಮಸ್ಕಾರ ಮಾಡಿದ್ದೋ? ಈಗಿನ ಹುಡುಗರಂತೆ, ತಲೆಯನ್ನು ಮೇಲಕ್ಕೆ ಎತ್ತಿ ಸೂರ್ಯನನ್ನು ನೋಡುತ್ತ, ಸೊಂಟದ ಹತ್ತಿರ ಕೀಲೇ ಇಲ್ಲದಂತೆ ಕೋಲಿನಂತೆ ನಿಂತುಕೊಂಡು, ಕಯ್ಯನ್ನೋ ಬೆತ್ತವನ್ನೋ ಅಲ್ಲಾಡಿಸುವಂತಲ್ಲ! ಸುಮ್ಮನೆ ಕಯ್ಜೋಡಿಸುವ ನಮಸ್ಕಾರವೂ ಅಲ್ಲ; ನೆಲಕ್ಕೆ

ಬಗ್ಗಿ ಕಾಲುಗಳನ್ನು ಮುಟ್ಟಿ ಮಾಡಿದ. ನಾನು "ಶೀಘ್ರಮೇವ ವಿವಾಹಮಸ್ತು" ಎಂದು ಆಶೀರ್ವದಿಸಿದೆ. ಒಂದೆರಡು ಮಾತನ್ನಾಡಿ ಮನೆಗೆ ಹೊರಟೆ.

*   *   *   *

ಮಧ್ಯಾಹ್ನ ನಾನು ಊಟಮಾಡಿ ಮಲಗಿಕೊಂಡಿದ್ದಾಗ ರಂಗ ಎರಡು ಕಿತ್ತಲೆಯ ಹಣ್ಣುಗಳನ್ನು ಹಿಡಿದುಕೊಂಡು ನಮ್ಮ ಮನೆಗೆ ಬಂದ. ಬಹು ಉಪಕಾರಿ; ಧಾರಾಳಬುದ್ಧಿಯುಳ್ಳವನು. ಇವನಿಗೆ ಮದುವೆಮಾಡಿದರೆ ಒಳ್ಳೆಯ ಸಂಸಾರಿಯಾಗಿ ನಾಲ್ಕಾರು ಜನರಿಗೆ ಉಪಕಾರಿಯಾಗುವನೆಂದು ನಾನು ಎಣಿಸಿಕೊಂಡೆನು.

ಸ್ವಲ್ಪಹೊತ್ತು ಆ ಮಾತು ಈ ಮಾತು ಆಡಿದ ಅನಂತರ ನಾನು "ರಂಗಪ್ಪ, ನೀನು ಯಾವಾಗ ಮದುವೆಮಾಡಿಕೊಳ್ಳುವೆಯೋ?" ಎಂದು ಕೇಳಿದೆ.

ರಂಗ:— ನಾನು ಈಗ ಮದುವೆಮಾಡಿಕೊಳ್ಳುವುದಿಲ್ಲ.

"ಏತಕ್ಕಯ್ಯ?"

ರಂಗ:—ನನಗೆ ಸರಿಯಾದ ಹುಡುಗಿ ಸಿಕ್ಕಬೇಕು. ನಮ್ಮ ಸಾಹೇಬರು ಒಬ್ಬರು ಇದಾರೆ. ಅವರು ಮದುವೆಮಾಡಿಕೊಂಡುದು ಆರು ತಿಂಗಳ ಹಿಂದೆ. ಅವರಿಗೆ ಸುಮಾರು ಮೂವತ್ತು ವರ್ಷ; ಅವರ ಹೆಂಡತಿಗೆ ಇಪ್ಪತ್ತೈದು ವರುಷವಂತೆ. ಅವರು ಪ್ರೇಮವಾಗಿ ಮಾತನಾಡಿಕೊಳ್ಳಬಲ್ಲರು. ನಾನು ಒಬ್ಬ ಸಣ್ಣ ಹುಡುಗಿಯನ್ನು ಮದುವೆಮಾಡಿಕೊಂಡೆನೆನ್ನಿ. ಏನಾದರೂ ಪ್ರೇಮದ ಮಾತನ್ನಾಡಿದರೆ, ಅವಳು ಬೈದೆನೆಂದೇ ತಿಳಿದುಕೊಳ್ಳಬಹುದು. ಬೆಂಗಳೂರಿನ ಒಂದು ನಾಟಕ ಸಂಘದವರು "ಶಾಕುಂತಲ" ನಾಟಕವನ್ನಾಡಿದರು. ಶಕುಂತಲೆ ಈಗ ಮದುವೆಯಾಗುವ ಹುಡುಗಿಯರ ಹಾಗೆ ಚಿಕ್ಕವಳಾಗಿ ಇದ್ದರೆ, ದುಷ್ಯಂತನು ಪ್ರೀತಿಸುವುದೆಲ್ಲಿ? ಕಾಳಿದಾಸನ ನಾಟಕದ ಅಭಿರುಚಿಯೆಲ್ಲಿ? ಮದುವೆಯಾದರೆ, ವಯಸ್ಸಾದ ಹುಡುಗಿಯನ್ನೇ ಮಾಡಿಕೊಳ್ಳಬೇಕು; ಇಲ್ಲದಿದ್ದರೆ, ಸುಮ್ಮನೆ ಇರಬೇಕು. ಅದಕ್ಕಾಗಿಯೇ ನಾನು ಈಗ ಮಾಡಿಕೊಳ್ಳುವುದಿಲ್ಲವೆಂದುದು.

"ಇನ್ನೇನಾದರೂ ಕಾರಣವುಂಟೊ?"

ರಂಗ:—ನಾವೇ ಮೆಚ್ಚಿ ಮದುವೆಮಾಡಿಕೊಳ್ಳುವಂತಿರಬೇಕು. ಈಗ ನಾವು ಹಾಗೆ ಮಾಡಕೂಡದು. ಅಥವಾ, ಮಾಡಿದೆವು. ಪಾಪ! ಒಂದು ಕೆನ್ನೆ ಹಾಲು, ಒಂದು ಕೆನ್ನೆ ನೀರು ಆಗಿ, ಬೆರಲು ಕಡಿಯಲು ಸಹಾ ಬಾರದ ಹುಡುಗಿಯರನ್ನು ತಂದು ಇದುರಿಗೆ ನಿಲ್ಲಿಸಿದರೆ, ಮೆಚ್ಚುವುದು ಹೇಗೆ?

"ಒಂದು ಬೇವಿನಕಾಯಿ, ಒಂದು ಹಾಗಲಕಾಯಿ. ಅಲ್ಲವೆ?"

ರಂಗ:—(ನಗುತ್ತ) ಎಕ್ಸ್ಯಾಕ್ಟ್‌ಲೀ! ಉಂ ಹೌದು.

ಜಾಗ್ರತೆಯಾಗಿ ಮದುವೆಮಾಡಿದರೆ ಒಳ್ಳೆಯ ಸಂಸಾರಿಯಾಗುವನೆಂದು ನಾನು ಯೋಚಿಸಿದರೆ ಈ ಹುಡುಗ ನಿತ್ಯಬ್ರಹ್ಮಚಾರಿಯಾಗಬೇಕೆಂದಿರುವನಲ್ಲಾ! ಎಂದು ನಾನು ಬಹು ವ್ಯಾಕುಲಚಿತ್ತನಾದೆನು. ಸ್ವಲ್ಪಹೊತ್ತು ಮಾತನಾಡುತ್ತಿದ್ದು ರಂಗನನ್ನು ಕಳುಹಿಸಿಕೊಟ್ಟು, "ಈ ಹುಡುಗನಿಗೆ ಮದುವೆಮಾಡಿಸಲೇಬೇಕು," ಎಂದು ಶಪಥ ಮಾಡಿಕೊಂಡೆನು.

ನಮ್ಮ ರಾಮರಾಯರ ಮನೆಗೆ ಅವರ ಅಕ್ಕನ ಮಗಳು ಬಂದಿದ್ದಳು. ಹುಡುಗಿಗೆ ಹನ್ನೊಂದು ವರ್ಷ. ಚೆಲುವ ಹುಡುಗಿ. ದೊಡ್ಡ ಪಟ್ಟಣದಲ್ಲಿದ್ದವಳಾದುದರಿಂದ, ಸ್ವಲ್ಪ ವೀಣೆ ಹಾರಮೋನಿಯಂ ಬಾರಿಸಲು ಬರುತ್ತಿದ್ದಿತು. ಸ್ವರವೋ, ಅತಿ ಮಧುರ! ತಾಯಿತಂದೆಗಳಿಬ್ಬರೂ ಸತ್ತುಹೋಗಿದ್ದುದರಿಂದ, ಮಾವನು ತನ್ನ ಮನೆಗೆ ಕರೆತಂದಿದ್ದನು. ಅವಳಿಗೆ ತಕ್ಕ ವರ ರಂಗ. ರಂಗನಿಗೆ ತಕ್ಕ ವಧು ಅವಳು.

ನಾನು ರಾಮರಾಯರ ಮನೆಗೆ ಬರುತ್ತ ಹೋಗುತ್ತ ಇದ್ದುದರಿಂದ ನನ್ನನ್ನು ಕಂಡರೆ, ಆ ಹುಡುಗಿಗೆ ಸಲಿಗೆ ಹೆಚ್ಚು. ಆ ಹುಡುಗಿಯ ಹೆಸರನ್ನು ಹೇಳುವುದನ್ನೇ ಮರೆತೆ. ಅದರ ಹೆಸರು—ರತ್ನ! ನಾನು ಮಾರನೆಯ ದಿನ ಪ್ರಾತಃಕಾಲ ರಾಮರಾಯರ ಮನೆಗೆ ಹೋಗಿ ಅವರ ಹೆಂಡತಿಯನ್ನು ಕಂಡು, "ಮಜ್ಜಿಗೆ ಕಳುಹಿಸುವೆನು. ರತ್ನಮ್ಮನನ್ನು ಕಳುಹಿಸಿಕೊಡಿರಿ," ಎಂದು ಹೇಳಿಬಂದೆ.

ರತ್ನಮ್ಮ ಬಂದಳು. ಶುಕ್ರವಾರವಾದುದರಿಂದ ಒಳ್ಳೆಯ ಸೀರೆ

ಉಟ್ಟುಕೊಂಡಿದ್ದಳು. ಅವಳನ್ನು ನನ್ನ ಕೊಠಡಿಯಲ್ಲಿ ಕುಳ್ಳಿರಿಸಿ, "ಅಮ್ಮಾ! ಒಂದು ಸೊಗಸಾದ ಹಾಡನ್ನು ಹೇಳಮ್ಮ!" ಎಂದು ಬೇಡಿಕೊಂಡೆನು. ಆಗ ರಂಗನನ್ನು ಕರೆಯಕಳುಹಿಸಿದೆನು. ರತ್ನಮ್ಮ ಸುಮಧುರಸ್ವರದಿಂದ "ಕೃಷ್ಣಾಮೂರ್ತೀ ಕಣ್ಣಾಮುಂದೆ" ಎಂಬ ಹಾಡನ್ನು ಹಾಡುತ್ತಿದ್ದಾಗ ರಂಗ ಬಂದ. ಬಾಗಿಲವರೆಗೆ ಬಂದವನು, ಹೊಸ್ತಿಲ ಹತ್ತಿರ ಬಂದರೆ ಎಲ್ಲಿ ಹಾಡುವುದು ನಿಂತುಹೋಗುವುದೋ ಎಂಬ ಭಯ, ಹಾಡುವವರನ್ನು ನೋಡಬೇಕೆಂಬ ಕುತೂಹಲ, ಮೆಲ್ಲಗೆ ಬಾಗಿಲಿನಿಂದ ಇಣಿಕಿನೋಡಿದ. ಬೆಳಕು ಮರೆಯಾದುದರಿಂದ ರತ್ನಮ್ಮ ಬಾಗಿಲಕಡೆ ದಿಟ್ಟಿಸಿದಳು. ಅಪರಿಚಿತರು ಬಂದುದನ್ನು ಕಂಡು ಹಾಡುವುದನ್ನು ನಿಲ್ಲಿಸಿಬಿಟ್ಟಳು.

ಕಸೀಮಾವಿನ ಹಣ್ಣನ್ನು ತಿನ್ನುವಾಗ 'ದುಡ್ಡು ಕೊಟ್ಟ ಹಣ್ಣಿನ ಯಾವ ಭಾಗವಾದರೂ ವ್ಯರ್ಥವಾಗಿ ಹೋಗುವುದಲ್ಲಾ!' ಎಂದು ಅದರ ತೊಗಟೆಯನ್ನು ಮೊದಲು ತಿಂದು ಆಮೇಲೆ ತಿರುಳಿನಲ್ಲಿ ಸ್ವಲ್ಪ ರುಚಿ ನೋಡಿ, ಉಳಿದುದನ್ನು ತಿನ್ನಲು ಪ್ರಯತ್ನಿಸಿದಾಗ ಅದು ಕಯ್ಜಾರಿ ಮರಳಿನಲ್ಲಿ ಬಿದ್ದುಹೋದರೆ, ನಿಮಗೆ ಯಾವ ವಿಧವಾದ ಖೇದವುಂಟಾಗುವುದೋ, ಅದೇ ವಿಧವಾದ ಖೇದ ರಂಗನ ಮುಖದಲ್ಲಿ ತೋರಿಬಂದಿತು. ಅವನು "ಏನೋ ಬರಹೇಳಿದಿರಂತಲ್ಲ" ಎಂದು ಒಳಗೆ ಬಂದು ಒಂದು ಕುರ್ಚಿಯ ಮೇಲೆ ಕುಳಿತುಕೊಂಡನು.

ರತ್ನಮ್ಮ ತಲೆ ಬಗ್ಗಿಸಿಕೊಂಡು ದೂರದಲ್ಲಿ ನಿಂತುಕೊಂಡಳು. ರಂಗ ಪುನಃಪುನಃ ಅವಳ ಕಡೆಗೆ ನೋಡಿದ. ಒಮ್ಮೆ ಅವಳನ್ನು ಹಾಗೆ ನೋಡುತ್ತಿದ್ದಾಗ ನನ್ನ ದೃಷ್ಟಿ ಅವನ ದೃಷ್ಟಿಯೊಡನೆ ಸೇರಿತು. ಆಗ ಅವನಿಗೆ ಬಹಳ ಅವಮಾನವಾಗಿರಬಹುದು. ಬಹಳ ಹೊತ್ತು ಯಾರೂ ಮಾತನಾಡಲಿಲ್ಲ. ಅನಂತರ ರಂಗನೇ ಮೊದಲು "ನಾನು ಬಂದುದರಿಂದ ಹಾಡು ನಿಂತುಹೋಯಿತು. ನಾನು ಹೊರಡುತ್ತೇನೆ," ಎಂದನು. ಬಾಯಲ್ಲಿ ಹೇಳಿದುದೆಷ್ಟೋ ಅಷ್ಟೆ! ಹೋಗುವೆನೆಂದ ದೊಡ್ಡಮನುಷ್ಯ ಕುರ್ಚಿಯನ್ನು ಬಿಟ್ಟು ಏಳಲೇ ಇಲ್ಲ. ಕಲಿಯುಗದಲ್ಲಿ ತ್ರಿಕರಣ ಶುದ್ಧಿಯೆಲ್ಲಿಯದು.

ರತ್ನಮ್ಮ ನಾಚಿಕೊಂಡು ಮನೆಯೊಳಕ್ಕೆ ಓಡಿದಳು.

ಸ್ವಲ್ಪಹೊತ್ತು ಮೂಕನಂತೆ ಕುಳಿತಿದ್ದು ರಂಗ "ಆ ಹುಡುಗಿ ಯಾರು ಸ್ವಾಮಿ?" ಎಂದು ಕೇಳಿದ.

ಗುಡಿಯೊಳಗೆ ಅವಿತುಕೊಂಡಿದ್ದ ಹೋತವನ್ನು ಸಿಂಹ ಹೊರಗಿನಿಂದ "ಯಾರು ಅದು ಒಳಗೆ" ಎಂದು ಕೇಳಿದುದಕ್ಕೆ, ಮೇಕೆ "ಯಾರಾದರೇನು? ನಾನೊಂದು ಬಡಜಂತು. ಒಂಭತ್ತು ಗಂಡು ಸಿಂಹಗಳನ್ನು ತಿಂದು ಇದೇನೆ. ಇನ್ನೊಂದನ್ನು ತಿನ್ನಬೇಕೆಂಬ ಮತವಿದೆ. ನೀನು ಗಂಡೋ? ಹೆಣ್ಣೋ?" ಎಂದು ಕೇಳಿತಂತೆ! ಅದಕ್ಕೆ ಸಿಂಹ ಹೆದರಿ ಓಡಿಹೋಯಿತಂತೆ! ಆ ಹೋತದಂತೆ ನಾನು, "ಯಾರಾದರೇನು ನನಗೂ ನಿನಗೂ? ನನಗೆ ಮದುವೆಯಾಗಿದೆ; ನೀನು ಮಾಡಿಕೊಳ್ಳುವುದಿಲ್ಲ!" ಎಂದೆ.

ಅದಕ್ಕೆ ರಂಗ "ಆ ಹುಡುಗಿಗೆ ಇನ್ನೂ ಮದುವೆಯಿಲ್ಲವೆ?" ಎಂದು ಬಹಳ ಆಸೆಯಿಂದ ಕೇಳಿದನು. ಆಸೆಯಿದೆಯೆಂಬುದನ್ನು ತೋರ್ಪಡಿಸಲಿಲ್ಲ! ಆದರೆ ಅದು ನನಗೆ ತಿಳಿಯಿತು.

"ಆಗಿ ಒಂದು ವರ್ಷವಾಯಿತು."

ರಂಗನ ಮುಖ ಬೆಂಕಿಯಲ್ಲಿ ಬೆಂದ ಬದನೆಯಕಾಯಿ ಹಾಗೆ ಕಂದಿ ಹೋಯಿತು.

ಸ್ವಲ್ಪಹೊತ್ತಿನ ಮೇಲೆ ರಂಗ "ನನಗೆ ಕೆಲಸವಿದೆ. ಮನೆಗೆ ಹೋಗುತ್ತೇನೆ," ಎಂದು ಹೊರಟುಹೋದ.

ನಾನು ಮಾರನೆಯ ಬೆಳಿಗ್ಗೆ ನಮ್ಮ ಶಾಸ್ತ್ರಿಯ ಬಳಿಗೆ ಹೋಗಿ "ಜೋಸ್ಯ ಕೇಳುವುದಕ್ಕೆ ಬೇಕಾದುದನ್ನೆಲ್ಲ ಸರಿಯಾಗಿ ಇಡು. ಮಧ್ಯಾಹ್ನ ಬರುವೆನು," ಎಂದು ಇನ್ನೂ ಹೇಳಬೇಕಾದುದನ್ನೆಲ್ಲ ಹೇಳಿಕೊಟ್ಟು ಮನೆಗೆ ಬಂದೆನು.

"ಮಧ್ಯಾಹ್ನ ರಂಗನನ್ನು ಕಂಡಾಗ ಅವನು ಇನ್ನೂ ಹಾಗೆಯೇ ಇದ್ದನು. ನಾನೇ ಮೊದಲು "ಏನಪ್ಪಾ! ಬಹಳ ಆಲೋಚನೆ ಮಾಡುತ್ತಿದೀಯೆ?" ಎಂದು ಕೇಳಿದೆ.

"ಆಲೋಚನೆಯೇನು? ಒಂದೂ ಇಲ್ಲ."

"ತಲೆನೋವೆ? ಬಾ! ವೈದ್ಯರ ಬಳಿಗೆ ಹೋಗೋಣ."

"ತಲೆನೋವಿಲ್ಲ. ನಾನು ಇರುವುದೇ ಹೀಗೆ."

"ನನಗೆ ಹುಡುಗಿಯನ್ನು ಗೊತ್ತುಮಾಡುವ ಕಾಲದಲ್ಲಿ, ಎಲ್ಲವೂ ನಿಷ್ಕರ್ಷೆಯಾಗುವುದಕ್ಕೆ ಮೊದಲು, ನಾನು ಹೀಗೆಯೇ ಇದ್ದೆ. ನಿನಗೆ ಆ ಕಾರಣವೇನೂ ಇರಲಾರದಷ್ಟೆ?"

ರಂಗ ನನ್ನನ್ನೇ ದೃಷ್ಟಿಸಿ ನೋಡಿದ.

"ಶಾಸ್ತ್ರಿಗಳ ಬಳಿಗೆ ಹೋಗೋಣ ಬಾ. ಗುರುಬಲ ಶನಿಬಲ ಸರಿಯಾಗಿದೆಯೋ ಇಲ್ಲವೋ ವಿಚಾರಿಸೋಣ."

ರಂಗ ಯಾವ ಆಲೋಚನೆಯನ್ನೂ ಮಾಡದೆ, ಸುಮ್ಮನೆ ಮೇಲಕ್ಕೆ ಎದ್ದನು. ಶಾಸ್ತ್ರಿಯ ಬಳಿಗೆ ಹೋದೆವು. ಅವನು "ಏನಯ್ಯಾ? ಶ್ಯಾಮು, ನಿನ್ನನ್ನು ನೋಡಿ ಬಹಳ ದಿನ ಆಯಿತು!" ಎಂದನು.

ಶ್ಯಾಮು ಈ ಕತೆಯನ್ನು ಹೇಳುತ್ತಿರುವ ತಮ್ಮ ಸೇವಕ.

ನನಗೆ ಕೋಪಬಂದಿತು. ನಾನು "ಇದೇನಯ್ಯಾ, ಈ ಹೊತ್ತು ...." ಎಂದು ಹೇಳುವಷ್ಟರಲ್ಲಿಯೇ ಶಾಸ್ತ್ರಿ, "ಬಿಡುವಾಯಿತು, ಇದುವರೆಗೆ ಏನಾದರೂ ಕೆಲಸದಲ್ಲಿದ್ದೆಯೇನೋ?" ಎಂದು ಹೇಳಿ ಪೂರ್ತಿಮಾಡಿದನು. ಇಲ್ಲದಿದ್ದರೆ ನಾನು ಹುಚ್ಚನ ಹಾಗೆ "ಈ ಹೊತ್ತು ಬೆಳಿಗ್ಗೆ ಬಂದಿದ್ದೆನಲ್ಲಾ?" ಎಂದು ಹೇಳಿ, ಬಿಸಲಿನಲ್ಲಿಟ್ಟ ಹರಳಿನ ಕಾಯಂತೆ ನಮ್ಮ ತಂತ್ರವೆಲ್ಲಾ ಸಿಡಿದುಹೋಗುವಹಾಗೆ ಮಾಡುತಿದ್ದೆ. ಆಮೇಲೆ ಬಹಳ ಜಾಗರೂಕನಾಗಿದ್ದೆ.

"ನಮ್ಮ ಕರಣೀಕರ ಮಕ್ಕಳು ಯಾವಾಗ ಬಂದರು? ಏನಾಗ ಬೇಕು? ಅವರು ನಮ್ಮ ಮನೆಗೆ ಬರುವುದೇ ಅಪರೂಪ!" ಇತ್ಯಾದಿ ಮರ್ಯಾದೆಗಳೆಲ್ಲ ನಡೆದುವು.

"ನಿನ್ನ ಗಂಟನ್ನು ಬಿಚ್ಚಯ್ಯ; ನಮ್ಮ ರಂಗಪ್ಪನಿಗೇನೋ ಬಹಳ ಆಲೋಚನೆ ಬಂದಿದೆ. ಅದರ ಕಾರಣವೇನು ಹೇಳಬಲ್ಲೆಯ? ನಿಮ್ಮ ಜ್ಯೋತಿಷಶಾಸ್ತ್ರದ ಶಕ್ತಿಯನ್ನು ಪರೀಕ್ಷಿಸೋಣ!" ಎಂದು ನಾನು ಬಹಳ ದರ್ಪದಿಂದ ಹೇಳಲು, ಶಾಸ್ತ್ರಿ ಎರಡು ಕಾಗದ, ಕೆಲವು ಕವಡೆ, ಒಂದು ಓಲೆಪುಸ್ತಕ, ಇದನ್ನೆಲ್ಲ ತೆಗೆದು, "ಅನಾದಿಯಾದ ಶಾಸ್ತ್ರವಯ್ಯಾ ಇದು,

ಇದಕ್ಕೆ ಒಂದು ಕಥೆಯೂ ಇದೆ,'' ಎಂದು ಒಂದು ಕಥೆಯನ್ನು ಹೇಳಿದ. ಆ ಕಥೆಯನ್ನು ನಾನು ಈಗ ಇಲ್ಲಿ ಹೇಳುವುದಿಲ್ಲ. ಕಥೆಯಲ್ಲಿ ಉಪಕಥೆ ಯನ್ನು ಸೇರಿಸಲು ಇದೇನು ಹರಿಕಥೆಯೆ? ಅಲ್ಲದೆ ನಿಮಗೂ ಬೇಸರವಾಗ ಬಹುದು. ಇನ್ನು ಯಾವಾಗಲಾದರೂ ವಿರಾಮ ದೊರೆತರೆ ಹೇಳುವೆನು.

ಶಾಸ್ತ್ರಿ ತುಟಿಗಳನ್ನು ಪಿಟಿಪಿಟಿ ಆಡಿಸುತ್ತ ಬೆರಳುಗಳನ್ನು ಎಣಿಸು ತ್ತಿದ್ದು ಸ್ವಲ್ಪ ಹೊತ್ತಾದ ಮೇಲೆ "ನಿಮ್ಮ ನಕ್ಷತ್ರ ಯಾವುದು" ಎಂದು ಕೇಳಿದನು. ರಂಗನು ತಿಳಿಯದೆಂದನು. ಶಾಸ್ತ್ರಿ ಚಿಂತೆಯಿಲ್ಲ ಎಂದು ತಲೆಯಲ್ಲಾಡಿಸಿ, ಲೆಕ್ಕಮಾಡಿ, ಕೊನೆಗೆ "ಕನ್ಯಾ ವಿಷಯವಾದ ಆಲೋಚನೆ,'' ಎಂದು ಬಹು ಗಾಂಭೀರ್ಯದಿಂದ ಹೇಳಿದನು, ಅವನ ಆಟಗಳನ್ನು ನೋಡುತ್ತಿದ್ದ ನನಗೆ ತಡೆಯಲಾರದ ನಗು. ಆದರೂ ನಗದೆ ಇದ್ದ ನಾನು ಈ ಮಾತನ್ನು ಕೇಳಿದಕೂಡಲೆ ಫಕ್ಕನೆ ನಕ್ಕು "ಏನಯ್ಯ ರಂಗ? ನಾನು ಹೇಳಿದ ಹಾಗೆಯೇ ಆಯಿತಲ್ಲ?''

"ಕನ್ಯೆ ಯಾರು?'' ಕೇಳಿದವನು ನಾನು; ತಮ್ಮ ದಾಸ.

ಸ್ವಲ್ಪ ಹೊತ್ತು ಆಲೋಚನೆಮಾಡಿ "ಸಮುದ್ರದಲ್ಲಿ ಸಿಕ್ಕುವ ಪದಾರ್ಥದ ಹೆಸರಿನ ಹುಡುಗಿಯಾಗಿರಬೇಕು.''

"ಕಮಲ ಎಂತಲೆ?''

"ಇರಬಹುದು.''

"ಪಾಚಿ ಇರಬಹುದು.''

"ಕಮಲವನ್ನು ಬಿಟ್ಟರೆ, ಪಾಚಿಯೇನೆ? ಮುತ್ತು ರತ್ನ....''

"ರತ್ನವೆ? ರಾಮರಾಯರ ಮನೆಗೆ ಬಂದಿರುವ ಹುಡುಗಿಯ ಹೆಸರು ರತ್ನ. ಹೋಗಲಿ; ಕನ್ಯಾಲಾಭವಾಗಬಹುದೋ?''

ಪುನಃ ಸ್ವಲ್ಪ ಆಲೋಚಿಸಿ: "ಆಗುವುದು.''

ರಂಗನ ಮುಖ ಆಶ್ಚರ್ಯದಿಂದ ತುಂಬಿತ್ತು. ಅದರಲ್ಲಿ ಸ್ವಲ್ಪ ಸಂತೋಷವೂ ಇತ್ತು. ನಾನು ಅವನ್ನು ನೋಡಿ "ಆ ಹುಡುಗಿಗೆ ಮದುವೆಯಾಗಿದೆಯಲ್ಲ?'' ಎಂದೆನು. ನನ್ನ ಮಾತು ಮುಗಿಯಲೇ ಇಲ್ಲ. ಹಾಗೆ ಒಂದುಸಾರಿ ತಿರುಗಿ ನೋಡಿದೆನು. ರಂಗನ ಮುಖ ಅಷ್ಟರಲ್ಲೇ ಪೆಂಕಾಗಿ ಹೋಗಿತ್ತು.

"ಅದನ್ನೆಲ್ಲಾ ಕಾಣೆ. ಇನ್ನಾರಾದರೂ ಇರಬಹುದು. ಶಾಸ್ತ್ರ ಹೇಳಿದುದನ್ನು ನಾನು ಹೇಳಿದೆ."

ಅಲ್ಲಿಂದ ಹೊರಟೆವು. ಬರುತ್ತ ರಾಮರಾಯರ ಮನೆಯ ಬಾಗಿಲಿನಲ್ಲಿ ರತ್ನ ನಿಂತಿದ್ದುದನ್ನು ನೋಡಿ ನಾನು ಮಾತ್ರ ಒಳಗೆ ಹೋಗಿ ಪುನಃ ಹೊರಗೆ ಬಂದೆನು. ಬಂದಕೂಡಲೆ, ರಂಗನನ್ನು ಕುರಿತು "ಏನು ಆಶ್ಚರ್ಯವಪ್ಪ? ಈ ಹುಡುಗಿಗೆ ಮದುವೆಯಾಗಿಲ್ಲವಂತೆ. ನನಗೆ ಯಾರೊ ಆ ದಿನ ಆಗಿದೆಯೆಂದು ಹೇಳಿದರು. ಈಗ ಶಾಸ್ತ್ರ ಹೇಳಿದುದೆಲ್ಲ ನಿಜವಾಗಿಯೇ ಪರಿಣಮಿಸಿತು. ರಂಗಪ್ಪ, ನೀನೇನೋ ಆ ಹುಡುಗಿಗೋಸ್ಕರ ಆಲೋಚನೆ ಮಾಡುತ್ತಿದ್ದೆಯೆಂಬುದನ್ನು ನಾನು ನಂಬಲಾರೆ. ಏನಯ್ಯಾ, ಮಧ್ವಾಚಾರ್ಯರಾಣೆ ಹೇಳು; ನನ್ನ ಹತ್ತಿರ ಮರೆಮಾಚಬೇಡ. ಅವರು ಹೇಳಿದ್ದೆಲ್ಲ ನಿಜವೊ, ಅಲ್ಲವೊ?"

ಇನ್ನಾರಾದರೂ ಆಗಿದ್ದರೆ, ಹೇಳುತ್ತಿದ್ದರೊ ಇಲ್ಲವೊ ನಾನರಿಯೆ! ರಂಗ "ಶಾಸ್ತ್ರದಲ್ಲಿ ನಮಗೆ ತಿಳಿದಿರುವುದಕ್ಕಿಂತ ಹೆಚ್ಚು ನಿಜವಿದೆ. ಅವರು ಹೇಳಿದ್ದೆಲ್ಲ ನಿಜ!" ಎಂದು ಒಪ್ಪಿಕೊಂಡನು.

ಆ ದಿನ ಸಾಯಂಕಾಲ ಶಾಸ್ತ್ರಿ ಬಾವಿಯಬಳಿ ಬಂದಿದ್ದನು. ನಾನೂ ಹೋಗಿದ್ದೆ. ಆಗ ಅಲ್ಲಿ ನಾನು "ಏನು ಶಾಸ್ತ್ರಿಗಳೇ! ನಾನು ಹೇಳಿಕೊಟ್ಟುದನ್ನು ಸ್ವಲ್ಪವಾದರೂ ಅನುಮಾನ ಹುಟ್ಟದಂತೆ ಸರಿಯಾಗಿ ಹೇಳಿದಿರಿ. ಅಬ್ಬಾ ಏನು ಶಾಸ್ತ್ರವಯ್ಯ ನಿನ್ನದು!" ಎಂದು ಹೇಳಿದೆ. ಶಾಸ್ತ್ರಿ "ಏನನ್ನು ನೀನು ಹೇಳಿದ್ದು? ಶಾಸ್ತ್ರಾಧಾರದಿಂದ ಕಂಡುಹಿಡಿಯಬಹುದಾಗಿದ್ದುದನ್ನೇ ನೀನು ಹೇಳಿದಿ. ನೀನು ಹೇಳದಿದ್ದರೂ ನಾನೇ ಕಂಡುಹಿಡಿದು ಹೇಳುತಿದ್ದೆ. ನೀನೆಲ್ಲೊ ಸ್ವಲ್ಪ ಹೇಳಿದಿ; ನಾನೆಷ್ಟು ಹೇಳಿದೆ ನೋಡು?" ಎಂದು ಉತ್ತರಕೊಟ್ಟನು. ಇದೇ ಅಲ್ಲವೆ ಯೋಗ್ಯರ ನಡತೆ?

* * * *

ಮೊನ್ನೆಯ ದಿನ ರಂಗಪ್ಪ ನನ್ನನ್ನು ಔತನದ ಊಟಕ್ಕೆ ಕರೆಯಲು ಬಂದಿದ್ದ. ನಾನು "ಈ ದಿನ ಏನಯ್ಯ?" ಎಂದು ಕೇಳಿದೆ.

"ಶ್ಯಾಮ ಹುಟ್ಟಿದ ಹಬ್ಬ; ಅವನಿಗೆ ಮೂರು ವರ್ಷ ತುಂಬಿತು."

"ಶ್ಯಾಮ ಎನ್ನುವ ಹೆಸರು ಚೆನ್ನಾಗಿಲ್ಲ. ನಾನು ಕರಿಯಗಾಣದ ತುಂಡಿನಂತೆ ಇದೇನೆ. ನನ್ನ ಹೆಸರನ್ನು ತೆಗೆದುಕೊಂಡು ಹೋಗಿ ಆ ಚಿನ್ನದ ಕೊಳಗದಂತಿರುವ ಮಗುವಿಗೆ ಇಟ್ಟು ಏನುಮಾಡಿದಿರಿ? ನೀನೂ ಸರಿಯೆ; ನಿನ್ನ ರತ್ನಳೂ ಸರಿಯೆ. ಶುದ್ಧ ಹುಡುಗು ಸಹವಾಸ! ಸರಿ, ಸರಿ, ಇಂಗ್ಲೀಷು ಪದ್ಧತಿಗಳೇ ಹೀಗೆ!* ನಿನ್ನ ಹೆಂಡತಿ ಎಂಟು ತಿಂಗಳು ಗರ್ಭಿಣಿಯಾಗಿದ್ದರೆ, ನಿಮ್ಮಮ್ಮನ ಜೊತೆಗೆ ಅಡಿಗೆ ಮಾಡುವರಾರು?"

"ಅಕ್ಕನೂ ಅಮ್ಮನ ಕೂಡ ಬಂದಿದಾಳೆ."

ಊಟಕ್ಕೆ ಹೋಗಿದ್ದೆನು. ಹೋದಾಗ ಶ್ಯಾಮ ಇದುರಿಗೆ ಬಂದು ನನ್ನ ಕಾಲುಗಳನ್ನು ಅಪ್ಪಿಕೊಂಡ. ನಾನು ಅವನ ಗಲ್ಲದ ಮೇಲೆ ಒಂದು ಮುತ್ತನ್ನು ಕೊಟ್ಟು, ಕೋಮಲಾಂಗುಳಿಗೆ ಒಂದುಂಗುರವನ್ನಿಟ್ಟೆನು.

* * * *

ಸ್ವಾಮಿ! ತಮ್ಮ ದಾಸನಿಗೆ ಇನ್ನು ಅಪ್ಪಣೆಕೊಡುವಿರಾ? ನಾನೇನೋ ನಿಮ್ಮ ಸೇವೆಗೆ ಯಾವಾಗಲೂ ಸಿದ್ಧನಾಗಿಯೇ ಇರುವೆನು. ಬೇಸರವಿಲ್ಲವಷ್ಟೆ?

---

* ಇಂಗ್ಲೀಷರಲ್ಲಿ ಮಕ್ಕಳಾದರೆ, ಇಷ್ಟರಾದವರನ್ನು ಕರೆದು ಅವರ ಹೆಸರನ್ನು ಮಗುವಿಗೆ ಇಡುವ ಪದ್ಧತಿಯುಂಟು.

# ರಂಗಪ್ಪನ ದೀಪಾವಳಿ

ಅಮ್ಮಯ್ಯ ರಂಗಪ್ಪನ ತಂಗಿ. ಅವಳಿಗೆ ಏಳೆಂಟು ವರ್ಷ ಇರಬಹುದು. ಹುಡುಗಿಗೆ ಎಂಟು ವರ್ಷವಾದರೂ ಬಹು ಬುದ್ಧಿ. ಅವಳಿಗೆ ಮದುವೆಯಾದಕಾಲಕ್ಕೆ ಗಂಡನಿಗೆ ಬಹುಕೆಲಸ ಕೊಡುತ್ತಾಳೆ; ನನಗೆ ಗೊತ್ತು. ಅವನು ಮಾತಾಡಿಸಿದರೆ ಇವಳು ಮಾತಾಡದೇ ಇರುವುದು, ಅವನು ಇದ್ದೆಡೆ ಇವಳು ಇಲ್ಲದೇ ಇರುವುದು, ಅಥವಾ ಮಾತಾಡಿದರೂ ಕೊಂಕು ಕೊಂಕಾಗಿ ಮಾತಾಡುವುದು; ಅಂತು ಅವನಿಗೆ ಸ್ವಲ್ಪ ತೊಂದರೆಯೇ ಸರಿ. ದೇವರ ಸತ್ಯವಾಗಿಯೂ ನಾನು ಚಿಕ್ಕವನಲ್ಲದೇ ಇರುವುದು ನನಗೆ ಸಂತೋಷ. ಚಿಕ್ಕವನಾಗಿದ್ದಿದ್ದರೆ, ಅವಳನ್ನು ಮದುವೆ ಮಾಡಿಕೊಳ್ಳುವ ಘಟನೆ ಎಲ್ಲಿ ಪ್ರಾಪ್ತವಾಗುತ್ತಿತ್ತೋ ಬಲ್ಲವರು ಯಾರು?

ರಂಗಪ್ಪನ ದೀಪಾವಳಿಯ ವಿಷಯ ಬರೆಯುವುದಕ್ಕೆ ಪ್ರಾರಂಭಿಸಿ ನಾನು ಅಮ್ಮಯ್ಯನನ್ನು ವರ್ಣಿಸುವುದಕ್ಕೆ ಕಾರಣವೇನೆಂದರೆ, ರಂಗಪ್ಪನ ದೀಪಾವಳಿಯ ವಿಷಯ ನನಗೆ ಹೇಳಿದವಳು ಅಮ್ಮಯ್ಯನೇ. ಇವರೆಲ್ಲರೂ ಆಗ ಹೋಗಿದ್ದರು. ನಡೆದ ಸಮಾಚಾರವನ್ನೆಲ್ಲಾ ನಾನು ತಿಳಿಯುವುದು ಹೇಗೆ? ರಂಗಪ್ಪನಂತೂ ಹೇಳುವಹಾಗಿಲ್ಲ; ಅವನು ಮಾಡಿದ್ದು ಅಷ್ಟೇನೂ ಹೆಮ್ಮೆಕೊಚ್ಚಿಕೊಳ್ಳಬೇಕಾದ ವಿಷಯವಲ್ಲ. ರತ್ನಮ್ಮ ಹೇಳುವುದಿಲ್ಲ; ಗಂಡನ ತಂಟೆಯನ್ನೂ, ತನ್ನ ಮೊದ್ದುತನವನ್ನೂ, ಇನ್ನೂ ಚಿಕ್ಕ ಹುಡುಗಿ ಈಗಲೇ ಎಲ್ಲರಿಗೂ ಹೇಳಿಯಾಳೇ? ರಂಗನ ತಾಯಿ ಬಿಡುವಾಗಿ ಕುಳಿತು ನನ್ನ ಸಂಗಡ ಈ ಮಾತು ಆಡುವವರಲ್ಲ. ನಡೆದ ಸಮಾಚಾರ ಹ್ಯಾಗೂ ಅಮ್ಮಯ್ಯನಿಂದ ತಿಳಿಯಬೇಕಾದದ್ದು; ಅವಳಿಂದಲೇ ತಿಳಿದದ್ದು. ಅದರಿಂದಲೇ, ಅವಳನ್ನು ಕುರಿತು ಮೊದಲು ಮಾಡಿದೆನು.

ಇಂತಹ ಸಮಾಚಾರಗಳಲ್ಲಿ, ನೋಡಿ, ಮಕ್ಕಳಿಗೆ ಬಹುಬುದ್ಧಿ. ನೋಡಿದ್ದನ್ನು ಅವರು ಚೆನ್ನಾಗಿ ಜ್ಞಾಪಕವಿಟ್ಟುಕೊಳ್ಳುತ್ತಾರೆ. ಇದನ್ನು ಓದುವ ನಿಮಗೆ ಹೇಳುತ್ತೇನೆ; ಕೇಳಿ. ನೀವು ನಿಮ್ಮ ಪತ್ನೀರತ್ನಗಳನ್ನು

ಉತ್ಸಾಹದಿಂದಲೋ ಅನುತ್ಸಾಹದಿಂದಲೋ ಮುತ್ತಿಡುವಾಗ ಹತ್ತಿರ ಯಾರಾದರೂ ಮಕ್ಕಳಿದ್ದರೆ 'ಇವರಿದ್ದರೇನು' ಎಂತಮಾತ್ರ ಅಲಕ್ಷ್ಯ ಮಾಡಬೇಡಿ. ಅವರು ಮನೆಯಲ್ಲಿ ಎಲ್ಲರಿಗೂ ಹೇಳುತ್ತಾರೆ. ಅವರ ಮಾತಿನಲ್ಲಿ ಎಲ್ಲರಿಗೂ ನಂಬಿಕೆ. ಏನೂ ತಿಳಿಯದ ಕೂಸಲ್ಲವೆ? ಅಂತೂ ನಿಮಗೆ ಮಾನವುಳಿಯುವುದಿಲ್ಲ. ಚಿಕ್ಕವಯಸ್ಸಿನ ಪಾಠಕರಿಗೇ ಈ ಮಾತು ಆದಮೇಲೆ ಸ್ವಲ್ಪ ಹೆಚ್ಚು ವಯಸ್ಸಾದ ನನ್ನಂಥವರ ವಿಷಯ ಹೇಳ ಬೇಕಾದುದಿಲ್ಲ. ವಯಸ್ಸಾದವರು ಹಾಗೆ ಮಾಡಿದ್ದನ್ನು ಕೇಳಿದರೆ ಎಲ್ಲರೂ ಅತ್ಯಾಶ್ಚರ್ಯದಿಂದ, ಇದೇನು ಇಷ್ಟು ವಯಸ್ಸಾದ ಮೇಲೂ ಈ ಅವಿವೇಕವೇ? ಎಂದು ಹೇಳುವರು. ಬಹಳ ನಗೆಗೇಡಿಗೆ ಗುರಿ ಯಾಗುವಿರಿ. ಜೋಕೆ! ಹೇಳಿದೇನೆ.

ಅಮ್ಮಯ್ಯ ಒಂದು ಸಲ ನನಗೆ ಹೀಗೆ ಕೆಲಸಕೊಟ್ಟಳು. ನಾನು ಅಮ್ಮಯ್ಯನನ್ನು ಆಗಾಗ ನಮ್ಮ ಮನೆಗೆ ಕರೆದುಕೊಂಡು ಹೋಗುತಿದ್ದೆ. ನಮ್ಮ ಮೊಮ್ಮಕ್ಕಳು ಊರಿನಲ್ಲಿರುವಾಗ ನಮಗೆ ಹೊತ್ತುಹೋಗುವು ದಕ್ಕೇನೂ ಕಷ್ಟವಿಲ್ಲ. ಇಲ್ಲದೆಯಿದ್ದರೆ ಬೇಜಾರಾಗುವುದು. ಯಾರವಾ ದರೂ ಮಕ್ಕಳನ್ನು ಕರೆದುಕೊಂಡು ಹೋಗಿ ಕುಳಿತರೆ, ತಮಾಷೆಯಾಗಿ ಸ್ವಲ್ಪಕಾಲ ಕಳೆದ ಹಾಗಾಗುವುದು. ನಮ್ಮ ಹುಡುಗರೇ ಮನೆಯಲ್ಲಿದಾ ರೆಂದು ಭಾವಿಸಿಕೊಳ್ಳಬಹುದು. ನಮ್ಮಾಕೆಗೆ ಮಕ್ಕಳನ್ನು ಕಂಡರೆ ವಿಶೇಷ ಪ್ರೀತಿ. ಯಾರಾದರೂ ಮಕ್ಕಳು ಕಾಲಿಗೆ ತೊಡಕಿಕೊಂಡು 'ಅಮ್ಮಾ!' ಎಂದು ಪೋರುಮಾಡುವಾಗ ಮಾಡುವಷ್ಟು ಕೆಲಸ ಅವರು ಒಬ್ಬರೇ ಇದ್ದಾಗ ಮಾಡಲಾರರು. ಬಹಳ ಮಕ್ಕಳನ್ನು ಸಾಕಿದವರು. ಹದಿನಾರು ವಯಸ್ಸಿನಲ್ಲಿ ತನ್ನ ಮೊದಲನೆಯ ಕೂಸನ್ನು ಸಾಕಲು ಪ್ರಾರಂಭಿಸಿ ಇದುವರಿಗೂ ಮಕ್ಕಳನ್ನೋ ಮೊಮ್ಮಕ್ಕಳನ್ನೋ ಸಾಕಿ ಸಲಹಿ ಅಭ್ಯಾಸ. ಮಕ್ಕಳು ಯಾರಾದರೂ ಮನೆಯಲ್ಲಿ ರಂಪುಮಾಡದೇ ಇದ್ದರೆ ಆಕೆಗೆ ಉಲ್ಲಾಸ ಕಡಿಮೆ.

ಒಂದು ದಿನ ಅಮ್ಮಯ್ಯನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗಿದ್ದೆ. ಮಧ್ಯಾಹ್ನ ಮೂರು ಗಂಟೆ. ಚಾಪೆಯ ಮೇಲೆ ಉದ್ದಕ್ಕೂ ಚಾಚಿ ಬಿದ್ದಿದ್ದೆ. ನಮ್ಮ ಮನೆಯವರು ಅಲ್ಲಿ ಬಂದು ಕೂತುಕೊಂಡರು.

ತಲೆಕೂದಲನ್ನು ಸರಿಮಾಡಿಕೊಳ್ಳುತ್ತ ಕುಳಿತರು. ನಾನು ತಮಾಷೆಗೆ "ನನ್ನ ತಲೆಯನ್ನೂ ಬಾಚಬಾರದೆ" ಎಂದು ಕೇಳಿದೆ. "ನಿಮ್ಮ ತಲೆ ಬಾಚಿ ಶೃಂಗಾರ ಮಾಡದೇಯಿದ್ದರೆ ಬಹಳ ನಿಂತುಹೋಯಿತು," ಎಂತ ಅವರು ಹೇಳಿದರು. "ನೀನು ನನಗೆ ಮೊದಲನೆಯ ಹೆಂಡತಿ. ನನಗೆ ವಯಸ್ಸಾದಹಾಗೆಲ್ಲಾ ನಿನಗೂ ವಯಸ್ಸಾಯಿತು. ನಿನಗೆ ನನ್ನನ್ನು ಕಂಡರೆ ಅಗತ್ಯವಿಲ್ಲ. ನಾನು ಎರಡನೆಯ ಮದುವೆಯನ್ನೋ ಮೂರನೆಯ ಮದುವೆಯನ್ನೋ ಮಾಡಿಕೊಂಡಿದ್ದರೆ, ಅವಳು ನನ್ನನ್ನು ಇಷ್ಟು ಅಸಡ್ಡೆ ಮಾಡುತ್ತಿರಲಿಲ್ಲ," ಎಂತ ನಾನು ಹೇಳಿದೆ. "ಅದಕ್ಕೇನು, ಇಂದು ತಲೆ ಬಾಚಿಕೊಳ್ಳೋಣ ಎನ್ನಿಸಿತು. ನಾಳೆ ಯಾರನ್ನಾದರೂ ಮದುವೆಮಾಡಿ ಕೊಳ್ಳೋಣ ಎಂತ ತೋರಬಹುದು," ಎಂತ ಅವರು ಹೇಳಿ ಸ್ವಲ್ಪ ನಕ್ಕರು. ನನಗೆ ಅವರನ್ನು ನೋಡಿ ಬಹಳ ಮುದ್ದಾಯಿತು. ನಮ್ಮ ತಾಯಿ ವಯಸ್ಸಾದಾಗ ಹೇಗಿದ್ದರೆಂದು ನನಗೆ ಜ್ಞಾಪಕವಿದೆ. ನಮ್ಮ ಮನೆಯಾಕೆಯಲ್ಲಿ ನಮ್ಮ ತಾಯಿಯಲ್ಲಿದ್ದ ಅದೇ ಗಾಂಭೀರ್ಯವಿದೆ. ಆ ಗಾಂಭೀರ್ಯದ ಜೊತೆಗೆ ಹದಿನಾರು ವರುಷದ ಹುಡುಗಿಯ ಚೆಲುವೂ ಇದೆ. ಅವರು ಆ ಮಾತನ್ನು ಹೇಳಿದಾಗ ನಾನು "ನಮ್ಮ ಮನೆಯಲ್ಲಿ ಆಗಾಗ ಕಾದಾಡುವ ಬೆಕ್ಕುಗಳ ಹೋರಾಟದ ಗದ್ದಲವನ್ನು ನಿಲ್ಲಿಸುವುದೇ ನನಗೆ ಸಾಕಾಗಿದೆ. ನಿನ್ನ ಜೊತೆಗೆ ಇನ್ನೊಬ್ಬ ಹೆಂಗಸನ್ನು ತಂದು ನೀವು ಹೋರಾಡುವುದನ್ನು ನೋಡಿ ನಾನು ಬದುಕಿದಹಾಗಾಯಿತು," ಎಂದು ಹೇಳಿದೆನು. ನಮ್ಮಾಕೆ ಅಲ್ಲಿ ಕುಳಿತಿದ್ದವರನ್ನು ನೋಡಿದೆ, ಬಹು ಚೆನ್ನಾಗಿದ್ದರು; ಹತ್ತಿರ ಹೋಗಿ ಒಂದು ಮುತ್ತುಕೊಟ್ಟೆ.

ಅಮ್ಮಯ್ಯ ಅಲ್ಲೇ ಕುಳಿತಿದ್ದಳು. ನಾನು ಅವರ ಹತ್ತಿರ ಹೋದದ್ದನ್ನು ನೋಡಿ ನಾನು ಅವರನ್ನು ಕಚ್ಚುವುದಕ್ಕೋ ಹೊಡೆಯುವುದಕ್ಕೋ ಹೋದೆನೆಂದು ತಿಳಿದು "ಏ, ಏ, ಪಾಟಯ ತಂಟೆಗೆ ಹೋಗುತ್ತೀಯಾ?" ಎಂದು ನನ್ನನ್ನು ಅಟ್ಟುವುದಕ್ಕೆ ಕಯ್ಯೆತ್ತಿಬಂದಳು. ನಾನು ಕಚ್ಚಲೂ ಇಲ್ಲ ಹೊಡೆಯಲೂ ಇಲ್ಲ ಎಂಬುದನ್ನು ನೋಡಿ ಪ್ರಾಯಶಃ ತನ್ನ ಶೌರ್ಯದ ಪ್ರಭಾವದಿಂದಲೇ "ಪಾಟ" ಉಳಿದುಕೊಂಡಳು ಎಂದು ತಿಳಿದು ಸುಪ್ರೀತಳಾಗಿ ಅಲ್ಲೇ ಕುಳಿತಳು.

ಇದೆಲ್ಲಾ ಏನು ಎನ್ನುವಿರಾ? ಕೊನೆಯಲ್ಲಿ ತಿಳಿಯುತ್ತದೆ. ಸ್ವಲ್ಪ ತಡೆಯಿರಿ.

ದೀಪಾವಳಿ ಹಬ್ಬ ನಿಜವಾದ ಹಬ್ಬ. ನೀವು ಮದುವೆಯಾದವರಾಗಿದ್ದರೆ ನೀವೇ ಯೋಚನೆಮಾಡಿ ನೋಡಿ; ನಿಮ್ಮ ಅನುಭವದಲ್ಲಿ ದೀಪಾವಳಿ ಹಬ್ಬದಂತಹ ಹಬ್ಬ ಯಾವುದಾದರೂ ಇದೆಯೇ? ಎಂದು; ಇದೆ ಎಂದು ತೋರಿಸಿದರೆ, ನಾನು ಇಲ್ಲಿ ಬರೆದಿರುವುದನ್ನು ಬದಲಾಯಿಸುತ್ತೇನೆ. ಅದರಂತಹ ಹಬ್ಬವೇ ಇಲ್ಲ; ಅದರಲ್ಲೂ ನೀವು ಮೊದಲನೆಯ ಸಲ ಮಾವನ ಮನೆಗೆ ಹೋದ ದೀಪಾವಳಿಯಂತಹ ಒಳ್ಳೆಯ ಹಬ್ಬ ಇನ್ನು ಯಾವುದೂ ಇಲ್ಲ. ಅನೇಕ ಕಾರಣಗಳಿಂದ ಅದು ಹಾಗೆ. ಅತ್ತೆಯ ಮನೆಯಲ್ಲಿ ಅಳಿಯತನ ಮಾಡುವುದು ಒಂದು ಕಾರಣ. ಹೆಂಡತಿಯೆದುರಿಗೆ ಬಹಳ ದೊಡ್ಡಮನುಷ್ಯನ ಹಾಗೆ ಇರುವುದು ಎರಡನೆಯ ಕಾರಣ. ಸ್ವಲ್ಪ ಸಾಹಸಿಯಾದರೆ, ಅವಳೊಂದಿಗೆ ಮಾತನಾಡುವುದೋ ಅಥವಾ ಎಲ್ಲಾದರೂ ಒಂದುಕಡೆ ಅಡ್ಡಹಾಕಿ ನಿಲ್ಲಿಸಿ ಮಾತನಾಡುವುದಕ್ಕೆ ಪ್ರಯತ್ನಪಡುವುದೋ ಎಂಬ ಆಸೆಯೊಂದು. ಅಂತೂ ದೀಪಾವಳಿ ಹಬ್ಬ ನಮ್ಮ ಜೀವಮಾನದಲ್ಲಿ ಬಹು ಮುಖ್ಯವಾದ ಹಬ್ಬ.

ಈಗಿನವರ ಮಾತು ನಾನು ಹೇಳಲಾರೆ. ಬಹಳ ನಾಜೂಕಿನ ಕಾಲ: ಮದುವೆಗೆ ಮೊದಲೇ ಹುಡುಗ ಹುಡುಗಿಯರು ಮಾತನಾಡಿಕೊಂಡಿರುವುದುಂಟು. ಹಾಗೂ ಹುಡುಗ ಮಾತನಾಡದೆ ಸುಮ್ಮನೆ ಇದ್ದರೂ ಹುಡುಗಿಯೇ ಮಾತನಾಡಿಸುವಳು. ಅಲ್ಲದೆ ಯಾವ ಕಾರಣದಿಂದಲೋ, ಅಳಿಯತನದ ಜೋಕು ಈಗ ಕಡಿಮೆಯಾಗಿ ಹೋಗಿದೆ. ಅಷ್ಟಲ್ಲದೆ ಇನ್ನೇನು? ಅಳಿಯ ಹೋಗಿ ಮಾವನ ಮನೆಯಲ್ಲಿ ವರ್ಷಾಂತರ ನಿಂತರೆ, ಮನೆಯಲ್ಲಿ ಜೋರುಮಾಡುವುದೇನನ್ನ? ಎಲ್ಲಿ ಹೋದರೂ, ಅತ್ತೆಯನ್ನು ಸ್ವಲ್ಪ ಹೆದರಿಸಬಹುದು, ಅಷ್ಟೆ. ನಮ್ಮ ಹುಡುಗರು ಅವರ ಹೆಂಡತಿಯರ ಮಾತನ್ನು ಕೇಳಿದರೆ, ಇಂತಹ ಅವಿವೇಕಕ್ಕೆ ಕಾರಣವಾಗುತ್ತಿರಲಿಲ್ಲ. ಮದುವೆಯಲ್ಲಿ ಹುಡುಗಿಯರು "ಅತ್ತಗಾರಿಂಟಿಕೀ ಅಲ್ಲುಡೈ ವೊಸ್ತೇನು ಮುಚ್ಚಟಗ ಉಂಡೇದಿ ಮೂಡುನಾಳ್ಳು" ಎಂತ ಹೇಳುತ್ತಾರೆ. 'ಮೂಡು

ನಾಳ್ಳ' ಹೋಗಿ 'ಮೂಡು ವರುಷಂ' ಅತ್ತಗಾರರ ಮನೆಯಲ್ಲಿ ನಿಂತರೆ, ಮುಚ್ಚಟೆಯೋ ಗಿಚ್ಚಟೆಯೋ?

ರಂಗಪ್ಪನಂತೂ ದೀಪಾವಳಿಗೆ ಮೊದಲು ಹೆಂಡತಿಯ ಸಂಗಡ ಮಾತನಾಡಿರಲಿಲ್ಲ. ಅವನು ಮದುವೆಯ ದಿನ ದೇವರಿಗೆ ನಮಸ್ಕಾರ ಮಾಡುವುದಕ್ಕೆ ರತ್ನಳ ಕೈಯನ್ನು ಹಿಡಿದುಕೊಂಡು ದೇವರ ಮನೆಗೆ ಹೋಗುತ್ತಿದ್ದಾಗ ಅವಳ ಸಂಗಡ ಮಾತನಾಡುವುದಕ್ಕೆ ಪ್ರಯತ್ನಪಟ್ಟ ನೆಂದು ಕಾಣುತ್ತದೆ. ಹಸೆಯಮೇಲೆ ಕುಳಿತಿರುವಾಗ ಮಾತಿಲ್ಲ; ಆಮೇಲೆ ತಿರುಗಿ ಜನರ ಗುಂಪಿಗೆ ಬಂದಾಗ ಮಾತಿಲ್ಲ; ಅಂತೂ ಯಾವಾಗ ಲಾದರೂ, ಪಾಪ, ಹುಡುಗಿ ಒಂಟಿಯಾಗಿ ಸಿಕ್ಕಿದಾಗ ಅಲ್ಲವೇ, ಅದರ ಪ್ರಾಣ ಹಿಂಡಬೇಕು? ದೇವರ ಮನೆಗೆ ಹೋಗುವಾಗ ರಂಗಪ್ಪನ ಬಾಯಿ ಅಲುಗುತ್ತಿತ್ತು. ಆದರೆ ರತ್ನಮ್ಮನ ಬಾಯಿ ಮಾತ್ರ ಕಲ್ಲಿನಲ್ಲಿ ಕಡೆದ ಬೊಂಬೆಯ ಬಾಯಂತೆ ಇತ್ತು. ನಾನು ರಂಗಪ್ಪನನ್ನು ಆಮೇಲೆ "ಏನಯ್ಯ, ರಂಗಪ್ಪ! ನಿನ್ನ ಹೆಂಡತಿಗೆ ನೀನು ಹೇಳುತ್ತಾ ಇದ್ದದ್ದು?" ಎಂತ ಕೇಳಿದೆ.

"ಯಾವಾಗ?"

"ದೇವರ ಮನೆಗೆ ಹೋಗುವಾಗ ನೀನು ಏನೋ ಹೇಳುತ್ತಿದ್ದಹಾಗೆ ಕಂಡಿತು."

"ನಾವು ಏನನ್ನು ಹೇಳುವುದು? ಈ ಹುಡುಗಿಯರಿಗೆ? ನಿಮಗೆ ಮೊದಲೇ ಹೇಳಿದ್ದೇನಲ್ಲವೆ? ನಾವು ಏನಾದರೂ ಹೇಳಿದರೆ, ಅವರಿಗೆ ತಿಳಿಯುವ ಬಗೆ ಹೇಗೆ?"

"ಸರಿ, ಸರಿ, ರತ್ನ ಶಕುಂತಲೆಯಂತೆ ವಯಸ್ಸಾದ ಹುಡುಗಿಯಲ್ಲ."

"ಅಲ್ಲ" ಎಂದು ರಂಗಪ್ಪ ಹೇಳಿದ.

ಅವನು ಸುಮ್ಮನೆ ಇದ್ದನೆಂದು ನಾನು ನಂಬಲಿಲ್ಲ.

ದೀಪಾವಳಿಗೆ ಹೋಗುವಾಗ ರಂಗಪ್ಪನಿಗೆ ಬಹಳ ಉತ್ಸಾಹ. ಇವರೆಲ್ಲರೂ ರತ್ನಮ್ಮನ ಚಿಕ್ಕಪ್ಪನ ಮನೆಗೆ ಹೋಗುವ ವೇಳೆಗೆ ರತ್ನ ಅವರ ಮನೆಯ ಸುತ್ತಲ ತೋಟದಲ್ಲಿ ನಿಂತಿದ್ದಳು. ಹುಡುಗಿಗೆ ಬಂಡಿಯ ಶಬ್ದವನ್ನು ಕೇಳುತ್ತಲೇ ಎದೆ ದಡದಡನೆ ಬಡಿದುಕೊಳ್ಳುತ್ತಿತ್ತು. ಅಂದು

ತಾನು "ಕೃಷ್ಣಾ ಮೂರ್ತೀ ಕಣ್ಣಾಮುಂದೆ" ಎಂದು ಹಾಡುತ್ತಾ ಇದ್ದಾಗ ರಂಗಪ್ಪನನ್ನು ಒಂದು ತಡವೆ ನೋಡಿದ್ದಳು. ಮದುವೆಯಲ್ಲಿ ಹಸೆಯ ಮೇಲೆ ಕುಳಿತಿದ್ದಾಗ ಒಂದೊಂದು ಸಲ ಯಾರೂ ಕಾಣದ ಹಾಗೆ ನೋಡಿದ್ದಳು. ಗಂಡನನ್ನು ನೆನೆದುಕೊಂಡಾಗ ಮದುವೆಯ ಜ್ಞಾಪಕ ವೆಲ್ಲಾ ಬಂದಿತು. ಎದುರುಬದುರಾಗಿ ಕುಳಿತು ಚಂಡಾಡಿದ್ದು, "ಅತ್ತೆಯ ಮಗಳೆ" ಎಂತ ಪುರೋಹಿತನು ಹೇಳಿದಾಗ, ತನ್ನ ಗಂಡ, ತಾಯ ಮಾತನ್ನು ಕೇಳಿ "ಕತ್ತೆಯ ಮಗಳೆ" ಎಂದು ಹೇಳಿದ್ದು, ಅದಕ್ಕೆ ತನಗೆ ಕೋಪ ಬಂದದ್ದು, ಅದಕ್ಕೆ ತಾನು ಸೊಟ್ಟ ಸೊಟ್ಟನಾದ ಮಾತಿನ ಹಾಡು ಗಳನ್ನು ಹೇಳಿದ್ದು, ಎಲ್ಲಾ ಜ್ಞಾಪಕ. ಅದೆಲ್ಲಾ ಎಷ್ಟು ಸಂತೋಷದ ಕಾಲ! ವಿವಾಹದ ಕಾಲದಲ್ಲಿ ಗೃಹವೆಲ್ಲ ಪತಿಯ ಯೋಚನೆಯಿಂದ ತುಂಬಿತ್ತು. ಮದುವೆಯಾದವರೆಲ್ಲರಿಗೂ ಇದು ಅನುಭವದಲ್ಲಿರಬೇಕು. ಹುಡುಗಿ ಎಲ್ಲಿಯಾದರೂ ಇರಬಹುದು; ಹುಡುಗನಿಗೆ ಮದುವೆಯ ಮನೆ ಹುಡುಗಿಯಿಂದ ತುಂಬಿದಂತೆ ಇರುತ್ತದೆ. ಹುಡುಗ ಎಲ್ಲಿಯಾದರೂ ಇರಬಹುದು; ಹುಡುಗಿಗೂ ಹಾಗೆಯೇ! ರತ್ನಮ್ಮನಿಗೆ ಮದುವೆಯ ಮನೆಯೆಲ್ಲಾ ರಂಗಪ್ಪನಿಂದ ತುಂಬಿದಂತೆ ಭಾವನೆ! ಸ್ವಲ್ಪ ಕಸ್ತೂರಿ ಯನ್ನು ಒಂದು ಕೋಣೆಯಲ್ಲಿಡಿ; ಮನೆಯಲ್ಲೆಲ್ಲಾ ಗಮಗಮ ಎಂದಿರು ತ್ತದೆ: ವಾಸನೆ ಬಲ್ಲವರಿಗೆ. ಪತಿಯ ಭಾವವು ಪತ್ನಿಗೆ ಹಾಗೆಯೇ.

ಯಾರು ಬಂದರೆಂದು ತಿಳಿದಿದ್ದರೂ ರತ್ನ ಏನೂ ತಿಳಿಯದವಳ ಹಾಗೆ ತೋಟದಿಂದ ಬೀದೀ ಬಾಗಿಲಿಗೆ ಬಂದಳು. ಬಂಡಿಯಿಂದ ಅತ್ತೆ ಮೊದಲು ಇಳಿದರು. ಆಮೇಲೆ ರಂಗಪ್ಪ, ಆಮೇಲೆ ಎಲ್ಲರೂ. ಯಾರು ಬಂದರೆಂದು ನೋಡುವುದಕ್ಕೆ ಬಂದ ಹುಡುಗಿ ಅತ್ತೆ ಇಳಿದಾಗಲೇ ಇಂಥವರು ಎಂದು ತಿಳಿದು ಮನೆಯೊಳಕ್ಕೆ ಹೋಗಬೇಕೋ ಇಲ್ಲವೋ? ರಂಗಪ್ಪ ಇಳಿಯುವ ತನಕ ಅಲ್ಲೇ ಇದ್ದು, ಆಮೇಲೆ ಒಳಗೆ ಹೋದಳು. ಅವಳು ತೋಟದಲ್ಲಿದ್ದಾಗಲೆ ರಂಗಪ್ಪ ಅವಳನ್ನು ನೋಡಿದನು. ಅಲ್ಲಿ ಒಂದು ದ್ರಾಕ್ಷಿಯ ಚಪ್ಪರ; ಬಳ್ಳಿ ಚೆನ್ನಾಗಿ ಹಬ್ಬಿ ಬೇಕಾದ ಹಾಗೆ ಕೊಡಿ ಬಿಟ್ಟಿತ್ತು. ಚಪ್ಪರದಿಂದ ಕೆಳಕ್ಕೆ ಲತೆ ಲಾಲಿಲಾಲಿಯಾಗಿ ನೇತಾಡುತಿತು. ಗಾಳಿ ಬೀಸಿದ ಹಾಗೆ ಲತೆ ಮಂದವಾಗಿ ಅಲುಗುವುದು.

ಅಲ್ಲಿ ಲತೆಯ ಜೊತೆಯಲ್ಲಿ ಲತೆಯಾಗಿ ಮೃದುಶರೀರದಿಂದ ಕೊಡಿಗಳನ್ನು ಅಣಕಿಸುವ ಹಾಗಿರುವ ರತ್ನ. ಅಲ್ಲಿಂದ ಬಂದು ಬಾಗಿಲಲ್ಲಿ ನಿಂತಳಷ್ಟೆ! ಗಾಡಿಯಿಂದ ಇಳಿದಾಗ ರಂಗಪ್ಪ ಅಲ್ಲಿ ನಿಂತಿದ್ದವಳನ್ನ ನೋಡಿದನು; ಏನಾದರೂ ಮಾಡಿ ಈ ಸಲ ಅವಳ ಸಂಗಡ ಮಾತನಾಡಲೇಬೇಕೆಂದು ನಿಶ್ಚಯಮಾಡಿಕೊಂಡನು.

* * * *

ಸಾಯಂಕಾಲ ಹಸೆಯಮೇಲೆ ಕೂರಿಸಿದಾಗ ರತ್ನಮ್ಮ ಕೊಂಚ ಕೂಡ ಹತ್ತಿರ ಕುಳಿತುಕೊಳ್ಳಲಿಲ್ಲ. ಮಣೆಯ ಕೊನೆಯಲ್ಲಿ ಕುಳಿತು ಕೊಂಡಳು. ಅವಳ ಚಿಕ್ಕಮ್ಮ, ಅತ್ತೆ, ಇನ್ನೂ ಅಲ್ಲಿ ನೆರೆದಿದ್ದ ಹೆಂಗಸರು ಎಲ್ಲರೂ ಏನೇನೋ ಹೇಳಿದರು: ಅವಳು ಕೇಳಲಿಲ್ಲ. "ಅವಳಿಗೆ ನನ್ನ ಹತ್ತಿರ ಕೂಡುವುದಕ್ಕೆ ಇಷ್ಟವಿಲ್ಲವೇನೋ? ನಾನು ಎದ್ದು ಹೋಗು ತ್ತೇನೆ," ಎಂತ ರಂಗನು ಎದ್ದನು. ಆಗ ಅವಳು ಸ್ವಲ್ಪ ಹತ್ತಿರ ಸರಿದಳು. ಗಂಡ ಹೊರಟುಹೋಗದೆ ಇರಲಿ ಎಂದು ಸರಿದಳೋ, ಹೊರಟುಹೋದರೆ ಎಲ್ಲರೂ ತನ್ನನ್ನು ನಿಷ್ಠೂರಪಡಿಸುವರಲ್ಲಾ ಎಂದು ಸರಿದಳೋ, ನಾನು ಕಾಣೆ. ಪ್ರಾಯಶಃ ಅವನು ಹೊರಡದೆ ಅಲ್ಲೇ ಇರಲಿ, ಎಂಬ ಇಷ್ಟ ದಿಂದಲೇ ಸರಿದಿರಬಹುದು. ಹಾಗೂ ಹೀಗೂ ಎಣ್ಣೆಮಾರುವವನ ಹತ್ತಿರ ಕೊಸರು ಕೇಳಿದ ಹಾಗೆ ಸ್ವಲ್ಪ ಸ್ವಲ್ಪ ಹತ್ತಿರ ಬಂದಳು.

ರಂಗನಿಗೆ ಬಹಳ ಕೋಪ ಬಂದಿತು. ಎದ್ದು ಹೊರಟೇಹೋಗೋಣ ವೆಂದು ಯೋಚಿಸಿದನು. ಆದರೆ, ಹೊರಟುಹೋಗಲಿಲ್ಲ. ಯಾತಕ್ಕೆ ಎನ್ನುವಿರೋ?

ರಾಮು, ಭೀಮು ಸ್ಕೂಲಿಗೆ ಹೋಗುತ್ತಿದ್ದಾರೆ. ರಾಮುನ ಜೇಬಿನ ತುಂಬ ಹುರಿಗಡಲೆ, ಭೀಮು ಜೇಬು ಬರೀ ಜೇಬು.

"ಅದೇನೋ, ರಾಮು?"

"ಏನೂ ಇಲ್ಲಕಣೋ, ಹುರಿಗಡಲೆ."

"ಲೋ, ಇನ್ನು ಯಾರಿಗೂ ಕೊಡಬಾರದು. ನಾವಿಬ್ಬರೇ ತಿನ್ನೋಣ?"

"ನಾನು ಅದನ್ನು ಎಂಜಲು ಮಾಡಿಬಿಟ್ಟಿದೇನೆ."

"ಎಂಜಲಾದರೇನು ಪರವೇ ಇಲ್ಲ."

"ಲೋ, ನಾನು ನಿನಗೆ ಕೊಡುವುದಿಲ್ಲಪ್ಪ."

"ಹಾಗಾದರೆ, ನಿನ್ನ ಸಂಗಾತಿ ಬಿಟ್ಟುಬಿಡುತ್ತೇನೆ; ನೋಡಿಕೋ."

"ಬಿಟ್ಟುಬಿಡು."

ರಾಮು ಬಿಟ್ಟುಬಿಡು ಎಂದರೂ ಭೀಮು ಬಿಡುವುದಿಲ್ಲ. ಜೊತೆಯಲ್ಲೇ ಇರುತ್ತಾನೆ. ಸ್ವಲ್ಪ ದೂರವೊ ಸ್ವಲ್ಪ ಹತ್ತಿರವೊ ಇದ್ದು ರಾಮುನನ್ನು ಅನುಸರಿಸುತ್ತಾನೆ. ಯಾಕೆ? ಹುರಿಗಡಲೆಯ ಮೇಲೆ ಆಸೆ.

ರಂಗಪ್ಪ ಎದ್ದು ಹೋಗಲಿಲ್ಲ. ಏಕೆಂದರೆ, ರತ್ನಮ್ಮ ಹುರಿಗಡಲೆ ಇರುವ ಹುಡುಗನ ಹಾಗೆ. ರಂಗಪ್ಪನಿಗೆ ಬಾಯಲ್ಲಿ ನೀರು ಊರುತ್ತಿದ್ದ ಮಾತ್ರವೇ: ಜೇಬು ಮಾತ್ರ ಬರೀ ಜೇಬು.

ಬಹಳ ಹೊತ್ತು ಹೀಗೆಯೇ ಕುಳಿತಿದ್ದು ಎಲ್ಲವೂ ಮುಗಿದಮೇಲೆ, ರಂಗಪ್ಪ ಜಿಗುಪ್ಸೆಯಿಂದ ಆರತಿ ಆದೀತೇ ಎಂದು ಕಾದಿದ್ದು ಎದ್ದು ಹೊರಟ. ಹೋಗಿ ಕೊಟಡಿಯಲ್ಲಿ ಕುಳಿತು ಯೋಚಿಸಿದ. ಇದೆಲ್ಲಿಯ ಅನ್ಯಾಯ, ಇದು? ಬಹಳ ಉತ್ಸಾಹದಿಂದ ಊರಿನಿಂದ ಇಲ್ಲಿಗೆ ಬಂದರೆ, ಇವಳು ಹೀಗೆ ಮಾಡುವುದು ತರವೆ? ನಾನು ಯಾರಿಗೋಸ್ಕರ ಬಂದದ್ದು? ಇವಳಿಗೋಸ್ಕರ ಅಲ್ಲವೆ? ಇವಳನ್ನು ನೋಡುವುದಕ್ಕೆ, ಇವಳನ್ನು ಮಾತನಾಡಿಸುವುದಕ್ಕೆ, ಎಂದು ಅಲ್ಲವೆ? ತನಗೆ ಇವಳಲ್ಲಿ ಇದ್ದ ಅಕ್ಕರೆ ಅವಳಿಗೆ ತನ್ನಲ್ಲಿ ಇಲ್ಲವಲ್ಲ? ತಾನು ಎಂದುಕೊಂಡಹಾಗೆಯೇ ಒಂದು ಕೆನ್ನೆ ಹಾಲು ಒಂದು ಕೆನ್ನೆ ನೀರು ಎನ್ನುವ ಸಮಾಚಾರಕ್ಕೆ ಬಂತು. ಆದರೇನು, ಬಂದದ್ದಂತೂ ಆಯಿತು, ಅವಳನ್ನು ಏನಾದರೂ ಮಾಡಿ ಮಾತನಾಡಿಸಿಯೇ ಬಿಡಬೇಕು ಎಂದು ದೃಢಮಾಡಿಕೊಂಡನು.

ಶಿಪಾಯಿ ಮೀಸೆಯನ್ನು ಹುರಿಮಾಡುವಹಾಗೆ ರಂಗಪ್ಪ ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡು ಅಲ್ಲಿಂದ ಹೊರಗೆ ಬಂದು ರತ್ನಮ್ಮ ತನ್ನ ಒಡವೆಗಳನ್ನು ಕಳಚಿಡುವುದಕ್ಕೆಂದು ಹೋಗಿದ್ದ ಕೊಟಡಿಗೆ ಹೋದನು. 'ಹೋಗಿ ಮಾತನಾಡಿಸುವುದು. ಮಾತನಾಡದೆ ಇದ್ದರೆ, ಚೆನ್ನಾಗಿ ಬಯ್ದು ಬಂದುಬಿಡುವುದು,' ಎಂದುಕೊಂಡು ಹೋದನು. ಬೆಳಕು ಅಷ್ಟೇನು ಹೆಚ್ಚಾಗಿರಲಿಲ್ಲ. ಅಲ್ಲಿ ಕಿಟಕಿಯ ಹತ್ತಿರ ರತ್ನಮ್ಮ

ನಿಂತಿದ್ದಳು. ಹೆಜ್ಜೆಯ ಶಬ್ದವನ್ನು ಕೇಳಿ ಹಿಂದಿರುಗಿದಳು. ಹಿಂದಿರುಗಿದರೆ, ರಂಗಪ್ಪ!

ಗೋವಿನ ಕಥೆಯಲ್ಲಿ, ಆ ನಿಜವಾದದ್ದೋ ನಿಜವಲ್ಲದ್ದೋ ಹುಲಿ ಏನೇನನ್ನೋ ಮಾಡುತ್ತಾ ದನದ ಮುಂದೆಗೆ ಬಂದಿತಂತೆ. ಪದ್ಯ ಮರೆತು ಹೋಯಿತು. ಅದರಲ್ಲಿ "....ಬಂದನಾ ಹುಲಿರಾಯನು!" ಎಂತ ಇದೆ. ರತ್ನಮ್ಮನಿಗೆ ಗಂಡನನ್ನು ನೋಡಿ "ಬಂದನಾ ಹುಲಿರಾಯನು" ಎನ್ನುವ ಹಾಗಾಯಿತೋ ಏನೋ? ಅವನನ್ನು ನೋಡಿ ಅವಳು ಮುಖವನ್ನು ಪುನಃ ಕಿಟಕಿಯ ಕಡೆಗೆ ತಿರುಗಿಸಿಕೊಂಡಳು.

ರಂಗಪ್ಪ ಮೆಲ್ಲಗೆ ಹತ್ತಿರಹೋಗಿ ಪಕ್ಕದಲ್ಲಿ ನಿಂತು ಹುಡುಗಿಯ ಮುಖವನ್ನು ನೋಡಿದ. ಮೈತುಂಬ ಒಡವೆ, ಮುಖದ ತುಂಬ ಕಣ್ಣು; ತಾನು ಹಚ್ಚಿದ ಗಂಧ; ಮುಖದ ಚಂದ ಹೇಳುವಹಾಗಿರಲಿಲ್ಲ. ಕೋಪ ವೆಲ್ಲಾ ಮಾಯವಾಯಿತು.

"ನೀನು ಯಾಕೆ ನನ್ನ ಸಂಗಡ ಮಾತನಾಡುವುದಿಲ್ಲ?"

ಉತ್ತರವಿಲ್ಲ.

"ನನ್ನ ಸಂಗಡ ಮಾತನಾಡುವುದಿಲ್ಲವೆ?"

ಉತ್ತರವಿಲ್ಲ.

"ನನ್ನ ಮೇಲೆ ಏನಾದರೂ ಕೋಪವೆ?"

ಅಯ್ಯೋ ಹುಚ್ಚೇ! ಇನ್ನೂ ಸರಿಯಾಗಿ ಕಣ್ಣು ತೆರೆಯುವುದಕ್ಕಿಲ್ಲ. ಈಗಾಗಲೇ 'ನನ್ನ ಮೇಲೆ ಕೋಪವೇ?' ಎಂದು ಪ್ರಶ್ನೆ.

"ನನ್ನ ಕೂಡ ಮಾತನಾಡುವುದಿಲ್ಲವೇನು?"

ಉತ್ತರವಿಲ್ಲ.

ಯಾರಾದರೂ, ಬಂದುಬಿಡುವರೆಂದು ಭಯ. ಹುಡುಗಿ ಮಾತ ನಾಡಳು.

"ಹಾಗಾದರೆ, ನಾನು ಹೋಗುತ್ತೇನೆ," ಎಂದು ರಂಗನು ಹಿಂದಕ್ಕೆ ಸರಿದನು. ಆಗ ರತ್ನಮ್ಮ ಸ್ವಲ್ಪ ತಲೆ ತಿರುಗಿಸಿ ಅವನ ಕಡೆ ನೋಡಿದಳು.

ಹೋಗಲು ಇಷ್ಟವಿಲ್ಲ. ಸಾಲದುದಕ್ಕೆ ದೇವಿ ಸ್ವಲ್ಪ ಪ್ರಸನ್ನಳಾಗಿ ತನ್ನ ಕಡೆಗೆ ದೃಷ್ಟಿ ತಿರುಗಿಸಿದಳು. "ಗಾಣ ಆಡಿ ಆಡಿ ಎಣ್ಣೆ ಬಂದಾಗ

ಕಣ್ಣು ಮುಚ್ಚಿಕೊಂಡರು,'' ಎಂಬಂತೆ ಆ ಸಮಯದಲ್ಲಿ ಹೊರಟುಹೋಗು ವುದೆ? ರಂಗಪ್ಪ ಪುನಃ ಹತ್ತಿರ ಹೋದ.

"ನೀನು ನನ್ನ ಕೂಡ ಮಾತನಾಡುವುದಿಲ್ಲವೇನು?''

"ಆಡದೇ ಏನು?''

ಪ್ರಶ್ನೆಗೆ ಮಾರು ಪ್ರಶ್ನೆ ರತ್ನಮ್ಮನದು.

ರಂಗಪ್ಪನ ಸುಖಕ್ಕಂತೂ ಪಾರವೇ ಇಲ್ಲ. ಯಾಕೆ? ತನ್ನ ಹೆಂಡತಿ ತನ್ನ ಸಂಗಡ ಮಾತನಾಡಿದಳಲ್ಲ, ಎಂದು. ಇದೇನು ವಿಧಾತನ ಸೃಷ್ಟಿಯ ಮಾಯೆಯೋ ನೋಡಿ. ಇದುವರೆಗೂ ಸುಮಾರು ಎಷ್ಟು ಮದುವೆಗಳಾಗಿರಬಹುದು, ಈ ಪ್ರಪಂಚದಲ್ಲಿ? ಲೆಕ್ಕವೇ ಇಲ್ಲ. ಆದರೆ ಒಬ್ಬೊಬ್ಬನೂ ತನ್ನ ತನ್ನ ಹೆಂಡತಿ ತನ್ನ ಸಂಗಡ ಮೊದಲು ಮಾತನಾಡಿದಾಗ ಏನೋ ಮಹಾ ಕೋಟೆಕೊತ್ತಲವನ್ನು ಗೆದ್ದವನಿಗಿಂತ ಹೆಚ್ಚು ಸುಖಿಯಾಗುತ್ತಾನೆ. ಅವರವರ ಹೆಂಡತಿಯರು ಅವರವರ ಸಂಗಡ ಮಾತನಾಡದೆ ಏನು ಮಾಡುತ್ತಾರೆ? ಆಡುವುದು ನ್ಯಾಯವೇ ಆದರೂ; ಆಡತಕ್ಕದ್ದು ಆವಶ್ಯಕವಾದರೂ; ಆಡುವುದು ಎಂದಿದ್ದರೂ ತಪ್ಪಿದ್ದಲ್ಲ ವಾದರೂ; ಒಂದು ಸಲ ಮಾತನಾಡುವವರೆಗೂ ಸಾವಕಾಶ, ಪ್ರಾರಂಭಿಸಿದ ಮೇಲೆ ಸಾಕಪ್ಪ ಸಾಕು ಸಾಕು ಎನ್ನುವವರೆಗೆ ಮಾತಿನ ಮಳೆ ಸುರಿಯು ವುದು ಎಂದು ನನ್ನಂತಹವರು ತಿಳಿದವರು ಹೇಳಿದ್ದರೂ; ಯಾವ ಹುಡುಗನನ್ನೇ ನೋಡಿ, ಅವನ ಹೆಂಡತಿ ಅವನ ಸಂಗಡ ಮೊದಲು ಮಾತನಾಡಿದ ದಿವಸ ಬಹಳ ಸಂತೋಷದಲ್ಲಿ ಮುಳುಗಿರುತ್ತಾನೆ. ಸಾಕ್ರೆಟೀಸ್ ಎಂಬ ತಪಸ್ವಿಯ ಹೆಂಡತಿ ಅವನ ಜ್ಞಾನಪರಿಪೂರಿತವಾದ ತಲೆಯ ಮೇಲೆ ಸಗಣೀ ನೀರನ್ನು ಸುರಿದು ಅವನನ್ನು ಬಾಯಾರೆ ಬಯ್ಯುತ್ತಿದ್ದಳಂತೆ. ತನ್ನ ಹೆಂಡತಿ ತನ್ನೊಂದಿಗೆ ಮೊದಲನೆಯ ಸಲ ಮಾತನಾಡಿದಾಗ ಅವನೂ ಬಹಳ ಸಂತೋಷಪಟ್ಟನೋ ಏನೋ? ಬಲ್ಲವರಾರು.

"ಆಡದೇ ಏನು?'' ಎಂದು ರತ್ನಮ್ಮ ಕೇಳಿದಳು.

"ಹಾಗಾದರೆ ಮೊದಲು ಮಾತನಾಡಿಸಿದಾಗ ಏಕೆ ಜವಾಬು ಕೊಡಲಿಲ್ಲ?''

"ಬೆಳಿಗ್ಗೆ ಮನೆಗೆ ಬಂದವರು ನನ್ನ ಕೂಡ ಮಾತನಾಡುವುದಕ್ಕೆ ಈಗಲೇ ಬರುವುದು?"

ರಂಗಪ್ಪನಿಗೆ ಪೇಚಾಟಕ್ಕೆ ಬಂದಿತು. ಹುಡುಗಿ ಮೆತ್ತಗಿದಾಳೆ, ಸ್ವಲ್ಪ ಹೆದರಿಸೋಣ ಎಂತ ಬಂದರೆ, ಒಳ್ಳೆಯ ತಂಟೆಗೆ ಸಿಕ್ಕಿದಹಾಗಾಯಿತು. ಪ್ರಪಂಚವೇ ಹೀಗೆ. ತೋರಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು ಎಂದು ಹೇಳುವ ಹಾಗೆ. ತಂಟೆಗೆ ಸಿಕ್ಕಿದ್ದೇನೋ ನಿಜ. ಆದರೆ ಅವನು ಬಹಳ ಸುಖವನ್ನು ಅನುಭವಮಾಡಿದನು. ರೂಪವತಿಯಾದ ನಿಮ್ಮ ಪತ್ನಿ ಕಿಶೋರಿಯಾಗಿದ್ದಾಗ ನಿಮ್ಮಲ್ಲಿ ಕೂರ್ತ ಮಡದಿಯಾಗಿ ತನ್ನ ಸಂಗಡ ಮಾತನಾಡಲಿಲ್ಲವಲ್ಲಾ ಎಂದು ನಿಮ್ಮ ಮೇಲೆ ಕೋಪಿಸಿಕೊಂಡರೆ ನಿಮಗೆ ಆನಂದವಲ್ಲದೆ ಮತ್ತೇನು? ರಂಗಪ್ಪನ ದೀಪಾವಳಿ ಆನಂದದಿಂದ ತೊಳಗಿ ಬೆಳಗಿತು.

*    *    *    *

ನಾನು ಹೇಳುವ ಮಾತನ್ನು ಚಿಕ್ಕವರಾದ ನೀವೆಲ್ಲ ಪ್ರಾಯಶಃ ನಂಬುವಿರಿ. ಅದಕ್ಕೋಸ್ಕರ ನಿಜವಾದ ಮಾತನ್ನು ಮಾತ್ರ ಬರೆಯಬೇಕೆಂತ ನಾನು ಒಂದು ದಿನ ಇದನ್ನೆಲ್ಲಾ ಹೇಳಿ ರತ್ನಮ್ಮನನ್ನು ಇದು ನಡೆದದ್ದು ನಿಜವೆ ಎಂದು ಕೇಳಿದೆನು. ರಂಗಪ್ಪನೂ ಅಲ್ಲೇ ನಿಂತಿದ್ದ; ಸ್ವಲ್ಪ ನಗುತ್ತಿದ್ದ.

"ಹೋಗಿ, ನೀವಿನ್ನೇನು ಮಾಡೀರಿ?" ಎಂದು ರತ್ನಮ್ಮ ಹೇಳಿದಳು.

"ನಿಜವೆಂದರೆ ಎನ್ನು. ಇಲ್ಲದಿದ್ದರೆ ನಿಜವೆಂತಲೇ ನಾನು ತಿಳಿದುಕೊಳ್ಳುತ್ತೇನೆ," ಎಂದು ನಾನು ಹೇಳಿದೆ.

"ನಿಮಗೆ ಹೇಳಿದವರು ಯಾರು? ಇದನ್ನೆಲ್ಲಾ ನಿಮ್ಮ ಕೂಡ ಪುರಾಣಮಾಡುವವರು ಯಾರು?" ಎಂದು ರತ್ನಮ್ಮ ಕೇಳಿದಳು.

"ಅಮ್ಮಯ್ಯ."

"ಅಮ್ಮಯ್ಯ ಎಷ್ಟು ನಿಜ ಹೇಳುತಾಳೆಂದು ನಿಮಗೆ ಗೊತ್ತಿಲ್ಲವೇನು? ನಾಳೆ ರಾಮಾಭಟ್ಟರ ಮನೆಗೆ ಬನ್ನಿ. ಅವಳು ಎಂತೆಂತಹ ಸುಳ್ಳುಪಳ್ಳು ಹೇಳುತ್ತಾಳೆ ತಿಳಿಯುತ್ತದೆ."

ಮಾರನೆಯ ದಿನ ರಾಮಾಭಟ್ಟರ ಮನೆಗೆ ಹೋದೆ. ನಾಲ್ಕು ಗಂಟೆ ಸಮಯ. ದೊಡ್ಡ ತೊಟ್ಟಿಯಲ್ಲಿ ಇವರೆಲ್ಲಾ ಸೇರಿ ಸ್ವಲ್ಪ ಹೊತ್ತು ವಿನೋದವಾಗಿ ಕಳೆಯುತ್ತಾರೆ. ಈಚೆಗೆ ಹುಡುಗಿಯರು ಹೀಗೆ ಎಲ್ಲಾದರೂ ಒಂದು ಕಡೆ ಸೇರಿ ತಮಾಷೆಯಾಗಿ ಸ್ವಲ್ಪ ಕಾಲ ಕಳೆದು ಉಲ್ಲಾಸದಿಂದಿರುವುದು ಕಡಿಮೆಯಾಗಿದೆ. ದೊಡ್ಡ ಊರುಗಳಲ್ಲಿ ಒಬ್ಬರಿಗೊಬ್ಬರು ಗುರುತಿಲ್ಲದ್ದರಿಂದ ಒಬ್ಬರ ಮನೆಗೊಬ್ಬರು ಕೆಲಸವಿದ್ದ ಹೊರತು ಹೋಗುವುದಿಲ್ಲ. ಓದುಬರಹ ಬಂದ ಹುಡುಗಿಯರು ರಾಮಾಯಣವನ್ನೋ, *ನಾಸಿಕಳ ಕತೆಯನ್ನೋ, ಹಾಗೂ ಸ್ವಲ್ಪ ಮನಸ್ಸು ಬಂದರೆ ಡಿಟೆಕ್ಟಿವ್ ನಾವಲನ್ನೋ ಕೈಯಲ್ಲಿ ಹಿಡಿದು ಕಾಲ ಕಳೆಯುತ್ತಾರೆ. ಇದು ಪರಂಗಿಯವರ ಮಾದರಿಯೆಂತ ಕೇಳಿದೇನೆ. ನಮ್ಮೂರಿನಲ್ಲಿ ಈಗಲೂ ಹುಡುಗಿಯರು ಒಂದೊಂದು ದಿನ ಒಂದು ಮನೆಯಲ್ಲಿ ಸೇರಿ ತಲೆಬಾಚಿಕೊಂಡು ಹೆರಳು ಹಾಕಿಕೊಂಡು ಆಮೇಲೆ ತಮ್ಮ ತಮ್ಮ ಮನೆಗಳಿಗೆ ಕೆಲಸ ಮಾಡುವುದಕ್ಕೆ ಹೋಗುತ್ತಾರೆ. ಆ ದಿನ ನಾನು ಹೋದಾಗ ಹುಡುಗಿಯರೆಲ್ಲ ರಾಮಾಭಟ್ಟರ ಮನೆಯಲ್ಲಿ ನೆರೆದಿದ್ದರು.

ನಾನು ಹೋಗುವ ವೇಳೆಗೆ:—

ಒಬ್ಬಳು: '–ತಲೆ ಬಾಚು, ಎಂದರಂತೆ.'

ಮತ್ತೊಬ್ಬಳು: 'ಆ ನರೆಕೂದಲನ್ನು ಬಾಚದೆ ಇದ್ದರೆ ಬಹಳ ನಿಂತುಹೋಯಿತು!'

ಮೊದಲನೆಯವಳು: 'ಅವರು ಬಾಚುವುದಿಲ್ಲ ಎಂದರಂತೆ. ಆದಕ್ಕೆ ಅವರು ಕೋಪಿಸಿಕೊಂಡು, ಬೇರೆ ಮದುವೆ ಮಾಡಿಕೊಳ್ಳುತ್ತೇನೆ ನೋಡು, ಎಂತ ಹೆದರಿಸಿ ಹೊಡೆಯುವುದಕ್ಕೆ ಹೋದರಂತೆ.'

ಒಬ್ಬಳು: 'ಇದೇನು ನಾಚಿಕೆ ಕೇಡಮ್ಮ, ಅರವತ್ತು ವರುಷದ ಮುದುಕನಿಗೆ ಬಾಚಿ ಹೆರಳು ಹಾಕಿ ಅಲಂಕಾರ ಮಾಡಿ ಬೀದಿಗೆ ಕಳುಹಿಸುವುದಕ್ಕೆ ಇನ್ನು ಮೇಲೆ ಎರಡನೆ ಮದುವೆಗಳನ್ನು ಮಾಡಿಕೊಳ್ಳುತ್ತಾರೆಯೇನೋ?'

---

* ಗ್ರೀಕರ ಪುರಾಣದಲ್ಲಿ ನಾಸಿಕ ಎಂಬುವಳು ಒಬ್ಬ ನಾಯಿಕೆ.

ಸ್ವಲ್ಪ ವಯಸ್ಸಾದವರೊಬ್ಬರು "ಯಾರೇ, ನಿಮಗೆ ಇದನ್ನೆಲ್ಲಾ ಹೇಳಿದವರು ?" ಎಂದರು. "ಅಮ್ಮಯ್ಯ ಕಣ್ಣಾರೆ ನೋಡಿದಳಂತೆ," ಎಂದುದನ್ನು ಕೇಳಿ, "ಏನು ಮಾತಿರೇ, ಅಮ್ಮ, ಇದು? ಏನೂ ತಿಳಿಯದ ಕುನ್ನಿ ಅದು ಏನೋ ಹೇಳಿದರೆ ಅದನ್ನೇ ಹಿಡಿದುಕೊಂಡು ಅಷ್ಟು ಹೊತ್ತಿನಿಂದ ಎಷ್ಟು ನಗುವೇ ನಿಮ್ಮದು? ಒಳ್ಳೇ ಹುಡುಗೀರಮ್ಮ!" ಎಂದು ಅವರು ಗದರಿಸಿದರು.

ನಾನು ಅಷ್ಟುಹೊತ್ತಿಗೆ, ರಾಮಾಭಟ್ಟರೇ, ಎಂದು ಕೂಗಿದೆ. ಹೆಂಗಸರ ಮಾತೆಲ್ಲಾ ನಿಂತುಹೋಯಿತು. ಮೂರುನಾಲ್ಕು ಜನ ಎದ್ದು ಒಳಗೆ ಓಡಿಹೋದ ಶಬ್ದ ಕೇಳಿಸಿತು. ನಾನು ತೊಟ್ಟಿಗೆ ಹೋದೆ. ಅಲ್ಲಿ ಎಲ್ಲರ ಮುಖದಮೇಲೂ ಸೊಗಸಾದ ನಗೆಮಲ್ಲಿಗೆ. ಒಬ್ಬರಿಗೊಬ್ಬರು ಮೆಲ್ಲಮೆಲ್ಲಗೆ ನಗುತ್ತಾ ಇದ್ದರು. ಮುದುಕಮ್ಮನವರು ನನಗೆ "ರಾಮಾಭಟ್ಟ ಮನೆಯಲ್ಲಿಲ್ಲ" ಎಂದು ಹೇಳಿದರು. ನಾನು "ಅದಕ್ಕೇ ಇಷ್ಟು ಮಾತು ನಿಮ್ಮದೆಲ್ಲ, ಬೆಕ್ಕಿಲ್ಲದಾಗ ಇಲಿಗೆ ಚೆಲ್ಲಾಟ," ಎಂದು ಹೇಳಿ ಬಂದೆ.

ಬಾಯಲ್ಲಿ ಹಾಗೆ ಹೇಳಿದೆ ಅಷ್ಟೆ. ನನಗೇನೂ ಕೋಪವಿಲ್ಲ. ರತ್ನಮ್ಮ ನನಗೆ ಅಮ್ಮಯ್ಯನ ಸುಳ್ಳನ್ನು ತೋರಿಸುವುದಕ್ಕೆಂದು ಮಾಡಿದ ಏರ್ಪಾಟಿನಿಂದ, ರಂಗಪ್ಪನ ದೀಪಾವಳಿ ವಿಷಯ ಅಮ್ಮಯ್ಯ ಹೇಳಿದ್ದು ನಿಜ, ಎಂದು ತೋರಿಸಿದಂತಾಯಿತು. ಸಾಲದ್ದಕ್ಕೆ ನಾನು ಮಾಡಿದ ಯಾವುದೇ ಆಗಲಿ ಇಷ್ಟು ಜನ ಹುಡುಗಿಯರ ವಿನೋದಕ್ಕೆ ಕಾರಣ ವಾಯಿತಲ್ಲಾ ಎಂದು ನಾನು ತೃಪ್ತನಾದೆನು. ಇದನ್ನು ಓದುವ ನಿಮಗೂ ಅದೇ ಮಾತು. ನಿಮಗೆ ಇದರಿಂದ ಸ್ವಲ್ಪ ಹೊತ್ತು ಸಂತೋಷವಾದರೆ ನಾನು ತೃಪ್ತನು.

# ರಂಗಪ್ಪನ ಕೋರ್ಟ್‌ಷಿಪ್

ಗುಂಡಾಭಟ್ಟರ ಮನೆಯ ಮದುವೆಗೆ ನಾನು ಅಮ್ಮಯ್ಯನನ್ನೂ ಶ್ಯಾಮನನ್ನೂ ಕರೆದುಕೊಂಡು ಹೋಗಿದ್ದೆ. ಹುಡುಗ, ಹುಡುಗಿ, ಹಸೆಯ ಮೇಲೆ ಕುಳಿತಿದ್ದರು. ಹುಡುಗಿ ಗಂಡನಕಡೆಯ ಮೊಣಕಾಲು ಮೇಲಾಗಿ ಕುಳಿತಿದ್ದಳು. ಅವನಿಗೆ ಅವಳ ಮುಖ ಕಾಣಿಸುತ್ತಿರಲಿಲ್ಲ. ಗಂಡ ಮೊಣಕಾಲನ್ನ ನೋಡಲಿ, ಮುಖವನ್ನ ನೋಡದೆ ಇರಲಿ, ಎಂತ ಅವಳು ಹಾಗೆ ಕುಳಿತಿದ್ದಳೆಂದು ಕಾಣುತ್ತದೆ. ಅವಳಿಗೆ ಯಾವಾಗ ಮುಖವನ್ನು ತೋರಿಸುವುದು ಇಷ್ಟವಿಲ್ಲವೊ, ಆಗ ಅವನಿಂದ ಆ ಮುಖವನ್ನು ನೋಡುವುದು ಸಾಧ್ಯವಲ್ಲ. ಯಾವಾಗಲೂ ಅಷ್ಟೇ ನೋಡಿ, ಮದುವೆ ಆದ ಮೊದಲು ಜೀವನದ ಅಂತ್ಯದವರೆಗೆ ಹೆಂಡತಿ ಹೇಳಿದಹಾಗೆ ಗಂಡ ನಡೆಯ ಬೇಕಾಗುತ್ತದೆ. ಮದುವೆಗೆ ಮೊದಲೂ ಅಷ್ಟೆ. ನಿಮಗೆ ಮದುವೆಗೆ ಮೊದಲು ಹುಡುಗಿಯನ್ನು ಗೊತ್ತುಮಾಡುವುದಕ್ಕೆ ನಿಮ್ಮನ್ನು ನಿಮ್ಮ ಅತ್ತೆಯವರ ಮನೆಗೆ ಮೊದಲನೆಯ ಸಲ ಕರೆದುಕೊಂಡು ಹೋಗಿದ್ದಾಗ, ಹುಡುಗಿಯನ್ನು ನೋಡೋಣ ಕರೆದುಕೊಂಡುಬನ್ನಿ, ಎಂದು ನಿಮ್ಮ ತಂದೆಯವರು ಹೇಳಿದ್ದು ನಿಮಗೆ ಜ್ಞಾಪಕವಿದೆಯಷ್ಟೆ? ಆಗ ನಿಮ್ಮ ಅತ್ತೆ, ಸಂಸಾರಿ, ಸಂಪ್ರದಾಯವಂತರು, ಹುಡುಗಿ ಎಲ್ಲೋ ಮಕ್ಕಳಿಗೆ ಅನ್ನ ಹಾಕುತ್ತಿದ್ದಾಳೇನೋ ಬರಹೇಳುತ್ತೇನೆ ಎಂದು ಹೋದರಲ್ಲಾ, ಆಗ ನೋಡಿ, ಹುಡುಗಿ ಪಕ್ಕದ ಕೊಟಡಿಯಲ್ಲಿ ಹೆರಳು ಹಾಕಿಸಿಕೊಳ್ಳುತ್ತಿದ್ದಳು. ನೀವು ಅದನ್ನು ಆಗ ಅರಿಯರಿ. ಈಗ ನಿಮ್ಮ ಹೆಂಡತಿಯಾಗಿದ್ದಾರಲ್ಲ ಅವರನ್ನು ಕೇಳಿ, ತಿಳಿಯುತ್ತದೆ. ಹೆರಳು ಹಾಕಿದ್ದು ಆದಮೇಲೆ, ಲಕ್ಷಮ್ಮ ಬಾರೇ ಅಮ್ಮಯ್ಯ ಎಂದು ನಿಮ್ಮ ಅತ್ತೆಯವರು ಕೂಗಿದಾಗ "ಯಾಕಮ್ಮ" ಎಂದು ಮೃದುಮಧುರವಾಣಿಯಿಂದ ಮೆಲ್ನುಡಿಯ ನುಡಿಯನ್ನು ನುಡಿಯುತ್ತ ತಾಯ ಬಳಿಗೆ, ಹಸುವಿನ ಬಳಿಗೆ ಕರು ಬರುವಂತೆ, ಎಮ್ಮೆಯ ಹತ್ತಿರಕ್ಕೆ ಎಮ್ಮೆಯಕರು ಬರುವ ಹಾಗೆ, ನಿಮ್ಮ ಹೆಂಡತಿ ಬಂದರಲ್ಲ, ಆಗ ನೀವು ಬಂದಿರುವುದು ತಿಳಿದಿದ್ದರೂ

ತಿಳಿಯುದ ಹಾಗೆ ಅವರು ನಟಿಸಿದರು. ನೀವು ಏನುಮಾಡಲಾಯಿತು? ಆಮೇಲೆ, ಅಮ್ಮಯ್ಯ, ಮಾವ ಬಂದಿದಾರೆ, ಹೋಗಿ ನಮಸ್ಕಾರಮಾಡಿ ಬಾ, ಎಂದರೆ ಕೊಂಚಕ್ಕೆ ಬಂದಾಳೆ! ನಿಮಗೋ ನಾಲ್ಕು ಕಡೆಯೂ ಕಣ್ಣು. ಗೋಡೆಗೆ ಒರಗಿಕೊಂಡಿದ್ದರೆ ತಲೆಯ ಹಿಂದುಗಡೆ ಇರುವ ಕಣ್ಣುಗಳು ಗೋಡೆಯನ್ನು ತೂರಿಯಾದರೂ ನೋಡಿಬರುವಂತೆ ಆತುರ. ಎಷ್ಟೇ ಆತುರವಾದರೂ ನೀವು ಏನುಮಾಡಬಲ್ಲಿರಿ? ಅವರು ಎದುರಿಗೆ ಬಂದು ನಿಮ್ಮ ತಂದೆಯವರಿಗೆ ನಮಸ್ಕಾರಮಾಡಿದರೆ ಉಂಟು; ಇಲ್ಲದಿದ್ದರೆ ಇಲ್ಲ. ಅವರಿಗೆ ಮನಸ್ಸು ಬಾರದೆಯಿದ್ದರೆ ನಿಮಗೆ ಅವರ ದರ್ಶನವಿಲ್ಲ. ಮದುವೆಯ ದಿನ ಹಸೆಯಮೇಲೆ ಕುಳಿತರೆ, ಮೊಣಕಾಲೇ ನಿಮ್ಮ ದೇವರು. ನೀವು ಅದನ್ನು ನೂರಾರುಸಲ ಬಹಳ ವಿಶ್ವಾಸದಿಂದಲೂ ಪ್ರೀತಿಯಿಂದಲೂ ಭಕ್ತಿಯಿಂದಲೂ ಪುನಃ ಪುನಃ ನೋಡಿದಿರಿ. ಮುಖವನ್ನು ನೋಡದೆ ಇದ್ದರೂ ಅದರ ಹಿಂದೆ ಮುಖವಿದೆಯೆಂದು ಧೈರ್ಯ ನಿಮಗೆ. ಮೊಣಕಾಲನ್ನು ನೋಡಿ ನಿಮ್ಮ ಹೃದಯ ಮಹದಾನಂದದಿಂದ ಪರಿಪೂರಿತವಾಗಿರುತ್ತದೆ.

ಗುಂಡಾಭಟ್ಟರ ಮೊಮ್ಮಗಳು ಬಹು ವಿನಯವಾಗಿ ಮೌನವಾಗಿ ಮಾನವಾಗಿ ಕುಳಿತಿದ್ದದನ್ನು ನೋಡಿ ಅಮ್ಮಯ್ಯ ಬಹಳ ಯೋಚನೆ ಮಾಡಿದಳೆಂದು ತೋರುತ್ತದೆ. ಎಲೆ ಅಡಿಕೆ ಎಲ್ಲ ಆದಮೇಲೆ ನಾನು ಶ್ಯಾಮನನ್ನು ಎತ್ತಿಕೊಂಡು ಅಮ್ಮಯ್ಯನನ್ನು ನಡೆಸಿಕೊಂಡು ರಂಗಪ್ಪನ ಮನೆಗೆ ಬರುತ್ತಾಯಿದ್ದೆ. ಅಮ್ಮಯ್ಯ ಸ್ವಲ್ಪದೂರ ಸುಮ್ಮನೆ ಬಂದು ಆಮೇಲೆ 'ತಾತ' ಎಂದಳು.

"ಏನಮ್ಮ?"

"ಆ ಹುಡುಗಿ ಯಾಕೆ ಅಷ್ಟು ಸುಮ್ಮನೆ ಇರುವುದು? ಎಷ್ಟು ಸುಮ್ಮಗಿದ್ದಳು ನೋಡಿದೆಯಾ?"

"ಹೌದು."

"ಅವಳ ಮೂಗಿನ ಮೇಲೆ ಒಂದು ನೊಣ ಬಂದು ಕುಳಿತುಕೊಂಡಿತು. ಅದನ್ನು ಅಟ್ಟುವುದಕ್ಕೆ ಕೂಡ ಅವಳು ಕೈ ಎತ್ತಲಿಲ್ಲ. ಮೂಗನ್ನು ಹೀಗೆ ಹಾಗೆ ಮಾಡಿದಳು, ಅದು ಹೋಗಲಿಲ್ಲ; ಬಹಳ

ಕಷ್ಟಪಟ್ಟಳು; ಕೈಮಾತ್ರ ಎತ್ತಲಿಲ್ಲ. ಆಮೇಲೆ ನಾನು ಹಿಂದುಗಡೆ ಯಿಂದ ಹೋಗಿ....”

“ನೂಕಿವನ್ನಟ್ಟಿದೆಯಾ?”

“ಕೈ ಕಾಲು ಜರುಗಿಸುತ್ತಾಳೋ ಇಲ್ಲವೋ ನೋಡೋಣ, ಎಂದು ಅವಳನ್ನು ಸ್ವಲ್ಪ ಜಿಗಟಿದೆ....”

ನನಗೆ ಬಹಳ ನಗು ಬಂತು.

“....ಆದರೂ ಕದಲಲಿಲ್ಲ. ನೋಡು. ಕಣ್ಣಿನಲ್ಲಿ ಹೀಗೆ ನೋಡಿದಳು. ಎಂದೋ ನನ್ನನ್ನು ಅವಳು ಬದಲಿಗೆ ಜಿಗಟುತ್ತಾಳೆ. ಆದರೇನು?”

“ಆದರೇನು? ನೋಯುತ್ತದೆ.”

“ನೊಂದರೇನು? ಈಗ ಹೀಗಿದ್ದಾಳಲ್ಲಾ. ಆಮೇಲೆ ನೋಡಿ ಕೊಂಡಿರು. ಗಂಡ ಹೆಂಡತಿ ಎಲ್ಲರೆದುರಿಗೂ ಬೇಕಾದಹಾಗೆ ಮಾತನಾಡು ತ್ತಾರೆ. ಈಗ ನಮ್ಮ ಅಕ್ಕನನ್ನು ನೋಡು,”—ಅಕ್ಕ ಎಂದರೆ ರತ್ನಮ್ಮ— “ಮದುವೆ ಆದಾಗ ಹೀಗೆಯೇ ಇದ್ದಳು. ಈಗ ನಾಚಿಕೆಯೇ ಇಲ್ಲ. ಬಹಳ ದಿನದಿಂದ ನಾನು ಇರುವಾಗಲೂ ಅಣ್ಣನಕೂಡ ಮಾತ ನಾಡುತ್ತಾಳೆ.”

“ಹೌದು, ಅಮ್ಮ ಅಣ್ಣನಕೂಡ ನಾನಿರುವಾಗಲೂ ಮಾತನಾಡು ತ್ತಾಳೆ” ಎಂದು ಶ್ಯಾಮನೂ ಹೇಳಿದನು.

ನಾನು ಯೋಚನೆ ಮಾಡಿದೆ; ಇದು ಏತಕ್ಕೆ ಇರಬಹುದು ಎಂದು. ಏನಾದರೂ ಪ್ರೀತಿಯ ಮಾತನ್ನು ಹೇಳಿದಾಗ ಬಯ್ದನೆಂದೇ ತಿಳಿದು ಕೊಂಡರೆ ಏನುಮಾಡುವುದು, ಎಂದು ರಂಗಪ್ಪ ನನಗೆ ಹೇಳಿದ್ದನ್ನು ನಿಮಗೆ ತಿಳಿಸಿದೇನೆ. ಪ್ರೀತಿಯ ಮಾತನ್ನು ಬಯ್ಗಳು ಎಂದು ತಿಳಿದು ಕೊಳ್ಳಬೇಕಾದರೆ, ಅದೆಂತಹ ಪ್ರೀತಿಯ ಮಾತೋ ನಾವು ಪೂರ್ವಿಕರು ಅರಿಯೆವು. ಎಂದರೆ ನೋಡಿ, ಚಿಕ್ಕಂದಿನಲ್ಲಿ ಪ್ರೀತಿಯ ಮಾತನ್ನು ಬಯ್ಗಳು ಎಂದು ತಿಳಿದುಕೊಳ್ಳುವುದು; ದೊಡ್ಡವರಾದ ಮೇಲೆ ಬಯ್ಗಳನ್ನೇ ಪ್ರೀತಿಯ ಮಾತು ಎಂದು ತಿಳಿದುಕೊಳ್ಳಬೇಕಾಗುತ್ತದೆ. ಹಾಗಾಗಿ ಹೀಗಾಗಿ, ನಮ್ಮ ಹೆಂಗಸರಿಗೆ ಪ್ರೀತಿಯ ಮಾತನ್ನು ಕೇಳುವ

ಸುಖವಿಲ್ಲದೆ ಹೋಯಿತಷ್ಟೆ. ಇದು ರಂಗಪ್ಪನಂತವರ ಅಭಿಪ್ರಾಯ. ಒಬ್ಬರ ಸಂಗಡ ಒಬ್ಬರು ಮಾತಾಡುವುದು ಪ್ರೀತಿಯಿಂದ ಅಲ್ಲದಿದ್ದರೆ ನರಿಯ ಕಥೆಯಂತೆ ಇರಬಹುದೆ? ಒಂದು ಅಡವಿಯಲ್ಲಿ ಒಂದು ನರಿ ಒಂದು ದಿನ ಒಂದು ಸಿಂಹವನ್ನು ನೋಡಿತಂತೆ. ಮೊದಲನೆಯ ಸಲ ನೋಡಿದ್ದರಿಂದ ದೂರವಾಗಿ ಹೊರಟುಹೋಯಿತಂತೆ. ಎರಡನೆಯ ಸಲ ನೋಡಿದಾಗ ಹತ್ತಿರ ಬಂದು ನಮಸ್ಕಾರಮಾಡಿ ನಮ್ರವಾಗಿ ನಿಂತಿತಂತೆ. ಮೂರನೆಯ ಸಲ ನೋಡಿದಾಗ ನಮಸ್ಕಾರ ಮಾಡುತ್ತಾ "ಸೌಖ್ಯವೊ?" ಎಂದು ಕೇಳಿತಂತೆ. ಹೀಗಿರಬಹುದೇ ಎಂದು ಯೋಚನೆಮಾಡಿದೆ.

ಇದೆಲ್ಲಾ ನಿಜವಾದರೆ, ಗಂಡ ಹೆಂಡತಿ ಪರಂಗಿಯವರಲ್ಲಿ ಮಾತ್ರ ಗಂಡ ಹೆಂಡತಿ ಎಂದ ಹಾಗಾಗುತ್ತದೆ. ಸಂಜೀವ ರಂಗಪ್ಪನನ್ನು ಒಂದು ದಿನ ಯಾವುದೋ ರೂಪಾಯಿ ಎಣಿಸುವಾಗ, ಅಲ್ಲಿ ಎಷ್ಟು ರೂಪಾಯಿ ಇದೆ, ಎಂತ ಕೇಳಿದ. ರಂಗಪ್ಪ ಹದಿನಾರು ರೂಪಾಯಿ ಎಂತ ಹೇಳಿದ. ಇಂಗ್ಲೀಷಿನಲ್ಲಿ ಎಷ್ಟು ರೂಪಾಯಿ ಎಂತ ಸಂಜೀವ ಕೇಳಿದ. 'ಸಿಕ್‌ಸ್ಟೀನ್' ಎಂತ ರಂಗಪ್ಪ ಹೇಳಿದ. ಹಾಗೆಂದರೇನು, ಎಂತ ಸಂಜೀವ ಕೇಳಿದ. ರಂಗಪ್ಪ ಹದಿನಾರು ಎಂತ ಉತ್ತರ ಕೊಟ್ಟ. ಸಂಜೀವನಿಗೆ ಸಂದೇಹಕ್ಕೆ ಬಂತು. ರಂಗಪ್ಪ ಇಂಗ್ಲೀಷು ಕಲಿತಿದ್ದು ನಿಜವೋ ಸುಳ್ಳೋ? ಕನ್ನಡದಲ್ಲಿ ಹದಿನಾರು ಇಂಗ್ಲೀಷಿನಲ್ಲಿ ಹದಿನಾರೇ ಆದರೆ ಇನ್ನು ಇಂಗ್ಲೀಷಿನಲ್ಲಿ ವಿಶೇಷವೇನು? ಎಂದು ಸಂಜೀವನಿಗೆ ದೊಡ್ಡ ಸಂದೇಹ.

ನಾನು ಹೇಳುವುದು, ಗಂಡ ಹೆಂಡತಿಯರು ಇಂಗ್ಲೀಷಿನವರಲ್ಲೂ ಗಂಡ ಹೆಂಡತಿಯರೆ, ನಮ್ಮಲ್ಲೂ ಗಂಡ ಹೆಂಡತಿಯರೆ. ಪರಂಗಿಯವರು ಮದುವೆಯಾಗುವುದಕ್ಕೆ ಮೊದಲು, ಪ್ರೀತಿ ಮಾತು ಹೇಳಿ ಮೆಚ್ಚುವಂತೆ ಮಾಡಿಕೊಳ್ಳುವುದಕ್ಕೆ ಎಂತ, ಕೊಂಚದಿನ ಇಟ್ಟುಕೊಳ್ಳುತ್ತಾರಂತೆ. ಆಗ ಪ್ರೀತಿ ಮಾತು ಹೇಳುವುದೇ ಉದ್ಯೋಗ. ಇದಕ್ಕೆ "ಕೋರ್ಟ್‌ಷೀಪ್" ಎಂದು ಹೆಸರು. "ಕೋರ್ಟ್‌ಷೀಪ್" ಎಂದರೆ ಕೋರ್ಟಿಗೆ ಹೋಗುವ ಹೆಡ್ಡರು ಎಂದು ಅರ್ಥಮಾಡಿಕೊಳ್ಳಬೇಡಿ. ನನ್ನಂತಹ ಮೊದ್ದು ಒಬ್ಬ 'ಷೇಕ್ಸ್‌ಪೀರ್ ಒಳ್ಳೆ ಕವಿ' ಎಂತ ಯಾರೋ ಹೇಳಿದಾಗ ತಲೆಯನ್ನು ಸ್ವಲ್ಪ ಓರೆಮಾಡಿಕೊಂಡು, "ಷೇಕ್ ಪೀರ್, ಓಹೋ

ತುರುಕರವನೋ?" ಎಂದನಂತೆ: ಅದರಂತೆ ಆದೀತು. "ಕೋರ್ಟ್‌ಷೀಪ್" ಎಂದರೆ ಪ್ರೀತಿಯ ಮಾತು. ನಾನು ನಮ್ಮ ರಂಗಪ್ಪನ 'ಕೋರ್ಟ್‌ಷೀಪಿ'ನ ವಿಷಯ ನಿಮಗೆ ಸ್ವಲ್ಪ ಹೇಳುತ್ತೇನೆ. ಬಿಡುವಾಗಿದ್ದರೆ ಕೇಳಿ.

ರಂಗಪ್ಪನ 'ಕೋರ್ಟ್‌ಷೀಪ್' ಮದುವೆಗೆ ಮೊದಲೇ ಪ್ರಾರಂಭವಾಯಿತು. ರಂಗಪ್ಪನೂ ರತ್ನಮ್ಮನೂ ಮೊದಲನೆಯ ಸಲ ನೋಡಿದಾಗ ಏನು ನಡೆಯಿತೋ ಅದನ್ನು ನಿಮಗೆ ತಿಳಿಸಿದೇನೆ. ಮದುವೆಯ ದಿನ ಅವನು ಮಾತನಾಡಿದ್ದನ್ನೂ ಹೇಳಿದೇನೆ. ದೀಪಾವಳಿಯಲ್ಲಿ ಅವನು ಮಾಡಿದ್ದನ್ನೂ ಹೇಳಿದೇನೆ. ಇಲ್ಲಿ ಹೇಳುವುದು ಅದೆಲ್ಲಕ್ಕೂ ಸಹಾಯ ಅಷ್ಟೆ. ಮದುವೆಯ ದಿನ ಸಾಯಂಕಾಲ ಹಸೆಯಮೇಲೆ ಕುಳಿತಿರುವಾಗ ರತ್ನಮ್ಮ ರಂಗಪ್ಪನನ್ನು ಚೆನ್ನಾಗಿ ಬಯ್ದಳು. ನಲುಗಿಗೆ ಕೂತಾಗ ಅವಳು ಕೊಂಚಕ್ಕೆ ಹಾಡು ಹೇಳಲಿಲ್ಲ. ರಂಗಪ್ಪ, ಪಾಪ, ಕಡಲೆಪುರಿ ಕೊಟ್ಟರೆ ಹೇಳುತ್ತಾಳೆಯೇನೊ ಕೊಡಿ, ಎಂದನು. ರತ್ನಮ್ಮ ಇವರಿಗೇಕೆ ಇಷ್ಟು ಕೋಪ ಎಂತಲೋ ಏನೋ ಒಳ್ಳೆಯ ಹಾಡನ್ನು ಹೇಳಿದಳು. ರಂಗಪ್ಪನನ್ನು ಹಸೆಯಮೇಲೆ ಕೂರಿಸಿ, ಕುಂಕುಮ ಇಟ್ಟು, ಅರಸಿನ ಹಚ್ಚಿ, ಕಾಡಿಗೆ ಬಳಿದು, ಮಾಡುವ ವಿಕಾರವನ್ನೆಲ್ಲಾ ಮಾಡಿ, ಆಮೇಲೆ ಹೀಗೆ ಹೇಳಿದಳು.

ರಾಗ—ದೇವರು ಬಲ್ಲ, ಆದರೆ ಇಂಪು. ತಾಳ—ನಾಕಾಣೆ.

ಗಡಿಗೇತಲೆ-ಲಳಿಗೇಹೊಟ್ಟೆ-ಕೊಳಗದಬಾಯಿ ।
ಹಲಗೇಹಲ್ಲು-ಗೂನುಬೆನ್ನು-ಚೆಡಗ ನೋಡಮ್ಮ ।
ಇವನ ಚೆಡಗ ನೋಡಮ್ಮ ।
ಇಂತ ಕೋತಿಮೂತಿ ವರನನ್ನು ಕರತಂದನೆ ।
ಮಾವ ಕರತಂದನೆ ।
ಅಪ್ಪ ನೋಡುತಿದ್ದನೇ ।

ರಂಗಪ್ಪ ಹಾಡು ಹೇಳು ಎಂದದ್ದು, ಸುಮಾರು ತಾನು ಆಗ ಕೇಳಿದ್ದನಲ್ಲಾ ಆ ಹಾಡನ್ನು ಹೇಳುವಳೆಂದು ನೆನಸಿಕೊಂಡು ಇರಬಹುದು. ಚೆನ್ನಾಗಿ ಸೊಗಸು ಮಾಡಿಕೊಂಡು ಬಂದು ಕುಳಿತಿದ್ದ. ರತ್ನಮ್ಮ ತನ್ನನ್ನು ನೋಡಿ "ಕೃಷ್ಣಾಮೂರ್ತೀ ಕಣ್ಣಾಮುಂದೆ ಕೂತಿದ್ದಂತೀದೆ"

ಎಂದು ಹೇಳುವಳೆಂದು ತಿಳಿದಿರಬಹುದು. ಇಲ್ಲವೆ, ಈಗ ವಾಡಿಕೆಗೆ ಬಂದಿರುವ ನಾಟಕದ ಮಟ್ಟಿನ ಹಾಡುಗಳಂತಹ ಹಾಡುಗಳನ್ನು ಹೇಳುವ ಳೆಂದುಕೊಂಡಿದ್ದನೊ? ಹಾಡನ್ನು ಹೇಳಿದರೆ, ಮಸ್ತಕ ಕಸ್ತೂರಿ ಎಲ್ಲಾ ಹೋಗಿ ಗಡಿಗೆತಲೆ, ಲಳಿಗೆಹೊಟ್ಟೆ ಬಂತು. ತಾನು ಹೇಳಿದ್ದಲ್ಲದೆ ಎಲ್ಲರನ್ನೂ ಕರೆದು "ಬೆಡಗ ನೋಡಮ್ಮಾ, ಇವನ ಬೆಡಗ ನೋಡಮ್ಮ" ಎಂದು ಹಾಸ್ಯ ಬೇರೆ. ಸಾಲದ್ದಕ್ಕೆ ರತ್ನಮ್ಮ ಹೇಳಿದ್ದರಲ್ಲಿ ನಿಜವಾದ ಮಾತು ಒಂದು ಇತ್ತು. ಹಸೇಮೇಲೆ ಕೂತು ಕೂತು ರಂಗಪ್ಪ ಸ್ವಲ್ಪ ಮುಂದಕ್ಕೆ ಬಗ್ಗಿದ್ದ. ಎಷ್ಟು ಹೊತ್ತು ಕಬ್ಬಿಣದ ಸಲಾಕೆಯಹಾಗೆ ಕುಳಿತಿರುವುದು? "ಗೂನು ಬೆನ್ನು" ಎಂತ ರತ್ನಮ್ಮ ಹೇಳುತ್ತಲೂ ಫಕ್ಕನೆ ನೆಟ್ಟಗಾದ. ಅಲ್ಲಿದ್ದವರೆಲ್ಲರೂ ಘೊಳ್ಳೆಂದು ನಕ್ಕರು. ರಂಗಪ್ಪ ಹುಡುಗಿಯ ಕಡೆ ನೋಡಿದ. ಅವಳು ತಲೆಯನ್ನು ಒಂದು ಕಡೆಗೆ ತಿರುಗಿಸಿಕೊಂಡು ಒಂದು ಕೈಯನ್ನು ಬಾಯಿಗೆ ಅಡ್ಡವಾಗಿಟ್ಟು ಕೊಂಡಿದ್ದಳು. ಬಾಯಕೊನೆಯಲ್ಲಿ ನಗು ಉಕ್ಕಿಬರುತ್ತಿತ್ತು. ರಂಗಪ್ಪನ ಕಡೆ ಸ್ವಲ್ಪ ನೋಡುತ್ತಿದ್ದಳು. ಮುಂದಕ್ಕೆ ಹೇಳಮ್ಮ ಎಂತ ನಾನು ಹೇಳಿದೆ.

"ಯಾತಾದ ಬಾವಿನೀರ ಯರಚಾಬಲ್ಲನೇ"

ಎಂದು ರತ್ನಮ್ಮ ಪ್ರಾರಂಭಿಸುವ ವೇಳೆಗೆ, ರಂಗಪ್ಪನ ತಾಯಿ ಆ ಹಾಡು ಸಾಕು ಬಿಡಮ್ಮ, ಎಂದು ಹೇಳಿದರು. ಅವರಿಗೆ ಅದು ಸರಿಬೀಳಲಿಲ್ಲ. ಹುಡುಗಿ ಒಳ್ಳೇಸ್ವರದಲ್ಲಿ ಇಂಪಾಗಿ ಹಾಡುತ್ತಾ ಇದ್ದಳು. ಕೇಳುವುದಕ್ಕೆ ಬಹು ಸುಖವಾಗಿತ್ತು. ಆದರೆ ಅವರಿಗೆ ಆ ಹಾಡು ಸರಿಬೀಳಲಿಲ್ಲ. ನೀವು ಯಾರನ್ನಾದರೂ ಕರೆದುಕೊಂಡು ಬಂದು ಅವರನ್ನು ಯಾವ ರಾಗದಲ್ಲಾದರೂ ಬಯ್ಯಿರಿ: ಅವರು ಅದನ್ನು ಸಹಿಸುವುದಿಲ್ಲ. ನೀನು ಕುರೂಪಿ ಎಂದು, ಭೈರವಿ ಅಲ್ಲ ಆನಂದಭೈರವಿಯಲ್ಲಿ, ಸರಿಯಾಗಿ ತಾಳಹಾಕುತ್ತಾ, ಬಯ್ದರೂ ಅವರು ಅದನ್ನು ಕೇಳಿ ಅಸಮಾಧಾನ ಪಡುವರು. ರಂಗಪ್ಪನಿಗೆ ರತ್ನಮ್ಮನ ಹಾಡನ್ನು ಕೇಳಿ ಅಸಮಾಧಾನ ವಾಗಿರಬೇಕು; ಆಶ್ಚರ್ಯವೂ ಆಗಿರಬೇಕು; ಆದರೆ ಬಹಳ ಮೆಚ್ಚಿಗೆಯೂ ಆಯಿತು. ಬಯ್ಯುವುದು ಆಪ್ತತೆಯ ಒಂದು ಚಿಹ್ನೆ. ನೀವು

ಯಾರನ್ನಾದರೂ ನಿಮ್ಮವರನ್ನಾಗಿ ಮಾಡಿಕೊಳ್ಳಬೇಕಾದರೆ ಅವರನ್ನು ಚೆನ್ನಾಗಿ ಬಯ್ಯಿರಿ. ಅದಕ್ಕೇ ನಮ್ಮಲ್ಲಿ ಮುದುಕರು "ಎಲಾ ಗುಲಾಮ, ಒಂದು ಚಿಟಿಕೆ ನಶ್ಯ ಕೊಡೊ" ಎನ್ನುವುದು, ಇಲ್ಲವೆ "ಈ ಲ—ಮಗನ ಹುಳಿ ಎಷ್ಟು ಸೊಗಸಾಗಿದೆ" ಎನ್ನುವುದು. ಬಯ್ದರೆ ಜನ ನಿಮ್ಮವರು. ಅಂದು ರಂಗಪ್ಪ ರತ್ನಮ್ಮನವನಾದ.

ವಿಶ್ವಾಸವನ್ನು ಬಾಯಲ್ಲಿ ಹೇಳಿ ತೋರಿಸುವುದಲ್ಲದೆ ಕೈಯಲ್ಲಿ ಮಾಡಿ ತೊರಿಸಬೇಕಲ್ಲವೆ? ರತ್ನಮ್ಮ ಮಾರನೆಯ ದಿನ ವಿಶ್ವಾಸವನ್ನು ಕೈಯಲ್ಲಿ ಮಾಡಿ ತೋರಿಸಿದಳು. ನಮಗೆಲ್ಲ ಊಟವಾದಮೇಲೆ—ಮದುವೆಯ ಮನೆಯ ಊಟ, ಸವಿಯಾದ ಪದಾರ್ಥಗಳು, ಸುಖ ಭೋಜನವಾಗಿತ್ತು—ಎಲೆ ಅಡಿಕೆ ಹಾಕಿಕೊಂಡರೆ, ನಾವು ಗಂಡಿನ ಕಡೆಯವರಲ್ಲವೆ?—ನನ್ನ ಅದೃಷ್ಟಕ್ಕೆ ನಾನೂ ಗಂಡಿನಕಡೆಯವನಾದೆ—ನಮಗೆ ಬಂದ ಅಡಕೆಯಲ್ಲಿ ಅಡಕೆಯೇ ಇಲ್ಲ— ತೆಂಗಿನಚಿಪ್ಪಿನ ಚೂರನ್ನು ಬಹು ನಯವಾಗಿ ಕತ್ತರಿಸಿ ಹಾಕಿದ್ದರು. ನನಗೆ ಇರುವ ಎರಡು ಹಲ್ಲಿಗೆ ಬಹು ಒಳ್ಳೆಯ ಕೆಲಸವಾಯಿತು. ಅಗಿದು ಅಗಿದು ಬೇಜಾರಾಗುವ ವೇಳೆಗೆ "ಯಾಕೆ, ಅಗಿಯುವುದಕ್ಕೆ ಆಗಲಿಲ್ಲವೋ, ಹೌದು, ತೆಂಗಿನ ಚಿಪ್ಪು ಸ್ವಲ್ಪ ಗಟ್ಟಿಯೇ ನಿಜ; ಇಗೊ ಇದನ್ನ ಹಾಕಿಕೊಳ್ಳಿ," ಎಂದು ಅಡಕೆಯನ್ನು ಕೊಟ್ಟರು. ನಾನು ತಕ್ಷಣವೇ ಒಳಗೆ ಹೋಗಿ, ಇಕೊ ಈ ಆಟದಲ್ಲಿ ನಾನು ಗಂಡಿನ ಕಡೆಯವನಲ್ಲ, ಎಂದು ಹೇಳಿಬಿಟ್ಟೆ. ಗಂಡಿನ ಕಡೆಯವರು ಇನ್ನು ಏನೇನನ್ನು ಅನುಭವಿಸಬೇಕಾಗುತ್ತದೋ ಎಂದು ಹೆದರಿದೆ. ಹಾಗೆ ಹೇಳಿದ್ದು ಒಳ್ಳೆಯ ಕೆಲಸವೇ ಆಯಿತು. ನಾನೂ ರಂಗಪ್ಪ ಆಮೇಲೆ ಇಬ್ಬರೇ ಒಂದು ಕೊಟಡಿಯಲ್ಲಿ ಕುಳಿತಿದ್ದೆವು. ರಂಗಪ್ಪ ಏನೇನನ್ನೋ ನೆನೆಸಿಕೊಳ್ಳುತ್ತಾ ಕುಳಿತಿದ್ದನೆಂದು ತೋರುತ್ತದೆ. ಬಹಳ ಯೋಚನೆ, ಬಹುಧ್ಯಾನ. ಹಾಗೆಯೇ ಆಯಾಸದಿಂದ ಸ್ವಲ್ಪ ನಿದ್ದೆ ಬಂದಹಾಗಿರಲು ಆಕಳಿಸುತ್ತಾ ಇದ್ದ. ಹೊರಗಡೆ ರತ್ನಮ್ಮನೂ ಅವಳ ಚಿಕ್ಕಮ್ಮನ ಮಗಳೂ ಏನೋ ಗುಸಗುಸ ಮಾತನಾಡಿಕೊಳ್ಳುತ್ತಾ ಇದ್ದರು. ರತ್ನಮ್ಮನ ಕೈಯಲ್ಲಿ ದೊಡ್ಡ ಕಡುಬು. ರಂಗಪ್ಪನಿಗೆ ಇದು ಗೊತ್ತಾಗಲಿಲ್ಲ. ಹೇಳೋಣವೆಂದರೆ, ನಾನು ಗಂಡಿನ ಕಡೆಯಲ್ಲ, ಎಂದು

ಹೇಳಿದ್ದೆ, ಆದ್ದರಿಂದ ಸುಮ್ಮನಾದೆ. ಅಲ್ಲದೆ, ನಾನು ನನ್ನ ಹೆಂಡತಿಯ ಕೈಯಲ್ಲಿ ಏಟು ತಿಂದಿರಲಿಲ್ಲವೆ? ಆ ಸುಖ ರಂಗಪ್ಪನಿಗೆ ಏಕೆ ಇಲ್ಲದೆ ಹೋಗಬೇಕು? ಸ್ವಲ್ಪಹೊತ್ತು ಜೈತ್ರಯಾತ್ರೆಗೆ ಸಿದ್ಧವಾಗುವುದರಲ್ಲಿ ಕಳೆಯಲು, ಆಮೇಲೆ ರತ್ನಮ್ಮ ಕೊಟಡಿಯೊಳಕ್ಕೆ ಧಡಧಡನೆ ಬಂದು ರಂಗಪ್ಪನ ಹಿಂದುಗಡೆಯಿಂದ ಚೆನ್ನಾಗಿ ಗುರಿ ಇಟ್ಟು ನಡುತಲೆಯ ಮೇಲೆ ಕಡುಬನ್ನು ಧತ್ ಎಂತ ಹೊಡೆದಳು. ಹೊಡೆದ ಏಟಿಗೆ ನಾನು ನಡುಗಿದೆ. ರಂಗಪ್ಪ "ಓ!" ಎಂದು ಬೆಚ್ಚಿಬಿದ್ದ. ಹಿಂದಿರುಗಿ ನೋಡು ವುದರೊಳಗಾಗಿ ಶತ್ರುಸೇನೆ ಪಲಾಯನವಾಗಿತ್ತು. ಇದು ಹೊಸ ರೀತಿಯ ಯುದ್ಧ, ನೋಡಿ: ಈ ಯುದ್ಧದಲ್ಲಿ ಪಲಾಯನ ಮಾಡಿ ದವರು ಜಯಶಾಲಿಗಳು.

* * * *

ಇದರಮೇಲೆ ದೀಪಾವಳಿ. ಅದಾದಮೇಲೆ ಕಾಗದಗಳು. ನಮ್ಮ ಕಾಲದಲ್ಲಿ ಕಾಗದಗಳು ಇರಲಿಲ್ಲ. ಗಂಡನು ಹೆಂಡತಿಗೆ ಕಾಗದ ಬರೆ ಯುತ್ತಿರಲಿಲ್ಲ. ಹೆಂಡತಿ ಗಂಡನಿಗೆ ಕಾಗದ ಬರೆಯುತ್ತಿರಲಿಲ್ಲ. ಒಂದು ಮನೆಯಲ್ಲಿದ್ದರೂ ಕೂಡ ಎಲ್ಲಿಯಾದರೂ ಎದುರಿಗೆ ಬಂದರೆ, ದೊಡ್ಡವ ರಿಗೆ ಹೆದರಿ ಕಣ್ಣುಮುಚ್ಚಿಕೊಂಡಿರಬೇಕಾಗಿತ್ತು, ಇಲ್ಲದಿದ್ದರೆ ಮೂಗು ಜೀವಿಗಳಂತೆ ದೂರದೂರದಿಂದ ಒಬ್ಬರನ್ನೊಬ್ಬರು ನೋಡಬಹು ದಾಗಿತ್ತು. ಇಷ್ಟರಮಟ್ಟಿಗಿರುವಾಗ ನಾಗರೀಕತೆ, ಕಾಗದ ಬರೆಯು ವುದು ಹೇಗೆ? ಈಗ ಅದೆಲ್ಲಾ ಬಂದಿದೆ. ಪೋಸ್ಟಾಫೀಸು ಒಂದಿದೆಯಲ್ಲ, ನಮ್ಮವರ ಕಾಸನ್ನು ಕಿತ್ತುಕೊಳ್ಳುವುದಕ್ಕೆ. ಕಾಗದ ಬರೆದದ್ದೂ ಬರೆದದ್ದೆ: ಉಪ್ಪಿಲ್ಲ, ಕಾರವಿಲ್ಲ, ಬೇಸರವಾಗುವಹಾಗೆ ಕಾಗದ ಬರೆ ವುದು. ಪೋಸ್ಟಾಫೀಸಿಗೆ ಲಾಭ.

ರಂಗಪ್ಪ ಒಂದು ಕಾಗದ ಬರೆದ.

ಸ್ವಲ್ಪ ತಾಳಿ. ಇಲ್ಲಿಯವರಿಗೆ ನಾನೇ ಬರೆದದ್ದು. ಇನ್ನುಮೇಲೆ ನಾನು ಹೇಳುವುದೆಲ್ಲ ನಾನೂ ರಂಗಪ್ಪನೂ ಇಬ್ಬರೂ ಸೇರಿ ಬರೆದಿರು ವುದು. ಇವರಿವರ ಕಾಗದಗಳಲ್ಲಿ ಏನಿತ್ತೆನ್ನುವುದನ್ನು ನನಗೆ ತಿಳಿಸು ವುದಕ್ಕೆ ಯಾವ ಅಮ್ಮಯ್ಯನೂ ಇಲ್ಲ. ರಂಗಪ್ಪನನ್ನು ಕೇಳಿದೆ; ಅವನು

ಸಹಾಯಮಾಡುತ್ತೇನೆ ಎಂತ ಹೇಳಿದ. ಕಾಗದಗಳಲ್ಲಿ ಏನಿತ್ತು ಎನ್ನುವುದನ್ನ ರಂಗಪ್ಪ ಬರೆದಿದಾನೆ, ಮಿಕ್ಕದ್ದೆಲ್ಲಾ ನಾನು ಬರೆದಿದೇನೆ, ಎಂತ ಹೇಳಬಹುದು. ಆದರೆ ಇದರಲ್ಲಿ ಇಷ್ಟೇ ನನ್ನದು, ಅಷ್ಟೇ ಅವನದು, ಎಂದು ನಿರ್ಧರಿಸುವುದಕ್ಕೆ ಕಷ್ಟವಾದ್ದರಿಂದ ಒಟ್ಟಿಗೆ ಒಂದು ಮಾತಿನಲ್ಲಿ ನಿಮಗೆ ಸೂಚನೆ ಕೊಡುತ್ತೇನೆ. ಯಾವುದನ್ನು ಓದಿದರೆ 'ಭಲೆ' ಎನ್ನುವಹಾಗೆ ಇದೆಯೋ ಅದನ್ನು ನಾನು ಬರೆದದ್ದು ಎಂದು ಕೊಳ್ಳಿ; ತಪ್ಪಾದದ್ದೆಲ್ಲಾ, ತಿಳಿದೇ ಇದೆ, ರಂಗಪ್ಪನದು.

ರಂಗಪ್ಪ ಒಂದು ಕಾಗದ ಬರೆದ. ಕಾಗದ ಹೋಗಿದೆ. ಜವಾಬಿಗೆ ಕಾದು ಕಾದು ಕೊನೆಗೆ ಅದು ಬಂತು. ನಿಮಗೆ ಐನೂರು ರೂಪಾಯಿನ ಕೆಲಸವಾಯಿತೆಂದೋ ಆಗಲಿಲ್ಲವೆಂದೊ ತಿಳಿಸುವ ಕಾಗದ ಬಂದಾಗ ಅಷ್ಟು ಕಳವಳವಿರಲಾರದು. ಕಾಗದದಲ್ಲಿ ಇನ್ನೇನುತಾನೇ ಇದೆಯೋ! ದೀಪಾವಳಿಯಲ್ಲಿ ಹತ್ತಿರ ಹೋಗಿ ಮಾತನಾಡಿಸುವುದರಲ್ಲಿ ಸಾವಕಾಶ ಮಾಡಿದ್ದಕ್ಕೆ ಕೋಪಿಸಿಕೊಂಡ ಹುಡುಗಿ, ಈಗ ಏನೇನು ಪ್ರೀತಿಯ ಮಾತನ್ನು ಬರೆದಿರುವಳೋ? ಪ್ರಾಣನಾಥ ಎಂದು ಬರೆದಿರಬಹುದು; ಪ್ರಾಣೇಶ್ವರ ಎಂದು ಬರೆದಿರಬಹುದು; ಪ್ರಾಣನಾಯಕ ಎಂದು ಬರೆದಿರ ಬಹುದು. ಇಲ್ಲ, ನಾವಲ್‌ಗಳನ್ನು ಓದಿ ಪ್ರಾಣಾಧಿಕ ಎಂತಲೇ ಬರೆದಿರ ಬಹುದು. ಅಥವಾ ಸ್ವಲ್ಪ ಹುಚ್ಚಿಯಾದರೆ, ನನ್ನ ಹೃದಯದ ಏಕನಾದ ಎಂತಲೋ, ತಂಬೂರಿಯೆಂತಲೋ, ಬರೆದಿರಬಹುದು. ಪ್ರಾಣವೂ ಅಧಿಕವೂ ಅಷ್ಟರಲ್ಲೇ ಇದೆ. ಗಂಡನನ್ನು ಪ್ರಾಣಾಧಿಕ ಎನ್ನುವುದನ್ನು ಕೇಳಿದೀಯಾ, ಎಂತ ನಮ್ಮವರನ್ನು ಒಂದು ದಿನ ಕೇಳಿದೆ. ನನ್ನಂತಹ ಪ್ರಾಣವಾಗಿ ನಿಮ್ಮಂತಹ ಗಂಡನಾದರೆ ಹೇಳಬಹುದು, ಎಂದು ಅವರು ಉತ್ತರಕೊಟ್ಟರು. ನಾನು ಅಷ್ಟು ಒಳ್ಳೆಯವನೆ? ನಿಜವಾಗಿ ಹೇಳು ತ್ತೀಯಾ, ಎಂದು ನಾನು ಕೇಳಿದೆ. ನಾನು ಒಳ್ಳೆಯವನೆಂದೇ ನನ್ನ ಅಭಿಪ್ರಾಯ; ಅವರೂ ಹೇಳಲಿ ಇನ್ನೊಂದುಸಲ, ಎಂದು ನಾನು ಕೇಳಿದೆ. ಅವರು, "ನನ್ನ ಪ್ರಾಣಕ್ಕೆ ಒಂದು ಕುರುಡುಕಾಸಿನ ಬೆಲೆ ಯಿಲ್ಲ. ನಿಮ್ಮನ್ನು ಯಾಕೆ ಹಾಗೆ ಹೇಳಬಾರದು," ಎಂದು ಹೇಳಿ ನಕ್ಕರು. ಇಕೋ ಅದೇ "ಪ್ರಾಣಾಧಿಕ". ನಿಮ್ಮ ಹೆಂಡತಿ ನಿಮಗೆ

ಯಾವಾಗಲಾದರೂ ತಿಂಡಿಯನ್ನು ತಂದುಕೊಟ್ಟಾಗ, ನೀನು ತೆಗೆದು ಕೊಂಡೆಯಾ, ಎಂದು ನೀವು ಕೇಳಿದರೆ, ನೀವು ತೆಗೆದುಕೊಂಡರೆ ನಾನು ತೆಗೆದುಕೊಂಡ ಹಾಗೆಯೇ, ಎಂದು ಆಕೆ ಹೇಳುವರು. ಹುಡುಗಿ; ಆಕೆಗೆ ತಿಳಿಯದು. ಅವರ ಮಾತನ್ನು ಕೇಳಿ ನೀವೇ ತಿಂಡಿಯೆಲ್ಲವನ್ನೂ ಪಟ್ಟಾಗಿ ತಿನ್ನಬೇಡಿ. ಇದೆಲ್ಲಿಯ ಪ್ರಾಣಾಧಿಕ, ಇವನು ತಿಂಡಿಯನ್ನೆಲ್ಲಾ ತಾನೇ ತಿಂದಿದಾನೆ, ಎಂದುಕೊಳ್ಳುವರು. ನೀವು ಏನು ಮಾಡಬೇಕೆಂದರೆ, ನೀನು ತಿಂದರೆ ನಾನು ತಿಂದಹಾಗೆಯೇ, ಎಂದು ಅವರು ಹೇಳಿದ ಹಾಗೆಯೇ ಮರ್ಯಾದೆಗೆ ಹೇಳಿ, ಅರ್ಧ ಅವರಿಗೆ ಕೊಟ್ಟು ಅರ್ಧ ನೀವು ತೆಗೆದುಕೊಳ್ಳಿ; ಇಲ್ಲದೆ ಇದ್ದರೆ, ಆಮೇಲೆ ತಿಂಡಿ ಬರುವಾಗಲೇ ಅರ್ಧಕ್ಕೆ ಇಳಿದುಬರುವುದು.

ಪ್ರಾಣಾಧಿಕ ಅನ್ನುವ ಮಾತಿಗೆ ಬಂತು. ಕಾಗದದಲ್ಲಿ ಏನೇನು ಬರೆದಿದೆಯೋ ಎಂದು ನೋಡಿದರೆ ಅದರಲ್ಲಿ:

"ತೀ॥ ರಂಗರಾಯರಿಗೆ. ನೀವು ಬರೆದ ಕಾಗದ ಬಂತು. ನಾವೆಲ್ಲರು ಸೌಖ್ಯ. ಇನ್ನೇನು ವಿಶೇಷವಿಲ್ಲ. ರತ್ನಮ್ಮ" ಎಂದಿತ್ತು.

ರಂಗಪ್ಪನಿಗೆ ಇದನ್ನು ಓದಿ ಬಹಳ ಆಶ್ಚರ್ಯವಾಯಿತು. "ತೀ॥ ರಂಗರಾಯರು." ಬಹಳ ಸೊಗಸಾಯಿತು. ದೊಡ್ಡವರನ್ನು ತೀ॥ ಎನ್ನಬೇಕೆಂದು ಹೇಳಿಕೊಟ್ಟಿದ್ದದ್ದರಿಂದ ತೀ॥ ಎಂದು ಬರೆದಳೇನೊ? ಅಂತೂ ಇದು ಸರಿಯಲ್ಲವೆಂದು ಹೇಳಿಕೊಡಬೇಕಾಯಿತಲ್ಲಾ? ಏನೆಂದು ಬರೆಯುವುದೆಂದು ಹೇಳಿಕೊಡುವುದು? ಹೀಗೆ ಅತ್ತು ಅತ್ತು ಔತನಕ್ಕೆ ಕರೆಸಿಕೊಳ್ಳುವುದೇ? ಹ್ಯಾಗೋ, ನೋಡೋಣ, ಎಂದು ರಂಗಪ್ಪ ಈ ಕಾಗದ ಬರೆದನು.

"ಪ್ರಿಯೆ,

ನಿನ್ನ ಕಾಗದ ಬಂತು. ನನಗೆ ಅದರ ಮೊದಲನ್ನು ನೋಡಿ ಬಹಳ ಆಶ್ಚರ್ಯವಾಯಿತು. ಹೀಗೆ ಬರೆಯುವುದುಂಟೆ? ನಾನು ಮೇಲೆ ಬರೆದಿರುವುದನ್ನು ನೋಡು. ಅದರಂತೆ ಬರೆಯಬೇಕು. ನಾನು ಕ್ಷೇಮ. ನಿನ್ನ ಕ್ಷೇಮಕ್ಕೆ ಬರೆಯುವುದು.

ಇತಿ—"

ಅದಕ್ಕೆ ಉತ್ತರ—

"ಪ್ರಿಯನೆ,

ನಿಮ್ಮ ಕಾಗದ ಬಂತು. ನಾನು ಸೌಖ್ಯ.

ರತ್ನಮ್ಮ."

ರಂಗಪ್ಪ ಬದಲಿಗೆ ಬರೆದ; ಏನೆಂದರೆ:

"ಪ್ರಿಯೆ,

ನಿಮ್ಮ ಚಿಕ್ಕಮ್ಮನವರು ನಿಮ್ಮ ಚಿಕ್ಕಪ್ಪನವರನ್ನು ಕರೆಯುಬೇಕಾದರೆ ಪ್ರಿಯನೆ ಎಂದು ಹೇಳುತ್ತಾರೆಯೇ? ನೀನು ನನಗೆ ಹಾಗೆ ಬರೆದಿದೀಯಲ್ಲ. ನಮ್ಮಲ್ಲಿ ವಾಡಿಕೆ, ಗಂಡನನ್ನು ಪ್ರಿಯರೆ, ಇತ್ಯಾದಿ ಬರೆಯುಬೇಕು. ನಿನಗೆ ಇದು ತಿಳಿಯದೇ ಇಲ್ಲ. ಇಲ್ಲಿ ನಾನು ಸೌಖ್ಯ. ನಿನ್ನ ಕ್ಷೇಮಸಮಾಚಾರಕ್ಕೆ ಕಾಗದ ಬರೆಯ್ಯುವುದು.

ಇತಿ—"

ಅದಕ್ಕೆ ಬದಲು:

"ನಮ್ಮ ಚಿಕ್ಕಮ್ಮನವರು ಚಿಕ್ಕಪ್ಪನವರನ್ನು 'ಏನೆಂದರೆ' ಎಂತ ಹೇಳುತ್ತಾರೆ. ನನಗೆ ಕಾಗದ ಬರೆಯುವುದಕ್ಕೆ ಬರುವುದಿಲ್ಲ. ಇನ್ನು ಮೇಲೆ ನಾನು ಬರೆಯುವುದಿಲ್ಲ.

ರತ್ನಮ್ಮ."

ಈ ಕಾಗದ ಯಾರಿಗೆ ಬರೆದದ್ದು ಎನ್ನುವುದಕ್ಕೆ ಮೇಲೆ ಗುರುತೇ ಇಲ್ಲ.

ರತ್ನಮ್ಮನಿಗೆ ಕೋಪಬಂದಿರಬೇಕು. ತಾನು, ಮಹಾದೇವಿ, ಕಾಗದ ಬರೆದದ್ದೇ ಸಾಕು, ಎಂದು ರಂಗಪ್ಪ ಅದನ್ನು ಕಣ್ಣಿಗೆ ಒತ್ತಿಕೊಂಡು ತೃಪ್ತನಾಗಿರುವುದಕ್ಕೆ ಬದಲಾಗಿ, ಅದರಲ್ಲಿ ತಪ್ಪು ಹುಡುಕುವುದಕ್ಕೆ ಹೋದನಲ್ಲಾ ಎಂದು ಅವಳಿಗೆ ಬಹಳ ಅಸಮಾಧಾನವಾಗಿರಬೇಕು. ಬರವಣಿಗೆಯೋ ಹೆಂಗಸರ ಮನಸ್ಸಿನಂತೆ ಡೊಂಕು ಡೊಂಕು. ಅಕ್ಷರಗಳಿಗೆ ಹೊಟ್ಟೆಯೇನೋ ದಪ್ಪ, ಆದರೆ ಶಕ್ತಿ ಸಾಲದು: ಸಾಹುಕಾರರ ಹಾಗೆ. ರಂಗಪ್ಪನಿಗೂ ಕೋಪಬಂತು. ಆದರೆ ತಿಳಿಯದ ಹುಡುಗಿ ಅಲ್ಲವೆ; ಅದಕ್ಕೋಸ್ಕರ ಸಮಾಧಾನವಾಗಿ ಒಂದು ಕಾಗದವನ್ನು ಬರೆದು ಕಳುಹಿಸಿದ.

"ನೀನು ಕೋಪಿಸಿಕೊಂಡಿದೀಯೆ ಎಂದು ತೋರುತ್ತದೆ. ಕೋಪಕ್ಕೇನೂ ಕಾರಣವಿಲ್ಲ. ನಿನಗೆ ತಿಳಿಯದ ವಿಷಯವನ್ನು ತಿಳಿಸುವುದಕ್ಕೆಂದು ಹಾಗೆ ಬರೆದೆನೇ ಹೊರತು ಬೇರೆ ಅಲ್ಲ. ನೀನು ಸರಿಯಾಗಿ ಜವಾಬು ಕೊಡುವುದು. ಕೊಡುತ್ತೀಯೆ ಎಂದು ನಂಬಿದೇನೆ.

ಇತಿ—"

ಇದಕ್ಕೆ ಜವಾಬು ಇಲ್ಲ.

ಆಮೇಲೆ ಮೂರು ಕಾಗದ ಬರೆದ.

ಜವಾಬು ಇಲ್ಲ.

ಆಮೇಲೆ ಏನೋ ಸಮಾಧಾನ ಹೇಳಿ ಪುನಃ ಕಾಗದ ಬರೆಯುವ ಹಾಗಾಯಿತು. ಕಾಗದವಾದರೋ ಬಹು ಚಿಕ್ಕದು. ಕಾದು ಕಾದು ಕಾಗದವನ್ನು ತೆರೆದು ನೋಡಿದರೆ ಅದರಲ್ಲಿ ಎರಡೇ ಮಾತು. "ನಾನು ಕ್ಷೇಮ, ನಿನ್ನ ಕ್ಷೇಮಕ್ಕೆ ಬರೆಯಬೇಕು." ಇದು ಮೊದಲು ಮೊದಲಲ್ಲಿ ಸಾಕಾದಷ್ಟು ವಿಷಯವಾದರೂ ಪುನಃ ಪುನಃ ಸುಖವಾಗಿದೇವೆ ಎನ್ನುವ ಮಾತಿನಲ್ಲಿ ಸುಖವಿಲ್ಲ. ಅದರಿಂದ ರಂಗಪ್ಪ ಒಂದು ಸಲ, ಇನ್ನೇನಾದರೂ ಬರೆ, ಕಾಗದ ಸ್ವಲ್ಪ ದೊಡ್ಡದಾಗಿ ಬರೆ, ಎಂದನು. ರತ್ನಮ್ಮನ ಕಾಗದ ಬಂತು. ಮೊದಲಿಗಿಂತಲೂ ದೊಡ್ಡ ಅಕ್ಷರ: ಚೆನ್ನಾಗಿ ಬಲಿತ ಕುಂಬಳಕಾಯಷ್ಟು ಗಾತ್ರ. ವಿಷಯವೇನೋ ಮೊದಲಿನ ವಿಷಯವೇ. ಅವಕ್ಕೆ ಸ್ವಲ್ಪ ಸೇರಿಸಿರುವುದು ಹೀಗೆ: ನಾವೆಲ್ಲರೂ ಕ್ಷೇಮ ಎನ್ನುವುದಕ್ಕೆ ಬದಲಾಗಿ "ಇಲ್ಲಿ ನಾನು ಕ್ಷೇಮ. ನಮ್ಮ ಚಿಕ್ಕಮ್ಮನವರು ಕ್ಷೇಮ. ನಮ್ಮ ಚಿಕ್ಕಪ್ಪನವರು ಕ್ಷೇಮ. ಅವರ ಕೂಸೂ ಕ್ಷೇಮವಾಗಿದೆ." ಎಲ್ಲರೂ ಒಟ್ಟಾಗಿ ಕ್ಷೇಮವಾಗಿರುವುದನ್ನು ಬಿಟ್ಟು ಒಬ್ಬೊಬ್ಬರೇ ಕ್ಷೇಮವಾಗಿರಲು ಪ್ರಾರಂಭಮಾಡಿದರು. "ಇದೇನು ಹೀಗೆ ಬರೆಯುವುದು; ನಾವೆಲ್ಲರೂ ಕ್ಷೇಮ ಎಂದರೆ ಏನು ವಿಷಯವೊ ಒಬ್ಬೊಬ್ಬರ ಮಾತು ಬರೆದರೂ ಅದೇ ವಿಷಯ; ಇನ್ನು ಬೇರೆ ಏನನ್ನಾದರೂ ಬರೆಯಬಾರದೆ" ಎಂದು ರಂಗಪ್ಪ ಬದಲಿಗೆ ಬರೆದನು.

ಅದಕ್ಕೆ ಉತ್ತರದ ಕಾಗದ:

"ಪ್ರಿಯರೆ,

ಗೂಳಿ ಗುಟರು ಹಾಕುತ್ತದೆ. ನಾಯಿ ಬಗುಳುತ್ತದೆ. ಬೆಕ್ಕು ಮಿಯಾವ್ ಎನ್ನುತ್ತದೆ. ಕಾಗೆ ಕರ‍್ರೆನ್ನುತ್ತದೆ. ಕತ್ತೆ ಕಿರುಚುತ್ತದೆ. ನವಿಲು ಕೇಕೆ ಹಾಕುತ್ತದೆ.

ಮಿರುಮಿರುಗುವೆ ಹಾ ಕಿರು ತಾರಗೆಯೇ
ಅರಿಯೆನು ನಾನೆಲೆ ನೀನಾರೋ
ಧರೆಗಿಳಿಯದೆ ನೀನಿರುತಿಹೆ ದೂರದಿ
ನೆರೆತೊಳಗುವ ವಜ್ರದ ತೆರದಿ

ಕುರಿ 'ಬ್ಯಾ' ಎನ್ನುತ್ತದೆ.

ಇನ್ನೇನೂ ವಿಶೇಷವಿಲ್ಲ.

ರತ್ನಮ್ಮ."

ಇನ್ನೇನನ್ನಾದರೂ ಬರೆದ ಹಾಗಾಯಿತಲ್ಲ. ಈ ಹೊಸ ನಮೂನೆ ಕಾಗದದಲ್ಲಿ ಜನರ ಕ್ಷೇಮಸಮಾಚಾರದ ಮಾತೇ ಇಲ್ಲ. ಪ್ರಾಣಿವರ್ಗದ ಸ್ವಭಾವಗಳನ್ನೂ ನಡೆವಳಿಕೆಗಳನ್ನೂ ಕುರಿತು ಒಂದು ಉಪನ್ಯಾಸ: ಆಮೇಲೆ ನಕ್ಷತ್ರಕ್ಕೆ ಹೇಳಿರುವ ಪದ್ಯ ಒಂದು. ಸುಲಭವಾಗಿಯೇ ಒಂದು ಕಾಗದವಾಯಿತು ನೋಡಿ. ಚಿಕ್ಕ ಚಿಕ್ಕ ಹುಡುಗಿಯರಿಗೂ ಬುದ್ಧಿಯಲ್ಲಿ ಕಡಿಮೆಯಾದ ಹುಡುಗರಿಗೂ ಇದೊಂದು ಬುದ್ಧಿಯ ಮಾತು ಹೇಳುತ್ತೇನೆ ಕೇಳಿ. ನಿಮ್ಮ ಗಂಡನಿಗೋ ಹೆಂಡತಿಗೋ ಕಾಗದ ಬರೆಯುವುದಕ್ಕೆ ಕುಳಿತಾಗ ಏನು ಬರೆಯಬೇಕೆಂದು ತೋಚದೆ ಇದ್ದರೆ ಯಾವುದಾದರೂ ಒಂದು ಪುಸ್ತಕವನ್ನು ತೆಗೆದುಕೊಂಡು "ಹಸು ಬಹಳ ಸಾಧುವಾದ ಪ್ರಾಣಿ" ಇತ್ಯಾದಿ, ಅಥವಾ "ದೀನ ನಾನು ಸಮಸ್ತ ಲೋಕಕೆ...." ಎಂದು ಅದರಲ್ಲಿರುವ ಪಾಠಗಳಲ್ಲಿ ಯಾವುದರಲ್ಲಾದರೂ ಒಂದು ಭಾಗವನ್ನು ಬರೆದರೆ ಸಾಕು. ಕಾಗದ ಬರೆದ ಹಾಗಾಯಿತು. ಎಲ್ಲವನ್ನೂ ಪುಸ್ತಕದಿಂದಲೇ ಬರೆದರೆ ನಾವು ಏನು ಬರೆದಹಾಗಾಯಿತು. ಎನ್ನುವುದಾದರೆ "ಕುರಿ ಬ್ಯಾ ಎನ್ನುತ್ತದೆ" ಎನ್ನುವಂತಹ ಒಂದು ನಿಮ್ಮ ಸ್ವಂತದ ಮಾತನ್ನು ಸೇರಿಸಿಬಿಡಿ. ಈ ಕಾಲದ

ಪುಸ್ತಕಗಳ ಹಾಗಾಯಿತು. ಅಂತು ಕಾಗದ ಒಂದನ್ನು ಸುಲಭವಾಗಿ ಬರೆದಹಾಗಾಯಿತು. ಜ್ಞಾಪಕವಿರಲಿ.

ಇದೆಲ್ಲಾ ಕೋರ್ಟ್‌ಷೀಪ್. ಇನ್ನೂ ಕೋರ್ಟ್‌ಷೀಪ್ ಇದೆ. ಆದರೆ ಇನ್ನು ಹೆಚ್ಚಾಗಿ ಹೇಳಿದರೆ ಬೇಸರವಾದೀತು. ಇದು ಕೋರ್ಟ್‌ಷೀಪ್ ಅಲ್ಲವೆಂದು ನಿಮ್ಮ ಅಭಿಪ್ರಾಯವೇನು? ನಮ್ಮಾಕೆ ನನಗೆ ಇದರಂತಹ ಹುಚ್ಚು ಬೆಪ್ಪುತನವನ್ನು ನಲವತ್ತು ವರುಷದ ಹಿಂದೆ ಮಾಡಿದರು. ನನಗೆ ಆಗ ಬಹಳ ಆನಂದವುಂಟಾಯಿತು. ಈಗಲೂ ಅದನ್ನೆಲ್ಲಾ ನೆನೆದುಕೊಂಡರೆ ಬಹಳ ಸುಖ ಉಂಟಾಗುತ್ತದೆ. ಬೆಳಗಾಗುವಾಗ ಬೀಸುವ ಗಾಳಿ, ದೂರದಲ್ಲಿ ಹೊರಟು, ನಮ್ಮೂರ ಬಾವಿಯ ಕೆಳಗಣ ತೋಟದಲ್ಲಿ ಮಲ್ಲಿಗೆಯ ಪೊದೆಯಲ್ಲಿ ತೂರಿ, ಅಲ್ಲಿಂದ ಬಂದು ಕೊಳದ ತಾವರೆಯನ್ನು ಸೋಕಿ, ಆಮೇಲೆ ನನ್ನ ಕಣ್ಣು ಮೂಗು ಕಿವಿ ಎಲ್ಲವನ್ನೂ ಮುತ್ತಿದಾಗ ಆಗುವ ಸುಖ, ನನ್ನ ಚಿಕ್ಕಂದಿನ ಪ್ರೇಮದ ಬಹುಕಾಲದ ಹಿಂದಿನ ಜ್ಞಾಪಕದಿಂದ ನನಗೆ ಉಂಟಾಗುತ್ತದೆ. ಅಂತಹ ಜ್ಞಾಪಕವನ್ನು ದೇವರು ಎಲ್ಲರ ಪಾಲಿಗೂ ಕೊಡಲಿ!

ಇದನ್ನೆಲ್ಲಾ ಬರೆಯುತ್ತಾ ನಾನು ನಮ್ಮಾಕೆಯನ್ನು ಕುರಿತು, ನಾನು ನಿನಗೆ "ಮೆಕ್ಲಾ" ಮಾಡುವುದಿಲ್ಲವೆ, ಎಂದು ಕೇಳಿದೆ. ಹಾಗೆಂದರೇನು ಎಂದು ಅವರು ಕೇಳಿದರು. ಅನುಸರಿಸುವುದು, ಪ್ರೀತಿಯಿಂದ ಕಾಣುವುದು, ಎಂದು ನಾನು ಹೇಳಿದೆ. "ಅನುಸರಿಸದೆ, ಪ್ರೀತಿಯಿಂದ ಕಾಣದೆ, ಇದ್ದರೆ ಆಗುತ್ತದೆಯೆ? ಈಗ ನೋಡಿ, ಊಟದ ಹೊತ್ತು; ಬೆಳಿಗ್ಗೆಯಿಂದ ಎಲ್ಲಿಯೋ ಹೋಗಿ ಅಲೆದು ಬಂದಿದೀರಿ. ಈಗ ನನ್ನನ್ನು ಅನುಸರಿಸುತ್ತಿದೀರಿ." ಈ ಮಾತು ಕಠಿನವೆನ್ನಬೇಡಿ. ಭಗವಂತನು ಸ್ತ್ರೀಯರ ಹೃದಯದ ಮಾರ್ದವವನ್ನು ಮರೆಸುವುದಕ್ಕೆ ಕಠಿನವಾದ ಮಾತನ್ನು, ಮಾತಿನ ಕಾಠಿನ್ಯವನ್ನು ಮರೆಸುವುದಕ್ಕೆ ಇಂಪಾದ ಧ್ವನಿಯನ್ನು, ಅವರಿಗೆ ಕೊಟ್ಟಿದ್ದಾನೆ. ಅವರು ಹೀಗೆ ಏನಾದರೂ ಹೇಳಿದರೆ ಸುಖವೇ ಹೊರತು ಬೇರೆ ಅಲ್ಲ. ಅದರಲ್ಲೂ ಊಟಕ್ಕೆ ಮೊದಲು ಅವರು ಸ್ವಲ್ಪ ಬಯ್ದರೂ ತೊಂದರೆಯಿಲ್ಲ. ಏಕೆಂದರೆ, ಎಲೆ ಮುಂದೆ ಕೂತಾಗ ಸ್ವಲ್ಪ ತುಪ್ಪ ಹೆಚ್ಚಾಗಿ ಹಾಕುತ್ತಾರೆ; ಇದು

ಬೇಕೆ, ಅದು ಬೇಕೆ, ಎಂತ ಕೇಳುತ್ತಾರೆ. "ಮೆಕ್ಲಾ ಇಲ್ಲದೆ ಉಂಟೇನು? ಮದುವೆ ಎಂದರೆ, ಒಂದು ಹಗ್ಗದ ಎರಡು ಕಡೆಯೂ ಜೇರಕುಣಿಕೆ ಹಾಕಿ, ಇಬ್ಬರನ್ನು ಹಿಡಿದು, ಒಬ್ಬೊಬ್ಬರ ಕುತ್ತಿಗೆಗೆ ಒಂದೊಂದು ಜೇರ ಕುಣಿಕೆ ತಗಲಿಸುವುದು. ಒಬ್ಬರನ್ನೊಬ್ಬರು ಅನುಸರಿಸಬೇಕು. ಇಲ್ಲದೆ ಇದ್ದರೆ ಇಬ್ಬರ ಕುತ್ತಿಗೆಗೂ ಬೀರುತ್ತೆ" ಎಂದರು. ನಿಜವಾದ ಮಾತು ನೋಡಿ; ಹತ್ತು ಮಕ್ಕಳ ತಾಯಿ; ಅವರಿಗೆ ತಿಳಿಯದ್ದು ಉಂಟೆ?

ಕಾಗದಗಳ ಸಮಾಚಾರ ನಿಮಗೆ ಮೊದಲೇ ಎಚ್ಚರಿಕೆ ಹೇಳಿದೇನೆ. ಅದೇನೋ ಆ ತೀರ್ಥರೂಪರು, ಗುಟುರು ಹಾಕಿದರು, ಎನ್ನುವ ಮಾತುಗಳು ನಿಜ ಎನ್ನುವಹಾಗಿಲ್ಲ. ಹ್ಯಾಗೋ, ನನಗೇನು? ರಂಗಪ್ಪನಿಗಂತೂ ಶಾಸ್ತಿ ಆಗುತ್ತದೆ. ಆಗಲಿ; ರತ್ನಮ್ಮನ ಕೆಲಸ ರಂಗಪ್ಪನಿಗೆ ಬುದ್ಧಿ ಹೇಳುವುದು.

# ವೆಂಕಟರಾಯನ "ಪಿಶಾಚ"

ವೆಂಕಟರಾಯ ಬೆಂಗಳೂರಲ್ಲಿ ಪಾದುಗೆ ಕೃಷ್ಣರಾಯರ ಮನೆಯಲ್ಲಿ ಓದುವುದಕ್ಕೆ ನಿಂತಿದ್ದ. ಕೃಷ್ಣರಾಯರು ಅವನ ತಾಯಿಗೆ ಏನೋ ಸ್ವಲ್ಪ ದೂರದ ಸಂಬಂಧ. ಅವನು ಅವರ ಮನೆಯಲ್ಲೇ ಇದ್ದುಕೊಂಡು ಓದುತ್ತಾ ಇದ್ದ. ನಮ್ಮೂರಲ್ಲಿ ಇಂಗ್ಲೀಷು ಸ್ಕೂಲು ಇಲ್ಲ. ರಂಗಪ್ಪ ಬೆಂಗಳೂರಿಗೆ ಹೋದ ಮೇಲೆ ಕೆಲವು ವರುಷಗಳಾದ ನಂತರ ಇತರ ಹುಡುಗರೂ ಬೆಂಗಳೂರಿಗೆ ಹೋಗುವುದು ವಾಡಿಕೆಗೆ ಬಂತು. ಕನ್ನಡ ಪರೀಕ್ಷೆ ಆದ ಒಡನೆಯೇ ಬೆಂಗಳೂರಿಗೆ ಹೋಗಬೇಕಾಗಿ ಬಂದುದರಿಂದ ಹುಡುಗರು ಚಿಕ್ಕ ವಯಸ್ಸಿನಲ್ಲಿಯೇ ಒಂಟಿಯಾಗಿ ಇರಬೇಕಾಗುತಿತ್ತು. ವೆಂಕಟರಾಯ ಚಿಕ್ಕ ಹುಡುಗನಾಗಿದ್ದಾಗಲೇ ತಾಯಿ ತಂದೆ ಎಲ್ಲರನ್ನೂ ಬಿಟ್ಟು ಬೆಂಗಳೂರಿನಲ್ಲಿ ನಂಟರ ಮನೆಯಲ್ಲಿ ಒಬ್ಬನೇ ಇರಬೇಕಾಯಿತು.

ಹುಡುಗರಿಗೆಲ್ಲ ಪಿಶಾಚದ ಭಯ. ನಾನು ಇದುವರೆಗೆ ಕಣ್ಣು ಇಲ್ಲದ ಹುಡುಗರನ್ನ ನೋಡಿದೇನೆ, ಕಾಲು ಇಲ್ಲದ ಹುಡುಗರನ್ನ ನೋಡಿದೇನೆ, ಬುದ್ಧಿ ಇಲ್ಲದ ಹುಡುಗರನ್ನ ನೋಡಿದೇನೆ; ಪಿಶಾಚದ ಭಯ ಸ್ವಲ್ಪವೂ ಇಲ್ಲದ ಹುಡುಗರನ್ನ ಇನ್ನೂ ನೋಡಿಲ್ಲ. ಅದರಲ್ಲೂ ಜನಿವಾರ ಹಾಕುವ ಹುಡುಗರಿಗೆ ಪಿಶಾಚದ ಭಯ ಇಲ್ಲದೇ ಇರುವುದಿಲ್ಲ. "ಅಪ್ಪ, ಈ ಜನಿವಾರ ಯಾಕಪ್ಪಾ?" ಎಂತ ಹುಡುಗ ತಂದೆಯನ್ನು ಕೇಳಿದರೆ "ಅದರಲ್ಲಿ ಬ್ರಹ್ಮಗಂಟಿದೆ, ನೋಡು; ರುದ್ರಗಂಟಿದೆ ನೋಡು; ಅದನ್ನು ತೋರಿಸಿದರೆ ಪಿಶಾಚ ಓಡುತ್ತದೆ" ಎಂತ ತಂದೆ ಹೇಳಿಕೊಡುವನು. ಇದರಿಂದ ಹುಡುಗನಿಗೆ ಏನಾಗುತ್ತದೆ ಎಂದರೆ, ಪಿಶಾಚ ಬರುವುದು ಎನ್ನುವುದು ನಿಜವಾದ ಮಾತು ಎಂತ ತೋರುತ್ತದೆ. ಅದು ಬಂದಾಗ್ಗೆ ಜನಿವಾರ ತೋರಿಸಿದರೆ ಅದು ಓಡುವುದೋ ಇಲ್ಲವೊ ಅದು ಬೇರೆ ಮಾತು. ಬರುವುದುಂಟು, ಎಂದಾಯಿತು. ಇದೇ ಅಲ್ಲದೆ, ನಮಗೆ ಯಾವುದು ನಿಜವೆಂದು ತಿಳಿಯದೋ ಅದನ್ನು ನಂಬುವುದರಲ್ಲಿ ನಮಗೆಲ್ಲ ಬಹು ಆಸೆ. ವೆಂಕಟರಾಯ ಒಂಟಿಯಾಗಿ ಮಲಗಿಕೊಳ್ಳುವನು;

ಕತ್ತಲಲ್ಲಿ ಎಲ್ಲಿಗಾದರೂ ಹೋಗಿ ಬರುವನು. ಹಾಗಾಗಿ ಹೀಗಾಗಿ ಅವನ ಪಾಡಿಗೆ ಪಿಶಾಚ ನಿಜವಾದ ವ್ಯಕ್ತಿಯಾಗಿ ಪರಿಣಮಿಸಿತ್ತು.

ಈ ಸಮಾಚಾರ ಯಾತಕ್ಕೆ ಹೇಳುವುದಕ್ಕೆ ಬಂದೆನೆಂದರೆ, ಮೊನ್ನೆ ಪಂಚಮಿಯ ದಿನ ಅವನಿಗೆ ಶಾಂತಿಪ್ರಸ್ತವಾಯಿತು. ಅವನಿಗೆ ಈ ಹುಡುಗಿಯನ್ನು ಕೊಟ್ಟು ಮದುವೆ ಮಾಡುವ ವಿಷಯ ಮಾತನಾಡುವು ದಕ್ಕೆ ಹುಡುಗಿಯ ಕಡೆಯವರು ಬಂದಾಗ ವೆಂಕಟರಾಯ ಅವರಲ್ಲಿ ಒಬ್ಬರಿಗೆ ಒಂದು ಕೆಲಸ ಕೊಟ್ಟ. ಅದು ನನಗೆ ಜ್ಞಾಪಕಬಂತು. ಜ್ಞಾಪಕ ಬಂದಾಗ ಒಂದು ಮಾತನ್ನು ಹೇಳಿದರೆ, ನಿಮಗೂ ಹೊತ್ತು ಹೋಗು ತ್ತದೆ; ನನಗೂ ಹೊತ್ತು ಹೋಗುತ್ತದೆ. ಆಗ ಏನು ನಡೆಯಿತು ಎನ್ನು ವುದನ್ನ ಹೇಳುತ್ತೇನೆ. ಜೋಕೆ! ಈಗಲೇ ಹೇಳಿದೇನೆ. ಇದು ಒಂದು ಪಿಶಾಚದ ಕತೆ: ಹೆದರಬೇಡಿ, ಅಷ್ಟೆ.

ನಾನು ಹೇಳುವುದು ಈಗ ಏಳುವರುಷದ ಮಾತು. ಆಗ ವೆಂಕಟ ರಾಯನಿಗೆ ಹದಿನಾಲ್ಕು ಹದಿನೈದು ವರುಷ ವಯಸ್ಸಿದ್ದಿರಬಹುದು. ಹುಡುಗ ಚೆಲುವಾಗಿದಾನೆ, ಓದುತ್ತಿದಾನೆ, ಎಂದು ತಿಳಿದರೆ ಎಲ್ಲರೂ ನಾನು ಕೊಡುತ್ತೇನೆ ಹೆಣ್ಣು, ತಾನು ಕೊಡುತ್ತೇನೆ ಹೆಣ್ಣು, ಎಂದು ಬರುವರು. ವೆಂಕಟರಾಯನಿಗೆ ಹೆಣ್ಣು ಕೊಡುತ್ತೇವೆ ಎಂತ ಬಹಳ ಜನ ಬಂದು ಬಂದು ಕೇಳುತ್ತಿದ್ದರು. ಈಗ ಅವನ ಮಾವನಾಗಿದ್ದಾರಲ್ಲಾ ಇವರು ಒಂದು ದಿನ ಬಂದು ನಮ್ಮೂರಲ್ಲಿ ಅವನ ತಂದೆಯನ್ನು ಹುಡುಗನ ಜಾತಕ ಕೊಡಿ ಎಂದು ಕೇಳಿದರು. ತಾವು ಹೋಗಿ ಹುಡುಗನನ್ನು ನೋಡಿ; ಮನಸ್ಸಿಗೆ ಒಪ್ಪಿದರೆ ಆಮೇಲೆ ನೋಡೋಣ, ಎಂದು ವೆಂಕಟ ರಾಯನ ತಂದೆ ಹೇಳಿದರು. ಎಲ್ಲಿದಾನೆ ಎನ್ನುತ್ತಲೂ ಪಾದುಗೆ ಕೃಷ್ಣ ರಾಯರ ಗುರುತನ್ನು ಹೇಳಿದರು. ಹುಡುಗಿಯ ತಂದೆಗೂ ಪಾದುಗೆ ಕೃಷ್ಣರಾಯರಿಗೂ ಮೊದಲು ಪರಿಚಯ ಉಂಟಂತೆ. ಓಹೋ! ಅವರೇ? ಹಾಗಾದರೆ ಹುಡುಗ ನಮ್ಮವನ ಹಾಗೆಯೇ ಸರಿ, ಲೆಕ್ಕಕ್ಕೆ, ಎಂದು ಹೇಳಿ ಅವರು ಬೆಂಗಳೂರಿಗೆ ಹೋದರು. ಅದು ಆದದ್ದೂ ಹಾಗೆಯೆ. ಆದರೆ ಅದು ಹಾಗೆ ಆಗುವುದಕ್ಕೆ ಮೊದಲು ಇನ್ನೊಂದು ಕೆಲಸ ನಡೆದು ಮದುವೆಗೆ ಅಡ್ಡಿ ಬಂದಿತ್ತು. ಅದನ್ನು ನಿಮಗೆ ಈಗ ಹೇಳುತ್ತೇನೆ.

ಬೆಂಗಳೂರಿಗೆ ವೆಂಕಟರಾಯನನ್ನು ನೋಡುವುದಕ್ಕಾಗಿ ಕೃಷ್ಣರಾಯರ ಮನೆಗೆ ಹುಡುಗಿಯ ತಂದೆ ಶ್ರೀನಿವಾಸರಾಯರೂ, ಅವರ ಜೊತೆಗೆ ಅವರ ಸಹಾಯಕ್ಕೆ ಕೃಷ್ಣಪ್ಪ ಎನ್ನುವರೂ ಇಬ್ಬರೂ ಹೋದರು. ಹುಡುಗನನ್ನು ನೋಡಿದರು. ಮನಸ್ಸು ಒಪ್ಪಿತು. ಇವರು ನಿನ್ನ ಮಾವಂದಿರಯ್ಯ ಎಂದು ಕೃಷ್ಣರಾಯರು ವೆಂಕಟರಾಯನಿಗೆ ಹೇಳಿದರು. ವೆಂಕಟರಾಯನಿಗೆ ಮನಸ್ಸು ಉಬ್ಬಿತು; ಸಂತೋಷದಿಂದ ಉಕ್ಕಿತು. ಮದುವೆಮಾಡಿಕೊಳ್ಳುವಷ್ಟು ದೊಡ್ಡವನಾದೆನಲ್ಲಾ! ಎಂದು. ಆದರೂ ಮರ್ಯಾದೆಗೆ, ನಾನು ಈಗ ಮದುವೆಮಾಡಿಕೊಳ್ಳುವುದಿಲ್ಲ, ಎಂದು ಹೇಳಿದನು. ಸಂಬಂಧಕ್ಕೆ ಬಂದವರು ರಾತ್ರಿ ಕೃಷ್ಣರಾಯರ ಮನೆಯಲ್ಲಿ ಊಟಮಾಡಿದರು. ಊಟಮಾಡಿ, ಆ ಮನೆಯ ಮಹಡಿಯ ಮೇಲೆ ಒಂದು ಕೊಟಡಿ, ಆ ಕೊಟಡಿಯಲ್ಲಿ ವೆಂಕಟರಾಯ, ಶ್ರೀನಿವಾಸರಾಯರು, ಕೃಷ್ಣಪ್ಪನವರು, ಮೂವರೂ ಮಲಗಿಕೊಂಡರು.

ಕೃಷ್ಣರಾಯರ ಮನೆಯ ಬಾಗಿಲು ಇರುವುದು ಪೂರ್ವಕ್ಕೆ. ಬೀದಿ ಉತ್ತರ ದಕ್ಷಿಣವಾಗಿರುವುದು. ಕೃಷ್ಣರಾಯರ ಮನೆ ಮಹಡಿಯ ಮನೆ. ಆ ಬೀದಿಯಲ್ಲಿ ಇನ್ನು ಯಾವುದೂ ಮಹಡಿಯ ಮನೆಯಿಲ್ಲ. ಆ ಸಾಲಿನಲ್ಲಿ ಅದು ನಾಲ್ಕನೆಯ ಮನೆ. ಮಹಡಿ ಚಿಕ್ಕದಾದರೂ ಅದರಲ್ಲಿ ನಿಂತು ಕಿಟಕಿಯಿಂದ ನೋಡಿದರೆ ಬೀದಿ ಉದ್ದಕ್ಕೂ ಎಲ್ಲಾ ಮನೆಗಳೂ ಕಾಣುವುವು. ಆ ಮನೆಯ ಉತ್ತರಕ್ಕೆ ಮೂರೇ ಮನೆ. ದಕ್ಷಿಣಕ್ಕೆ ಎಂದರೆ ಬಲಗಡೆಗೆ ಮನೆಗಳು ಹೆಚ್ಚು. ಮಹಡಿಯ ಕೊಟಡಿಯಲ್ಲಿ ಕಿಟಕಿ ಈ ಕಡೆಗೆ ಇತ್ತು. ವೆಂಕಟರಾಯ ಆ ಕಿಟಕಿಯ ಹತ್ತಿರ ಮಲಗಿಕೊಂಡ; ಗೋಡೆಯ ಉದ್ದಕ್ಕೂ ಮಲಗಿ ಪೂರ್ವಕ್ಕೆ ತಲೆಯಿಟ್ಟುಕೊಂಡಿದ್ದ. ಕೃಷ್ಣಪ್ಪನವರು ವೆಂಕಟರಾಯನ ತಲೆಯ ಬಳಿ ತಲೆಯನ್ನಿಟ್ಟುಕೊಂಡು ಉತ್ತರ ದಕ್ಷಿಣವಾಗಿ ಮಲಗಿಕೊಂಡರು. ಶ್ರೀನಿವಾಸರಾಯರು ಕೃಷ್ಣಪ್ಪನವರ ಕಾಲಿನ ಹತ್ತಿರ ಕಾಲನ್ನಿಟ್ಟುಕೊಂಡು ಪಶ್ಚಿಮಕ್ಕೆ ತಲೆಯನ್ನಿಟ್ಟುಕೊಂಡು ಮಲಗಿದರು. ನಾನು ಹೇಳುವುದು ತಿಳಿಯಿತಷ್ಟೆ. ನಡೆದ ಸಮಾಚಾರ ನಿಮಗೆ ಸರಿಯಾಗಿ ತಿಳಿಯಬೇಕಾದರೆ ಈ ಮೂವರೂ ಹೇಗೆ ಮಲಗಿದ್ದರೆಂದು ನಿಮಗೆ ತಿಳಿಯಬೇಕು. ನಾನೂ ಅಲ್ಲಿ ಇದ್ದೆ.

ಎಂತ ಇಟ್ಟುಕೊಳ್ಳಿ. ನಾನೂ ಒಂದು ಕಡೆ ಮಲಗಿದ್ದರೆ ನಾವು ನಾಲ್ಕು ಜನವೂ ಒಂದು ಚೌಕದ ನಾಲ್ಕು ಕಡೆಗೂ ಒಬ್ಬೊಬ್ಬರು ಇರುತ್ತಾ ಇದ್ದೆವು. ನನ್ನ ತಲೆ ಶ್ರೀನಿವಾಸರಾಯರ ತಲೆ ಒಂದು ಮೂಲೆ; ಅದಕ್ಕೆ ಎದುರು ಮೂಲೆಯಲ್ಲಿ ಕೃಷ್ಣಪ್ಪ ವೆಂಕಟರಾಯರ ತಲೆಗಳು. ನನ್ನ ಕಾಲು ವೆಂಕಟರಾಯನ ಕಾಲು ಒಂದು ಮೂಲೆ; ಅದಕ್ಕೆ ಎದುರು ಮೂಲೆಯಲ್ಲಿ ಕೃಷ್ಣಪ್ಪನ ಕಾಲು ಶ್ರೀನಿವಾಸರಾಯರ ಕಾಲು. ಹೀಗಿರು ತ್ತಿತ್ತು. ಕೊಟಡಿ ಸ್ವಲ್ಪ ಚಿಕ್ಕದು. ಸುಮಾರಿಗೆ ಹೀಗೆ ಮಲಗಿದ್ದರು.




ಈ ಚಿತ್ರವನ್ನು ನೋಡಿ ನಗಬೇಡಿ. ನಾನು ಡ್ರಾಯಿಂಗ್ ಕಲಿತ ಮನುಷ್ಯನಲ್ಲ. ಅಲ್ಲದೆ ಗುಂಡಾಭಟ್ಟರಿಗೆ ಒಂದು ದಿನ ಇದರಂತೆ ಬರೆದು ತೋರಿಸಿದೆ. ಅವರು "ಶ್ಯಾಮಣ್ಣನವರೆ, ಇಲ್ಲಿ ನೋಡಿ, ಇದನ್ನೆಲ್ಲಾ ತಿಳಿಯುವುದಕ್ಕೆ ಬುದ್ಧಿವಂತರಿಗೆ ಏನೂ ಮಹಾಪ್ರಮಾದವಲ್ಲ. ಬುದ್ಧಿವಂತರ ಮಾತು ಬುದ್ಧಿವಂತರಿಗೆ ಸುಲಭವಾಗಿ ತಿಳಿದುಹೋಗುತ್ತದೆ. ನೀವು ಹೇಳಿದಿರಿ; ಈ ಚಿತ್ರ ಬರೆದಿರಿ; ನನಗೆ ಗೊತ್ತಾಗಿಹೋಯಿತು. ಕಾನೆ ಜನಕ್ಕೆ ಗೊತ್ತಾಗುವುದಿಲ್ಲ. ಅದೇ ಬುದ್ಧಿ ಎನ್ನುವುದು. ಬುದ್ಧಿ ಒಂದು ಇದ್ದರೆ ಡ್ರಾಯಿಂಗೂ ಬೇಡ, ಗೀಯಿಂಗೂ ಬೇಡ; ಅದಿಲ್ಲದಿದ್ದರೆ ಬ್ರಹ್ಮದೇವ ಬಂದು ತೀಡಿದರೂ ತಿಳಿಯುವುದಿಲ್ಲ" ಎಂದರು. ನೀವೆಲ್ಲರೂ ಬುದ್ಧಿವಂತರೇ ಆದ್ದರಿಂದ ನಿಮಗೆಲ್ಲ ಇದು ಅರ್ಥವಾಗಿರಬೇಕು.

ವೆಂಕಟರಾಯ ಮಲಗಿದ್ದಕಡೆ ಕಿಟಕಿ ಇದೆಯೆಂದು ಹೇಳಿದೆನಷ್ಟೆ. ಆ ಕಿಟಕಿಯಿಂದ ನೋಡಿದರೆ ಆ ಸಾಲಿನಲ್ಲಿ, ಮೂರನೆಯದಲ್ಲ, ನಾಲ್ಕನೆಯ ಮನೆಗೆ ಪಿಶಾಚದ ಮನೆ ಎಂತ ಹೆಸರು ಬಂದಿತ್ತು. ಆ ಮನೆಯಲ್ಲಿ ಒಂದು ಕಾಲದಲ್ಲಿ ಒಬ್ಬ ವ್ಯಾಪಾರಿ ವಾಸಮಾಡುತ್ತ ಇದ್ದ. ಅವನಿಗೆ ಒಬ್ಬ ಹೆಂಡತಿ; ಮಕ್ಕಳಿರಲಿಲ್ಲ. ಎಂದೋ ಒಂದು ದಿನ ಸಾಯಂಕಾಲ ಅಂಗಡಿಯಿಂದ ಮನೆಗೆ ಬಂದನಂತೆ. ಬರುವುದರೊಳಗೆ ಯಾರೋ ಪರಪುರುಷ ಮನೆಯಲ್ಲಿ ಹೆಂಡತಿಯ ಸಂಗಡ ಮಾತನಾಡುತ್ತಿದ್ದನಂತೆ, ಏನೋ ಸ್ವಲ್ಪ ರಂಪು ಆಯಿತಂತೆ. ಆ ದಿನ ರಾತ್ರಿ, ಇಲ್ಲ ಇವನೇ ಏನಾದರೂ ಮಾಡಿದನೋ, ಇಲ್ಲ ಅವಳೇ ಅವಮಾನವನ್ನು ಸಹಿಸಲಾರದೆಯೋ ಗಂಡನ ಅಪನಂಬಿಕೆಯಿಂದ ನೊಂದೋ ಪ್ರಾಣ ತೆಗೆದುಕೊಂಡಳೋ; ಆದದ್ದೇನು ಎಂದರೆ, ಮಾರನೆಯ ದಿನ ಮನೇ ಕೆಲಸದ ಹೆಂಗಸು ಬಂದು ದೇವರ ಮನೇ ಬಾಗಿಲನ್ನು ತೆಗೆಯುವ ವೇಳೆಗೆ, ತೊಲೆಗೆ ಒಂದು ಹಗ್ಗ ಕಟ್ಟಿ, ಆ ಹಗ್ಗದ ಕೊನೆಯಲ್ಲಿ ಮನೆಯ ಯಜಮಾನಿ ನೇಣು ಆಗಿದ್ದಳು. ಪರಿಚಾರಿಕೆ ಗಾಬರಿಯಿಂದ ಕೂಗಿಕೊಂಡಳು. ಯಜಮಾನ ಹಾಸಿಗೆಯಿಂದ ಆಗ ತಾನೇ ಎದ್ದು ಓಡಿ ಬಂದ. ಏನು ಏನು ಎನ್ನುತ್ತಲೂ ಇವಳು ಹೇಳಿದಳು. ಬಂದು ನೋಡಿ ಅಯ್ಯೋ ಎಂದು ಅವನು ಮೂರ್ಛೆಹೋಗಿ ಬಿದ್ದ. ಅವನನ್ನು ಕೋರ್ಟಿಗೆ ಎಳೆದರು. ಶಿಕ್ಷೆ ಆಯಿತೋ ಏನೋ ಕಾಣೆ. ಆಮೇಲೆ ಬಂದು ಅವನು ಅದೇ ಮನೆಯಲ್ಲಿ ವಾಸಮಾಡಬೇಕೆಂದು ಮನಸ್ಸು ಮಾಡಿದ. ಎಲ್ಲರೂ, ಅಯ್ಯ, ಬೇಡ ಎಂದರು. ಅವನು, ಅವಳೇ ಹೋದಳಂತೆ. ಇನ್ನು ನಾನಿದ್ದೇನು, ಎಂದು ಒಂದು ಒಳ್ಳೆಯದಿನ ನೋಡಿ ಮನೆಗೆ ಬಂದ. ಆ ದಿನ ರಾತ್ರಿಯೇ ಅವನ ಪಾಡೂ ಆಯಿತು. ಮಾರನೆಯ ದಿನ ಮನೆಗೆಲಸದಾಕೆ, ಇನ್ನೊಬ್ಬರು, ದೇವರಮನೆಯ ಬಾಗಿಲನ್ನು ತೆಗೆಯುವವೇಳೆಗೆ ಮೊದಲು ಅವನ ಹೆಂಡತಿ ಎಲ್ಲಿ ಹೇಗೆ ನೇಣು ಆಗಿದ್ದಳೋ ಅಲ್ಲೇ ಆ ವ್ಯಾಪಾರಿ ಹಾಗೆಯೇ ನೇಣು ಆಗಿದ್ದ. ಪುನಃ ಗಲಾಟೆಯಾಯಿತು. ಆಗಲಾದರೆ ಗಂಡನನ್ನು ಕೋರ್ಟಿಗೆ ಎಳೆದರು. ಈಗ ಮನೆಯಲ್ಲಿದ್ದವರು, ಮನೆಯವನು, ಬಾಗಿಲಲ್ಲಿ ಮಲಗಿದ್ದ ಆಳು,

ಇಬ್ಬರೇ. ಆಳು ಮಾಡಿದ ಎಂದು ಹೇಳುವಹಾಗಿಲ್ಲ. ವ್ಯಾಪಾರಿ ಆಳಿನ ಹೆಂಡತಿಯಲ್ಲವಲ್ಲ! ಸರಿ, ಯಾರೋ ಬಂದರು. ಹೆಣವನ್ನು ತೆಗೆದರು; ಸುಟ್ಟರು; ಆಗಿಹೋಯಿತು.

ಅದು ಮೊದಲು ಆ ಮನೆಗೆ ಕೆಟ್ಟ ಹೆಸರು. ಪುಣ್ಯಸ್ಥಳಗಳ ಸ್ಥಳ ಪುರಾಣಗಳಿಗಿಂತಲೂ ಶೀಘ್ರವಾಗಿಯೂ, ವಿಸ್ತಾರವಾಗಿಯೂ ಕತೆ ಬೆಳೆಯಿತು. ವ್ಯಾಪಾರಿ ತನ್ನ ಹೆಂಡತಿಯನ್ನು ನೇಣುಹಾಕಿ ಕೊಂದನೆಂತಲೂ, ಅವನು ಹಿಂದಿರುಗಿ ಆ ಮನೆಗೆ ಬಂದ ದಿನ ಅವನ ಹೆಂಡತಿಯ ಪಿಶಾಚಿ ಅಲ್ಲಿ ಬಂದು ಅವನನ್ನು ಪ್ರತಿಯಾಗಿ ನೇಣಿಗೆ ಹಾಕಿತೆಂದೂ, ಈಗಲೂ ಪ್ರತಿದಿನವೂ ರಾತ್ರಿಯವೇಳೆ ಆ ಮನೆಯಲ್ಲಿ ಆ ಎರಡೂ ಪಿಶಾಚಿಗಳೂ ನೇಣುಹಾಕುವ ಆಟವನ್ನು ಆಡುತ್ತವೆ ಎಂದೂ ಅಲ್ಲೆಲ್ಲಾ ಬೊಬ್ಬೆ ಎಬ್ಬಿಸಿದರು. ಕೇಳಬೇಕೆ? ಕತೆ ಒಬ್ಬರು ಹೇಳುವ ಹಾಗೆ ಒಬ್ಬರು ಹೇಳುವುದಿಲ್ಲ. ಸುಳ್ಳಿಗೆ ಸುಳ್ಳು ಸೇರಿತು; ಮನೆ ಪ್ರಸಿದ್ಧವಾಯಿತು. ರಾತ್ರಿ ಹೊತ್ತು ಬೀದಿಯಲ್ಲಿ ಹೋಗುವವರು ಆ ಮನೆಯ ಕಡೆ ತಿರುಗಿ ನೋಡುತ್ತಿರಲಿಲ್ಲ: ಭಯ, ಆದರೂ ಕುತೂಹಲ: ಮನೆಯನ್ನು ದಾಟಿ ಸ್ವಲ್ಪ ದೂರ ಹೋದಮೇಲೆ ಆ ಕಡೆ ಹಿಂದಿರುಗಿ ನೋಡಿ, ಅದೇನನ್ನೋ ಕಂಡಂತೆ ನೆನೆದುಕೊಂಡು, ಸ್ವಲ್ಪ ನಡುಗಿ ಮುಂದಕ್ಕೆ ಜಾಗ್ರತೆಯಾಗಿ ಹೆಜ್ಜೆಯನ್ನಿಡುತ್ತಾ ನಡೆಯುವರು.

ವೆಂಕಟರಾಯ ಕೃಷ್ಣರಾಯರ ಮನೆಯ ಮಹಡಿಯ ಮೇಲೆ ನಿಂತು ಆಗಾಗ್ಗೆ ಆ ಭಯದ ಮನೆಯ ಕಡೆ ನೋಡುವನು. ಅಲ್ಲಿಂದ ಯಾವುದಾದರೊಂದು ಪಿಶಾಚಿ ಬಂದು ರಾತ್ರಿ ತಾನು ಮಲಗಿಕೊಂಡಿರುವಾಗ ತನ್ನನ್ನು ಏನಾದರೂ ಮಾಡಿದರೆ ಏನುಗತಿ ಎಂದು ಯೋಚಿಸುವನು. ಅದೇನು ನಿಜವಾಗಿಯೂ ಪಿಶಾಚದ ಭಯವಲ್ಲ. ಬರಿಯ ಪುಕ್ಕಲು; ಹುಸಿ ಭಯ. ಹೀಗಿರುವಲ್ಲಿ ಒಂದು ದಿನ ಯಾರೋ ಹುಡುಗರು ಆ ಪಿಶಾಚಿಮನೆಗೆ ವಾಸಮಾಡುವುದಕ್ಕೆ ಬಂದರು. ದೊಡ್ಡ ಮನೆ, ಆದರೂ ಯಾರಾದರೂ ಬಂದರೆ ಸಾಕು ಎಂತ ಬಾಡಿಗೆ ಸುಲಭ. ಹುಡುಗರು ಬಂದರು. ಅವರಲ್ಲಿ ಒಬ್ಬ, ವೆಂಕಟರಾಯನಂತೆಯೇ ಧೈರ್ಯಶಾಲಿ, ಬಂದ ಕೊಂಚ ದಿನದಲ್ಲಿಯೇ ಯಾತಕ್ಕೋ

ಹೆದರಿಬಿಟ್ಟು ಅರ್ಧರಾತ್ರಿಯಲ್ಲಿ ಕಿರಿಚಿಕೊಂಡ. ಎಲ್ಲೆಲ್ಲಿ ಮಲಗಿದ್ದವರು ಅಲ್ಲಲ್ಲೆ ಹಾರಿ ಎದ್ದರು. ಏನು ಏನು ಎಂದು ಬಂದರು. ಏನೂ ಇಲ್ಲ. ಹುಡುಗನ ಬಾಯಲ್ಲಿ ನೊರೆ ಸುರಿಯುತ್ತಿತ್ತು. ಡಾಕ್ಟರನ್ನು ಕರೆದರು. ಹುಡುಗನಿಗೆ ಅವರಿಂದಲೇ ಆಗಲಿ ಹೆದರಿಕೆಯಿಂದಲೇ ಆಗಲಿ ಏನೂ ತೊಂದರೆಯಾಗಲಿಲ್ಲ. ಆದರೂ ಮಾರನೆಯ ದಿನ ಹುಡುಗರೆಲ್ಲಾ, ಒಂದು ತಿಂಗಳ ಬಾಡಿಗೆ ಕೊಟ್ಟು, ದೌಡಾಯಿಸಿದರು. ಇದು ನಡೆದದ್ದೆಲ್ಲಾ ವೆಂಕಟರಾಯನಿಗೆ ಗೊತ್ತು.

ಇದಾದ ಕೆಲವು ದಿನಕ್ಕೇ ಹುಡುಗಿಯನ್ನು ಕೊಟ್ಟು ಮದುವೆ ಮಾಡುತ್ತೇನೆ ಎಂದು ಶ್ರೀನಿವಾಸರಾಯರು ಬಂದದ್ದು. ಆ ರಾತ್ರಿ ಮಲಗಿಕೊಳ್ಳುವುದಕ್ಕೆ ಮುಂಚೆ ವೆಂಕಟರಾಯ ಕಿಟಕಿಯಿಂದ ಆ ಮನೆಯ ಕಡೆ ನೋಡಿದ. ಎಲ್ಲವೂ ನಿಶ್ಶಬ್ದ. ಕತ್ತಲು ಮನೆಯ ತುಂಬ ಕಾಡಿಗೆಯಂತೆ ಕವಿದಿದೆ. ಅದು ನಿಜವಾಗಿಯೂ ಭಯದ ಮನೆಯೇ ಸರಿ. ಆ ಕತ್ತಲಲ್ಲಿ, ಆ ಹಾಳು ಮನೆಯಲ್ಲಿ, ಎರಡು ಪಿಶಾಚ ವಲ್ಲ, ಹತ್ತು ಪಿಶಾಚಗಳು, ನೂರು ಸಲ ನೇಣುಹಾಕಿಕೊಂಡರೂ ಅದು ಯಾರಿಗೂ ತಿಳಿಯದು. ಹೀಗೆಂದುಕೊಂಡು ವೆಂಕಟರಾಯ ಕಿಟಕಿಯಿಂದ ಒಳಕ್ಕೆ ತಿರುಗಿದ. ಆಗ ಆ ಮನೆಯ ಮೇಲೆ ಗೂ ಎಂದು ಶಬ್ದವಾಯಿತು. ಅದೊಂದು ಗೂಗೆ. ವೆಂಕಟರಾಯ ಸ್ವಲ್ಪ ನಡುಗಿದ.

ಅರ್ಧ ರಾತ್ರಿಯಲ್ಲಿ ವೆಂಕಟರಾಯನಿಗೆ ಏನೋ ಸ್ವಲ್ಪ ಎಚ್ಚರ ವಾದ ಹಾಗಾಯಿತು. ಎಲ್ಲೋ ಸ್ವಲ್ಪ ಶಬ್ದ. ಎಲ್ಲಿ? ಕಿಟಕಿಯ ಹೊರ ಗಡೆ. ಆಲಿಸಿ ಕೇಳಿದರೆ ಏನೂ ಶಬ್ದವಿರಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಮತ್ತೆ ಶಬ್ದವಾಯಿತು. ಮತ್ತೆ ಆಲಿಸಿ ಕೇಳಿದರೆ ಶಬ್ದ ಇತ್ತು. ಯಾರೋ ನಡೆಯುವ ಶಬ್ದ. ನೆರೆಮನೆಯ ಹೆಂಚಿನ ಮೇಲೆ ಹೆಜ್ಜೆಯಿಟ್ಟು ಮೆಲ್ಲಗೆ ನಡೆಯುವ ಶಬ್ದ. ಯಾರಿರಬಹುದು? ಪಿಶಾಚಿ ಇರಬಹುದೋ? ಛೆ, ಛೆ, ಪಿಶಾಚಿ ಎಂದರೇನು, ನಡೆಯುವುದೆಂದರೇನು? ಹೀಗೆ ಅವನು ಧೈರ್ಯ ಹೇಳಿಕೊಂಡನು. ಹೇಳಿಕೊಂಡು ಮುಖವನ್ನು ಕಿಟಕಿಯ ಕಡೆಗೆ ತಿರುಗಿಸಿ ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ನೋಡಿ:

ತ್ತಿದಾನೆ. ಯಾರೂ ಕಾಣಲಿಲ್ಲ. ನಡೆಯುವ ಶಬ್ದ ಮಾತ್ರ ಇನ್ನೂ ಕೇಳುತ್ತಿದೆ. ಮೆಲ್ಲಮೆಲ್ಲನೆ ಹೆಜ್ಜೆ ಇಡುವ ಶಬ್ದ. ಶಬ್ದ ಕಿಟಕಿಯ ಕಡೆಗೆ ಹತ್ತಿರಹತ್ತಿರವಾಗಿ ಬರುವಂತೆ ತೋರಿತು. ವೆಂಕಟರಾಯನಿಗೆ ಸ್ವಲ್ಪ ಹೆದರಿಕೆಯಾಯಿತು. ಅವನು ಕಿಟಕಿಯ ಕಡೆಯಿಂದ ಕಣ್ಣನ್ನು ತೆಗೆಯಲಿಲ್ಲ. ಶಬ್ದ ಹತ್ತಿರ ಹತ್ತಿರ ಬಂದಿತು; ಕಿಟಕಿಯ ಹತ್ತಿರ ಬಂದು ನಿಂತುಹೋಯಿತು. ಕಿಟಕಿಯ ಹೊರಗಡೆಗೆ ಸರಿಯಾಗಿ ನಿಂತದ್ದರಿಂದ ಕಿಟಕಿಯಿಂದ ಏನಾದರೂ ಇಣಿಕಿ ನೋಡುವುದೇನೋ ಎಂದು ವೆಂಕಟರಾಯ ದೃಷ್ಟಿಸಿ ನೋಡುತ್ತಿದ್ದಾನೆ. ಸ್ವಲ್ಪ ಹೊತ್ತು ಏನೂ ಇಲ್ಲ. ಆಮೇಲೆ ಇದ್ದಕ್ಕಿದ್ದ ಹಾಗೆ ಒಂದು ಮುಖ ಕಂಡುಬಂದಿತು. ಕರಿಯಮುಖ, ದೊಡ್ಡದು. ಕರಾಳಾಕೃತಿ, ಹಲ್ಲುಗಳನ್ನೆಲ್ಲಾ ಬಿಟ್ಟುಕೊಂಡಿತ್ತು. ನಾಲಗೆ ಸ್ವಲ್ಪ ಹೊರಕ್ಕೆ ಜೋಲಾಡುತ್ತಿತ್ತು. ಕಣ್ಣುಗಳಲ್ಲಿ ಅದೇನೋ ಹಳದಿಯ ಬಣ್ಣದ ಬೆಳಕು. ವೆಂಕಟರಾಯ ಭಯದಿಂದ ನಡುಗಿದ. ಕೂಗುವುದಕ್ಕೆ ಪ್ರಯತ್ನಪಟ್ಟ, ಆಗಲಿಲ್ಲ. ಆ ಮುಖದಲ್ಲಿ ಹೊಳೆಯುತ್ತಿದ್ದ ಕಣ್ಣುಗಳು ಇವನ ಕಣ್ಣುಗಳನ್ನು ದುರುದುರನೆ ನೋಡುತ್ತಿದ್ದುವು. ಇವನಿಗೆ ಮಾತನಾಡುವ ಶಕ್ತಿಯೇ ಇಲ್ಲದ ಹಾಗಾಯಿತು. ಈ ಕರಾಳ ಮುಖವನ್ನು ನೋಡಿ ಸಹಿಸಲಾರದೆ ವೆಂಕಟರಾಯ ಕಣ್ಣನ್ನು ಮುಚ್ಚಿಕೊಳ್ಳಲು ಪ್ರಯತ್ನಮಾಡಿದ; ಆಗಲಿಲ್ಲ. ಕಣ್ಣುಗಳನ್ನು ಬೇರೇ ಕಡೆ ತಿರುಗಿಸಿಕೊಳ್ಳುವುದಕ್ಕೆ ಪ್ರಯತ್ನಪಟ್ಟ; ಆಗಲಿಲ್ಲ. ಮೈಯಲ್ಲೆಲ್ಲಾ ಬೆವರು ಕಿತ್ತುಕೊಂಡಿತು. ಹಾಗೆಯೇ ನೋಡುತ್ತಿರುವಾಗ ತಲೆ ಕಿಟಕಿಯ ಒಳಕ್ಕೆ ಬಂದಿತು.

ವೆಂಕಟರಾಯನ ಚೈತನ್ಯ ಉಡುಗಿ ಹೋಯಿತು. ನಡೆಯುವುದನ್ನೆಲ್ಲಾ ನೋಡುತ್ತಾ ಅವನು ಮರದ ತುಂಡಿನಹಾಗೆ ಸುಮ್ಮನೆ ಬಿದ್ದಿದ್ದನು. ಮರದ ತುಂಡಿನಂತೆ ಕದಲದೆ ಇದ್ದುದೆಷ್ಟೋ ಅಷ್ಟೆ. ಆದರೆ ಮರದ ತುಂಡಿಗೆ ಹೆದರಿಕೆಯಿಲ್ಲ; ಇವನ ಹೆದರಿಕೆಗೆ ಪಾರವಿಲ್ಲ. ಆ ಮುಖವೋ ಬರಿಯ ಮುಖ; ಮೈ, ಕೈ, ಕಾಲೂ ಏನೂ ಇಲ್ಲ. ಅದು ಏನು ಮಾಡುವುದೋ ಎಂದು ಇವನು ನೋಡುತ್ತಿದ್ದಾನೆ. ಅದು ಮೆಲ್ಲಗೆ ಕಿಟಕಿಯ ಗೂಡಿನಲ್ಲಿ ಕುಳಿತುಕೊಂಡಿತು. ಹಾಗೆಯೇ ಸ್ವಲ್ಪ ಹೊತ್ತು

ಕುಳಿತಿದ್ದು ವೆಂಕಟರಾಯನನ್ನು ನೋಡುತ್ತ ನೋಡುತ್ತ ಕಣ್ಣನ್ನು ದೊಡ್ಡದು ಮಾಡಿಕೊಂಡು ಕೆಳಕ್ಕೆ ಧುಮಿಕಿತು.

ರೂಮಿನೊಳಕ್ಕೆ ಧುಮಿಕಿದೊಡನೆ ಆ ತಲೆ ಹೋಗಿ ಅದು ಬೆಕ್ಕಾಯಿತು.

ಹಾಗಾದರೆ ಭಯವಿಲ್ಲ, ಎನ್ನುವಿರಾ? ನಿಮಗೆ ತಿಳಿಯದು. ಮನೆಗೆ ಬಂದ ಪಿಶಾಚ ತಲೆಯಾದರೇನು ಬೆಕ್ಕಾದರೇನು?

ಬೆಕ್ಕು ಮೆಲ್ಲನೆ ವೆಂಕಟರಾಯನ ಕಡೆಗೆ ಬರುವುದಕ್ಕೆ ಪ್ರಾರಂಭ ಮಾಡಿತು. ನೇರವಾಗಿ ಎದುರಿಗೆ ಬಂದಿದ್ದರೆ ಅದಾದರೂ ಒಂದು ಮಾತು. ಅದು ಹಾಗೆ ಬರಲಿಲ್ಲ. ವೆಂಕಟರಾಯ ಕಿಟಕಿಯ ಕಡೆ ಮುಖ ತಿರುಗಿಸಿಕೊಂಡು ಮಲಗಿದ್ದನಷ್ಟೆ; ಅವನ ಕಾಲಿನ ಸುಮಾರಿಗೆ ಆ ಕಿಟಕಿ ಇದ್ದದ್ದು; ಬೆಕ್ಕು ಕಿಟಕಿಯಿಂದ ಕೆಳಕ್ಕೆ ಧುಮಿಕಿ, ಕಿಟಕಿಯ ತಳದಿಂದ ವೆಂಕಟರಾಯನ ಕಾಲಿನ ಬಳಿಗೆ ಬಂದು, ಕಾಲನ್ನು ದಾಟಿದಮೇಲೆ, ವೆಂಕಟರಾಯನ ಹಿಂದುಗಡೆ ಅವನ ಕಾಲಿಂದ ತಲೆಯ ಕಡೆಗೆ ನಡೆಯು ವುದಕ್ಕೆ ಪ್ರಾರಂಭಿಸಿತು. (ದಾರಿ ತಿಳಿಯಬೇಕಾದರೆ ನನ್ನ ಡ್ರಾಯಿಂಗನ್ನು ನೋಡಿ.) ಅದು ಏನು ಮಾಡಿದರೂ ಎದುರಿಗೆ ಮಾಡಲಿ ಎಂದು, ವೆಂಕಟರಾಯ ಬಲಕ್ಕೆ ತಿರುಗಲು ಪ್ರಯತ್ನಮಾಡಿದ. ಆಗಲಿಲ್ಲ. ಬಿದ್ದ ಹಾಗೆಯೇ ಬಿದ್ದಿದ್ದು ಆ ಪಿಶಾಚಿ ಹಿಂದುಗಡೆಯಿಂದ ಏನುಮಾಡಿದರೂ ಅನುಭವಿಸಬೇಕಾಯಿತು. ವೆಂಕಟರಾಯನ ನಾಲಗೆ ಒಣಗಿಹೋಯಿತು. ಅವನು ಏನೂ ಮಾಡದೆ ಸುಮ್ಮನೆ ಇದ್ದ.

ಪಿಶಾಚಿ ಸ್ವಲ್ಪ ದೂರ ಬರುವುದು. ಎಷ್ಟು, ಒಂದು ಹೆಜ್ಜೆ. ಬಂದು ಸುಮ್ಮನೆ ಕೂಡುವುದು. ಸ್ವಲ್ಪ ಕೂತು ಆಮೇಲೆ ಒಂದು ಹೆಜ್ಜೆ. ಪುನಃ ಸ್ವಲ್ಪ ಕೂಡುವುದು. ಹೀಗೆ ಅದು ಮೆಲ್ಲಗೆ ಅವನ ನಡುವಿನ ಬಳಿಗೆ ಬಂದಿತು. ಅದೆಂತಹ ಮೃದುಗಮನ! ಪಿಶಾಚವಾದರೇನು ಮನುಷ್ಯರಾದರೇನು? ಗುಣಕ್ಕೆ ಮತ್ಸರವಿಲ್ಲ. ಇಂತಹ ಮೃದುಗಮನವನ್ನು ಕಂಡೇ ಕವಿಗಳು ಮಂದಗಮನೆ ಸುಂದರಾಂಗಿ ಎಂದು ಹಾಡುವರೆಂದರೆ ಅದೇನು ಹೆಚ್ಚಿನ ಮಾತಲ್ಲ. ಪಿಶಾಚಿ ವೆಂಕಟರಾಯನ ನಡುವಿಗೆ ಸರಿಯಾಗಿ ಬಂದಾಗ, ವೆಂಕಟರಾಯನಿಗೆ ಅದರ ಹೊಟ್ಟೆಯಲ್ಲಿ ಆಗುತ್ತಿದ್ದ ಗುಡುಗುಡು ಶಬ್ದ ಕೇಳಿಸುವುದಕ್ಕೆ ಪ್ರಾರಂಭವಾಯಿತು. ಬೆಕ್ಕಿನ ರೂಪವನ್ನು ತಾಳಿದ ಮೇಲೆ

ಪಿಶಾಚ ಬೆಕ್ಕಿನ ಸ್ವಭಾವವನ್ನು ತಾಳಬೇಕಲ್ಲವೆ? ಈ ಗುಡುಗುಡು ಶಬ್ದದಿಂದ ವೆಂಕಟರಾಯನಿಗೆ ಒಂದು ಸಹಾಯವಾಯಿತು: ಬೆಕ್ಕು ಎಷ್ಟು ದೂರ ಮುಂದಕ್ಕೆ ಬಂತು ಎಂದು ತಿಳಿಯಲು ಅನುಕೂಲ ವಾಯಿತು. ಪಿಶಾಚ ನಡುವಿನ ಬಳಿ ಕುಳಿತಿದ್ದದ್ದು ಮೆಲ್ಲಗೆ ಹೆಜ್ಜೆ ಯನ್ನಿಡುತ್ತಾ ವೆಂಕಟರಾಯನ ಬೆನ್ನ ನಡುವಿಗೆ ಬಂದಿತು; ಭುಜದ ನೇರಕ್ಕೆ ಬಂದಿತು; ಕುತ್ತಿಗೆಯ ನೇರಕ್ಕೆ ಬಂದಿತು; ತಲೆಯ ಹಿಂದು ಗಡೆಗೆ ಬಂದಿತು. ಬಂದು, ಮುಂದಕ್ಕೆ ಹೆಜ್ಜೆಯಿಡುವುದಕ್ಕೆ ಹೋಗಿ, ಇಡದೆ ಇದ್ದಲ್ಲಿಯೇ ನಿಂತಿತು.

ವೆಂಕಟರಾಯನಿಗೆ ಬಹಳ ಹೆದರಿಕೆಯಾಯಿತು.

ಏನು ಮಹಾ ಹೆದರಿಕೆ, ಅವನು ಹೆಂಗಸಾಗಿ ಹುಟ್ಟಬೇಕಾಗಿತ್ತು, ಎಂದು ಹೇಳುವವರು ನೀವು ಯಾರಾದರೂ ಇದ್ದರೆ, ನಿಮಗೆ ಒಂದು ಮಾತನ್ನು ಹೇಳುತ್ತೇನೆ. ಅದರಂತೆ ಮಾಡಿ. ಈಗ ನಾನು ಹೇಳು ವುದನ್ನು, ಅರ್ಧರಾತ್ರಿ ಬೇಡಿ, ರಾತ್ರಿ ಹತ್ತು ಗಂಟೆಯಲ್ಲಿ, ನಿಮ್ಮ ಮನೆ ಯವರೆಲ್ಲರೂ ಮಲಗಿದಮೇಲೆ ನೀವೇ ಕೂತು ಓದಿ. ನಿಮಗೂ ಸ್ವಲ್ಪ ಹೆದರಿಕೆಯಾಗುವುದು. ನಿಮ್ಮ ಹೆಂಡತಿಯೋ ಮಗುವೋ ಮಲಗಿರುವ ಶಯ್ಯಾಗೃಹದಲ್ಲಿ ಕುಳಿತು ಓದಬೇಡಿ. "ಕೂಗಿಕೊಂಡರೆ ಅವಳಿದ್ದಾಳೆ. ಸಹಾಯಕ್ಕೆ ಬರುತ್ತಾಳೆ" ಎಂತ ನಿಮಗೆ ಧೈರ್ಯವಿರುತ್ತದೆ. ನೀವು ಒಬ್ಬರೇ ಒಂದು ಕೊಟಡಿಯಲ್ಲಿ ಕುಳಿತು ಬಾಗಿಲನ್ನು ತೆರೆದಿಟ್ಟು ಕಿಟಕಿ ಯನ್ನು ತೆರೆದಿಟ್ಟು ಓದಬೇಕು. ಓದಿನೋಡಿ.

ಬೆಕ್ಕಿನ ಹೊಟ್ಟೆಯ ಶಬ್ದ ಗುಡುಗುಡು ಎಂದು ಆಗುತ್ತಲೇ ಇದೆ. ಏನು ಮಾಡುತ್ತದೋ, ಮೇಲೆ ಬಿದ್ದಾಗ್ಗೆ ಎಚ್ಚರಿಕೆಯಿಂದ ಇರಬೇಕು, ಎಂದು ವೆಂಕಟರಾಯ ಅದರ ಕೂಡ ಯುದ್ಧಮಾಡುವುದಕ್ಕೆ ಸಿದ್ಧ ನಾಗಿದಾನೆ. ಬೆಕ್ಕು ಹೊಟ್ಟೆಯಲ್ಲಿ ಗುಡುಗುಡು ಶಬ್ದವನ್ನು ಹೆಚ್ಚು ಮಾಡಿತು. ಇದ್ದದಿದ್ದ ಹಾಗೆ ತಲೆಯಾಯಿತು. ಅದೇ ಕರಾಳವಾದ ಮುಖ. ಕೋರೆಯ ಹಲ್ಲು. ಜೋಲುವ ನಾಲಗೆ. ಸ್ವಲ್ಪ ಹೊತ್ತಿನ ಮೇಲೆ ಪುನಃ ಅದು ಬೆಕ್ಕಾಯಿತು. ಹೀಗೆ ಮಾರ್ಪಾಡು ಎರಡು ಮೂರು ಸಲ ಆಯಿತು. ಕೊನೆಗೆ ತಲೆಯಾಗಿ ಒಂದು ಅರೆಗಳಿಗೆ

ನಿಂತಿತು. ವೆಂಕಟರಾಯನು ಅದು ಬೆಕ್ಕಾಗಿರುವಾಗ ಅದರ ಮೇಲೆ ಬೀಳಬೇಕೆಂದು ಮನಸ್ಸು ಮಾಡಿಕೊಂಡನು. ಆದರೆ ಅದೇನೋ ತಲೆಯಾದದ್ದು ಬೆಕ್ಕಾಗಲಿಲ್ಲ. ಆಗಲಿಲ್ಲವಲ್ಲ; ಆಗುವುದೋ ಇಲ್ಲವೋ? ಎಂದು ವೆಂಕಟರಾಯನಿಗೆ ಧೈರ್ಯ ಕುಗ್ಗಿತು. ಅಷ್ಟು ಹೊತ್ತಿಗೆ ಅದು ಪುನಃ ಬೆಕ್ಕಾಯಿತು. ಇದು ತಲೆಯಾದಾಗ ಇದನ್ನು ಹೊಡೆಯುವುದಕ್ಕೆ ಧೈರ್ಯವಿಲ್ಲ, ಬೆಕ್ಕಾಗಿದೆ ಹೊಡೆಯೋಣ, ಎಂದುಕೊಂಡನು. ಅದು ಆಗಲೆ ತಲೆಯಾಯಿತು. ಪುನಃ ಅದು ಬೆಕ್ಕಾಗುವುದೋ ಇಲ್ಲವೋ ಎಂದು ಅವನು ಯೋಚನೆಯಲ್ಲಿರುವಾಗ ಅದು ಮತ್ತೆ ಬೆಕ್ಕಾಯಿತು.

ಇದನ್ನು ಇನ್ನು ಬಿಡಬಾರದು ಎಂದು ವೆಂಕಟರಾಯ ಸರ್‍ರನೆ ಎದ್ದ. ಎದ್ದು :

ಮಕ್ಕಳು ಗುಂಡಗೆ ಕೂತು ಟೋಪಿ ಆಟ ಎಂತ ಒಂದು ಆಟ ಆಡುತ್ತಾರೆ. ಕೆಲವರು ಗುಂಡಗೆ ಕೂಡುವುದು. ಒಂದು ಬಟ್ಟೆಯನ್ನು ಚೆನ್ನಾಗಿ ಹೊಸೆದು ಹುರಿಮಾಡಿ, ಅದನ್ನು ಒಬ್ಬ ಹುಡುಗನ ಕೈಗೆ ಕೊಡುವುದು. ಅವನು ಅದನ್ನು ಯಾರ ಹಿಂದಾದರೂ ಹಾಕಿ, ಹಾಗೆಯೇ ಸುತ್ತುವುದು. ಅದರಿಂದ ಇವನನ್ನು ಅವನೋ ಅವನನ್ನು ಇವನೋ ಚೆನ್ನಾಗಿ ಹೊಡೆಯುವುದು. ಇದೇ ಆಟ. ಆ ಆಟದಲ್ಲಿ ಚೆನ್ನಾಗಿ ಏಟು ಬೀಳಲಿ ಎಂದು ಬಟ್ಟೆಯನ್ನು ಚೆನ್ನಾಗಿ ಹೊಸೆಯುತ್ತಾರೆ. ವೆಂಕಟರಾಯನಿಗೆ ಈ ಆಟ ಆಡಿ ಆಡಿ ಬಟ್ಟೆಗಳನ್ನು ಚೆನ್ನಾಗಿ ಏಟು ಬೀಳುವಂತೆ ಹೊಸೆದು ಹೊಸೆದು ಹುರಿಮಾಡುವುದು ಅಭ್ಯಾಸ ಉಂಟು.

ವೆಂಕಟರಾಯ ಸರ್‍ರನೆ ಎದ್ದು ತಾನು ಹೊದ್ದುಕೊಂಡಿದ್ದ ಶಾಲುವನ್ನು ತೆಗೆದುಕೊಂಡು ಎರಡಾಗಿ ಮಡಿಸಿ ಚೆನ್ನಾಗಿ ಹುರಿಮಾಡಿದ. ಇಲ್ಲಿ ಹೇಳುವುದಕ್ಕೆ ಇಷ್ಟು ಹೊತ್ತಾದರೂ ಆದದ್ದೆಲ್ಲಾ ಅಲ್ಲಿ ಒಂದು ಅರೆಕ್ಷಣದಲ್ಲಿಯೇ ಆಯಿತು. ಹೊಸೆದ ಶಾಲುವನ್ನು ಎತ್ತಿ, ಸೌದೆ ಸೀಳುವುದಕ್ಕೆ ಕೊಡಲಿಯಲ್ಲಿ ಹಾಕುವ ಏಟು ಹಾಗಿರಲಿ, ಕಲ್ಲನ್ನು ಸೀಳುವುದಕ್ಕೆ ಇಂದ್ರನು ಹಾಕುವ ಸಿಡಿಲ ಏಟಿನಂತೆ ಬಲವಾದ ಏಟುಗಳನ್ನು, ಗುಡುಗುಡು ಎನ್ನುತ್ತಿದ್ದ ಬೆಕ್ಕಿನ ಮೇಲೆ ಗುರಿಯಿಟ್ಟು ಅದು ಆ ಕಡೆ ಈ ಕಡೆ ಕದಲುವುದಕ್ಕಾಗದಂತೆ ರಪರಪರಪನೆ ಅವನು ಸುಮ್ಮನೆ

ಹತ್ತು ಏಟು ಹಾಕಿಬಿಟ್ಟ. ಬೆಕ್ಕು ಮಾಯವಾಯಿತು. ಈ ಏಟಿಗೆ ಬೆಕ್ಕು ಉಳಿಯುವುದೆ? ಬೆಕ್ಕು ಮಾಯವಾಗಿ ತಲೆ ಕಂಡಿತು.

ತಲೆ ಕಂಡದ್ದೇನೋ ನಿಜ. ಆದರೆ ವೆಂಕಟರಾಯನಿಗೆ ಕಿಟಕಿಯಲ್ಲಿ ಕಂಡ ಕರಾಳ ಮುಖದ ಜೋಲು ನಾಲಗೆಯ ಕೋರೆಹಲ್ಲಿನ ತಲೆಯಲ್ಲ. ಕೃಷ್ಣಪ್ಪನವರ ತಲೆ. ಮುಖ, ಕಾರಣವಿಲ್ಲದೆ ಹೆಂಡತಿಯ ಕೈಯಲ್ಲಿ ಮಾತು ಕೇಳಿದವನ ಮುಖದ ಹಾಗೆ ಇತ್ತು; ಗಾಬರಿಯಿಂದ ತುಂಬಿಹೋಗಿತ್ತು.

ಆಗಿದ್ದದ್ದು ಏನೆಂದರೆ; ಮುದುಕ ಊಟಮಾಡಿ ಮಲಗಿಕೊಂಡವನಿಗೆ ಸ್ವಲ್ಪ ಸಾವಕಾಶವಾಗಿ ನಿದ್ರೆ ಹತ್ತಿತ್ತು. ಸ್ವಲ್ಪ ನಿದ್ರೆ ಹತ್ತುತ್ತಲೇ ಗೊರಕೆ ಪ್ರಾರಂಭವಾಯಿತು. ಗೊರಕೆ ನಗುವಿನ ಹಾಗೆ ಅಥವಾ ಅಳುವಿನ ಹಾಗೆ ಆತ್ಮದ ಅವಸ್ಥಾವಿಶೇಷವನ್ನು ಸೂಚಿಸುವ ಒಂದು ಮೃದುಧ್ವನಿ ಎಂದು ನನಗೆ ತೋರುತ್ತದೆ. ಹಸಿದು ಹಸಿದು ಮಕ್ಕಳು ತಿನ್ನುವ ತಿಂಡಿಯನ್ನೆಲ್ಲಾ ನೋಡುತ್ತಿದ್ದು, ಅವರು ಕೊಟ್ಟ ಅಲ್ಪಸ್ವಲ್ಪದಿಂದ ಹಸಿವಾರದೆ, ಒಳಮನೆಯಲ್ಲಿ ಯಜಮಾನಿ ಮರೆತು ಮುಚ್ಚದೆ ಕೆಳಗೆ ಬಿಟ್ಟಿರುವ ತುಂಬಿದ ಹಾಲಿನ ಪಾತ್ರೆಯನ್ನು ಕಂಡು, ತನಗಾಗಿಯೇ ಅದನ್ನು ಇಟ್ಟಿರುವರೆಂದು ಎಣಿಸಿ ಬಹು ಸಂತೋಷದಿಂದ ಹಾಲನ್ನು ಕುಡಿಯುತ್ತಿರುವ ಬೆಕ್ಕು ಗುರುಗುರುಗುರು ಎಂದು ಶಬ್ದಮಾಡುವಂತೆ, ನಮ್ಮ ಆತ್ಮ, ಬಹಳ ಹೊತ್ತು ಬಾರದ ನಿದ್ದೆ ಕೊನೆಗೆ ಬಂದರೆ, ನಿರಂತರ ವಾತಸಂಚಾರದಿಂದ ಶುದ್ಧವಾದ ನಾಸಿಕ ಮಾರ್ಗದಲ್ಲಿ ಈ ಮೃದು ಧ್ವನಿಯನ್ನು ಮಾಡಿ ಗುರು, ಗುರು, ಗುರು, ಗೊರ್, ಗೊರ್, ಗೊರ್ ಎಂದು ತನ್ನ ಶಾಂತತೆಯನ್ನು ಸೂಚಿಸುತ್ತದೆ. (ನಮ್ಮಾಕೆ ಇದನ್ನು ಓದಿ, ನಿಮಗೊಂದು ಹುಚ್ಚು. ಬಾರದ ನಿದ್ರೆ ಬಂದರೇನೇ ಗೊರಕೆ ಹೊಡೆಯುವುದು ಎಂತ ಯಾರು ನಿಮಗೆ ಹೇಳಿದವರು? ಈಗ, ನೀವು ಮಲಗುವುದಕ್ಕೆ ಮೊದಲು ಹಗಲೂ ರಾತ್ರಿ ಇಲ್ಲದೆ ಗೊರಕೆ ಹೊಡೆಯುತ್ತೀರಲ್ಲಾ? ನಿಮಗೆ ಬಾರದ ನಿದ್ರೆಯೇನು? ಎಂದು ಹೇಳಿದರು. ನಾನು ಮಲಗುವುದಕ್ಕೆ ಮೊದಲು ಗೊರಕೆ ಹೊಡೆಯುವುದು ಸುಳ್ಳು; ನನ್ನ ಗೊರಕೆಯನ್ನು ನಾನು ಎಂದೂ ಕೇಳಿದ್ದಿಲ್ಲ. ಅಲ್ಲದೆ ಈ ಪೂರ್ವಪಕ್ಷವನ್ನು ಒಪ್ಪಿದರೆ ನನ್ನ ಈ ವಾಕ್ಯಗಳ ಕಾವ್ಯರಸ ಹೋಗುತ್ತದೆ. ಅದರಿಂದ ಅದಕ್ಕೆ ನಾನು

ಒಪ್ಪುವುದಿಲ್ಲ.) ಕೃಷ್ಣಪ್ಪನವರ ಆತ್ಮ ಈ ರೀತಿಯ ತೃಪ್ತಿಯನ್ನು ಗೊರಕೆಯಿಂದ ಸೂಚಿಸುತ್ತಿತ್ತು. ಆದರೆ ಹಾಲಿನ ಪಾತ್ರೆಯಿಂದ ಹಾಲನ್ನು ಕುಡಿಯುತ್ತಿರುವ ಬೆಕ್ಕನ್ನು ಕಂಡರೆ ಯಜಮಾನಿ ಖತಿಗೊಂಡು ಕಟ್ಟಿಗೆಯಿಂದ ಹೊಡೆಯುವಳಷ್ಟೆ? ಹಾಗೆಯೇ ಇಲ್ಲಿ ಸಾಮ್ಯ ಪೂರ್ತಿಯಾಗುವಂತೆ ವೆಂಕಟರಾಯ ಶಾಲುವಿನಿಂದ ಕೃಷ್ಣಪ್ಪನವರ ತಲೆಯನ್ನು ಅದು ಬೆಕ್ಕಾಗಿ ಬಂದ ಪಿಶಾಚವೆಂದು ತಿಳಿದು ಚೆನ್ನಾಗಿ ಮರ್ದನಮಾಡಿದನು.

ಕೃಷ್ಣಪ್ಪನವರು ಮುದುಕರು. ಆದರೂ ಏಟುಗಳು ಹೀಗೆ ಮಳೆಗರೆಯುತ್ತಲೇ ಯಾವ ಹುಡುಗನಿಗೂ ಇಲ್ಲದ ಚಟುವಟಿಕೆಯನ್ನು ಎಲ್ಲಿಂದಲೋ ಪಡೆದು ಸರ್ರನೆ ಎದ್ದರು. ಏಳುವುದು ಸ್ವಲ್ಪ ಕಷ್ಟವಾಯಿತು. ಆದರೂ, ಎದ್ದರು. ಎದ್ದು ಸ್ವಲ್ಪ ಚೇತರಿಸಿಕೊಂಡು, ಅಯ್ಯಾ, ಅಯ್ಯಾ, ಯಾಕಪ್ಪ, ಯಾಕಪ್ಪ ಎಂದು ವೆಂಕಟರಾಯನನ್ನು ಕೇಳಿದರು. ಗಟ್ಟಿಯಾಗಿಯೇ ಕೂಗಿ ಕೇಳಿದರು. ಈ ಶಬ್ದದಿಂದೆಲ್ಲಾ ಶ್ರೀನಿವಾಸರಾಯರೂ ಎದ್ದರು.

ವೆಂಕಟರಾಯನೂ ಸ್ವಲ್ಪ ಕಷ್ಟಪಟ್ಟಿದ್ದ ನೋಡಿ. ಈ ಏಟುಗಳಿಗೆ ಎಲ್ಲಾದರೂ ಒಂದು ದೊಡ್ಡ ಸೌದೆಯ ತುಂಡನ್ನು ಸುಲಭವಾಗಿ ಸೀಳಬಹುದಾಗಿತ್ತು. ಅವನು ನಡೆಸಿದ್ದ ಕಾರ್ಯ ಆಯಾಸಕರವಾದದ್ದು. ಇದರಿಂದ ವೆಂಕಟರಾಯನಿಗೆ ನಿದ್ದೆ ಎಲ್ಲಾ ಹೋಗಿತ್ತು. ಆದರೆ ಸಮಾಚಾರವನ್ನೆಲ್ಲಾ ನೋಡಿ, ಹೊಡೆದದ್ದೇನೋ ಆಗಿಹೋಯಿತು, ಇನ್ನು ಮಾತಾಡಿದರೆ ಮಾನವಲ್ಲವೆಂದು — ಎಷ್ಟಾದರೂ ಸೂಕ್ಷ್ಮಬುದ್ಧಿ ನೋಡಿ!— ತಿಳಿದುಕೊಂಡು ಅವನು ಸ್ವಸ್ಥವಾಗಿ ಮಲಗಿ ತನ್ನ ಶಾಲುವನ್ನು ಬಿಚ್ಚಿ ಸರಿಯಾಗಿ ಹೊದ್ದುಕೊಂಡು ಅರ್ಧ ನಿಮಿಷದಲ್ಲಿ ನಿದ್ದೆ ಬಂದವನ ಹಾಗಾದನು.

ಕೃಷ್ಣಪ್ಪನವರು ತಲೆ ಮೂಗು ಎಲ್ಲವನ್ನು ಮುಟ್ಟಿನೋಡಿಕೊಂಡರು. ಏಟು ಪೂರಾ ಬಿದ್ದಿದ್ದರೂ ಎಲ್ಲವೂ ಸರಿಯಾಗಿದ್ದವು; ಇದೇಕೆ ಹೀಗಾಯಿತು, ಎಂದು ಯೋಚನೆಮಾಡಿದರು. ಹುಡುಗನಿಗೆ ಹುಚ್ಚಿರಬಹುದೆ? ಹ್ಯಾಗೋ ಬಲ್ಲವರಾರು? ಇಲ್ಲವೆ, ಸಾಯಂಕಾಲ ಸಹಸ್ರನಾಮವನ್ನು ಹೇಳುವುದನ್ನು ಮರೆತೆ, ಇದರಿಂದ ಹೀಗಾಗಿರಬಹುದು, ಎಂದುಕೊಂಡು ಪುನಃ ಮಲಗಿ ನಿದ್ದೆಹೋದರು.

ಹುಡುಗಿಯನ್ನು ಕೊಡುವುದೇ ಬಿಡುವುದೇ ಎಂದು ಮಾತು ಬಂದಾಗ ಕೃಷ್ಣಪ್ಪನವರು ಅರ್ಧರಾತ್ರಿಯಲ್ಲಿ ತಮಗೆ ಆದದ್ದನ್ನು ಹೇಳಿ, ಹುಡುಗ ಹುಚ್ಚ ಇರಬಹುದು, ಜೋಕೆ, ಎಂದು ಹೇಳಿದರಂತೆ. ಅದರಿಂದ ಅಡ್ಡಿ ಆಗಲಿಲ್ಲ. ಮದುವೆಯಾಯಿತು; ಮೊನ್ನೆ ಪಂಚಮಿಯ ದಿನ ಪ್ರಸ್ತವೂ ಆಯಿತು. ಪ್ರಸ್ತದ ದಿನ ನಾನೂ ಕೃಷ್ಣಪ್ಪನವರೂ ಒಂದು ಕಡೆ ಕುಳಿತಿದ್ದೆವು. ಅವರು "ನಾವು ಯಾರಾದರೂ ಪ್ರಸ್ತದ ಮನೆಯ ಬಳಿ ಮಲಗುವುದು ಮೇಲು" ಎಂದರು. "ಏಕೆ" ಎಂತ ನಾನು ಕೇಳಿದೆ. "ರಾತ್ರಿ ಎಲ್ಲಾದರೂ ಹುಡುಗಿಯನ್ನು ಹುಡುಗ ಹೊಡೆಯು ವುದಕ್ಕೆ ಪ್ರಾರಂಭಿಸಿದರೆ ಏನು ಮಾಡುವುದು" ಎಂದರು. ನನಗೆ ವೆಂಕಟರಾಯ ಸಮಾಚಾರವೆಲ್ಲವನ್ನೂ ಹೇಳಿದ್ದ. ಆದರೂ ಇವರನ್ನು "ಅದೇಕೆ ಹಾಗೆ ಹೇಳುವಿರಿ" ಎಂದು ಕೇಳಿದೆ. ಅವರೂ ಎಲ್ಲವನ್ನೂ ಹೇಳಿದರು. ಅದಕ್ಕೆ ನಾನು "ಅಯ್ಯೋ ಕೃಷ್ಣಪ್ಪನವರೇ, ನಮ್ಮನ್ನ ನಿಮ್ಮನ್ನ ಹೊಡೆದ ಮಾತ್ರಕ್ಕೇ ಕೈಹಿಡಿದ ಹೆಂಡತಿಯನ್ನ ಹೊಡೆಯು ತ್ತಾರೆಯೆ? ಬೀದೀಲಿ ಹೋಗುವ ನಾಯನ್ನ ಹೊಡೆದರು ಅಂದರೆ ಮನೆಯಲ್ಲಿ ಸಾಕಿದ ಗಿಣಿಯನ್ನು ಹೊಡೆಯುವರೆ?" ಎಂದೆ. "ಹ್ಯಾಗೋ ಸಹಾಯಕ್ಕೆ ಹತ್ತಿರ ಇದ್ದರೆ ಒಳ್ಳೆಯದು" ಎಂದು ಕೃಷ್ಣಪ್ಪನವರು ಹೇಳಿದರು. "ನಿಮ್ಮ ನಮ್ಮ ಸಹಾಯ ಈಗ ಬೇಕಾಗಿಲ್ಲ, "ಸುಮ್ಮನಿರಿ" ಎಂದು ನಾನು ಧೈರ್ಯ ಹೇಳಿದೆ. ಅವರು ಸುಮ್ಮನಾದರು.

ಮಾರನೆಯ ದಿನ ವೆಂಕಟರಾಯ ಅವನ ಹೆಂಡತಿ ಇಬ್ಬರೂ ನಮ್ಮ ಮನೆಗೆ ಬಂದಿದ್ದರು. ನಮ್ಮಾಕೆಯ ಮಾತಿಗೆ ಸಮಾನ ಮಾತಿಲ್ಲ, ನೋಡಿ. ಅವರು ವೆಂಕಟರಾಯನನ್ನು "ಏನೋ ಯಂಟೀ, ನಿನ್ನ ಹೆಂಡತೀನ ನೀನು ಹೊಡೀತೀಯಾ?" ಎಂದರು. ಗಂಡ ಹೆಂಡತಿ ಒಬ್ಬರ ಮುಖವನ್ನು ಒಬ್ಬರು ನೋಡಿ ಮುಗುಳುನಗೆ ನಕ್ಕರು. ನೋಡಿದರೆ ಒಬ್ಬರನ್ನೊಬ್ಬರು ಹೊಡೆಯುವಂತೆ ತೋರಲಿಲ್ಲ. ಮಿತಿಯಿಲ್ಲದೆ ಪ್ರೀತಿಸು ವಂತೆ ತೋರಿತು.

ಇನ್ನಪ್ಪಣೆಯೆ?

# ಒಂದು ಹಳೆಯ ಕತೆ

ಆಷಾಢಮಾಸದ ಪೌರ್ಣಿಮೆಯ ಸಮೀಪದ ಒಂದು ದಿನದಲ್ಲಿ ಸಂಜೆಯ ಸಮಯ. ಸೂರ್ಯನು ಹಗಲೆಲ್ಲಾ ಕಾದು ಮೋಡದ ಹಿಂದೆ ಅವಿತು ಅವಿತು ಆಟವಾಡಿ ಸೋತು ಪಶ್ಚಿಮ ದಿಕ್ಕನ್ನು ಸೇರಿದ್ದನು. ಮೋಡಗಳು ಗಾಳಿಗೆ ಸಿಕ್ಕಿ ಆಕಾಶದಲ್ಲೆಲ್ಲಾ ಹರಡಿ ನಾಲ್ಕು ದಿಕ್ಕುಗಳಲ್ಲಿ ಎಲ್ಲಾದರೂ ಇದರಿಂದ ತಪ್ಪಿಸಿಕೊಳ್ಳಲಾದೀತೋ ಎಂದು ಎಲ್ಲಾ ಕಡೆಯೂ ಅಲೆದಾಡುತ್ತಿರುವಂತೆ ಕಾಣುತ್ತಿದ್ದುವು. ಕುರಿಯ ಮಂದೆ ಯನ್ನು ಬರಿಯ ಆಟಕ್ಕೆ ಚಲ್ಲಾಪಿಲ್ಲಿಯಾಗಿ ಓಡಿಸುವ ಹುಡುಗನಂತೆ ಗಾಳಿ ದಿನವೆಲ್ಲಾ ಸ್ವಲ್ಪ ಸುಮ್ಮನಿರುತ್ತಾ ಸ್ವಲ್ಪ ಆರ್ಭಟಮಾಡುತ್ತಾ ಇವುಗಳೊಡನೆ ಆಡುತಲಿದ್ದು ಸೋತು ಸಂಜೆಯಾಯಿತೆಂದು ಈಗ ಸುಮ್ಮನಾಗಿತ್ತು. ಈಗ ಆಟ ಗೀಟಕ್ಕೆ ಬೇಕಾದ ಉತ್ಸಾಹವಿಲ್ಲದೆ ಮೃದುವಾಗಿ ನದೀತೀರದ ದೊಡ್ಡ ಮರಗಳ ನಡುವೆ ಹಾಯುತ್ತಾ ಎಲ್ಲ ರಿಗೂ ಶಾಂತಿಯನ್ನು ಬೀರುವಂತಿತ್ತು. ಸೂರ್ಯನೂ, ಇಷ್ಟು ಹೊತ್ತೂ ಆಟವೇ ಆಯಿತು, ಇನ್ನಾದರೂ ಸ್ವಲ್ಪ ಕೆಲಸಮಾಡೋಣವೆಂದನೆಂಬಂತೆ ಮೋಡಗಳಿಂದ ಸ್ವಲ್ಪ ಬಿಡುಗಡೆಯನ್ನು ಹೊಂದಿ ಕರ್ಮಸಾಕ್ಷಿತ್ವಕ್ಕೆ ಸಲಕರಣೆಯಾದ ಮೊನೆಯಾದ ಕಿರಣಗಳ ರಾಜಿಯಿಂದ ಪ್ರಪಂಚದ ಎಲ್ಲಾ ಕಡೆಗಳನ್ನೂ ಪ್ರವೇಶಿಸಿ ನೋಡುತ್ತಾ ಎಲ್ಲಕ್ಕೂ ತನ್ನ ಪ್ರಭೆಯ ಸೌಂದರ್ಯವನ್ನು ಕೊಟ್ಟಿದ್ದನು. ಗಾಳಿಯೂ ಗಂಭೀರ. ಸೂರ್ಯನೂ ಗಂಭೀರ. ಕರ್ತವ್ಯದಲ್ಲಿ ಉನ್ಮುಖರಾಗಿದ್ದುದರಿಂದ ಇಬ್ಬರೂ ಶಾಂತರು. ನದಿಯ ತೀರದ ತೋಪು ಪ್ರಣವದಿಂದ ಬ್ರಹ್ಮಾಂಡದಂತೆ ಮರ್ಮರ ಶಬ್ದ ದಿಂದ ವ್ಯಾಪ್ತವಾಗಿತ್ತು. ನದಿಯ ನೀರು ಸಣ್ಣದಾಗಿದ್ದಾಗ ದಾರಿಯಲ್ಲಿ ಸಿಕ್ಕಿದ ಕಲ್ಲುಗಳೊಡನೆಯೆಲ್ಲಾ ಸಣ್ಣಕಲ್ಲು ದೊಡ್ಡಕಲ್ಲು ಎಂಬ ವಿವೇಚನೆಯಿಲ್ಲದೆ ಆಟವಾಡುತ್ತಿದ್ದದ್ದು ಈಗ ದೊಡ್ಡದಾದುದರಿಂದ ಗಾಂಭೀರ್ಯವನ್ನು ಸಂಪಾದಿಸಿಕೊಂಡಿದ್ದಿತು. ಆಗಲೂ ಅದು ಸಾಗರದ ಕಡೆ ಹೋಗುತ್ತಿತ್ತು. ಆದರೂ ಆ ಪ್ರಯಾಣದಲ್ಲಿಯೇ ನಿರತವಾಗಿರಲಿಲ್ಲ. ಈಗ ಅದು ಸರ್ವದಾ ಕರ್ತವ್ಯದಲ್ಲಿ ಉನ್ಮುಖಿ. ಆದರೆ ದೊಡ್ಡವಳಿಗೆ

ಬೇಕಾದ ಗಾಂಭೀರ್ಯವನ್ನು ಪಡೆದಿದ್ದರೂ ಸ್ವಲ್ಪ ಆಟ ಬೇಡವೆ? ಅಲ್ಲಲ್ಲಿ ಒಂದೊಂದು ಸುತ್ತು ಹಾಕುವುದು, ಸ್ವಲ್ಪ ಕುಣಿಯುವುದು, ಮೃದು ಮೃದುವಾಗಿ ಧ್ವನಿಮಾಡುವುದು. ಈ ನದಿಯ ಮೇಲೂ ನದೀ ತೀರದ ತೋಪಿನ ಮೇಲೂ ದೂರದಲ್ಲಿ ಕಾಣುತ್ತಿದ್ದ ಒಂದು ಊರಿನ ಮೇಲೂ ಬಿದ್ದ ಸೂರ್ಯ ಕಿರಣವು ಶಾಂತವಾದ ಆ ಗ್ರಾಮವನ್ನೂ ಗ್ರಾಮವಾಸಿಗಳನ್ನೂ ಮುಂದೆಯಿಂದ ಬರುತ್ತಿದ್ದ ತುಂಬಿದ ದನಕರುಗಳನ್ನೂ ತಾಯಿಗಾಗಿ ಕೂಗುತ್ತಿದ್ದ ಸಣ್ಣ ಕರುಗಳನ್ನೂ ನೋಡಿ ಇದೆಲ್ಲದರ ಸೌಂದರ್ಯಕ್ಕೂ ತನ್ನ ತೇಜಸ್ಸಿನಿಂದ ಇದೆಲ್ಲಕ್ಕೂ ಉಂಟಾದ ಒಂದು ಸೊಗಸಿಗೂ ಮನಸೋತು ಅಲ್ಲಿ ಇರಲೂ ಆರದೆ ಅದನ್ನು ಬಿಡಲೂ ಆರದೆ ಸಂದೇಹದಲ್ಲೇ ಕೊನೆಗಾಣುತ್ತಿತ್ತು. ಪ್ರಪಂಚವೆಲ್ಲಾ ಶಾಂತಿಯಿಂದ ತುಂಬಿದಂತಿತ್ತು.

ಇದನ್ನೆಲ್ಲಾ ನೋಡುತ್ತ ಆ ಶಾಂತಿಯು ತುಂಬಿದ ಸೌಖ್ಯವನ್ನು ಅನುಭವಿಸುತ್ತ ನದೀತೀರದ ಈ ಮಠದಲ್ಲಿ ದರ್ಭಾಸನದ ಮೇಲೆ ಒಬ್ಬ ಸನ್ಯಾಸಿ ಕುಳಿತಿದಾನೆ. ಆತನಿಗೆ ಅಷ್ಟೇನೂ ವಯಸ್ಸಾಗಿಲ್ಲ; ನಲವತ್ತೈದು ವರುಷ ಇರಬಹುದು. ಮುಖ ತೇಜಸ್ಸಿನಿಂದ ಕೂಡಿದೆ; ಹಣೆಯ ತುಂಬ ವಿಭೂತಿ. ಎರಡೂ ಸೇರಿ ಆ ಮುಖ ಪಕ್ಕದಲ್ಲಿಟ್ಟಿದ್ದ ಅಗ್ನಿಷ್ಟಿಕೆಯಲ್ಲಿಯ ಸ್ವಲ್ಪ ಬೂದಿ ಮುಚ್ಚಿದ ಕೆಂಡದಂತೆ ಕಾಣುತ್ತದೆ. ಸನ್ಯಾಸಿ ಕಾವೀ ಶಾಠಿಯನ್ನು ಹೊದ್ದುಕೊಂಡಿದಾನೆ. ಗಾಳಿಗೂ ಸೂರ್ಯನಿಗೂ ಹುಡುಗಾಟ ಮುಗಿದ ಮೇಲೆ ಗಾಂಭೀರ್ಯ ಬಂದಿತ್ತು. ಎಲ್ಲರಿಗೂ ಹೀಗೆಯೇ. ಈತನಿಗೆ ಹುಡುಗಾಟವೇ ಇದ್ದಿರಲಿಲ್ಲ. ಶ್ರೋತ್ರಿಯನಾದ ತಂದೆಯ ಮಗನಾದ್ದರಿಂದಲೂ ಮೊದಲಿಂದ ಸೂಕ್ಷ್ಮ ಬುದ್ಧಿಯನ್ನು ತೋರಿದ್ದುದರಿಂದಲೂ ಇವನನ್ನು ಇವನ ಗುರು ಚಿಕ್ಕಂದಿನಲ್ಲೇ ಕರೆತಂದು ಆಶ್ರಮವನ್ನು ಕೊಟ್ಟು, ಅಷ್ಟಾಂಗಯೋಗವನ್ನು ಹೇಳಿಕೊಟ್ಟು ತನಗೆ ತಕ್ಕ ಶಿಷ್ಯನಾಗುವನೆಂದು ತರಪೇತುಮಾಡಿದನು. ಆದ್ದರಿಂದ ಬುದ್ಧಿ ಬಂದಂದಿನಿಂದ ಈತನಿಗೆ ದೊಡ್ಡವರ ಕರ್ತವ್ಯವಾದ ಕೆಲಸಕ್ಕೆ ಹೊರತು ಚಿಕ್ಕವರ ಕರ್ತವ್ಯವಾದ ಆಟಕ್ಕೆ ಅವಕಾಶವಿಲ್ಲದೆ ಹೋಯಿತು. ಗುರುವಿನ ಅನಂತರ ಈತನು ಮಠದ ಸ್ವಾಮಿಯಾದನು. ಗುರು ಬಹು

ಶ್ರೇಷ್ಠನು. ಶಿಷ್ಯನು "ಯಾವುದರಲ್ಲೂ ಅವರು ಹಾಕಿದ ಪಂಕ್ತಿಯನ್ನು ಅನುಸರಿಸಬೇಕು. ಆ ಹೆಸರಿಗೆ ಅಪಕೀರ್ತಿ ತರಬಾರದು" ಎಂದು ನಡೆಯುತ್ತಾ ಈ ಜನ್ಮದಲ್ಲೇ ನಿಜವಾದ ಶಾಂತಿಯನ್ನು ಸಂಪಾದಿಸಿದ್ದನು. ನಿಷ್ಕೃಷ್ಟವೂ ನಿಷ್ಕಲ್ಮಷವೂ ಆದ ಜೀವನಪಥ ಉಳ್ಳವರಿಗೆ ಈ ಶಾಂತಿ ಬರುವುದು ಸುಲಭ. ಇಂದು ಸನ್ಯಾಸಿ ಆ ನಿಷ್ಕೃಷ್ಟವಾದ ನಿಷ್ಕಲ್ಮಷವಾದ ತನ್ನ ಜೀವನದ ಫಲವನ್ನು ಅನುಭವಿಸುತ್ತಾ ಆ ಶಾಂತವಾದ ಪ್ರಪಂಚದಲ್ಲಿ ಶಾಂತವಾದ ತನ್ನ ತನುಮನಗಳನ್ನು ಹೊಂದಿಸಿ ಅದರಿಂದುಂಟಾದ ಅವರ್ಣನೀಯವಾದ ಸುಖದಲ್ಲಿ ಲೀನವಾಗಿದ್ದಾನೆ.

ಮಠದ ಒಳಗಿನಿಂದ ಒಬ್ಬ ಶಿಷ್ಯನು ಬಂದು "ಸ್ವಾಮಿ, ಎಲ್ಲಾ ಪ್ರತಿಗಳನ್ನೂ ತಿದ್ದಿದೆ" ಎಂದನು.

ಸನ್ಯಾಸಿ "ಸರಿ" ಎಂದನು.

ಪ್ರಕೃತಿಯ ಸೌಂದರ್ಯಕ್ಕೆ ಮನಸ್ಸು ಕೊಟ್ಟು ಎಲ್ಲಾ ಯೋಚನೆಯನ್ನೂ ಮರೆತಿದ್ದ ಸನ್ಯಾಸಿ ಮಧ್ಯಾಹ್ನದಿಂದ ಬಾಧಿಸುತ್ತಿದ್ದ ಒಂದು ಯೋಚನೆಗೆ ಹಿಂತಿರುಗಿದನು. ತಾನು ಮಾಡಿದ ಯಾವುದನ್ನೇ ಆಗಲಿ ಕುರಿತು ಯೋಚನೆ ಮಾಡುವುದು ಸನ್ಯಾಸಿಯ ದಿನಚರ್ಯೆಯಲ್ಲಿ ಸೇರಿರಲಿಲ್ಲ. ಆದರೆ ಇಂದು ಒಂದು ವಿಶೇಷ ಸಂಗತಿ ನಡೆದಿತ್ತು. ಅವನು ಅಂದು ಎಂದಿನಂತೆ ಶಾರದೆಯ ಪೂಜೆಯನ್ನು ಮಾಡಿ ಮಿತವಾದ ಆಹಾರವನ್ನು ಭುಜಿಸಿ ಎಲ್ಲಾ ಶಿಷ್ಯರಿಗೂ ಒಟ್ಟಾಗಿ ಹೇಳುವ ಪಾಠವನ್ನು ಹೇಳಿ ಮುಗಿಸಿದನು. ಆಮೇಲೆ ಶೇಷನ ಪಾಠ. ತನ್ನ ಅನಂತರ ತನ್ನ ಗುರುಗಳ ಮನಸ್ಸಿಗೆ ಒಪ್ಪಬಹುದಾಗಿದ್ದ ಒಬ್ಬನನ್ನು ಆ ಪೀಠಕ್ಕೆ ತರಬೇಕೆಂದು ಸನ್ಯಾಸಿ ಬಹು ಒಳ್ಳೆಯ ಒಬ್ಬ ಬ್ರಹ್ಮಚಾರಿಯನ್ನು ಹುಡುಕಿ ತಂದು ಮಠದಲ್ಲಿರಿಸಿಕೊಂಡು ಪಾಠ ಹೇಳುತ್ತಿದ್ದನು. ಈ ಬ್ರಹ್ಮಚಾರಿಯೇ ಶೇಷ. ದಿನವೂ ಮಿಕ್ಕ ಎಲ್ಲರ ಪಾಠವೂ ಆದ ಮೇಲೆ ಶೇಷನ ಪಾಠ. ಇಂದು ಮಧ್ಯಾಹ್ನ ಪಾಠದಲ್ಲಿ ಶೇಷನು ಒಂದು ಪುಸ್ತಕವನ್ನು ಹಿಡಿದು ಇದಿರಿಗೆ ಕುಳಿತುಕೊಂಡನು. ಶಿಷ್ಯನು ಶ್ಲೋಕವನ್ನೂ ವ್ಯಾಖ್ಯಾನವನ್ನೂ ಓದುವುದು, ಗುರು ಕೇಳುತ್ತಾ ಇದ್ದು ನಡುವೆ

ಅಲ್ಲಲ್ಲಿ ಏನಾದರೂ ಒಂದೊಂದು ಮಾತನ್ನು ಹೇಳುವುದು, ಇದು ವಾಡಿಕೆ. ಶಿಷ್ಯನು ಗ್ರಂಥದಿಂದ ಒಂದು ವಾಕ್ಯವನ್ನು ಓದಿದನು. "ಯಾವ ವೃದ್ಧನನ್ನೇ ಆಗಲಿ, ಯಾವ ಜ್ಞಾನಿಯನ್ನೇ ಆಗಲಿ, ಯಾವ ಸನ್ಯಾಸಿಯನ್ನೇ ಆಗಲಿ, ಸ್ತ್ರೀರೂಪು ನಿಜವಾಗಿಯೂ ಸೆಳೆಯಬಲ್ಲದು." ಗುರು ಈ ವಾಕ್ಯವನ್ನು ಕೇಳಿ "ಸರಿ, ಈ ಶ್ಲೋಕ ಬಂತೋ? ವ್ಯಾಸರ ಮಾತು. ಎಷ್ಟು ಸಲ ಮನಸ್ಸು ಸೋತಿತ್ತೊ! ತಾನು ವೃದ್ಧನೂ ಹೌದು; ಜ್ಞಾನಿಯೂ ಹೌದು; ಸನ್ಯಾಸಿಯ ಮಾತನ್ನು ಇವರು ಏನು ಬಲ್ಲರು" ಎಂದು, ಸ್ವಲ್ಪ ಯೋಚಿಸಿ, "ತಿದ್ದು, ಆ ಮಾತನ್ನು ಸರಿಮಾಡು. ಯಾವ ವೃದ್ಧನನ್ನೇ ಆಗಲಿ ಯಾವ ಜ್ಞಾನಿಯನ್ನೇ ಆಗಲಿ ಸ್ತ್ರೀರೂಪು ಸೆಳೆಯಬಲ್ಲದು; ಸನ್ಯಾಸಿಯನ್ನು ಸೆಳೆಯಲಾರದು" ಎಂದು ಬರೆ ಎಂದು ಹೇಳಿದನು. ಶಿಷ್ಯನು ಹೆದರಿ "ಸ್ವಾಮಿ, ವ್ಯಾಸ ವಾಕ್ಯವನ್ನು.." ಎಂದನು. ಗುರು ಸ್ವಲ್ಪ ಕೋಪದಿಂದ "ನೀನು ಕಾಣೆ, ಯಾರಾದರೂ ತಮಗೆ ತಿಳಿದ ಮಾತನ್ನು ಹೇಳಬಹುದು. ತಿಳಿಯದ ಮಾತನ್ನು ಹೇಳಕೂಡದು. ಸನ್ಯಾಸಿಯ ಮಾತು ವ್ಯಾಸರಿಗೆ ತಿಳಿಯದು," ಎಂದನು. ಶಿಷ್ಯನು ತಿದ್ದಿದನು. "ಭಂಡಾರದಲ್ಲಿರುವ ಇತರ ಪ್ರತಿಗಳಲ್ಲೂ ಹೀಗೆಯೇ ತಿದ್ದು" ಎಂದು ಶಿಷ್ಯನಿಗೆ ಅಪ್ಪಣೆಮಾಡಿ ಸನ್ಯಾಸಿ ಅಂದು ಪಾಠವನ್ನು ಮುಗಿಸಿದನು.

ಇದನ್ನೇ ಎಲ್ಲಾ ಪ್ರತಿಗಳಲ್ಲೂ ತಿದ್ದಿದೆನೆಂದು ಸಂಜೆಯಲ್ಲಿ ಶಿಷ್ಯನು ಬಂದು ಗುರುವಿಗೆ ಹೇಳಿದ್ದು. ವ್ಯಾಸನ ಗ್ರಂಥವನ್ನು ತಿದ್ದಿಸಿದ್ದು ಸರಿಯೋ ಎಂದು ಗುರು ಮಧ್ಯಾಹ್ನವೆಲ್ಲಾ ಯೋಚಿಸುತ್ತಿದ್ದನು. ಈಗ ಶಿಷ್ಯನ ಮಾತಿನಿಂದ ಅದೇ ಪ್ರಶ್ನೆ ಪುನಃ ಬಂದು ತಾನು ಮಾಡಿದ್ದು ಸರಿಯೆ ಎಂದು ಮತ್ತೆ ಯೋಚನೆ ಮಾಡಲಾರಂಭಿಸಿದನು. ಎಷ್ಟೆಷ್ಟು ಯೋಚಿಸಿದರೂ ಅದು ತಪ್ಪೆಂದು ತೋರಲಿಲ್ಲ. ಇದು ತನ್ನ ಅನುಭವ ಒಂದರಲ್ಲೇ ಅಲ್ಲ. ತನ್ನ ಗುರುವಿನ ಅನುಭವದಲ್ಲೂ ಹೀಗೆ ಇದ್ದಿರಬೇಕು. ಸನ್ಯಾಸಿ ತಾನು ಶಿಷ್ಯನಾಗಿ ಇದೇ ಗ್ರಂಥವನ್ನು ಗುರುವಿನ ಬಳಿಯಲ್ಲಿ ಓದುತ್ತಿದ್ದಾಗ ನಡೆದದ್ದನ್ನು ಜ್ಞಾಪಕ ಮಾಡಿಕೊಂಡನು. ಆಗ ತಾನು ಈ ಶ್ಲೋಕವನ್ನು ಓದಿ ಸ್ವಲ್ಪ ನಾಚಿಕೊಂಡು ಧ್ವನಿಯನ್ನು ತಗ್ಗಿಸಿದನು.

ಗುರು ಏನನ್ನೂ ಹೇಳದೆ ಇದ್ದುದನ್ನು ನೋಡಿ ಇವನು ಸುಮ್ಮನಿದ್ದನು. ಗುರು ಮುಂದಕ್ಕೆ ಓದು ಎಂದನು. ಆ ಪಾಠ ಮುಗಿದ ಮೇಲೆ ತಾನು ಗುರುವನ್ನು ಕುರಿತು "ಇದೇಕೆ ವ್ಯಾಸರು ಹೀಗೆ ಹೇಳಿರುವರು" ಎಂದು ಕೇಳಿದ್ದಕ್ಕೆ ಅವರು "ಅದು ತಪ್ಪಲ್ಲ, ಸ್ತ್ರೀಜನ್ಮ ಹೀನವೆಂದು ಹೇಳುವೆ ವಾದರೂ ಸ್ತ್ರೀಯ ಆತ್ಮ ಪುರುಷನ ಆತ್ಮಕ್ಕಿಂತ ಹೆಚ್ಚು ಸಂಸ್ಕೃತವಾದು ದೆಂಬುದರಲ್ಲಿ ಸಂದೇಹವಿಲ್ಲ. ಉತ್ತಮವಾದುದನ್ನು ಕಂಡು ಉತ್ತಮ ವಲ್ಲದುದು ಅದರ ಕಡೆ ತಿರುಗುವುದು ಸ್ವಭಾವ. ಸೆಳೆಯುವುದೆಂದರೆ ಇದೇ ಅರ್ಥ. ಅಯಸ್ಕಾಂತ ಶಿಲೆಯನ್ನು ಕಂಡ ಕಬ್ಬಿಣ ಅದರ ಕಡೆ ತಿರುಗುವುದು. ಸ್ತ್ರೀ ಅಯಸ್ಕಾಂತದಂತೆ. ಪುರುಷನು ಕಬ್ಬಿಣದಂತೆ. ಕಬ್ಬಿಣ ದೋಷವುಳ್ಳದ್ದಾದರೂ ದೋಷವಿಲ್ಲದೆ ಬಹು ಶುದ್ಧವಾದದ್ದಾದರೂ ಅಯಸ್ಕಾಂತದ ಕಡೆ ತಿರುಗುವುದು. ಪುರುಷನೂ ಎಷ್ಟು ಶ್ರೇಷ್ಠನಾದರೂ ಸ್ತ್ರೀಯ ಕಡೆ ತಿರುಗುವನು. ಆಕರ್ಷಣವಿದ್ದರೂ ಅದು ನಿರ್ದುಷ್ಟ ವಾದುದಿರಬಹುದು" ಎಂದನು. ಈ ಅರ್ಥದಿಂದ ಯುಕ್ತಿ ಒಪ್ಪಿದರೂ ಚಿತ್ತ ಒಪ್ಪಲಿಲ್ಲ. ತಾನು ಆಗ ಅತೃಪ್ತನಾಗಿ ಆ ಮಾತನ್ನು ಅಲ್ಲಿಗೇ ಬಿಟ್ಟಿದ್ದನು. ಒಟ್ಟಿನಲ್ಲಿ ತನ್ನ ಗುರು ಹೇಳಿದ ಮಾತಿನಿಂದ ತನ್ನ ಗುರುವಿನ ಮನಸ್ಸು ಸ್ತ್ರೀಗೆ ಸೋತಿರಲಿಲ್ಲವೆಂದು ತೋರಿತ್ತು. ಅಲ್ಲದೆ ತಾನು ಕಂಡ ಹಾಗೆಯೇ ಗುರುವಿನ ಚೇತನ ಬಹಳ ನಿರ್ಮಲವಾದುದು. ಆತನು ಸಮಾಧಿಯಲ್ಲಿ ಆ ಪವಿತ್ರ ದೇಹವನ್ನು ನೀಗಿದನು. ಅವನ ನಂತರ ತಾನು ಪೀಠಕ್ಕೆ ಬಂದಿದ್ದನಷ್ಟೆ. ಮರೆಮಾಚಬೇಕಾದದ್ದೇನೂ ಇಲ್ಲ. ಯಾವಾಗಲೂ ತನ್ನ ಮನಸ್ಸು ಸ್ತ್ರೀರೂಪಿಗೆ ಸೋತದ್ದಿಲ್ಲ. ತಾನು ಚಿಕ್ಕ ಹುಡುಗನಾಗಿದ್ದಂದಿನಿಂದ ಮೊದಲು ಇದುವರೆಗೆ ಅನೇಕ ಹೆಂಗಸರನ್ನು ನೋಡಿದ್ದನು. ಮೊದಲು ತನ್ನ ತಾಯಿ. ಆ ಗಾಂಭೀರ್ಯವೋ ಆ ಸೌಂದರ್ಯವೋ. ತಾನು ಈಗ ದಿನವೂ ಕುಳಿತು ಪೂಜೆಮಾಡುವ ಶಾರದಾಂಬೆಯ ವಿಗ್ರಹದಲ್ಲಿ ಆ ಗಾಂಭೀರ್ಯವೂ ಆ ಸೌಂದರ್ಯವೂ ಕಾಣುತ್ತಿದ್ದುವು. ಆಕೆ ಬಹಳ ಸುಂದರಿಯಾಗಿದ್ದರು. ತನ್ನ ಅಕ್ಕತಂಗಿಯರು ಚೆಲುವೆಯರಾದ ಹುಡುಗಿಯರು; ಚೆಲುವೆಯ ರಾದ ಹೆಂಗಸರು. ನಾಲ್ಕು ಜನವೂ ಮಕ್ಕಳು ಮರಿಗಳನ್ನು ಹೆತ್ತು ತೀರಿ

ಹೋಗಿದ್ದರು. ತಾನು ಅವರ ಸೌಂದರ್ಯವನ್ನು ನೋಡಿದ್ದನು. ಈತನು ಇನ್ನೂ ಚಿಕ್ಕವನಾಗಿದ್ದಾಗ ಒಂದು ಸಲ ಮೆರವಣಿಗೆಯಲ್ಲಿ ಉತ್ಸಾಹಿಗಳಾದ ಶಿಷ್ಯರು ಕೆಲವು ವೇಶ್ಯೆಯರನ್ನು ಕರೆಸಿ ಈತನ ಪಾಲಕಿಯ ಮುಂದೆ ನಡೆಸಿದರು. ವೇಶ್ಯೆಯರು ಎಲ್ಲರನ್ನೂ ನೋಡುವಂತೆ ಸ್ವಾಮಿಯನ್ನು ನೋಡಿದರು; ಹಾವಭಾವವಿಲಾಸಗಳನ್ನು ತೋರಿಸಿದರು. ಆದರೆ ಸ್ವಾಮಿ ಅವರ ಆಟಗಳನ್ನು ಗಮನಿಸಲಿಲ್ಲ. ವೇಶ್ಯೆಯರು ಸ್ವಾಮಿಯನ್ನು ನೋಡಿ ಆಶ್ಚರ್ಯಪಟ್ಟು ಇತರರ ಕಡೆಗೆ ಮನಸ್ಸನ್ನು ತಿರುಗಿಸಿದರು. ಕೆಲವು ಕಾಲದ ಮೇಲೆ ಸ್ವಾಮಿಗೆ ಪ್ರಪಂಚ ಜ್ಞಾನ ಬಂದು ಇವರ ರೀತಿ ತಿಳಿದು ಇನ್ನು ಮೇಲೆ ಮೆರವಣಿಗೆಯಲ್ಲಿ ತನ್ನ ಮುಂದೆ ವೇಶ್ಯೆಯರು ಬರಕೂಡದೆಂದು ಆತನು ಆಜ್ಞೆಮಾಡಿದನು. ವೇಶ್ಯೆಯರು ಅನೇಕರು ಸುಂದರಿಯರಾಗಿದ್ದರು. ಸ್ವಾಮಿ ಆ ಸೌಂದರ್ಯವನ್ನು ನೋಡಿಯೂ ಸ್ಥಿರವಾಗಿದ್ದನು. ಈಗ ತಾನು ಎಲ್ಲಾದರೂ ನದೀತೀರದಲ್ಲಿ ನಡೆಯಹೋದರೆ ಅಲ್ಲಲ್ಲಿ ಹಳ್ಳಿಯ ಸ್ತ್ರೀಯರು ಸ್ನಾನ ಮಾಡುತ್ತಿರುವುದು ಕಾಣುವುದುಂಟು. ಇವನನ್ನು ಕಂಡರೆ ಅವರಲ್ಲಿ ಚಿಕ್ಕವರಾದ ಕೆಲವರು ನಾಚಿಕೊಂಡು ಬಟ್ಟೆಗಳನ್ನು ಸರಿಮಾಡಿಕೊಂಡು ಕುಳಿತುಕೊಳ್ಳುವರು; ಅಥವಾ ನೀರಿನೊಳಗೆ ನಿಲ್ಲುವರು. ಸ್ವಾಮಿ ನೋಡಿ ತಲೆಯನ್ನು ತಿರುಗಿಸಿಕೊಂಡು ಹೊರಟು ಹೋಗುವನು. ಒಂದೊಂದು ಸಲ, ಹೀಗೆ ಯಾರೋ ಗೋಪಿಕಾಸ್ತ್ರೀಯರು ಇಲ್ಲದ ಚಮುಕುಮಾಡಿದ್ದರಿಂದಲೇ ನಮ್ಮಪ್ಪ ಸೀರೆಯನ್ನು ತೆಗೆದುಕೊಂಡು ಮರವನ್ನೇರಿ ಇರಬೇಕು, ಎಂದುಕೊಳ್ಳುವನು. ಇದರಿಂದೆಲ್ಲ ತಿಳಿಯಬೇಕಾದದ್ದು ಸ್ವಾಮಿಯ ಕಣ್ಣಿಗೆ ಸ್ತ್ರೀರೂಪು ಸುಂದರವಾಗಿ ಕಾಣುತ್ತಿರಲಿಲ್ಲವೆಂದಲ್ಲ. ಸುಂದರವಾಗಿ ಕಂಡರೂ ಅದರಿಂದ ಅವನ ಮನಸ್ಸು ಕಲಕುತ್ತಿರಲಿಲ್ಲ; ಅದು ಅವನ ಮನಸ್ಸನ್ನು ಸೆಳೆಯುತ್ತಿರಲಿಲ್ಲ. ಅವನಿಗೆ ಚೆಲುವನ್ನು ನೋಡಿದರೆ ಸಂತೋಷ ಉಂಟು. ಆದರೆ ಚೆಲುವೆಯಾದ ಹುಡುಗಿಯನ್ನೋ ಯುವತಿಯನ್ನೋ ನೋಡಿದರೆ ಆಗುವ ಸಂತೋಷ ಚೆಲುವನಾದ ಹುಡುಗನನ್ನೋ ಯುವಕನನ್ನೋ ನೋಡಿದರೂ ಉಂಟು. ಇಂತಹ ಚೆಲುವನ್ನು ನೋಡಿದಾಗ ಸ್ವಾಮಿ "ವಿಧಾತನು ಸೃಷ್ಟಿಯಲ್ಲಿ

ಸೌಂದರ್ಯವನ್ನು ವೃದ್ಧಿಗೊಳಿಸುತ್ತಾ ಬಂದಿರುವನು. ತನ್ನ ಸೃಷ್ಟಿ ಎಂದೆಂದಿಗೂ ಇರುವುದಕ್ಕೆ ಅವನು ಮಾಡಿರುವ ಉಪಾಯ ಅದು" ಎಂದುಕೊಳ್ಳುವನು. ತುಂಬಿದ ಮೈಯಿಂದಲೂ, ದೊಡ್ಡವಾದ ಕಣ್ಣು ಗಳಿಂದಲೂ, ಸಣ್ಣವಾಗಿ ಸೂಕ್ಷ್ಮವಾಗಿ ಅಲುಗಾಡುತ್ತ ನಿಮಿರಿನಿಂತಿರುವ ಕಿವಿಗಳಿಂದಲೂ, ಆಗತಾನೆ ಹುಟ್ಟಿರುವ ಬಾಳೆಯ ಕಂದಿನಂತೆ ಸಣ್ಣಗೆ ಕೆಂಚಾಗಿ ಕಾಣುವ ಮೋಸಾದ ಕೊಂಬುಗಳಿಂದಲೂ ಕೂಡಿದ್ದ ಪಡ್ಡೆಯ ಹಸುವನ್ನು ನೋಡಿದರೂ ಸ್ವಾಮಿಗೆ ಸುಂದರಿಯಾದ ಯುವತಿ ಯೊಬ್ಬಳನ್ನು ನೋಡಿದಂತೆ ಸಂತೋಷವಾಗುವುದು. ಅನೇಕ ಪುಣ್ಯ ವಂತರಾದ ಶಿಷ್ಯರ ಮನೆಗಳಲ್ಲಿ ಇವನು ಭಿಕ್ಷೆಯನ್ನು ಸ್ವೀಕರಿಸುವಾಗ ಅಲ್ಲಿ ಅನೇಕ ಜನ ಸುಂದರಿಯರಾದ ಸ್ತ್ರೀಯರು ತಂಡ ತಂಡವಾಗಿ ಸೇರಿರುವರು. ಅವರಲ್ಲಿ ಅನೇಕರು ಅಂದವಾದ ಸೀರೆ ಕುಪ್ಪಸಗಳನ್ನು ಉಟ್ಟು ತೊಟ್ಟು ತೊಡಿಗೆಗಳನ್ನು ಧರಿಸಿ ಗಂಡಸರೆಲ್ಲ ತಮ್ಮನ್ನು ನೋಡುತ್ತಿರುವರೆಂಬ ನಾಚಿಕೆಯಿಂದ ತಲೆಯನ್ನು ತಗ್ಗಿಸಿ ನಾಣಿಂದ ನಾಲ್ಮಡಿಯಾದ ಚೆಲುವಿ ನಿಂದ ಮೆರೆಯುತ್ತಾ ಹೊಳೆಯುವ ವಜ್ರಗಳ ಬೆಳಕನ್ನೂ ವಜ್ರವನ್ನು ಮೀರಿ ಮಿಂಚುವ ಕಣ್ಣುಗಳ ಕಾಂತಿಯನ್ನೂ ಬೀರುತ್ತಾ ಈತನ ಹತ್ತಿರ ಬಂದು ಸ್ವಚ್ಛವಾದ ನೆಲದ ಮೇಲೆ ಸ್ವಭಾವವಾಗಿ ಶ್ಯಾಮಲವೂ ಯಮನಿಯಮಗಳಿಂದ ಶುಷ್ಕವೂ ಆದ ಈತನ ಪಾದಗಳಿಗೆ ಎರಗುವರು. ಆಗ ಸ್ವಾಮಿ ಮಠದ ಮುಂದಣ ಹೊಕ್ಕರಣೆಯಲ್ಲಿ ನದಿಯ ಪ್ರವಾಹದಿಂದ ತೇಲಿಬಂದ ಒಣಗಿದ ಕಡ್ಡಿಯೂ ತಿಳಿನೀರಿನಲ್ಲಿ ನಿಂತು ಮೃದುವಾಗಿ ಮುದ್ದಾಗಿ ಗಾಳಿಗೆ ತಲೆಯನ್ನು ತೂಗುತ್ತಿರುವ ನಳಿದಾವರೆಯೂ ಒಂದರ ಬಳಿ ಒಂದಿರುವುದನ್ನು ಜ್ಞಾಪಕಮಾಡಿಕೊಳ್ಳುವನು. ಆದರೆ ಈ ಅನೇಕ ವಿಧವಾದ ಈ ಅಸಾಧಾರಣವಾದ ಯಾವ ಸ್ತ್ರೀ ಸೌಂದರ್ಯವೂ ಅವನ ಮನಸ್ಸನ್ನು ಸೆಳೆದಿರಲಿಲ್ಲ. ದಿನವೂ ಕುಳಿತು ಜಗದಂಬೆಯಾದ ಶಾರದೆ ಯನ್ನು ಪೂಜೆಮಾಡುವಾಗ ಸೃಷ್ಟಿಯ ಮಾಯೆಯ ಒಳಮರ್ಮದ ಅರಿವಿನಿಂದ ಮಾತ್ರ ತಿದ್ದಲು ಸಾಧ್ಯವೆಂದು ತೋರುತ್ತಿದ್ದ ಆ ತಾಯ ಸೌಮ್ಯಾಕಾರವನ್ನು ಧ್ಯಾನಮಾಡಿ ತನುಮನಗಳನ್ನು ಇಂದು ನಿಸರ್ಗದ ಸ್ವಭಾವವಾದ ಸೌಂದರ್ಯದಲ್ಲಿ ಹೇಗೋ ಹಾಗೆ ಆ ಸೌಂದರ್ಯದಲ್ಲಿ

ಲೀನಮಾಡುತ್ತಿದ್ದನು. ಆ ರೂಪವನ್ನು ಧ್ಯಾನಿಸಿದವನಿಗೆ ಮೋಹವುಂಟೆ? ಇದರಿಂದಲೇ ಸನ್ಯಾಸಿಗೆ ವ್ಯಾಸವಾಕ್ಯವನ್ನು ಕೇಳಿ ಸ್ವಲ್ಪ ಅಸಮಾಧಾನ. ಹೀಗೆ ಅಕಲ್ಮಷವಾದ ಮನಸ್ಸನ್ನುಳ್ಳವನು ಆ ಮಾತನ್ನು ಕೇಳಿ ಅಸಮಾಧಾನ ಪಡಕೂಡದೇಕೆ? ಸನ್ಯಾಸಿ ತಾನು ಮಧ್ಯಾಹ್ನ ಮಾಡಿದ ಕೆಲಸ ತಪ್ಪಲ್ಲವೆಂದುಕೊಂಡನು. ಸ್ವಲ್ಪ ಜಂಭವೂ ಮನಸ್ಸಿನಲ್ಲಿ ಬಂದಿರ ಬಹುದು. ಅಂತಹ ಒಳ್ಳೆಯತನವಿದ್ದರೆ ಸ್ವಲ್ಪ ಜಂಭ ಇರಬಾರದೇಕೆ? ಸಂಸಾರಿಗಳ ಹವ್ಯಾಸವನ್ನು ಕಟ್ಟಿಕೊಂಡ ವ್ಯಾಸರಿಗೆ ಸನ್ಯಾಸಿಗಳ ಮಾತೇಕೆ ಎಂದು ಸ್ವಾಮಿ ಸ್ವಲ್ಪ ಹಾಸ್ಯವಾಗಿಯೂ ಸ್ವಲ್ಪ ನಿಜವಾಗಿಯೂ ಹೇಳಿಕೊಂಡನು. ಕರ್ಮಸಾಕ್ಷಿ ಕೂರಾದ ಕದಿರುಗಳೊಡನೆ ಪರೀಕ್ಷೆಗೆ ಬರಲು, ನೋಡು, ನನ್ನಲ್ಲಿ ದೋಷವಿಲ್ಲ, ಎಂದು ಹೇಳುವಂತೆ ತನ್ನನ್ನು ತಾನು ಮೆಚ್ಚಿದ ಒಂದು ರೀತಿಯ ಮುಗುಳುನಗೆಯನ್ನು ನಗುತ್ತಾ ತೃಪ್ತನಾದನು.

ಸನ್ಯಾಸಿಯು ಈ ಆತ್ಮಪರಿಶೋಧನೆಯಲ್ಲಿ ಕೆಲವು ಅವಶ್ಯಕಾಂಶಗಳು ಬಿಟ್ಟುಹೋದವು. ಮನಸ್ಸಿನ ಯಾವ ಭಾವ ಚೇತಸ್ಸನ್ನು ಮುಟ್ಟಿ ಸಂತೋಷವೆನ್ನಿಸುವುದೋ ಅದೇ ಭಾವ ಬಹಿರ್ಮುಖದಿಂದ ಬಾಹ್ಯ ವಸ್ತುವಿನ ಆಕರ್ಷಣೆಯ ಫಲವೆಂದು ತೋರುವುದು. ನದೀತೀರದಲ್ಲಿ ಸ್ನಾನಮಾಡುವ ಸ್ತ್ರೀಯರ ಕಡೆ ಇವನು ನೋಡದೆ ಹೋಗುತಿದ್ದಾಗ ತನ್ನ ಸನ್ಯಾಸವನ್ನವರು ಮೆಚ್ಚಲೆಂಬ ಯೋಚನೆ ಮನಸ್ಸಿನಲ್ಲಿ ರುತ್ತಿತ್ತೋ? ಶಿಷ್ಯರ ಮನೆಗಳಲ್ಲಿ ಸುಂದರೀ ವೃಂದವನ್ನು ನೋಡಿಯೂ ಮನಸ್ಸು ಸ್ಥಿರವಾಗಿರುತ್ತಿತ್ತಷ್ಟೆ? ಸುಂದರವಾದ ಮುಖವನ್ನು ನೋಡಿದರೆ ಪುನಃ ನೋಡೋಣವೆಂದೆನ್ನಿಸುತಿರಲಿಲ್ಲವೋ? ಎನ್ನಿಸಿದರೂ ತನ್ನ ಸ್ಥೈರ್ಯವನ್ನು ಎಲ್ಲರಿಗೂ ತೋರಬೇಕು ಎಂಬ ಅಂತರಾತ್ಮಕವಾದ ಉದ್ದೇಶದಿಂದ ಅದು ಮುಂದಾಗದೆ ಇರುತ್ತಿತ್ತೊ? ಸನ್ಯಾಸಿ ಈ ವಿಷಯ ವನ್ನು ಯೋಚಿಸಲಿಲ್ಲ. ಅವನಿಗೆ ಸೌಂದರ್ಯವನ್ನು ನೋಡಿದರೆ ಸಂತೋಷವಾಗುತ್ತಿದ್ದುದು ನಿಜ. ಈ ಜಂಭ ಅಡ್ಡಬಾರದೆಯಿದ್ದರೆ ಒಳಮುಖವಾಗಿ ಸಂತೋಷವಾಗಿ ಪರಿಣಮಿಸುತ್ತಿದ್ದ ಮನೋವೃತ್ತಿಯೇ ಹೊರಮುಖವಾಗಿ ಆಕರ್ಷಣವೆಂದು ತೋರಬಹುದಾಗಿತ್ತು. ಆದರೆ

ತಾನು ಧರ್ಮದಿಂದಲೇ ಹೊರತು ಜಂಭದಿಂದ ಋಜುವಾಗಿರಬಹುದೆಂದು ಸನ್ಯಾಸಿಗೆ ತೋರಲಿಲ್ಲ.

ಕತ್ತಲಾಗುತ್ತ ಬಂತು. ಹಕ್ಕಿಗಳು ನದೀತೀರದ ತೋಪಿನಲ್ಲಿ ಒಟ್ಟುಗೂಡಿ ಸಿಕ್ಕಿಸಿಕ್ಕಿದಹಾಗೆ ಕೂಗುಹಾಕಿ ಅಸದೃಶವಾದ ಸಂಗೀತ ವನ್ನು ಹಾಡಿದೆವೆಂದು ತಿಳಿದುಕೊಂಡು ತೃಪ್ತಿಯಿಂದ ಸುಮ್ಮನಾದುವು. ನಿಶೀಮಾತೆ ಸಪ್ಪುಳಿಲ್ಲದ ಹೆಜ್ಜೆಗಳನ್ನಿಕ್ಕುತ್ತ ಬಂದು ಪ್ರಪಂಚವನ್ನು ನಿದ್ರೆಗೊಳಿಸುವುದಕ್ಕಾಗಿ ತನ್ನ ಸೆರಗನ್ನು ಹೊದಿಸಿದಳೆಂಬಂತೆ ಸೀಮೆ ಮಸಕು ಮಸಕಾಯಿತು. ಹಳ್ಳಿಯಲ್ಲಿಯ ದೀಪಗಳು ಗಿಡಗಳ ನಡುವೆ ಮಿಣುಕು ಮಿಣುಕೆಂದು ಒಂದೊಂದಾಗಿ ಕಾಣಬಂದವು. ಹೊತ್ತಾಗಿ ಬಂದ ಒಂದು ದನ ಊರಿಗೆ ಬರುತ್ತ ಕರುವನ್ನು ಕೂಗುತ್ತಿದ್ದ ಶಬ್ದ ಸ್ವಲ್ಪ ಕೇಳಿಸುತ್ತಿತ್ತು. ಸಂಜೆಯಾದುದರಿಂದ ಇತರ ಶಬ್ದ ಕಡಮೆ ಯಾಗಲು ಹೊಳೆಯ ಪಾತ್ರೆಯನ್ನು ತುಂಬಿ ಸುರುಳಿ ಸುರುಳಿಯಾಗಿ ಹರಿಯುತ್ತಿದ್ದ ನೀರಿನ ಮೊದಲು ಕೇವಲ ಅಗೋಚರವೆಂಬಂತಿದ್ದ ಶಬ್ದವೂ ಕೇಳುತ್ತಿತ್ತು. ಮಠದೊಳಗೆ ಶಿಷ್ಯನೊಬ್ಬನು ಸ್ತೋತ್ರಗಳನ್ನು ಹೇಳುತಿದ್ದನು. ಸ್ವಾಮಿ ಸ್ವಲ್ಪ ಯೋಚನೆ ಮಾಡುತ್ತಾ ಸ್ವಲ್ಪ ಈ ಶಾಂತಿಯನ್ನು ಅನುಭವಿಸುತ್ತಾ ಕುಳಿತಲ್ಲಿಯೇ ಕುಳಿತಿದ್ದನು. ಸ್ವಲ್ಪ ಮಳೆಯ ಹನಿ ಬೀಳುವುದಕ್ಕೆ ಪ್ರಾರಂಭವಾಯಿತು.

ಇದ್ದಹಾಗೆ ಒಂದು ಕಾಲಂದುಗೆಯ ಶಬ್ದ ಕೇಳಬಂದಿತು. ಯಾರೋ ಬಹು ಜಾಗ್ರತೆಯಾಗಿ ನಡೆಯುತ್ತ ಮಠಕ್ಕೆ ಬರುತ್ತಿದ್ದರು. ಸ್ವಾಮಿ ಇದು ಯಾರೆಂದು ನೋಡಿದನು. ಅಷ್ಟು ಹೊತ್ತಿನಲ್ಲಿ ಸಾಮಾನ್ಯ ವಾಗಿ ಮಠಕ್ಕೆ ಯಾರೂ ಬರುವುದಿಲ್ಲ. ಬರುವವರು ಹಗಲಲ್ಲೇ ಬರುವರು. ಮಠದ ದಾರಿ ಸ್ವಲ್ಪ ಕಾಡಿನಲ್ಲಿ ಬಿದ್ದು ಸ್ವಲ್ಪ ದೂರದಲ್ಲೇ ಸಾಮಾನ್ಯವಾದ ಒಂದು ಗುಡ್ಡವೂ ಅದರಲ್ಲಿ ಚಿರತೆಗಳೂ ಇದ್ದುದರಿಂದ ಕತ್ತಲಾದ ಮೇಲೆ ಮಠದ ದಾರಿಯಲ್ಲಿ ಬರಲು ಜನರಿಗೆ ಭಯ. ಮಠಕ್ಕೆ ಬರುತ್ತಾ ಕತ್ತಲಾದರೆ ಮಠದ ದಾರಿಯನ್ನು ಬಿಟ್ಟು ಹಳ್ಳಿಗೆ ಹೋಗು ವರು. ಆದರೆ ಇಂದು ಯಾರೋ ಬರುತ್ತಿರುವ ಹಾಗಿದೆ. ಯಾರೋ ಹೆಂಗಸು. ಊರಿಗೆ ಹೋಗುವ ದಾರಿಯನ್ನು ಬಿಟ್ಟು ಈ ಕಡೆ

ತಪ್ಪಿ ಬಂದಳೇನೂ ಎಂದು ಸ್ವಾಮಿ ಸ್ವಲ್ಪ ಕುತೂಹಲದಿಂದ ದೃಷ್ಟಿಸಿ ನೋಡಿದನು. ಅಂದುಗೆಯ ಶಬ್ದ ಹತ್ತಿರ ಹತ್ತಿರ ಬಂದು ಕೊನೆಗೆ ಒಬ್ಬ ಯುವತಿ ಬಾಗಿಲಬಳಿ ನಿಂತು "ಅಮ್ಮ, ಈ ಮನೆಯಲ್ಲಿ ಯಾರಮ್ಮಾ?" ಎಂದಳು.

ಕತ್ತಲೂ ಮುಸುಕುತ್ತ ಬಂದಿದ್ದುದರಿಂದ ಮಾತನಾಡಿದವಳ ರೂಪು ಮೊದಲಾದುದು ಸನ್ಯಾಸಿಗೆ ತಿಳಿಯಲಿಲ್ಲ. ಅಗ್ಗಿಷ್ಟಿಕೆಯ ಬೆಳಕಿನಿಂದ ಸ್ವಲ್ಪಮಟ್ಟಿಗೆ ಕಾಣುತ್ತಿತ್ತು. ಹೆಂಗಸು ಸ್ವಲ್ಪ ದೂರದಿಂದ ಮಳೆಯಲ್ಲಿ ನೆನೆದಿರಬೇಕು. ಬಟ್ಟೆ ತೀರ ಒದ್ದೆಯಾದಂತೆ ಕಾಣುತ್ತಿತ್ತು.

ಸನ್ಯಾಸಿ "ನೀವು ಯಾರಮ್ಮ" ಎಂದನು.

"ಸ್ವಾಮಿ, ಇದು ಯಾರ ಮನೆ, ತಮ್ಮ ಮನೆಯೆ?"

"ಇದು ದೇವರ ಮನೆ ತಾಯಿ. ಯಾತಕ್ಕೆ? ಇದೊಂದು ಮಠ."

"ಇಲ್ಲಿ ಯಾರಾದರೂ ಹೆಂಗಸರಿದಾರೆಯೆ?"

"ಇಲ್ಲವಮ್ಮ, ಯಾಕೆ? ನೀನು ಯಾರು ತಾಯಿ? ಇಲ್ಲಿಗೇನು ಬಂದೆ?"

ಸ್ತ್ರೀ ಸ್ವಲ್ಪ ಹತ್ತಿರ ಬಂದು ಕಾವಿಯ ಬಟ್ಟೆಯನ್ನು ನೋಡಿ "ತಾವು ಇಲ್ಲಿಯ ಸ್ವಾಮಿಗಳೊ?" ಎಂದಳು.

"ಹೌದು ತಾಯಿ, ನಾನು ಇಲ್ಲಿ ಕಾವಲುಗಾರ."

"ಅಪ್ಪಾ ನನಗೆ ಯಾಕೋ ಭಯವಾಗುತ್ತದೆ. ಇಲ್ಲಿ ಹೆಂಗಸರಿಲ್ಲವೆಂದು ನನಗೆ ಇನ್ನೂ ಬಹಳ ಭಯವಾಯಿತು. ಆದರೆ ತಮ್ಮನ್ನು ನೋಡಿ ಧೈರ್ಯ ಬಂತು. ನಮ್ಮ ತಂದೆಯ ಹಾಗೆ ಸಿಕ್ಕಿದಿರಿ. ತಾವು ಸನ್ಯಾಸಿಗಳು. ಯಾರೂ ಏನೂ ಸಂದೇಹಪಟ್ಟು ನನ್ನ ವಿಷಯದಲ್ಲಿ ಆಡಿಕೊಳ್ಳುವ ಹಾಗೆ ಇಲ್ಲ. ಅಯ್ಯೋ! ನಮ್ಮ ಯಜಮಾನರು ಏನಾದರೋ ತಿಳಿಯಲಿಲ್ಲವಲ್ಲ. ನಾನೇನು ಮಾಡಲಿ" ಎಂದು ಹೆಂಗಸು ಅಳತೊಡಗಿದಳು.

ಸನ್ಯಾಸಿಯ ಮನಸ್ಸು ಕಳವಳಗೊಂಡಿತು. ಅವನು "ಅಮ್ಮ, ನಿಮ್ಮ ಯಜಮಾನರು ಏನೋ ಆದರೆಂದರೇನು? ಜೊತೆಯಾಗಿ ಬಂದಿರಾ? ಎಲ್ಲಿಂದ ಬಂದಿರಿ?" ಎಂದು ಕೇಳಿದನು.

ಅವಳ ಕಳವಳವನ್ನು ನೋಡಿ ಸನ್ಯಾಸಿಗೆ ಕಳವಳವಾದದ್ದಲ್ಲದೆ ಸ್ತ್ರೀರೂಪಿಗೆ ತನ್ನ ಮನಸ್ಸು ಸೋಲುವುದಿಲ್ಲವೆಂಬುದನ್ನು ತೋರಿಸುವುದಕ್ಕೆ ಒಳ್ಳೆಯ ಅವಕಾಶವಿದು ಎಂದೋ ಏನೋ ಮನಸ್ಸಿನಲ್ಲಿ ಸ್ವಲ್ಪ ಉತ್ಸಾಹವೂ ಉಂಟಾಯಿತು. ಅವಳು ಹತ್ತಿರ ಬಂದಾಗ ಮಳೆಯಿಂದ ತೊಯಿದು ಅವಳ ಮೈಗೆ ಅಂಟಿಕೊಂಡಿದ್ದ ಆ ಸೀರೆಯನ್ನು ಅವನು ಮೇಲಿಂದ ಕೆಳಗಿನವರೆಗೂ ನೋಡಿದನು. ಅಸಹಾಯೆಯಾದ ಸ್ತ್ರೀ ಎಂಬುದರಿಂದ ಅವಳ ಪರವಾಗಿ ಕನಿಕರವಾದರೂ ತನ್ನ ಪರವಾಗಿ ಸ್ವಲ್ಪ ಉತ್ಸಾಹವನ್ನು ಅನುಭವಮಾಡಿದನು. ಸನ್ಯಾಸಿ ಹೀಗೆ ಮಾಡಿದ್ದು ತಪ್ಪಾಯಿತು.

ಆ ಸ್ತ್ರೀ "ಸ್ವಾಮಿ, ರಂಗನಾಥಪುರದಲ್ಲಿ ನಮ್ಮ ತಂದೆಯ ಮನೆ. ನಮ್ಮ ಯಜಮಾನರೂ ನಾನೂ ಅಲ್ಲಿಗೆ ಹೊರಟು ಮೊಲ್ಲೆಯೂರಿಗೆಂದು ಬಂದೆವು. ದಾರಿಯಲ್ಲಿ ಅವರು, ನಡೆ, ಬಂದೆ, ಎಂದು ಒಂದು ಕ್ಷಣ ನಿಂತರು. 'ನೀನು ನಡೆಯುವುದು ಮೆಲ್ಲಗೆ, ಬಹು ಮೆಲ್ಲಗೆ' ಎಂದು ದಾರಿಯುದ್ದಕ್ಕೂ ನನ್ನನ್ನು ಹಾಸ್ಯಮಾಡುತ್ತಿದ್ದರಾದ್ದರಿಂದ ಇವರಿಗೆ ನಾನು ನಡೆಯುವುದನ್ನು ತೋರಿಸಬೇಕೆಂದು ನಾನು ಬೇಗ ಬೇಗನೆ ಬಂದುಬಿಟ್ಟೆ. ಒಂದು ಸ್ವಲ್ಪದೂರ ಬಂದು ಆಮೇಲೆ ಎಷ್ಟುದೂರದಲ್ಲಿ ಬರುತ್ತಿರುವರೋ ಎಂದು ನಿಂತು ನೋಡಿದೆ. ಅವರು ಕಾಣಲಿಲ್ಲ. ನಡೆಯುವುದರಲ್ಲಿ ನಾನು ಸೋತರೂ ಕೆಟ್ಟಿತು, ಈ ಮಹರಾಯರು ಬಂದರೆ ಸಾಕು ಎಂದು ಅಲ್ಲೇ ಕುಳಿತೆ. ಬಹಳ ಹೊತ್ತಾದರೂ ಬರಲಿಲ್ಲ. ಹಿಂದಕ್ಕೆ ಹೋಗಿ ಅವರು ನಿಂತ ಕಡೆಯೆಲ್ಲಾ ಹುಡುಕಿದೆ. ಅವರ ಸುಳಿವೇ ಇಲ್ಲ. ಕೂಗುಹಾಕಿದೆ, ಉತ್ತರವಿಲ್ಲ. ಒಂಟಿ ಹೆಂಗಸು, ಕತ್ತಲಾಗುತ್ತ ಬಂತು. ಈ ದಾರಿಯಲ್ಲೇ ಹೊರಟರೆ ಮೊಲ್ಲೆಯೂರಿಗೆ ಹೋಗುವುದು ಎಂದು ಹೇಳಿದ್ದರು. ಅದರ ಮೇಲೆ ದಾರಿ ಹಿಡಿದು ಉದ್ದಕ್ಕೆ ಬಂದೆ. ಊರು ಸಿಕ್ಕಲಿಲ್ಲ. ಇಲ್ಲಿಗೆ ಬಂದು ಸೇರಿದೆ. ನಮ್ಮಪ್ಪ, ನನಗೆ ಮಾಂಗಲ್ಯ ದಾನ ಮಾಡಬೇಕು. ಯಾರನ್ನಾದರೂ ಅಟ್ಟಿ; ನಮ್ಮ ಯಜಮಾನರನ್ನು ಹುಡುಕಿಸಿ; ನನ್ನ ಪ್ರಾಣ ತಟಗುಟ್ಟುತ್ತಿದೆ. ಎಂದು ಕಣ್ಣೀರು ಸುರಿಸಿದಳು.

ಗಂಡಸಿನ ಮನಸ್ಸು ಕರಗಿಸಲು ಹೆಂಗಸಿನ ಕಣ್ಣೀರು. ಸನ್ಯಾಸಿಗೆ ಬಹಳ ಕನಿಕರ ಹುಟ್ಟಿತು. ಅವನು "ಅಮ್ಮಾ, ಅಲ್ಲಿ ಇರುವ ಜನ ಅಷ್ಟರಲ್ಲೇ ಇದೆ. ಯಾರನ್ನು ಅಟ್ಟುವುದು? ನಿಮ್ಮ ಯಜಮಾನರಿಗೆ ಏನೂ ತೊಂದರೆ ಆಗಲಾರದು. ಹಳ್ಳಿಗೆ ಹೋಗುವ ದಾರಿ ಕವಲೊಡೆಯುವಲ್ಲಿ ನೀವು ಈ ಕಡೆಗೆ ಬಂದಿರಬೇಕು. ಇಲ್ಲಿ ಹೋಗಿದ್ದೀರೆಂದು ತಿಳಿದು ಅವರು ಆ ಕಡೆ ಹೋಗಿರಬೇಕು. ಇಷ್ಟಲ್ಲದೆ ಇನ್ನೇನೂ ಇರಲಾರದು. ನೀವು ಈಗ ಇಲ್ಲಿ ಇರಿ. ಬೆಳಿಗ್ಗೆ ಎದ್ದು ಹಳ್ಳಿಯಲ್ಲಿ ವಿಚಾರಿಸಿದರೆ ನಿಮ್ಮ ಭಯವೆಲ್ಲಾ ನಿವೃತ್ತಿಯಾಗುವುದು" ಎಂದನು.

"ಅಪ್ಪಾ, ನೀವು ನನ್ನ ತಂದೆಯಂತೆ ಸಿಕ್ಕಿದಿರಿ. ಆದರೆ ಇಲ್ಲಿ ಹೆಂಗಸರು ಯಾರೂ ಇಲ್ಲವೆನ್ನುತ್ತೀರಲ್ಲಾ. ನಾನು ರಾತ್ರಿ ಎಲ್ಲಾ ಇಲ್ಲಿ ಹೆಂಗಸು ಒಬ್ಬಳೇ ಹೇಗೆ ಇರಲಿ?"

"ಅಮ್ಮಯ್ಯ, ನೀನು ನನ್ನ ಮಗುವಿನಂತೆ. ಒಂದು ಕೊಟಡಿಯಿದೆ. ಅದನ್ನು ನೀನೇ ಉಪಯೋಗಿಸು. ಬಾಗಿಲ ಬಳಿ ನಾನು ಕಾವಲು ಮಲಗಿ ಕೊಳ್ಳುತ್ತೇನೆ. ರಾತ್ರಿ ಏನಾದರೂ ಭಯವಾದರೆ ನನ್ನನ್ನು ಕೂಗು. ಯಾವ ವಿಧವಾದ ಚಿಂತೆಯನ್ನೂ ಹಚ್ಚಿಕೊಳ್ಳಬೇಡ."

"ನೀವು—ನೀವು ಸನ್ಯಾಸಿಗಳು. ಆಗಲಿ ಇನ್ನೇನು ಮಾಡುವುದು. ಹಾಗೆಯೇ ಆಗಲಿ. ಬೆಳಿಗ್ಗೆ ಎದ್ದು ನಮ್ಮ ಯಜಮಾನರನ್ನು ಹುಡುಕಿಸಿ; ನನ್ನ ಮಾಂಗಲ್ಯವನ್ನು ಉಳಿಸಿಕೊಡಿ."

ಹೀಗೆಂದು ಸ್ತ್ರೀಯು ಸನ್ಯಾಸಿಯ ಕಾಲಿಗೆ ಬಿದ್ದು ನಮಸ್ಕಾರ ಮಾಡಿದಳು. ಕೋಮಲವಾದ ಅವಳ ಕೈಬೆರಳುಗಳು ಅವನ ಕಾಲುಗಳನ್ನು ಮುಟ್ಟಿದುವು.

ದೇವದೇವನ ಸೌಂದರ್ಯವನ್ನು ಅರ್ಧಮಾತ್ರ ತೋರಿಸುವ ಈ ಪ್ರಪಂಚವನ್ನು ನೋಡಿ ಅವನ ಸೌಂದರ್ಯವನ್ನೆಲ್ಲ ತಿಳಿಯಬೇಕೆಂದು ಪ್ರಯತ್ನಿಸುವುದು ಸನ್ಯಾಸಿಯ ವಾಡಿಕೆಯಾಗಿತ್ತು. ಅದರಂತೆಯೇ, ಆ ದೇಹವನ್ನು ಮೆಚ್ಚಿ ಅದನ್ನು ಅಪ್ಪಿಕೊಂಡಂತೆ ಕಾಣುತ್ತಿದ್ದ ಆ ತೊಯಿದ ಸೀರೆಯಿಂದ ಅರ್ಧಮಾತ್ರ ಅವ್ಯಕ್ತವಾಗಿದ್ದ ಆ ದೇಹದ ಪರಿಜನ್ನೂ ಕುರಿತು ಅವನು ಯೋಚಿಸಿದನೋ? ತಿಳಿಯದು. ಇಲ್ಲವೆ

ಹೆಚ್ಚು ಹುಳಿಯನ್ನು ಕಡಿದು ಜಯಿಸಿರುವ ಹಲ್ಲು ಆಮೇಲೆ ಯಾವ ಪದಾರ್ಥವನ್ನೂ ಅಗಿಯುವುದಕ್ಕೆ ಹಿಂದೆಗೆಯುವಂತೆ ವ್ಯಾಸವಾಕ್ಯವನ್ನು ಒತ್ತಟ್ಟಿಗಿಡಲು ಧೈರ್ಯವೆಲ್ಲ ವೆಚ್ಚವಾಗಿ ಆ ಯುವತಿಯ ಕೈಬೆರಳ ಸೋಂಕನ್ನು ತಡೆಯಲು ಧೈರ್ಯ ಇಲ್ಲದೆ ಹೋಯಿತೊ? ಯಾವ ಕಾರಣ ದಿಂದಲೊ ಆ ಬೆರಳುಗಳು ತನ್ನ ಕಾಲಿಗೆ ಸೋಕಿದಾಗ ಸನ್ಯಾಸಿಯ ಮೈ ಜುಮ್ಮೆಂದಿತು.

ಸ್ತ್ರೀಯು ನಮಸ್ಕರಿಸಿ ಎದ್ದಮೇಲೆ ಸನ್ಯಾಸಿ ತನ್ನ ಅಸ್ಥೈರ್ಯದಿಂದ ತಾನೇ ವಿಸ್ಮಿತನಾಗಿ ಶಿಷ್ಯರನ್ನು ಕರೆದು ದೀಪಗಳನ್ನು ತನ್ನಿರೆಂದನು. ಅವರು ದೀಪಗಳನ್ನು ತಂದರು. ಆ ದೀಪದ ಬೆಳಕಿನಲ್ಲಿ ಅವಳ ರೂಪನ್ನು ನೋಡಿ ಅವನು ತೀರ ಬೆರಗಾದನು.

ಆಷಾಢಮಾಸದಲ್ಲಿ ಪ್ರಯಾಣಿಕನು ನಡುದಾರಿಯಲ್ಲಿ ಮಳೆಗೆ ಸಿಕ್ಕಿ, ಈ ಮಳೆ ನಿಲ್ಲುವ ಹಾಗಿಲ್ಲ ಎಂದು ನೈರುತ್ಯಕ್ಕೆ ತಿರುಗಿ ದಟ್ಟದಟ್ಟವಾಗಿ ಬರುವ ಕಾರ್ಮುಗಿಲನ್ನು ಕಂಡು, ಇದೇನು ಕಪ್ಪು ಎಂದುಕೊಳ್ಳುವ ವೇಳೆಗೆ ಆ ದಟ್ಟವಾದ ಕಾರ್ಮುಗಿಲ ಮೇಲೆ ಇಂದ್ರನು ವಜ್ರದಿಂದ ಕೆತ್ತಿ ಬರೆಯುವ ಸೆಳೆಮಿಂಚಿನ ಸಹಿಸಲಾರದ ಪ್ರಭೆಯಿಂದ ಅವನ ಕಣ್ಣು ಮುಚ್ಚುವಂತೆ, ಈ ಸುಂದರಿಯ ರೂಪಿನಿಂದ ಸನ್ಯಾಸಿಯ ಕಣ್ಣು ಮುಚ್ಚಿತು. ಕೊಂಕು ಗೆರೆಗಳ ಜೋಡಣೆಯಿಂದಲೇ ಎಷ್ಟು ಸೊಗಸನ್ನು ಮಾಡುವುದು ಸಾಧ್ಯವೆಂದು ನೋಡುವುದಕ್ಕೋಸ್ಕರ ಬ್ರಹ್ಮನು ಇವಳನ್ನು ಸೃಷ್ಟಿಸಿದನೆಂಬಂತೆ ಇದ್ದ ಆ ಸ್ತ್ರೀರತ್ನದ ಹಣೆಯ ನಡುವಿಂದ ಕಿವಿಯವರಿಗೆ ಕಮಾನಾಗಿ ಬಾಗಿದ್ದ ಆ ಕುರುಳಸೀಮೆಯನ್ನೂ; ತೆಳ್ಳಗೆ ನಯವಾಗಿ ಕಪ್ಪಾಗಿ ಇದ್ದ ಆ ಕೊಂಕಾದ ಹುಬ್ಬನ್ನೂ; ಒಂದೇ ಕಡೆಯಿಂದ ಹೊರಟು ಒಂದೇ ಕಡೆಗೆ ಹೋಗಿ ಸೇರಬೇಕು, ವಕ್ರವಾಗಿ ಓಡಬೇಕು, ಆ ವಕ್ರಗತಿ ಸೊಗಸಾಗಿರಬೇಕು, ನೀನು ಓಡುವುದು ಚೆನ್ನವೋ ನಾನು ಓಡುವುದು ಚೆನ್ನವೋ ನೋಡೋಣ ಬಾ ಎಂದು ಇವೆರಡೂ ಪಂಥವನ್ನು ಹಾಕಿಕೊಂಡು ಓಡಿರುವುವೋ ಎಂಬಂತೆ ತೋರುತ್ತಿದ್ದ ಆ ಮೇಲೆವೆ ಕೀಳೆವೆಗಳ ಅಂಚನ್ನೂ; ನಯವಾದ ಹಳದಿಯ ನಿಂಬೆಯ ಬಣ್ಣದ ಆ ಅರ್ಧವೃತ್ತದ ಕೆನ್ನೆಗಳನ್ನೂ; ಆ ಸೆಳೆಮಿಂಚಿನ ದೇಹದ ನಿಮ್ನೋನ್ನತಿಗಳನ್ನನುಸರಿಸಿ,

ನೆರಿನೆರಿಯಾಗಿ ಸುತ್ತಿಕೊಂಡಿದ್ದ ನೀಲೀ ಬಣ್ಣದ ಮೇಲಣ ಬಂಗಾರದ ಗೆರೆಯ ಆ ಚೌಕಳಿಯ ಸೀರೆಯನ್ನೂ; ನಗು, 'ನಾನೇನೋ ತುಂಬಾ ಇದೇನೆ' ಆದರೆ ಇವಳು ತನ್ನ ನಲ್ಲನನ್ನು ಕಂಡಲ್ಲದೆ ನನ್ನನ್ನು ಬಾಯಿಂದ ಬಿಡಳು, ಇವಳ ಕಣ್ಣಿನಲ್ಲಿ ಹೊರಗೆ ಬರುತ್ತೇನೆ, ಎಂದು ಹೇಳಿ, ತಪ್ಪಿಸಿಕೊಂಡು ಬರುತ್ತಿರುವುದೋ ಎಂಬಂತೆ ತೋರುತ್ತಿದ್ದ, ನಗೆಯ ಸೊಬಗಿಂದ ಕೂಡಿದ ಆ ಕಣ್ಣುಗಳನ್ನೂ; ಈ ಲಾವಣ್ಯವು ಉಕ್ಕಿ ಬರುತ್ತಿದೆ, ಇದನ್ನು ಭದ್ರವಾಗಿಡಬೇಕು, ಎಂದು ಪ್ರಕೃತಿಮಾತೆ ಮರಕ್ಕೆ ಮರದಿಂದಲೇ ಆಣಿಗಳನ್ನು ಮಾಡುವಂತೆ ಆ ಲಾವಣ್ಯವನ್ನು ಭದ್ರಪಡಿಸುವುದಕ್ಕೆ ಲಾವಣ್ಯದಿಂದಲೇ ತಿರುಪುಗಳನ್ನು ಮಾಡಿ ತಿರುಗಿಸಿಟ್ಟಂತೆ ಕಾಣುತ್ತಿದ್ದ ಆ ಗಲ್ಲದ ಸುಳಿಗಳನ್ನೂ; ಈ ಎಲ್ಲ ಲಾವಣ್ಯದ ಪ್ರವಾಹದಲ್ಲಿ ಮುಳುಗಿ ಹೊಸತೆರನಾದ ಒಂದು ಸೊಗಸನ್ನು ಪಡೆದಿದ್ದ ಆ ತೋಳ ಬಂದಿ, ಆ ದುಂಡಾದ ಮುಂಗೈಯ ಬಳೆಗಳು, ಸಂಪಿಗೆಯ ಮೊಗ್ಗಿನ ಬಳಿಯ ಮಿಣುಕು ಹುಳುವಿನಂತಿದ್ದ ಆ ಮೂಗುಬಟ್ಟು, ಕಪ್ಪೂ ಬಿಳುಪೂ ವಿರುದ್ಧ ವರ್ಣಗಳೆನ್ನದಿರಿ, ಇಲ್ಲಿ ಒಂದಕ್ಕೊಂದು ಸಹಾಯವನ್ನು ಮಾಡುತ್ತಿವೆ, ಎಂದು ಹೇಳುತ್ತಿದ್ದ ಆ ಕರಿಯ ಹೆರಳು, ಅದರಲ್ಲಿ ತೊಟ್ಟ ಬಿಳಿಯ ಮಲ್ಲಿಗೆ, ಇವೆಲ್ಲವನ್ನೂ ನೋಡಿ ಸನ್ಯಾಸಿ ಸುಮ್ಮನೆ ಬೆರಗಾದನು. ನೋಡಿದ ಯಾರ ಮನಸ್ಸನ್ನಾದರೂ ಅಪ್ಪಳಿಸಿ ಹಿಡಿದು ಒಂದೇ ಸಲಕ್ಕೆ ಸೆರೆಮಾಡುವಂತಿದ್ದ ಆ ಸ್ತ್ರೀ ಸೌಂದರ್ಯ ಸನ್ಯಾಸಿಯ ಕಣ್ಣಿಗೆ ಇಂದೇ ಬೀಳಬೇಕೆ?

ಇಂದೇ ಬಿದ್ದಿತು. ಅದರಿಂದ ಅವನು ಬೆರಗಾದನು. ಮರೆತು ಅವಳನ್ನೇ ಸುಮ್ಮನೆ ದೃಷ್ಟಿಸಿ ನೋಡಿದನು.

ಸ್ತ್ರೀ ಸ್ವಲ್ಪ ನಗುತ್ತ ತಲೆಯನ್ನು ತಗ್ಗಿಸಿಕೊಂಡು, "ಸ್ವಾಮಿ, ಇಲ್ಲಿ ದೀಪವೇಕೆ?" ಎಂದು, "ನನ್ನ ಜತೆಗೆ ಯಾರನ್ನಾದರೂ ಕಳುಹಿಸಿ. ನಾನು ಆ ಹಳ್ಳಿಗೆ ಹೋಗುತ್ತೇನೆ" ಎಂದಳು.

ಸನ್ಯಾಸಿಗೆ ಸ್ವಲ್ಪ ನಾಚಿಕೆಯಾಯಿತು. "ಒಳಗೆ ಹೋಗುವುದಕ್ಕೆ ಬೆಳಕಿಗಾಗಿ ದೀಪವನ್ನು ತರಿಸಿದೆ, ಒಳಗೆ ಹೋಗೋಣ ನಡೆಯಮ್ಮ" ಎಂದನು.

"ಜೊತೆಗೆ ಯಾರನ್ನಾದರೂ ಕಳುಹಿಸಿದರೆ ನಾನು ಹಳ್ಳಿಗೆ ಹೋಗುತ್ತೇನೆ."

"ಈ ಕತ್ತಲಲ್ಲಿ ಹಳ್ಳಿಯೆಂದರೇನು, ಹೋಗುವುದೆಂದರೇನು, ನಿನ್ನನ್ನು ಕ್ಷೇಮವಾಗಿ ನೋಡಿಕೊಳ್ಳುವುದಕ್ಕೆ ನಾನಿದೇನೆ, ಶಾರದೆಯ ಸಾನ್ನಿಧ್ಯದಲ್ಲಿ ನಿನಗೆ ಯಾವ ಹೆದರಿಕೆಯೂ ಬೇಡ, ಒಳಗೆ ನಡೆ ತಾಯಿ."

ಎಲ್ಲರೂ ಒಳಗೆ ಹೋದರು. ಸ್ತ್ರೀಗೆ ಶಾರದಾಂಬೆಯ ಹಳೆಯ ವಸ್ತ್ರಗಳಲ್ಲೊಂದನ್ನು ಉಟ್ಟುಕೊಳ್ಳುವುದಕ್ಕೆ ಕೊಟ್ಟರು. ಆಕೆ ಶಾರದೆಯ ಪೂಜೆಯ ವೇಳೆಯಲ್ಲಿ ಹತ್ತಿರದಲ್ಲಿ ನಿಂತಿದ್ದು ಆಮೇಲೆ ಇತರರಿಗಾಗಿ ಸಿದ್ಧವಾಗಿದ್ದ ಆಹಾರದಲ್ಲಿ ಸ್ವಲ್ಪವನ್ನು ತೆಗೆದುಕೊಂಡಳು. ಎಲ್ಲಾ ಆದಮೇಲೆ ಸೇವಕರು ತೊಟ್ಟಿಗೆ ಸೇರಿದಂತಿದ್ದ ಕೊಟಡಿಯೊಂದರಲ್ಲಿ ಒಂದು ಚಾಪೆಯನ್ನು ಹಾಕಿ ಶಾರದಾಂಬೆಯ ಹಳೆಯ ವಸ್ತ್ರ ಇನ್ನೊಂದನ್ನು ಹೊದ್ದುಕೊಳ್ಳುವುದಕ್ಕೆ ಇಟ್ಟು ಸ್ತ್ರೀಯನ್ನು ಆ ಕೊಟಡಿಯಲ್ಲಿ ಮಲಗ ಬಹುದೆಂದರು. ಸನ್ಯಾಸಿ ತಾನು ಬಾಗಿಲ ಬಳಿ ಮಲಗುವುದಾಗಿಯೂ ಹೆದರಬೇಡವೆಂದೂ ಭರವಸೆಯನ್ನು ಕೊಟ್ಟನು. ಸ್ತ್ರೀ ಮುಗುಳ್ನಗೆ ಯಿಂದ "ನನಗೆ ದೇವರು ಸಹಾಯವಾಗಿದಾನೆ" ಎಂದು ಒಳಗೆ ಹೋದಳು.

ಸನ್ಯಾಸಿ ಬಾಗಿಲ ಬಳಿ ಕುಳಿತು ಧ್ಯಾನ ಮಾಡುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಸ್ತ್ರೀ ಹೊರಗೆ ಬಂದು ಆತನಿಗೆ ನಮಸ್ಕರಿಸಿ ಪುನಃ ಒಳಗೆ ಹೋಗಿ ಮಲಗಿಕೊಂಡಳು. ಒಂದು ಕ್ಷಣ ಬಿಟ್ಟು ಮತ್ತೆ ಎದ್ದು ಬಾಗಿಲಿಂದ ಸನ್ಯಾಸಿಯನ್ನು ಒಂದು ವಿಧವಾದ ಸಂದೇಹದ ದೃಷ್ಟಿ ಯಿಂದ ಇಣಿಕಿನೋಡಿ ಕದವನ್ನು ಮುಚ್ಚಿ ಒಳಗೆ ಅಗಣಿಯನ್ನು ಹಾಕಿ ಕೊಂಡಳು.

ಅವಳು ಮುಗ್ಧೆಯೂ ಅಲ್ಲದೆ ಪ್ರೌಢೆಯೂ ಅಲ್ಲದೆ ಮೋಸವನ್ನರಿ ಯದ ಚೆಲ್ಲಾಟದ ಯುವತಿ. ಈ ಬೆಕ್ಕಿನ ಮರಿಗೆ ಸಿಕ್ಕಿ ಸನ್ಯಾಸಿಯ ಹೃದಯ ಇಲಿಯಾಯಿತು. ಅವನು ಇವಳ ರೂಪಿನಂತಹ ರೂಪನ್ನು ಇದುವರೆಗೆ ನೋಡಿರಲಿಲ್ಲ. ಮುಖ್ಯವಾಗಿ ಯಾವ ರೂಪನ್ನೇ ಆಗಲಿ ನೋಡಬೇಕೆಂದು ನೋಡಿರಲಿಲ್ಲ. ಇಂದು ರೂಪಿನಲ್ಲಿ ಏನಿದೆ ಎಂದು

ನೋಡಿ ಹುಚ್ಚು ಕೆಲಸಮಾಡಿದಂತಾಯಿತು. ತರುಣಿ ತನ್ನ ವಿಷಯ ದಲ್ಲೂ ತೋರುವ ಸಂದೇಹವನ್ನೂ ಅವಳ ಆ ಆಟವನ್ನೂ ನೋಡಿ, ಇವಳು ನನಗೆ ಹೆದರುತ್ತಾಳೆ, ನಿಜವಾಗಿಯೂ ಹೆದರಿಸಿದರೆ ತಮಾಷೆ ಯಾಗಿದ್ದೀತು, ಎಂದು ಅವನಿಗೆ ತೋರಿತು. ಚಲ್ಲಾಟ ಸೋಂಕಿನಿಂದ ಹೀಗೆ ಬರುವುದು. ನಿದ್ದೆಯಿಂದ ಮಂಕಾಗಿರುವ ಬೆಕ್ಕಿನ ಮುಂದೆ ಹಂಚೀಕಡ್ಡಿಯನ್ನು ನೆಲದಮೇಲೆ ಆಡಿಸಿ: ಅದು ಇಲಿಯ ಆಟವಾಡು ವುದಕ್ಕೆ ಏಳುವುದು. ನಿಮ್ಮ ಮಗುವಿನ ಮುಂದೆ ಕುಳಿತು "ಅಮ್ಮ ಹೊಡೆದಳು" ಎಂದು ನಿಮ್ಮ ಕಣ್ಣನ್ನು ಮುಚ್ಚಿಕೊಳ್ಳಿ ಅಥವಾ ಹತ್ತಿರ ಕೈಯನ್ನಿಟ್ಟು ಸುಮ್ಮನೆ ಆಟಕ್ಕೆ "ಅಬ್ಬಾ" ಎನ್ನಿ, ಇನ್ನೇನಾದರೂ ಕೆಲಸದಲ್ಲಿರುವ ಮಗು ನಿಮ್ಮ ಕಣ್ಣಿಂದ ಕೈಯನ್ನು ತೆಗೆಯಲು ಬರುವುದು; ಇಲ್ಲವೆ ನಿಮ್ಮ "ಅಬ್ಬಾ"ವನ್ನು ಸರಿಯೆನಿಸುವುದಕ್ಕೆ ನಿಮ್ಮನ್ನು ಹೊಡೆಯಲು ಬರುವುದು. ಬೇರೆ ವಿಷಯಗಳಿಗೆ ಮನಸ್ಸನ್ನು ಕೊಟ್ಟು ಸ್ತ್ರೀಯ ಮಾಯಕ್ಕೆ ಸಿಕ್ಕದೆ ಇದ್ದ ಸನ್ಯಾಸಿಗೆ ಈ ಮಾಯಾವಿನಿ ಆಡಿದ "ಅಬ್ಬಾ" ಎಂಬ ಆಟದಿಂದ ಹೊಡೆಯೋಣವೆಂದು ತೋರಿತು. ಆಮೇಲೆ, ಇದೇನು ನನಗೆ ಬಂದ ಅವಿವೇಕ, ಎಂದು ಅವನು ಆ ಯೋಚನೆಯನ್ನು ಬಿಟ್ಟು ಧ್ಯಾನಕ್ಕೆ ಕುಳಿತನು.

ಧ್ಯಾನದಲ್ಲಿ ದಿನವೂ ಶಾರದಾಂಬೆಯ ರೂಪು ಒಂದು ಮಾತ್ರ ಕಾಣುತ್ತಿತ್ತು. ಇಂದು ಶಾರದಾಂಬೆಯ ಆ ಸೌಮ್ಯವಾದ ರೂಪಿನೊಂದಿಗೆ ಇನ್ನೊಂದು ರೂಪೂ ಕಾಣುತ್ತಿತ್ತು. ಯಾರದು? ಈ ತರುಣಿಯ ರೂಪು. ಆಟವನ್ನು ಎಂದೂ ಆಡದವನು ಇಂದು ಆಟವಾಡಬೇಕೆಂದು ತೋರಿದ ಆಸೆಯನ್ನು ಒತ್ತಟ್ಟಿಗಿಡಲು ಕಷ್ಟಪಡಬೇಕಾಗಲಿಲ್ಲ. ಆದರೆ ಆ ಆಸೆಗೆ ಆಧಾರವಾದ ಮನಸ್ಸಿನ ಅವಸ್ಥೆ ಹಾಗೆಯೇ ಇತ್ತು. ಯೋಚನೆ ಮಾಡಿ ನೋಡಿದ್ದರಲ್ಲಿ ಸನ್ಯಾಸಿಗೆ ತಾನು ಆ ಚೆಲುವೆಯ ರೂಪಿನಿಂದ ಮುಗ್ಧನಾಗಿದ್ದನೆಂದು ತೋರಿತು. ಎಂದರೇನು? ಅವಳನ್ನು ಮದುವೆ ಮಾಡಿಕೊಳ್ಳಲೆಂದು ಆಸೆಯೆ? ಛೆ ಸನ್ಯಾಸಿಯಾದವನಿಗೆ ಮದುವೆಯ ಮಾತೇನು? ಅವಳನ್ನು ಪ್ರಣಯ ವಧುವನ್ನಾಗಿರಿಸಿಕೊಳ್ಳಲೆ? ಅಂತಹ ದುಷ್ಟವಾದ ಆಸೆ ಆ ಮನಸ್ಸಿನಲ್ಲೆ ಹೊಗದು. ಮತ್ತೇನೆಂದು ಆಸೆ?

ಅವಳನ್ನು ನೋಡಬೇಕೆಂದು; ಅವಳನ್ನು ಸುಮ್ಮನೆ ನೋಡಬೇಕೆಂದು. ಸನ್ಯಾಸಿಯ ಶುದ್ಧವಾದ ಮನಸ್ಸಿನಲ್ಲಿ ದುಷ್ಟವಾದ ಯಾವ ಯೋಚನೆಗೂ ಅವಕಾಶವಿರಲಿಲ್ಲ. ಅವನು ಆ ಸುಂದರಿಯ ಮುಖವನ್ನು ಪುನಃ ನೋಡಬೇಕೆಂದು ಮಾತ್ರ ಅಪೇಕ್ಷಿಸಿದನು. ನೀವು ಬೀದಿಯಲ್ಲಿ ಹೋಗುತ್ತಿರುವಾಗ ಯಾರ ಪಮೃಳಿಯುಲ್ಲಾದರೂ ಇರುವ ಗುಲಾಬಿ ಗಿಡದಲ್ಲಿ ಸೊಗಸಾದ ಕೆಂಪು ಬಿಳುಪಿಂದ ನೆಯ್ದಿರುವ ಅಂದವಾದ ಹೂ ಒಂದನ್ನು ನೋಡಬಹುದಲ್ಲವೆ? ಅದನ್ನು ಚೆನ್ನಾಗಿ ನೋಡೋಣವೆಂದು ನೀವು ನಿಲ್ಲಬಹುದು. ಅದನ್ನು ಕದಿಯಬೇಕೆಂದು ನಿಮಗೆ ಯೋಚನೆಯೇ ಹೋಗದು; ಆದರೆ ಅದನ್ನು ನೋಡೋಣವೆಂದು ಅಪೇಕ್ಷಿಸೀರಿ. ಸನ್ಯಾಸಿಗೆ ಈ ಯುವತಿಯ ವಿಷಯದಲ್ಲಿ ತೋರಿದ್ದು ಇದೇ ತೆರದ ಆಸೆ. ಅವನು ಅವಳನ್ನು ನೋಡಬೇಕು, ಚೆನ್ನಾಗಿ ನೋಡಬೇಕು, ಎಂದು ಅಪೇಕ್ಷಿಸಿದನು. ಅಪೇಕ್ಷೆಯೊಂದಿಗೆ ಮನಸ್ಸಿನಲ್ಲಿ ಅಭ್ಯಾಸಬಲದಿಂದ ಇದು ತಪ್ಪು, ಈ ಅಪೇಕ್ಷೆ ನನಗೆ ಸಲ್ಲದು ಎಂಬ ಯೋಚನೆಯೊಂದು. ಸ್ವಲ್ಪ ಹೊತ್ತಿನ ಮೇಲೆ ಈ ಯೋಚನೆ ಪ್ರಬಲವಾಗಿ ಅವನು ಆಸೆಯನ್ನು ಹೇಗಾದರೂ ಜಯಿಸಬೇಕೆಂದು "ಶೇಷಾ" ಎಂದು ಶಿಷ್ಯನನ್ನು ಕೂಗಿದನು.

ಶಿಷ್ಯನನ್ನು ಕೂಗಿದಾಗ ಇದ್ದ ಉದ್ದೇಶ ಅವನು ಬರುವ ವೇಳೆಗೆ ಇಲ್ಲದೆಹೋಯಿತು. "ಈ ಹುಡುಗಿಯ ಈ ಮೋಹಕರವಾದ ಸೌಂದರ್ಯದಿಂದ ಸೋತು ತನ್ನ ಮನಸ್ಸು ತನ್ನನ್ನು ಏನುಮಾಡುವುದೋ, ಶೇಷನು ಹತ್ತಿರ ಮಲಗಿದ್ದರೆ ಅವನು ಇರುವನಲ್ಲಾ ಎಂದಾದರೂ ನಾಚಿಕೊಂಡು ಸುಮ್ಮನಿದ್ದೇನು" ಎಂದು ಸನ್ಯಾಸಿ ಶೇಷನನ್ನು ಹತ್ತಿರ ಮಲಗಿಕೊ ಎಂದು ಹೇಳುವುದಕ್ಕೋಸ್ಕರ ಕೂಗಿದನು. ಶೇಷನು ಬರುವುದರಲ್ಲಿ "ನಾನು ಅಷ್ಟು ದುಷ್ಟನೆ? ನನ್ನ ಮನಸ್ಸು ಇಷ್ಟು ದಿನ ಸರಿಯಾಗಿದ್ದದ್ದು ಇಂದು ಸೋಲುವುದೆ? ನನ್ನ ಮನಸ್ಸಿನಲ್ಲಿ ನನಗೆ ಧೈರ್ಯವಿಲ್ಲದಿದ್ದರೆ ಶೇಷನಿಂದ ಸರಿಯಾಗಿರಬಲ್ಲೆನೆ? ಧರ್ಮದಲ್ಲಿ ನಂಬಿಕೆಯನ್ನು ಬಿಟ್ಟು ಜಂಭದ ಮೇಲೆ ಭಾರವನ್ನು ಹಾಕಲೆ" ಎಂದು ಮೊದಲಾಗಿ ಯೋಚನೆ ಮಾಡಿಕೊಂಡು ಶೇಷನು ತನ್ನ ಬಳಿ ಮಲಗುವುದು ಅವಶ್ಯಕವಿಲ್ಲವೆಂದು

ನಿರ್ಧರಮಾಡಿಕೊಂಡನು. ಒಳಮನಸ್ಸಿನಲ್ಲಿ ಮತ್ತೆ ಯಾವ ಯೋಚನೆ ಇತ್ತೋ? ಸನ್ಯಾಸಿಗೆ ಸ್ಪಷ್ಟವಾಗಿ ತಿಳಿದಿದ್ದಿರಲಾರದು. ಶೇಷನು ಬಂದು ಹತ್ತಿರ ಮಲಗಿದ್ದಾದರೆ ಪುನಃ ಆ ಸುಂದರವಾದ ಮುಖವನ್ನು ನೋಡಬೇಕೆಂಬ ಆಸೆ ಎಷ್ಟು ಬಲವಾದರೂ ಅದನ್ನು ತೀರಿಸಿಕೊಳ್ಳಲು ಆಗುವುದಿಲ್ಲ, ಸುಮ್ಮನಿರಬೇಕಾಗುವುದು. ತನ್ನ ಅಪೇಕ್ಷೆ ಅಷ್ಟೇನೂ ತಪ್ಪಾದ ಅಪೇಕ್ಷೆಯಲ್ಲ. ತಾನು ಅವಳಿಗೆ ಕೆಟ್ಟುದನ್ನೇನನ್ನೂ ಎಣಿಸಿರಲಿಲ್ಲ. ಕೇವಲ ಅವಳ ಆ ಸುಂದರವಾದ ಮುಖವನ್ನು ನೋಡ ಬೇಕು, ಆ ಸೆಳೆಮಿಂಚಿನಂತಹ ಆ ಆಕಾರವನ್ನು ನೋಡಬೇಕು, ಎಂದು ಅಪೇಕ್ಷಿಸಿದ್ದು ಎಷ್ಟೋ ಅಷ್ಟೆ. ಬೆಳಗಾದ ಮೇಲೆ ಅವಳನ್ನು ಧಾರಾಳ ವಾಗಿ ಕಣ್ಣಾರೆ ನೋಡಲಾಗುವುದಿಲ್ಲ, ರಾತ್ರಿ ಯಾವುದಾದರೂ ಒಂದು ನೆಪದಿಂದ ಅವಳನ್ನು ಎಬ್ಬಿಸಿ ಸುಮ್ಮನೆ ಒಂದು ಸಲ ಚೆನ್ನಾಗಿ ಆ ರೂಪ ವನ್ನು ನೋಡಿದರೆ ಸಾಕು. ಶೇಷನು ಹತ್ತಿರ ಮಲಗಿದರೆ ಹೀಗೆ ಮಾಡು ವುದಕ್ಕಾಗುವುದಿಲ್ಲ. ಹೀಗೆಂದು ಮನಸ್ಸಿನಲ್ಲಿ ಎಣಿಸಿದನೋ ಏನೋ. ಧರ್ಮದಿಂದಲ್ಲದೆ ಜಂಭದಿಂದ ಸರಿಯಾಗಿರಲೆ? ಎಂಬುದು ತನಗೆ ತಿಳಿದ ಹಾಗೆಯೂ ಶೇಷನು ಬಂದರೆ ತನ್ನ ಅಪೇಕ್ಷೆಯನ್ನು ನೆರವೇರಿಸಿಕೊಳ್ಳ ಲಾಗುವುದಿಲ್ಲವೆಂಬುದು ತನಗೇ ತಿಳಿಯದಹಾಗೆಯೂ ಮೊದಲ ಉದ್ದೇಶ ವನ್ನು ಬದಲಾಯಿಸಿದುದಕ್ಕೆ ಕಾರಣವಾಗಿದ್ದಿರಬಹುದು. ಅಂತೂ ಶೇಷನು ಗುರುವಿನ ಕೂಗನ್ನು ಕೇಳಿ ಬಂದು ಅವನ ಎದುರಿಗೆ ನಿಂತಾಗ ಸನ್ಯಾಸಿ 'ಏನೂ ಇಲ್ಲ. ಹೋಗಿ ಮಲಗಿಕೊ' ಎಂದನು. ಶೇಷನು ಹೊರಟುಹೋದನು.

ಧರ್ಮವನ್ನು ಬಿಟ್ಟು ಜಂಭದ ಮೇಲೆ ಊರಲೆ ಎಂದು ಜಂಭದ ಸಹಾಯವನ್ನು ತೊರೆದು ಸನ್ಯಾಸಿ ದಿನವೂ ತಾನು ಊರಿಕೊಂಡು ನಡೆಯುವ ಕೋಲಿನ ಬೆಲೆಯನ್ನು ತಿಳಿಯದೆ ಅದನ್ನು ಎಸೆಯುವ ಹೆಳವನಂತೆ ನಿರಾಧಾರನಾದನು. ಅವನ ಸ್ವಚ್ಛವಾದ ಮನಸ್ಸಿನಲ್ಲಿ ಈ ಆಸೆ ದೊಡ್ಡದಾಗುತ್ತ ಬಂತು. ನೀವು ಎಂದಾದರೂ ಒಂದು ದಿನ ಶುಭ್ರವಾದ ಪ್ರಾತಃಕಾಲದಲ್ಲಿ ತಿಳಿನೀರಿನ ಕೊಳ ಒಂದರ ತಡಿಯಲ್ಲಿ ಕುಳಿತಿರುವಿರೆನ್ನಿ. ನೀರಿನಲ್ಲಿ ಪ್ರತಿಬಿಂಬಿಸಿರುವ ಆಕಾಶದ ಸ್ವಲ್ಪ

ಮೋಡದ ಅತಿ ಸೂಕ್ಷ್ಮವಾದ ನೆರಳು ಅದರಲ್ಲಿ ಕಾಣುತ್ತಿರುವುದು. ಆ ನೆರಳು ಆ ನೀರಿನ ಗುಣವಲ್ಲ, ಆದರೂ ಅದರಿಂದ ನೀರಿನ ಶುಭ್ರತೆ ಕೆಟ್ಟಿರುವುದು. ಹಾಗೆಯೇ ನೋಡುತ್ತಿರುವಲ್ಲಿ ಆ ಮೋಡದ ನೆರಳು ಘನೀಭೂತವಾಯಿತೋ ಎಂಬಂತೆ ಆ ನೆರಳಿಂದ ಅಶುಭ್ರವಾಗಿ ಕಾಣು ತ್ತಿರುವ ಸ್ಥಳದಲ್ಲಿ ಕಪ್ಪೂ ಕ್ರೂರವೂ ಆದ ಜಲಸರ್ಪವೊಂದು ಅಡಿಯಿಂದ ಮೇಲಕ್ಕೆ ಬಂದರೆ? ಇಂದು ಸನ್ಯಾಸಿಯ ಅಚ್ಛವಾದ ಮನಸ್ಸಿನಲ್ಲಿ ಆ ಸೆಳೆಮಿಂಚಿನಂತ ಸ್ತ್ರೀಯನ್ನು ನೋಡಿದಾಗ ಅದಕ್ಕೆ ಸ್ವಭಾವವಲ್ಲದ ಒಂದು ಮಾಲಿನ್ಯ ಉಂಟಾಗಿ ಮೆಲ್ಲನೆ ಬಲಿತು ಈಗ, ಅವಳನ್ನು ಸುಮ್ಮನೆ ನೋಡಬೇಕು ಅಷ್ಟೇ, ಎಂಬ ಸರ್ಪವಾಗಿ ಚೇತನದೊಳಗಿಂದ ಬಂದು ಬಲಿತು ಮನಸ್ಸನ್ನೇ ಕೆಡಿಸಿತು. ಅವನು ಪುನಃ ಪುನಃ ಆ ರೂಪವನ್ನು ನೆನೆದುಕೊಂಡನು. ಅನಂತವಾದ ಶಾಂತಿಗೆ ಇಂಬಾಗಿ ಶೋಭಿಸುತ್ತಿದ್ದ ಆ ಸಂಜೆಯನ್ನೂ, ಹಾಲನ್ನು ಊಡುವುದಕ್ಕೆ ಮಗುವಿಗೆ ಸೆರಗನ್ನು ಹೊದಿಸುವ ತಾಯಂತೆ ಕತ್ತಲಿಂದ ಪ್ರಪಂಚವನ್ನು ಮುಸುಕಿ ಬರುತ್ತಿದ್ದ ಆ ಮುನ್ನಿರುಳನ್ನೂ, ನಾನು ಸಹಸ್ರ ಪಾಲಾದರೂ ಸರಿ ಪ್ರಪಂಚಕ್ಕೆ ಪ್ರಯೋಜನವಾದರೆ ಸಾಕು ಎಂದು ಯಜ್ಞೇಶ್ವರನು ತನ್ನ ಅಂಗಾಂಗ ವನ್ನು ಛಿದ್ರಮಾಡಿ ಎಲ್ಲರಿಗೂ ಹಂಚಿದನೋ ಎಂಬಂತೆ ತೋರುತ್ತಿದ್ದ ಹಳ್ಳಿಯ ದೀಪಗಳನ್ನೂ, ಈ ಶಾಂತಿಸಾಗರದಲ್ಲಿ ಸಣ್ಣ ಸಣ್ಣ ತರಂಗ ಮಾಲೆಯಂತೆ ಬಂದ ಆ ಅಂದುಗೆಯ ಶಬ್ದವನ್ನೂ, ದೀಪದ ಬೆಳಕಿನಲ್ಲಿ ನೋಡಿದಾಗ ತನ್ನ ಕಣ್ಣನ್ನು ಮುಚ್ಚಿಸಿದ ಆ ಸೌಂದರ್ಯವನ್ನೂ, ದೀಪ ವನ್ನು ತಂದಾಗ ಆ ತರುಣಿ ನಾಚಿಕೊಂಡದ್ದನ್ನೂ, ತನ್ನ ವಿಷಯದಲ್ಲಿ ಸಂದೇಹಪಟ್ಟದ್ದನ್ನೂ, ಭಯದಿಂದಲೂ ಕುತೂಹಲದಿಂದಲೂ ನಾಚಿಕೆ ಯಿಂದಲೂ ಒಂದು ಆಸೆಯಿಂದಲೂ ಎಂಬಂತೆ ಆಡುತ್ತಿದ್ದ ದೃಷ್ಟಿಯ ಆ ಕಣ್ಣುಗಳನ್ನೂ, ಬಣ್ಣಿಸಲಾಗದ ಆ ಎಲ್ಲಾ ವಿಲಾಸವನ್ನೂ ನೆನೆನೆನೆದು ಸನ್ಯಾಸಿ ತೀರ ಹುಚ್ಚನಾದನು. ನೋಡಬೇಕೆಂಬ ಆಸೆ ತಪ್ಪೆಂದು ಬೆಪ್ಪನಂತಾದನು. ಇದು ತಪ್ಪು ಎಂದು ಶಾರದಾಂಬೆಯ ಧ್ಯಾನಕ್ಕೆ ಮನಸ್ಸನ್ನು ಬಗ್ಗಿಸಲು ಅದು ಬಗ್ಗದು. ಹಸಿವಿಗೆ ನಾನು ಸೋಲ ಬಾರದು, ದಾಹಕ್ಕೆ ನಾನು ಸೋಲಬಾರದು, ಎಂದು ನಾವು ದೃಢಮಾಡಿ

ಕೊಂಡು ಕುಳಿತು ಅವುಗಳ ಕಡೆಗೆ ಮನಸ್ಸನ್ನು ಕೊಡದೆ ಇದ್ದರೂ ಅವು ದೇಹಾದ್ಯಂತವನ್ನು ಕೊಡೆಯುತ್ತ ಶೋಷಿಸುತ್ತ ನೆಲೆಸುವಂತೆ ಈ ಸ್ತ್ರೀಯನ್ನು ಇನ್ನೊಂದು ಸಲ ನೋಡಬೇಕೆಂಬ ಆಸೆ, ಇದು ತಪ್ಪೆಂದು ಸನ್ಯಾಸಿ ಅದನ್ನು ಎಷ್ಟು ನಿರೋಧಿಸಿದರೂ ಅವನ ಮನಸ್ಸನ್ನು ಕೊಡೆಯುತ್ತ ಶೋಷಿಸುತ್ತ ಕ್ಷಣಕ್ಷಣಕ್ಕೂ ಪ್ರಬಲವಾಗಿ ಕೊನೆಗೆ ಅವನಿಂದ ತಡೆಯಲಾಗದಂತೆ ಬೆಳೆದುಹೋಯಿತು.

ಅದೇನು ಆ ಯುವತಿಯ ಸೌಂದರ್ಯ ಅಂತಹದು? ಎನ್ನುವಿರಿ. ಸ್ತ್ರೀ ಸೌಂದರ್ಯದಲ್ಲಿ ಎರಡು ವಿಧ ಇದೆ. ಸೌಮ್ಯವಾದುದಾಗಿ ನಮ್ಮ ಆತ್ಮವನ್ನು ಆವರಿಸಿ ಶಾಂತವಾಗಿ ನಿಲ್ಲಿಸುವುದು ಒಂದು; ಇದು ತಾಯ್ತನದ ಸೌಂದರ್ಯ. ಮನಸ್ಸನ್ನು ಮುತ್ತಿ ಮರುಳು ಮಾಡುವುದು ಒಂದು; ಇದು ಇನಿಯಳ ಸೌಂದರ್ಯ. ಯಾವ ಮನುಷ್ಯನ ಕಣ್ಣಿಗೂ ಯಾವ ಸ್ತ್ರೀಯಲ್ಲೂ ಈ ಸೌಂದರ್ಯ ವಿಶೇಷಗಳು ಇರುವುವು. ಅನೇಕರಲ್ಲಿ ಎರಡೂ ಹೆಚ್ಚು ಕಮ್ಮಿಯಾಗಿ ಸೇರಿರುವುವು. ತಾಯ್ತನದ ಸೌಂದರ್ಯವನ್ನು ಕಂಡು ಮನಸ್ಸು ಶಾಂತವಾಗುವುದು; ಇನಿಯಳ ಸೌಂದರ್ಯವನ್ನು ಕಂಡು ಮೋಹಗೊಳ್ಳುವುದು. ನಿಷ್ಕಲ್ಮಷನಾದ ಮನುಷ್ಯನ ಮನಸ್ಸು ಮುಕ್ಕಾಲುಪಾಲು ಸ್ತ್ರೀಯರಲ್ಲೂ ತಾಯ ಸೌಂದರ್ಯ ಸ್ವಲ್ಪವಿದ್ದರೂ ಅದನ್ನು ಕಾಣುವುದು, ಈ ಮೋಹಗೊಳಿಸುವ ಸೌಂದರ್ಯವನ್ನು ಕಾಣದು: ಆ ವಿಷಯವನ್ನು ಯೋಚಿಸದೇ ಇರುವುದರಿಂದ. ಆದರೆ ಕೇವಲ ಮಾಯದ ಅಳುಕುಬಳುಕಿನ ಲಾವಣ್ಯದ ಮೋಹಕ ಶಕ್ತಿಯೇ ಮೈಗೊಂಡಂತೆ ಇನಿಯಳ ಸೌಂದರ್ಯ ಎದುರಿಗೆ ಬಂದರೆ ಯಾವ ನಿಷ್ಕಲ್ಮಷವಾದ ಮನಸ್ಸು ತಾನೇ ವಿಷಪರೀಕ್ಷೆಗೆ ನಿಂತೂ ಸೋಲದೆ ಇರುವುದು? ಇಂದು ಸನ್ಯಾಸಿಯ ಮನಸ್ಸು ಸೋತಿತು.

ಸನ್ಯಾಸಿ ಹಾಗೆಯೇ ಸ್ವಲ್ಪಹೊತ್ತು ಕುಳಿತಿದ್ದು ಮೆಲ್ಲಗೆ ಎದ್ದನು. ಅವಳನ್ನು ಎಬ್ಬಿಸಿ ಸುಮ್ಮನೆ ಒಂದು ಸಲ ನೋಡಬೇಕೆಂದು ಮನಸ್ಸು ಮಾಡಿಕೊಂಡು ಬಾಗಿಲಿಗೆ ಹೋಗಿ ಅದನ್ನು ನೂಕಿದನು. ಒಳಗೆ ಅಗಣಿ ಹಾಕಿತ್ತು. ಬಾಗಿಲಿಗೆ ಕಿವಿಕೊಟ್ಟು ಕೇಳಿದನು. ಒಳಗೆ ಆ ಸ್ತ್ರೀ

ಮಲಗಿ ನಿದ್ದೆಹೋಗುತ್ತಾ ಸಮನಾಗಿ ಬಿಡುತ್ತಿದ್ದ ನೀಳವಾದ ಉಸಿರಿನ ಶಬ್ದ ಕೇಳಿಸುತ್ತಿತ್ತು. ಆ ಮುದ್ದಾದ ಮುಖ ಹಾಸಿಗೆಯಲ್ಲಿ ಎಷ್ಟು ಸುಂದರವಾಗಿರಬಹುದು! ಸನ್ಯಾಸಿ ಪುನಃ ಬಾಗಿಲನ್ನು ಮೆಲ್ಲನೆ ನೂಕಿದನು. ಸ್ವಲ್ಪ ಶಬ್ದವಾಯಿತು. ಸ್ತ್ರೀ ಗಾಬರಿಯಿಂದೆದ್ದು "ಯಾರು" ಎಂದಳು.

ಸ್ವಾಮಿ, "ನಾನು, ತಾಯಿ," ಎಂದು.

ಸ್ತ್ರೀ "ಮಠದ ಸ್ವಾಮಿಗಳೇ?" ಎಂದಳು.

"ಹೌದು."

"ಏನು, ತಂದೆಗಳೆ? ನಮ್ಮ ಯಜಮಾನರು ಬಂದರೆ?"

"ಇಲ್ಲವಮ್ಮ. ನೀನು ಸುಖವಾಗಿ ನಿದ್ರಿಸುತ್ತಿದೀಯೋ ಇಲ್ಲವೋ ಎಂದು ನೋಡುವುದಕ್ಕೆ ಬಂದೆ."

"ನಿದ್ದೆಯಲ್ಲಿದ್ದ ಸುಖ ಎಚ್ಚರದಲ್ಲಿಲ್ಲ, ದೇವರೆ. ನಿದ್ದೆಯಲ್ಲಿ ನಮ್ಮ ಯಜಮಾನರೊಂದಿಗೆ ಪ್ರಯಾಣಮಾಡುತಿದ್ದಂತೆ ಸ್ವಪ್ನವನ್ನು ಕಂಡೆನು."

"ಅದು ಶುಭಸೂಚಕ. ಏನೂ ಭಯವಿಲ್ಲವಷ್ಟೆ?"

"ಇಲ್ಲ, ದೇವರು."

"ಇದೇನು ಬಾಗಿಲನ್ನು ಹಾಕಿಕೊಂಡಿದೀಯೋ?"

"ಹೌದು ಸ್ವಾಮಿ, ನಾನು ಒಂಟಿ ಹೆಂಗಸು, ಮನಸ್ಸಿನ ಧೈರ್ಯಕ್ಕೋಸ್ಕರ ಹಾಕಿಕೊಂಡೆ."

"ಇಲ್ಲ ನಮ್ಮ ವಿಷಯದಲ್ಲಿ ಸಂದೇಹವೋ?"

"ಇಲ್ಲ, ಮಹಾಸ್ವಾಮಿ."

"ಹಾಗಾದರೆ ಇಷ್ಟು ನಾನು ಮಾತನಾಡುತ್ತಿದ್ದರೂ ಬಾಗಿಲನ್ನು ತೆಗೆಯಲಿಲ್ಲವೇಕೆ?"

"ತಾವು ಸನ್ಯಾಸಿಗಳು. ತಮಗೆ ಈ ವಿಚಾರಗಳು ತಿಳಿಯಲಾರವು. ನಾನು ಒಂಟಿಯಾಗಿರುವ ಹೆಂಗಸು ನಡುರಾತ್ರಿಯಲ್ಲಿ ನಿಮಗೆ ಬಾಗಿಲನ್ನು ತೆಗೆದರೆ ಜನ ನನ್ನನ್ನು ಏನೆನ್ನುವರು?

"ನಾನು ಸನ್ಯಾಸಿ. ಯಾರು ಏನೆನ್ನುವರು?"

"ನೀವು ಕೆಟ್ಟವರಲ್ಲವೆಂದು ನನಗೆ ಧೈರ್ಯ. ಆದರೂ ನನ್ನ ಬಟ್ಟೆಯೊಂದೂ ಸರಿಯಾಗಿಲ್ಲ. ಮಲಗಿದ್ದು ಎದ್ದಿದ್ದೇನೆ. ನನ್ನನ್ನು ಈ ವೇಷದಲ್ಲಿ ನೋಡುವುದು ನಿಮಗೆ ಒಳ್ಳೆಯದಲ್ಲ."

"ಹಾಗಾದರೆ ನೀನು ಬಾಗಿಲು ತೆಗೆಯುವುದಿಲ್ಲವೆ?"

"ಈಗ ನಾನು ಈ ಬಾಗಿಲನ್ನು ನನ್ನ ಯಜಮಾನರಿಗೆ ಒಬ್ಬರಿಗೆ ವಿನಾ ಇನ್ನು ಯಾವ ಪುರುಷನಿಗೂ ತೆಗೆಯುವುದಿಲ್ಲ. ವಿದ್ವಾಂಸನಾದರೂ ಸರಿಯೆ ವೃದ್ಧನಾದರೂ ಸರಿಯೆ ಸನ್ಯಾಸಿಯಾದರೂ ಸರಿಯೆ."

ಸನ್ಯಾಸಿ ಸ್ವಲ್ಪ ಅಪ್ರತಿಭನಾದನು. ಅರೆ ಕ್ಷಣ ಬಿಟ್ಟುಕೊಂಡು "ಆ ಶ್ಲೋಕವನ್ನು ನೀನು ಬಲ್ಲೆಯಾ?"

"ಇದು ನನ್ನ ಮಾತೇ."

"ಇದು ಹುಡುಗಾಟ. ನೀನು ಒಂದು ಕ್ಷಣ ಬಹು ಕಠಿಣವಾದ ಮಾತನಾಡುತ್ತೀಯೆ. ಉತ್ತರಕ್ಷಣದಲ್ಲಿ ಹಾಸ್ಯಮಾಡುವೆ. ನೋಡು ಅದನ್ನು ಹೇಳಿದವನಿಗೆ ಈ ವಿಷಯ ತಿಳಿಯದು ಎಂಬುದನ್ನು ಈಗ ತೋರಿಸುತ್ತೇನೆ. ಈಗ ಬಾಗಿಲನ್ನು ತೆಗೆ, ಸರಿಯಾದ ಸನ್ಯಾಸಿಗೆ ಆ ಹುಚ್ಚು ಇಲ್ಲವೆಂದು ತೋರಿಸುತ್ತೇನೆ."

"ನೀವು ಬೇಕಾದುದ್ದನ್ನು ಹೇಳಿ. ನಾನು ಬಾಗಿಲನ್ನು ತೆರೆಯುವುದಿಲ್ಲ."

"ಬಾಗಿಲನ್ನು ತಳ್ಳಿದರೆ?"

"ತಳ್ಳಿದವರಿಗೆ ಬುದ್ಧಿ ಬರುವುದು."

ಸನ್ಯಾಸಿ ಸ್ವಲ್ಪಹೊತ್ತು ಸುಮ್ಮನಿದ್ದು ಇದೋ ತೆಗೆದೆ ಎಂದು ಬಾಗಿಲನ್ನು ನೂಕಿದನು. ಅಗಣಿ ಹಾಕಿರಲಿಲ್ಲ; ಅದು ತಟ್ಟನೆ ತೆರೆಯಿತು.

ಒಳಗೆ ಆ ಸ್ತ್ರೀ ಕಾಣಲಿಲ್ಲ. ಜಟಾಧಾರಿಯಾಗಿ, ಹೊರಹೊಮ್ಮುವ ತಪಶ್ಶಕ್ತಿಯಿಂದ ಹೊಳೆಯುವ ಮುಖವುಳ್ಳ, ಒಬ್ಬ ಮುದುಕನು ಕಂಡನು. ಸನ್ಯಾಸಿ ಬೆದರಿದನು. ಎದುರ ಮುಖದ ಮೇಲೆ ಕಂಡ ಅಸಮಾಧಾನಯುಕ್ತವಾದ ನಗೆಯನ್ನು ನೋಡಿ ಅಪ್ರತಿಭನಾಗಿ ನಿಂತನು.

ಮುದುಕನು "ಮನಸ್ಸು ಸೆಳೆಯದೆಯೋ ಅವಳ ಮುಖವನ್ನು ನೋಡಲು ಅಷ್ಟು ಆಸೆಯೇಕೆ" ಎಂದನು.

ಸನ್ಯಾಸಿ ಕಾಲಿಗೆಬಿದ್ದು "ನಾನು ಅಜ್ಞ, ಕ್ಷಮಿಸಬೇಕು" ಎಂದು ಬೇಡಿಕೊಂಡನು.

"ನಾನು ಬರೆದದ್ದು ಸರಿಯಲ್ಲವೆಂದೆ. ನನ್ನನ್ನು ನೀನು ಕಾಣೆ, ಹೋಗಲಿ. ನಿನ್ನ ಗುರುವಿನ ಮಾತಿನಲ್ಲೇ ನಿನಗೆ ನಂಬಿಕೆ ಬೇಡವೆ?"

"ನಾನು ಮಹಾಪರಾಧಿ."

"ಅವರಿಗೂ ನಮಸ್ಕರಿಸು."

ಸನ್ಯಾಸಿ ತಲೆಯನ್ನು ಎತ್ತಿದನು. ತನ್ನ ಗುರು ವ್ಯಾಸನ ಪಕ್ಕದಲ್ಲಿ ನಿಂತಿದ್ದನು. ಸನ್ಯಾಸಿ ಆತನಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು.

ಪುನಃ ಮಾತನಾಡಬೇಕೆಂದು ಏಳುವ ವೇಳೆಗೆ ಅಲ್ಲಿ ಯಾರೂ ಇರಲಿಲ್ಲ. ಸ್ತ್ರೀ ಮಾತ್ರ ಸಮೀಪದಲ್ಲಿ ಮಲಗಿ ನಿದ್ರಿಸುತಿದ್ದಳು. ಸನ್ಯಾಸಿಗೆ ಅವಳ ಹತ್ತಿರ ಹೋಗಿ ನೋಡಬೇಕೆಂದು ತೋರಲಿಲ್ಲ. ಇದೆಲ್ಲ ಗುರುಗಳ ಕಟಾಕ್ಷದಿಂದ ನಡೆದದ್ದೆಂದು ತಿಳಿದು ಅವನು ಹಿಂದಿರುಗಿ ಬಾಗಿಲನ್ನು ಮುಚ್ಚಿಕೊಂಡು ಬಂದು ಧ್ಯಾನದಲ್ಲಿ ಕುಳಿತನು. ಶಾರದಾಂಬೆಯ ಧ್ಯಾನ ಈಗ ಸಾಧ್ಯವಾಯಿತು.

ಬೆಳಗಾಗಿ ಕರ್ಮಸಾಕ್ಷಿ ಪುನಃ ಬಂದನು. ಸನ್ಯಾಸಿ ಧ್ಯಾನದಿಂದ ಏಳುವ ವೇಳೆಗೆ ಮಠದಲ್ಲಿ ಎಲ್ಲರೂ ಎಚ್ಚತ್ತು ಅವರವರ ಕೆಲಸಗಳನ್ನು ಮಾಡುತ್ತಿದ್ದರು. . ಅದಕ್ಕೆ ಮೊದಲೇ ಮಠಕ್ಕೆ ತನ್ನನ್ನು ಹುಡುಕಿಕೊಂಡು ಬಂದಿದ್ದ ತನ್ನ ಯಜಮಾನನೊಂದಿಗೆ ಬಂದು ಆ ಸ್ತ್ರೀಯು ಸನ್ಯಾಸಿಗೆ ನಮಸ್ಕಾರ ಮಾಡಿದಳು.

"ನನ್ನನ್ನು ಕೇಳುವವರೇ ಇಲ್ಲದಿದ್ದಾಗ ತಾವು ನನ್ನ ಮಾನವನ್ನು ರಕ್ಷಿಸಿದಿರಿ" ಎಂದಳು.

ಸನ್ಯಾಸಿ "ನಿನ್ನನ್ನೂ ನನ್ನನ್ನೂ ರಕ್ಷಿಸಿದವನು ದೇವರು," ಎಂದನು.

ಸ್ವಲ್ಪಬಿಟ್ಟು "ನಾನು ರಾತ್ರಿ ನಿನ್ನ ಕೊಟಡಿಯೊಳಕ್ಕೆ ಬಂದಿದ್ದೆ."

"ತಮ್ಮ ರಕ್ಷಣೆಯಲ್ಲಿದೇನೆಂಬ ಧೈರ್ಯದಿಂದಲೇನೋ ನನಗೆ ಬಹು ನಿದ್ದೆ ಬಂದಿತು. ನನಗೆ ತಾವು ಬಂದದ್ದೂ ತಿಳಿಯದು, ಬಾರದ್ದೂ ತಿಳಿಯದು. ಬೆಳಿಗ್ಗೆ ಎದ್ದಾಗ ಅಗಣಿ ತೆಗೆದಿತ್ತು, ನಾನು ಹಾಕಿಯೇ ಇರಲಿಲ್ಲವೇನೋ ಎಂದುಕೊಂಡೆ."

"ಇಲ್ಲವಮ್ಮ, ನೀನು ಅಗಣಿ ಹಾಕಿದ್ದೆ, ನಾನು ಅದನ್ನು ತೆಗೆದೆ."

ಹೀಗೆಂದು ಹೇಳಿ ಸನ್ಯಾಸಿ ಅವರಿಬ್ಬರನ್ನೂ ಮಧ್ಯಾಹ್ನದವರೆಗೆ ನಿಲ್ಲಿಸಿಕೊಂಡು ಅವರಿಗೆ ಶಾರದಾಂಬೆಯ ಸೇವೆಯನ್ನು ಮಾಡಿಸಿ ಊಟ ವಾದನಂತರ ಅವರನ್ನು ಕಳುಹಿಸಿದನು. ಬೆಳಗಿನಿಂದ ಮಧ್ಯಾಹ್ನದವರೆಗೆ ನೋಡುವಲ್ಲಿ ಸನ್ಯಾಸಿಗೆ ಆ ಸ್ತ್ರೀಯಲ್ಲಿ ಅದರ ಹಿಂದಣ ಸಾಯಂಕಾಲ ಕಂಡ ವಿಲಾಸಗಳು ಯಾವವೂ ಕಾಣಲಿಲ್ಲ.

ಅಂದಿನ ಮಧ್ಯಾಹ್ನ ಶಿಷ್ಯನಿಗೆ ಪಾಠ ಹೇಳುವಾಗ ಸನ್ಯಾಸಿ ಹಿಂದಿನ ದಿನದ ವ್ಯಾಸಕೃತ ಗ್ರಂಥದಲ್ಲಿ ಮೊದಲಿದ್ದಂತೆಯೇ ಶ್ಲೋಕವನ್ನು ತಿದ್ದಿಸಿದನು.

ತಿದ್ದಿದಮೇಲೆ ಶಿಷ್ಯನು "ಮಹಾಸ್ವಾಮಿ, ಹೀಗೆ ಶಾರದಾಂಬೆ ಆಜ್ಞೆ ಮಾಡಿದರೆ?" ಎಂದನು.

"ಏಕೆ?"

"ನಿನ್ನೆ ಶಾರದಾಂಬೆ ಬಂದಾಗ ನನಗೆ ತಿಳಿಯಿತು. ಆದರೆ ತಮ್ಮ ಇಷ್ಟ ಹೇಗೋ ಎಂದು ಸುಮ್ಮನಿದ್ದೆ. ರಾತ್ರಿ ತಾವು ನನ್ನನ್ನು ಕೂಗಿದಾಗ ಶಾರದಾಂಬೆಯ ದರ್ಶನಕ್ಕೆ ಕರೆದಿರೆಂದು ಬಂದೆ. ಆಮೇಲೆ ನನ್ನನ್ನು ಅದಕ್ಕೆ ಅನರ್ಹನೆಂದು, ಏನೂ ಇಲ್ಲ ಹೋಗು, ಎಂದಿರಿ. ಆಜ್ಞೆಯ ಮೇರೆ ಹಿಂದಕ್ಕೆ ಬಂದೆ. ಆದರೆ ಯಾತಕ್ಕಾದರೂ ಪುನಃ ಕರೆಯುವಿರೇನೋ ಎಂಬ ಆಸೆಯಿಂದ ಪಡಸಾಲೆಯಲ್ಲಿ ಕುಳಿತೆ. ತಾವು ಶಾರದಾಂಬೆಯ ಸಂಗಡ ಏನೋ ಮಾತನಾಡಿ ಬಾಗಿಲನ್ನು ತೆರೆದಾಗ ಏನೋ ಮಂಕು ಬಡಿದು ಅಲ್ಲೇ ಬಿದ್ದಿದ್ದು ಬೆಳಿಗ್ಗೆ ಎದ್ದೆ; ನಾನು ತಡೆಯಲಾರೆನೆಂದೇ ನನ್ನನ್ನು ತಾವು ಹಿಂದಕ್ಕೆ ಕಳುಹಿಸಿದಿರೆಂದು ಆಮೇಲೆ ತಿಳಿದೆ. ತಾವು ಸಾನ್ನಿಧ್ಯದಲ್ಲಿದ್ದಾಗ ಶಾರದಾಂಬೆ ಈ ವಿಷಯವನ್ನು ತಿಳಿಸಿದರೋ ಅಪ್ಪಣೆ ಕೊಡಬೇಕೆಂದು ಈಗ ಬೇಡಿಕೊಂಡೆ."

"ಈಗ ಹೋದ ಸ್ತ್ರೀ ಶಾರದಾಂಬೆಯೇನು?"

"ಅಲ್ಲ, ರಾತ್ರಿ ಬಂದ ಸ್ತ್ರೀ ಶಾರದಾಂಬೆ."

"ರಾತ್ರಿ ಬಂದವಳು ಏನಾದಳು?"

"ಮಹಾಸ್ವಾಮಿ ನಾನು ಏನು ಬಲ್ಲೆ? ತಮ್ಮ ಮಹಿಮೆಯಲ್ಲಿ ತಾವು ಏನು ಮಾಡಿದರೂ ಮಾಡಬಹುದು. ಇದನ್ನೂ ಅದನ್ನೂ ನಾನು ಬಲ್ಲೆನೆ? ಎಂದವಳು ಶಾರದಾಂಬೆಯೆಂದು ತಿಳಿಯುವುದನ್ನು ತಾವು ಅನುಗ್ರಹಿಸಿದಿರಿ; ತಿಳಿಯಿತು; ಮಿಕ್ಕ ಯಾವುದೂ ನನಗೆ ತಿಳಿಯದು."

"ಶೇಷಾ, ನೀನು ಜ್ಞಾನಿ, ನಾನು ಅಜ್ಞನು; ನೀನು ಶಾರದಾಂಬೆಯನ್ನು ನೋಡಿದಾಗ ನಾನು ಒಬ್ಬ ಸಾಮಾನ್ಯ ಸ್ತ್ರೀಯನ್ನು ನೋಡಿದೆನು; ಕೇಳು" ಎಂದು ಸನ್ಯಾಸಿ ಶಿಷ್ಯನಿಗೆ ರಾತ್ರಿ ನಡೆದದ್ದನ್ನೆಲ್ಲಾ ತಿಳಿಸಿದನು. ತಿಳಿಸಿ "ಇನ್ನು ನಮ್ಮ ಮಠದ ಶಿಷ್ಯರಿಗೆ ಎಲ್ಲರಿಗೂ ಸಮಯ ಸಿಕ್ಕಿದಾಗ ನನಗೆ ಈಗ ಆದದ್ದನ್ನು ತಿಳಿಸು. ಧರ್ಮದ ದಾರಿಯಲ್ಲಿ ದೇವರು ರಕ್ಷಿಸಬೇಕು. ಮನುಷ್ಯನ ಪ್ರಯತ್ನದಿಂದ ಅದು ಸಾಧ್ಯವಲ್ಲ. ಧರ್ಮಕ್ಕೆ ಅಹಂಕಾರ ಕುಠಾರಸ್ವರೂಪ. ಅಯ್ಯಾ, ಜಗನ್ಮೋಹನನು ಮೋಹಗೊಳಿಸುವುದಕ್ಕೆಂದು ತನ್ನ ಕಳೆಯಿಂದ ಮಾಡಿರುವ ಸೌಂದರ್ಯದಿಂದ ಮೋಹಗೊಳ್ಳದೆ ಇರುವೆನೆಂಬ ಮನುಷ್ಯನಾರು? ಮೋಹಗೊಳ್ಳುವುದು ಒಳ್ಳೆಯದೆ. ಆದರೆ ಆ ಎಲ್ಲ ಮೋಹವೂ ಅವನಲ್ಲಿ ಅರ್ಪಣವಾಗಬೇಕು. ಯಾವುದೂ ವಿಭೂತಿಮತ್ತಾಗುವುದು ಅವನ ದೆಸೆಯಿಂದಲೇ. ಆ ವಿಭೂತಿಗೆ ಮನಸ್ಸನ್ನು ಕೊಡಬಹುದು. ಆದರೆ ಹಾಗೆ ಕೊಟ್ಟ ಮನಸ್ಸು ಕೆಟ್ಟದಕ್ಕೆ ಹೋಗದಹಾಗೆ ನೋಡಿಕೊಳ್ಳುವಂತೆ ದೇವರಮೇಲೆ ಭಾರ ಹಾಕಬೇಕು" ಎಂದನು.

ಸನ್ಯಾಸಿ ಬಹಳ ಕಾಲ ಮಠದಲ್ಲೇ ಇದ್ದನು. ಗುರುಶಿಷ್ಯರಿಬ್ಬರಿಗೂ ಒಬ್ಬರಲ್ಲೊಬ್ಬರಿಗೆ ಭಕ್ತಿಯೂ ಪ್ರೀತಿಯೂ ದಿನದಿನವೂ ಹೆಚ್ಚುತ್ತ ಇದ್ದುವು. ತನ್ನ ತಪ್ಪನ್ನೊಪ್ಪಿದ ಗುರುವಿನ ಮಹಿಮೆಯಿಂದ ಅನೇಕರು ಧರ್ಮದ ದಾರಿಗೆ ಬಂದರು. ಅವನಿಗೆ ಅಲಂಕೃತವಾಗಿದ್ದ ಆ ಪೀಠ ಈಗ ಅತಿಶ್ರೇಷ್ಠವೂ ಅತಿಪಾವನವೂ ಆದ ಪೀಠವಾಗಿ ತಲೆತಲೆಯ ಜನರಿಗೂ ಜ್ಞಾನವನ್ನೂ ಜ್ಞಾನದಿಂದ ಬರುವ ಶಾಂತಿಯನ್ನೂ ಅನಂತವಾಗಿ ದಾನಮಾಡುತ್ತಿದೆ.

# ಬಾದಷಹನ ನ್ಯಾಯ

ಷಾಹ ಅಬಾಸ್* ಬಾದಷಹನು ನ್ಯಾಯ ತೀರಿಸುವುದೆಂದರೆ ಯಾವಾಗಲೂ ಜನ ಬಹಳ ನೆರೆಯುವರು. ಅವನು ಬಹಳ ನ್ಯಾಯಪರನು. "ತನ್ನವನು ಪರರವನು ಎನ್ನದೆ ತನ್ನ ರಾಜ್ಯದ ಪ್ರಜೆಗಳಲ್ಲೆಲ್ಲಾ ಏಕರೀತಿಯಾದ ವಿಶ್ವಾಸವನ್ನಿಟ್ಟಿದ್ದನು. ತಾನು ಮುಸಲ್ಮಾನನಾದರೂ ಮುಸಲ್ಮಾನರಿಗೆ ಪಕ್ಷಪಾತವನ್ನು ತೋರುತ್ತಿರಲಿಲ್ಲ." ಅದರಿಂದ ರಾಜ್ಯದ ಮುಸಲ್ಮಾನರಿಗೆ ಕೆಲವರಿಗೆ ಅಸಮಾಧಾನ. ಆದರೆ ಅವನ ಆ ನ್ಯಾಯಪರತೆಯನ್ನು ಮುಕ್ಕಾಲುಪಾಲು ಸೀಮೆಯೆಲ್ಲಾ ಮೆಚ್ಚಿತ್ತು. ತಿಳಿವುಳ್ಳ ಮುಸಲ್ಮಾನರು ಕ್ರೈಸ್ತ ಯೆಹೂದ್ಯರನ್ನು ತಮ್ಮಂತೆಯೇ ಪ್ರಜೆಗಳೆಂದೆಣಿಸುತ್ತ ರಾಜನ ಈ ನ್ಯಾಯಪರತೆಯನ್ನು ಒಪ್ಪಿ ಕೊಂಡಾಡುವರು. "ನ್ಯಾಯಪಕ್ಷಪಾತ ಹೇಗಿತ್ತೋ ಹಾಗೆಯೇ ಬಾದಷಹನಲ್ಲಿ ನ್ಯಾಯವನ್ನು ಕಂಡುಹಿಡಿಯುವ ಬುದ್ಧಿಸೂಕ್ಷ್ಮತೆಯೂ ಇತ್ತು." ಅನೇಕಾವೃತ್ತಿ ಅವನು ಇತರರಿಗೆ ತೋರದೆ ಇದ್ದ ಯಾವ ಯಾವುವೋ ಉಪಾಯಗಳಿಂದ ನಿಜಸ್ಥಿತಿಯನ್ನು ಕಂಡುಹಿಡಿದು ಜನರಿಗೆ ಆಶ್ಚರ್ಯವನ್ನು ಉಂಟುಮಾಡುತ್ತಿದ್ದನು. ಇದರಿಂದ ಯಾವುದಾದರೂ ಮುಖ್ಯವಾದ ಜಗಳಗಳಲ್ಲಿ ಇವನು ನ್ಯಾಯವನ್ನು ತೀರಿಸುವುದೆಂದರೆ ಜನ ಗುಂಪು ಗುಂಪಾಗಿ ಸೇರುವರು. ಬಾದಷಹನೂ ಕೂಡ, ನ್ಯಾಯ ಸಿಕ್ಕುವುದೆಂಬ ಧೈರ್ಯ ಜನರಿಗೆ ಹೆಚ್ಚಿದಷ್ಟೂ ರಾಜ್ಯ ಸ್ವಸ್ಥವಾಗಿರುವುದೆಂದೂ ರಾಜನಲ್ಲಿ ಭಕ್ತಿ ಹೆಚ್ಚುವುದೆಂದೂ ತಿಳಿದು, ಅಂಥ ಸಮಯಗಳಲ್ಲಿ ಜನರನ್ನು ಧಾರಾಳವಾಗಿ ಬಿಡಬೇಕೆಂದು ವಜೀರನಿಗೆ ಆಜ್ಞೆಮಾಡಿದ್ದನು.

"ಈ ದಿನ ನ್ಯಾಯಸ್ಥಾನದಲ್ಲಿ ಜನರ ಗುಂಪು ಎಂದಿಗಿಂತಲೂ ಹೆಚ್ಚಾಗಿ ಸೇರಿದೆ. ಉಸಾಫ್‌ಖಾನನಿಗೂ ಯೋಹಾನ್‌ಮಾತಿಯನಿಗೂ ಬಂದಿದ್ದ ಜಗಳದಲ್ಲಿ ಇಂದು ನ್ಯಾಯ ತೀರ್ಪು ಆಗಬೇಕಾಗಿದೆ. ಒಬ್ಬ ಮುಸಲ್ಮಾನ ಮತ್ತೊಬ್ಬ ಕ್ರೈಸ್ತ ಆದರೂ ಇವರು ಒಬ್ಬರಿಗೊಬ್ಬರು ಬಹಳ ವಿಶ್ವಾಸ

* ಪರ್ಷಿಯಾರಾಜ್ಯದ ಪ್ರಸಿದ್ಧ ಚಕ್ರವರ್ತಿಯೊಬ್ಬನು. ಕತೆಯ ಮೂಲ ಮನೂಚಿಯ ಮೊಗಲಾಯರ ಚರಿತ್ರೆಯ ಮೊದಲನೆ ಭಾಗದ ಹದಿನೈದನೆಯ ಅಧ್ಯಾಯದಲ್ಲಿದೆ.

ವಾಗಿದ್ದು ಬಹುಕಾಲ ಜೊತೆಯಾಗಿ ವ್ಯಾಪಾರ ಮಾಡುತ್ತಿದ್ದರು. ಒಬ್ಬರಿಗೊಬ್ಬರು ಹಣ ಕೊಡುವುದು ತೆಗೆಯುವುದು ಸುಮ್ಮನೆ ಪುಸ್ತಕದಲ್ಲಿ ಕೊಟ್ಟೆನೆಂದು ಲೆಕ್ಕ ಬರೆದಿಡುವುದು ಹೀಗೆ ಬಹಳ ನಂಬುಗೆಯಿಂದ ನಡೆದು ಕೊಳ್ಳುತ್ತಿದ್ದರು. ಕೊನೆಗೆ ಒಂದು ದಿನ ಉಸಾಫನು ಯಾವುದೋ ಒಂದು ಕಾರಣದಿಂದ ಜಗಳವಾಡಿ, ಇನ್ನು ನನಗೆ ನಿನಗೆ ಏನು ಸಂಬಂಧವೂ ಆವಶ್ಯಕವಿಲ್ಲ, ಲೆಕ್ಕವನ್ನು ನೋಡಿ ಎಲ್ಲ ಫೈಸಲ್ಮಾಡೋಣ, ಎಂದನು. ಲೆಕ್ಕಮಾಡಿದ್ದರಲ್ಲಿ ಮಾತಿಯನಿಗೆ ಉಸಾಫನು ದುಡ್ಡು ಕೊಡಬೇಕಾಗಿದೆ ಎಂದು ಬಂತು. ಉಸಾಫನು ಒಪ್ಪಲಿಲ್ಲ. ಲಕ್ಷಾಂತರ ರೂಪಾಯಿಗಳ ಮಾತಾದ್ದರಿಂದ ಬಾದಷಹನಲ್ಲೇ ಹೋಗಿ ಫಿರ್ಯಾದು ಮಾಡಿದರು. ಬಾದಷಹನು "ನೀವಿಬ್ಬರೂ ದೊಡ್ಡ ಮನುಷ್ಯರು. ಇವಕ್ಕೆ ನನ್ನಲ್ಲೇನು ಬರಬೇಕು. ಫಸಿಲ್‌ಬೇಗ್, ಇವರ ಜಗಳವನ್ನು ಫೈಸಲ್ಮಾಡಿ." ಉಸಾಫ್ ಖಾನ್ ನಿನ್ನ ಪರವಾದ ಕಾಗದಪತ್ರವನ್ನೆಲ್ಲಾ ನೀನು ತರಬೇಕು. ಮಾತಿಯಾ, ನಿನ್ನ ಕಡೆ ಕಾಗದಪತ್ರಗಳನ್ನು ನೀನು ತರಬೇಕು. ಆಮೇಲೆ ಇದನ್ನು ಮರೆತೆ ಅದನ್ನು ಮರೆತೆ ಎನ್ನಬೇಡಿ; ತಂದು ಒಂದು ಚೀಲದಲ್ಲಿ ಹಾಕಿಬಿಡಿ. ಅದಕ್ಕೆ ನನ್ನ ಮೊಹರನ್ನು ಹಾಕಿ ಫಸೀಲ್‌ರವರಿಗೆ ಕೊಡುತ್ತೇನೆ. ಫಸೀಲ್‌ಬೇಗ್, ನೀವು ಅದರಲ್ಲಿರುವ ಕಾಗದಪತ್ರಗಳನ್ನೆಲ್ಲಾ ನೋಡಿ ತೀರ್ಪನ್ನು ಕೊಡಿ. ಸರಿಯೇನಯ್ಯ ಮಾತಿಯಾ, ಫಸೀಲ್‌ರವರು ನ್ಯಾಯಮಾಡಬಹುದಷ್ಟೆ?" ಎಂದನು. ಮಾತಿಯನು ಒಪ್ಪಿದನು. ಬಾದಷಹನ ನ್ಯಾಯವು ಹೇಗೋ ಫಸೀಲನ ನ್ಯಾಯವೂ ಹಾಗೆ ಅಕುಟಿಲವಾದದ್ದು- ಮತ್ತೆ ಯಾವ ಕಾಡಿಯಲ್ಲೂ ಜನರಿಗೆ ಅಷ್ಟು ನಂಬುಗೆ ಇಲ್ಲ.. ಉಸಾಫನೂ ಒಪ್ಪಿದನು. ಕಾಗದಪತ್ರಗಳನ್ನು ತಂದು ದೊರೆಯ ಎದುರಿಗೆ ಒಂದು ಚೀಲದಲ್ಲಿ ಹಾಕಿ ಬೀಗಹಾಕಿದರು. ಬಾದಷಹನ ಮೊಹರಾಗಿ ಚೀಲ ಫಸೀಲನ ಕೈಗೆ ಸೇರಿತು. ಕೊಂಚ ದಿನಗಳ ಮೇಲೆ ಆತನು ತೀರ್ಪನ್ನು ತಿಳಿಸಿದನು. ಅದು ಮಾತಿಯನಿಗೆ ವಿರೋಧವಾಗಿತ್ತು. ಮಾತಿಯನು ಒಪ್ಪದೆ ಪುನಃ ಬಾದಷಹನಲ್ಲಿ ಫಿರ್ಯಾದು ಮಾಡಿದ್ದನು. ಅದರ ಮೇಲೆಯೇ ಇಂದು ಪುನಃ ದರ್ಬಾರು, ಜನ ನೆರೆದಿದ್ದರು.

ವಿವಾದದ ವಿಚಾರವಾಗಿ ಜನರು ನಾನಾವಿಧವಾಗಿ ಆಡಿಕೊಳ್ಳು ತ್ತಿರುವಾಗ್ಗೆ ಬಾದಷಹನು ಬಂದು ಸಿಂಹಾಸನವನ್ನೇರಿದನು. ಎಲ್ಲರೂ ಬಗ್ಗಿ ಸಲಾಮು ಮಾಡಿದರು. ಬಾದಷಹನು ಅದನ್ನು ಸ್ವೀಕರಿಸಿ ಉಮರಾಗಳಿಗೆ ಕುಳಿತುಕೊಳ್ಳಿ ಎಂದು ಸಂಜ್ಞೆಮಾಡಿ "ಫಸೀಲ್ ಬೇಗ್‌ರವರು ಬಂದಿದ್ದಾರೋ" ಎಂದನು. ಫಸೀಲನು ಎದ್ದು ಸಲಾಮುಮಾಡಿ ನಿಂತನು. ಕುಳ್ಳಿರೆಂದು ಅವನಿಗೆ ಅಪ್ಪಣೆಯನ್ನಿತ್ತು ಬಾದಷಹನು:

"ಉಸಾಫ್‌ಖಾನ್ ಯೋಹಾನ್‌ಮಾತಿಯ, ಮುಂದಕ್ಕೆ ಬನ್ನಿ" ಎಂದು ಅಪ್ಪಣೆ ಮಾಡಿದನು.

ವಾದಿ ಪ್ರತಿವಾದಿಗಳು ಮುಂದಕ್ಕೆ ಬಂದು ನಿಂತರು.

"ಮಾತಿಯಾ, ನೀನು ಹೇಳುವುದೇನು" ಎಂದು ಬಾದಷಹನು ಕೇಳಿದನು.

"ಖಾವಿಂದ ಬಾದಷಹಾ, ನಾನು ಇಂದು ಹಾಳಾದೆ. ಸತ್ಯ ವಾಗಿಯೂ ಉಸಾಫನು ನನಗೆ ಹಣ ಕೊಡಬೇಕೇ ಹೊರತು ನಾನು ಅವನಿಗೆ ಕೊಡಬೇಕಾದದ್ದಿಲ್ಲ. ಈ ವಾದದಲ್ಲಿ ನ್ಯಾಯ ನಡೆದಿಲ್ಲ."

"ನೀನು ತಂದುಕೊಟ್ಟ ಕಾಗದಗಳ ಮೇಲೆ ತಾನೇ ತೀರ್ಪು ಬಂದಿರುವುದು ?"

"ದೊರೆಯೇ, ಇಲ್ಲ. ಕಾಡಿಯವರು ಉಸಾಫನ ಲೆಕ್ಕ ನನ್ನ ಲೆಕ್ಕ ಎರಡರ ಪ್ರಕಾರವಾಗಿಯೂ ನನ್ನಿಂದ ಅವನಿಗೆ ಹಣ ಬರಬೇಕಾಗಿದೆ, ಎಂದು ತೀರ್ಪು ಹೇಳುತ್ತಾರೆ. ಇದು ತಪ್ಪು. ನಾನು ಹಾಕಿದ ಕಾಗದಗಳ ಪ್ರಕಾರ ಅದು ಸರಿಯಲ್ಲ. ನನಗೆ ಅಷ್ಟು ಖಂಡಿತ."

"ಅವರ ನ್ಯಾಯ ಇದುವರೆಗೆ ಸಂದೇಹಕ್ಕೆ ಸಿಕ್ಕಿಲ್ಲ."

"ಸಿಕ್ಕಿಲ್ಲ, ಮಹಾಸ್ವಾಮಿ ; ಸಿಕ್ಕಲಾರದು ; ನನಗೆ ಮಾತ್ರ ನ್ಯಾಯ ದೊರಕಲಿಲ್ಲ."

"ಕಾಗದ ಪತ್ರಗಳನ್ನು ನೋಡುವುದಕ್ಕೆ ಕುಳಿತ ದಿನ ನೀವಿಬ್ಬರೂ ಅಲ್ಲಿದ್ದಿರೋ ಇಲ್ಲವೋ ?"

"ಇದ್ದೆವು."

"ನಮ್ಮ ಮೊಹರನ್ನು ನಿಮಗೆ ತೋರಿಸಿದರೋ, ಅದು ಸರಿಯಾಗಿತ್ತೋ?"

"ಸರಿಯಾಗಿತ್ತು."

"ಅಯ್ಯಾ, ನೀನು ಅದರಲ್ಲಿ ಕಾಗದ ಹಾಕಿದಮೇಲೆ ನಾವು ಮೊಹರು ಮಾಡಿದೆವು. ಆಮೇಲೆ ಕಾಡಿಯವರು ನಿಮ್ಮೆದಿರಿಗೇ ಮೊಹರನ್ನು ಒಡೆದರು. ಅದರಲ್ಲಿದ್ದ ಕಾಗದಗಳನ್ನು ನೋಡಿ ನ್ಯಾಯ ಕೊಟ್ಟಿದ್ದಾರೆ. ನಾವೂ ಆ ಕಾಗದಗಳನ್ನು ನೋಡಿದೆವು. ಅವರು ಮಾಡಿರುವ ತೀರ್ಪು ಸರಿಯೆಂಬುದರಲ್ಲಿ ಸಂದೇಹವಿಲ್ಲ. ನೀನು ಮಾತ್ರ ನ್ಯಾಯ ಸಿಕ್ಕಲಿಲ್ಲವೆನ್ನುತ್ತೀಯೆ. ನೀನು ಹಾಕಿದ ಕಾಗದ ಬದಲಾಯಿಸುವುದಕ್ಕೆ ಅವಕಾಶವಿರಲಿಲ್ಲವಷ್ಟೆ?"

"ಖಾವಿಂದ್, ಬದಲಾಯಿಸುವುದಕ್ಕೆ ಅವಕಾಶವೇನೋ ಇರಲಿಲ್ಲ. ಆದರೆ ಬದಲಾಯಿಸಿರುವುದೇನೋ ನಿಜ."

"ನಾವು ಬದಲಾಯಿಸಿದೆವೇನಯ್ಯ? ನೀನು ಕ್ರೈಸ್ತ ನಿನ್ನ ಪ್ರತಿವಾದಿ ಮುಸಲ್ಮಾನನೆನ್ನುವುದಕ್ಕೋಸ್ಕರ ನಾವು ಅನ್ಯಾಯಮಾಡಿದೆವೆಂದು ಎಣಿಸಿದ್ದೀಯೋನು?"

"ಬಾದಷಹಾ, ನಾನು ಗುಲಾಮು, ತಮ್ಮ ವಿಚಾರದಲ್ಲಿ ಹಾಗೆ ಎಣಿಸಲಾರೆ. ನನ್ನ ನಷ್ಟವನ್ನು ನಾನು ಬಲ್ಲೆ, ನಾನು ತಮ್ಮ ವಿಚಾರ ದುರಾಲೋಚನೆಯನ್ನು ಮಾಡಲೆ? ನನ್ನ ದುಃಖದಲ್ಲಿ ಏನೂ ತೋರದೆ ತಮಗೆ ಹಾಗೆ ಭಾವ ಹುಟ್ಟುವಂತೆ ಮಾತನಾಡಿದ್ದರೆ ಕ್ಷಮೆ ಬೇಡುತ್ತೇನೆ. ನಾನು ಕೆಟ್ಟು ಗರೀಬನಾದೆ, ಖಾವಿಂದ್" ಎಂದು ಮಾತಿಯನು ಉತ್ತರ ಕೊಟ್ಟನು.

ಬಾದಷಹನು "ಇವನಿಗೆ ಬುದ್ಧಿ ಸರಿಯಾಗಿಲ್ಲ. ಹೇಳಿದ್ದನ್ನೇ ಹೇಳುತ್ತಾನೆ. ನಾವು ಅನ್ಯಾಯಮಾಡಿದ್ದೇವೆಂದು ತಿಳಿದುಕೊಂಡಿದಾನೆಂದು ಕಾಣುತ್ತದೆ. ಏನಯ್ಯಾ, ಫಸೀಲರೆ, ನಿಮಗೆ ಏನೆಂದು ತೋರುತ್ತದೆ? ಈ ಮನುಷ್ಯ ನ್ಯಾಯ ದೊರಕಲಿಲ್ಲವೆಂದು ಹೇಳುವ ಮಾತಿಗೆ ನೀವು ಏನು ಹೇಳುತ್ತೀರಿ?" ಎಂದನು.

"ಬಾದಷಹಾ, ಸೇವಕನ ತಿಳಿವಿನಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ನ್ಯಾಯವನ್ನೇ ತೀರ್ಪುಮಾಡಿದ್ದೇನೆ. ಮನುಷ್ಯ ಪ್ರಯತ್ನದಲ್ಲಿ ಬೇರೆ

ಏತಕ್ಕೂ ಅವಕಾಶವಿಲ್ಲ. ಮಾತಿಯನಲ್ಲಿದ್ದ ಅಸಲು ಕಾಗದ ಪತ್ರಗಳನ್ನೇ ಅವನು ಚೀಲದಲ್ಲಿ ತಂದಿಟ್ಟನು. ಅದಕ್ಕೆ ಮಹಾಸ್ವಾಮಿಯವರ ಮೊಹ ರಾಗಿತ್ತು. ಅದನ್ನು ನಾನು ಇವರ ಕೈಯಲ್ಲಿ ಕೊಟ್ಟು 'ಗುರುವಾರ ಬನ್ನಿ, ನಿಮ್ಮೆದುರಿಗೆ ನ್ಯಾಯ ಮಾಡುತ್ತೇನೆ, ಎಂತ ಹೇಳಿದೆ. ಇವರೆದುರಿಗೇ ಚೀಲವನ್ನು ತೆರೆದೆ. ಮೊಹರು ಸರಿಯಾಗಿತ್ತೆಂದು ಮಾತಿಯನೇ ಹೇಳುತ್ತಾನೆ. ಮನುಷ್ಯ ನ್ಯಾಯದಲ್ಲಿ ಬೇರೆ ಯಾವ ವಿಧ ದಲ್ಲಿಯೂ ತೀರ್ಪು ನಡೆಯುವಂತಿಲ್ಲ" ಎಂದು ಫಸೀಲನು ಉತ್ತರ ಕೊಟ್ಟನು.

ಉಸಾಫ್ ಖಾನನು "ಬಾದಷಹ, ನಾನು ಒಬ್ಬರಿಗೆ ಅನ್ಯಾಯ ಮಾಡಿದವನಲ್ಲ. ಆದಿನ ಚೀಲವನ್ನು ನೀನೇ ತೆಗೆದುಕೊಂಡು ಹೋಗು ಎಂದು ಮಾತಿಯನಿಗೆ ಹೇಳಿದೆ. ನಿನ್ನಲ್ಲೇ ಇರಲೇಳು, ಯಾರಲ್ಲಿದ್ದ ರೇನು, ಎಂದ. ತಾವು ಮೊಹರು ಮಾಡಿದ ಶನಿವಾರದಿಂದ ಬರುವ ಗುರುವಾರದವರೆಗೂ ಅದನ್ನು ನನ್ನಲ್ಲೇ ಇಟ್ಟುಕೊಂಡಿದ್ದೆ. ಭದ್ರವಾಗಿ ಮನೆಯಲ್ಲಿಟ್ಟು ಅದರ ಗೋಜಿಗೆ ಯಾರೂ ಬರದಂತೆ ನೋಡಿಕೊಂಡೆ. ಅದರಲ್ಲಿದ್ದ ಕಾಗದ ಹೇಗೆ ಬದಲಾಯಿತೋ ಖಾವಂದರು ಯೋಚನೆ ಮಾಡಬೇಕು.' ಮೊಹರು ಇದ್ದಂತೆಯೆ ಇತ್ತು. ಇನ್ನು ಚೀಲವನ್ನು ಕತ್ತರಿಸಿ ಬೇಕಾದರೆ ಕಾಗದಗಳನ್ನು ಬದಲಾಯಿಸಬಹುದಾಗಿತ್ತು. ಆದರೆ ಆ ಚೀಲವನ್ನು ಕತ್ತರಿಸಿ ಆಮೇಲೆ ಅದು ಗುರುತು ಸಿಕ್ಕದಂತೆ ಸರಿಮಾಡ ಬಲ್ಲವರು ಯಾರೂ ಇರಲಾರರು ಮಹಾಸ್ವಾಮಿ. ಅದು ಒಳ್ಳೆಯ ಭದ್ರವಾದ ರತ್ನಗಂಬಳಿಯ ಚೀಲ. ಮಾತಿಯನನ್ನೇ ಕೇಳಬಹುದು. ಇಲ್ಲ, ನಾನು ಚೀಲವನ್ನು ಕತ್ತರಿಸಿ ಸರಿಮಾಡಿದೆನೆಂದೇ ಹೇಳುವನೇನೋ ಅದನ್ನೂ ಕೇಳೋಣವಾಗಲಿ" ಎಂದನು.

ಬಾದಷಹನು "ಏನಯ್ಯ, ಮಾತಿಯಾ, ಅದಕ್ಕೆ ನೀನೇನು ಹೇಳು ತ್ತೀಯೆ?" ಎಂದನು.

ಮಾತಿಯನು "ಬಾದಷಹಾ, ಚೀಲವನ್ನು ಕತ್ತರಿಸಿ ಸರಿಮಾಡುವು ದೆಂದರೇನು? ನಾನು ದುರದೃಷ್ಟದಿಂದ ಹುಚ್ಚನಂತಾಗಿದ್ದರೂ ತೀರಾ ಅಷ್ಟು ಹುಚ್ಚನಾಗಿಲ್ಲ. ಹ್ಯಾಗೋ ಆಯಿತು. ಗರೀಬನಿಗೆ ಒಂದು

ಗುಲಾಮ ಚಾಕರಿಯನ್ನು ಕೊಡಿ ಖಾವಿಂದ್, ಜೀವನ ಮಾಡಿಕೊಳ್ಳು ತ್ತೇನೆ. ನನ್ನ ಹಣೆಯಲ್ಲಿ ಬರೆದಿದ್ದಂತಾಯಿತು" ಎಂದನು.

ಬಾದಷಹನು "ನೌಕರಿ ಬೇಡುವುದಕ್ಕೆ ಇಷ್ಟು ಉಪಾಯವನ್ನು ಮಾಡಿದೆಯೇನಯ್ಯ ನೀನು? ಗತಿಯಿಲ್ಲವೆಂದು ಕೇಳಿದ್ದರೆ ಕೆಲಸ ಕೊಡು ತ್ತಿದ್ದೆವು. ಇದಕ್ಕಾಗಿ ಉಸಾಫಖಾನನ ವಿಷಯದಲ್ಲಿ ಸಂದೇಹ ಹುಟ್ಟು ವಂತೆ ಮಾಡಿ, ಫಸೀಲರಿಗೆ ಇಷ್ಟು ಅಸಮಾಧಾನವನ್ನುಂಟುಮಾಡಿ, ನಾವು ಮೊಹರನ್ನು ದುರುಪಯೋಗಪಡಿಸಿದೆವೆಂದು ಶಂಕೆ ಇರುವಂತೆ ತೋರಿ, ಇಷ್ಟು ಪಾಡು ಪಡಬೇಕಾಗಿತ್ತೆ? ಹೋಗಿ ವಜೀರರನ್ನು ಕೇಳಿಕೋ, ಎಲ್ಲಾದರೂ ಕೆಲಸಕೊಡುತ್ತಾರೆ. ಉಸಾಫಖಾನ್, ನೀನು ಸತ್ಯವಂತ. ಚೀಲವನ್ನು ನಿನ್ನಲ್ಲಿರಿಸಿಕೊಂಡಿದ್ದ ವಿಷಯವನ್ನು ನೀನೇ ಹೇಳಿದೆ. ಸಾಫ್‌ಸೀದಾ ಮಾತನಾಡಿದೆ. ನಿನ್ನಂತಹವರು ನನ್ನಲ್ಲಿ ಚಾಕರಿ ಮಾಡಬೇಕು. ನನ್ನ ಬೈಟಖ್‌ಖಾನೆಯ ಭಕ್ಷಿಯಾಗಿರು. ಜನ ಗಳಿಗೆ ತಿಳಿದಿರಲಿ. ಗತಿಯಿಲ್ಲದವರು ಸಾಫಾಗಿ ಬಂದು ಚಾಕರಿ ಕೇಳಿದರೆ ಕೆಲಸಕೊಡುವುದಕ್ಕೆ ನಮಗೇನೂ ಅಡ್ಡಿಯಿಲ್ಲ. ಮಾತಿಯನಂತೆ ಇಷ್ಟು ನಾಟಕವಾಡಬೇಕಾದ ಆವಶ್ಯಕವಿಲ್ಲ. ಸತ್ಯವಂತರಾದವರಿಗೆ ನಾವು ಉಸಾಫ್‌ಖಾನರಿಗೆ ಮಾಡಿದಂತೆ ಮರ್ಯಾದೆ ಮಾಡುವೆವು," ಎಂದು ಹೇಳಿ ಅಂದಿಗೆ ಸಭೆಯನ್ನು ಮುಗಿಸಿದನು.

ಜನರೆಲ್ಲರೂ ಅವರವರ ಮನೆಗಳಿಗೆ ತೆರಳಿದರು. ಒಂದು ಕೆಲಸ ಸಂಪಾದಿಸುವುದಕ್ಕೆ ಮಾತಿಯನು ಇಷ್ಟು ಮಾಡಿದನೆ ಎಂದು ಕೆಲವರೂ, ಉಸಾಫನು ಅನ್ಯಾಯಕ್ಕೆ ಹೇಸುವವನಲ್ಲ, ಅವನಿಗೆ ಹೋದ ಸಲ ವ್ಯಾಪಾರದಲ್ಲಿ ನಷ್ಟವಾದಾಗಿನಿಂದ ನ್ಯಾಯವೂ ಇಲ್ಲ ಅನ್ಯಾಯವೂ ಇಲ್ಲ ಎಂದು ಕೆಲವರೂ, ಬಾದಷಹನು ಏನಿಲ್ಲದಿದ್ದರೂ ತನ್ನವರೆಂದರೆ ಪಕ್ಷ ಪಾತವಿಲ್ಲದೆ ಇರುವನೆ ಎಂದು ಕೆಲವರೂ, ಅವನ ಮನಸ್ಸಿನ ಆಳವನ್ನು ಕಂಡವರಿಲ್ಲ, ಇನ್ನೂ ಏನು ಸಮಾಚಾರವಿದೆಯೋ ಎಂದು ಕೆಲವರೂ, ಇದು ಕೆಲಸ ಸಂಪಾದಿಸುವುದಕ್ಕೋಸ್ಕರ ಮಾತಿಯನು ಮಾಡಿದ ಉಪಾಯ ವಲ್ಲ, ಏನೋ ಕೃತ್ರಿಮ ನಡೆದಿರಬೇಕು ಎಂದು ಕೆಲವರೂ, ನಾನಾವಿಧ ವಾಗಿ ಆಡಿಕೊಳ್ಳುತ್ತಾ ಹೊರಟುಹೋದರು. ಮಾತಿಯನು ಬಹಳ

ಖಿನ್ನನಾಗಿ, "ಬಾದಷಹರು ಎಂದೂ ಅನ್ಯಾಯ ಮಾಡಿದವರಲ್ಲ, ಒಬ್ಬನ ವಿಷಯದಲ್ಲಿ ಕೆಡಕನ್ನೆಣಿಸಿದವರಲ್ಲ. ಅಂತಹ ದೊರೆ ನನಗೆ ವಿರೋಧವಾಗಿ ನುಡಿಯಬೇಕಾದರೆ ನನ್ನ ದುರದೃಷ್ಟವೇ ಸರಿ" ಎಂದು ಗೋಳಿಡುತ್ತಾ ಹೊರಟು ಹೋದನು. ಫಸೀಲಬೇಗನಿಗೆ ತನ್ನ ನ್ಯಾಯದ ತೀರ್ಪು ಸ್ಥಿರವಾಯಿತೆಂದು ಸಂತೋಷ. ಉಸಾಫನಿಗೆ ತನ್ನ ಪರವಾಗಿ ಬಂದಿದ್ದ ತೀರ್ಪು ಸ್ಥಿರವಾಯಿತೆಂದು ಬಹಳ ಸಂತೋಷ. ವಾದ ಅಂದಿಗೆ ಮುಗಿದ ಹಾಗಾಯಿತು.

ಆಮೇಲೆ ನಡೆದ ಮಂತಣದಲ್ಲಿ ವಜೀರನು "ಮಹಾಸ್ವಾಮಿ, ತಾವು ಮಾತಿಯನಿಗೆ ಅಷ್ಟು ಮುಖಮುರಿಯಬಾರದಾಗಿತ್ತು. ಉಸಾಫ ಖಾನನಿಗೆ ಭಕ್ಷಿಕೆಲಸವನ್ನು ಕೊಡಕೂಡದಾಗಿತ್ತು. ಜನರು ಸ್ವಜಾತಿ ಪಕ್ಷಪಾತಕ್ಕೋಸ್ಕರ ಹೀಗೆ ಮಾಡಿದರು ಬಾದಷಹರು ಎಂದುಕೊಳ್ಳುವರು" ಎಂದನು. ಬಾದಷಹನು "ನಾನು ಇದುವರೆಗೆ ಪಕ್ಷಪಾತವನ್ನು ಮಾಡಿಲ್ಲ, ನನ್ನ ಪ್ರಜೆಗಳಿಗೆ ಗೊತ್ತು. ಮಾತಿಯನೂ ಅವನ ಕಡೆಯವರೂ ತಪ್ಪಾಗಿ ತಿಳಿದುಕೊಂಡರೆ ನಾವು ಏನೂ ಮಾಡಲಾಗುವುದಿಲ್ಲ. ಖೂಳನಲ್ಲಿ ಆಗ್ರಹವನ್ನೂ ಸಜ್ಜನನಲ್ಲಿ ಆದರವನ್ನೂ ತೋರಿಸುವುದು ದೇವರ ಇಷ್ಟ. ದೇವರ ನ್ಯಾಯವನ್ನು ನಾನು ಇಲ್ಲಿ ಎಷ್ಟುದಿನ ನಡೆಯಿಸಬೇಕೋ ಅಷ್ಟುದಿನವೂ ಇದಿಷ್ಟನ್ನು ಮಾತ್ರ ಮನಸ್ಸಿನಲ್ಲಿಡುವೆನೇ ಹೊರತು, ಅವರು ಹೀಗೆ ತಿಳಿಯುವರು, ಇವರು ಹಾಗೆ ತಿಳಿಯುವರು, ಎಂದು ಹೆದರಿ ಸರಿಯಾದದ್ದನ್ನು ಮಾಡದೆ ಬಿಡೆನು" ಎಂದು ಹೇಳಿದನು.

ಕೊಂಚಕಾಲ ಕಳೆಯಿತು. ವಜೀರನು ಹೇಳಿದಂತೆ ಜನರು ಆಡಿಕೊಳ್ಳಲೂ ಆಡಿಕೊಂಡರು. ಇದು ಬಾದಷಹನ ಕಿವಿಗೆ ಬಿದ್ದರೂ ಅವನು ಲಕ್ಷ್ಯಮಾಡದೆ ಇದ್ದನು. ಬೈಟಖ್‌ಖಾನೆಯು ಭಕ್ಷಿಗೋ ತಿಂಗಳು ತಿಂಗಳಿಗೂ ಬಡತಿ ಆಗುತ್ತಾಬಂತು "ಒಂದುಸಲ ಅವನು ಕೇಳುತ್ತಿದ್ದ ಹಾಗೆಯೇ ವಜೀರನೊಂದಿಗೆ ಬಾದಷಹನು "ಉಸಾಫ್‌ಖಾನ್ ಭಕ್ಷಿಯಾದಂದಿನಿಂದ ನನ್ನ ಬೈಟಖ್‌ಖಾನೆ ಬಹಳ ಭೇಷಾಗಿದೆ, ನನ್ನ ಇಷ್ಟದಂತೆ ನೋಡಿಕೊಳ್ಳುತ್ತಾ ಸರಿಯಾದ ರತ್ನಗಂಬಳಿಗಳನ್ನು ಆಗಾಗ ಬದಲಾಯಿಸುತ್ತಾ ಚೆನ್ನಾಗಿ ಇಟ್ಟುಕೊಂಡಿದಾನೆ. ಮೊದಲು ಆ ಷಿರಾಜ್

ಕಂಬಳಿಯನ್ನು ಹೊರಗೆ ತೆಗೆದ ದಿನಗಳಲ್ಲಿ ಏನಾಗುವುದೋ ಎಂದು ಪ್ರತಿ ಸಲವೂ ಹೆದರುತ್ತಿದ್ದೆ, ಈಗ ನನಗೆ ಅಂಥ ಹೆದರಿಕೆಯೇನೂ ಇಲ್ಲ'' ಎಂದನು.

"ಅದನ್ನು ಕೊಳೆಮಾಡಿದ್ದಕ್ಕೋಸ್ಕರ ನಾಲ್ಕು ವರ್ಷದ ಹಿಂದೆ ಮಹಾಸ್ವಾಮಿಯವರು ಭಕ್ಷಿಗೆ ಛಡಿಹೊಡೆಸಿದಂದಿನಿಂದ, ಮಹಾಸ್ವಾಮಿಯವರಿಗೇ ಅಲ್ಲ ಅದನ್ನು ತೆಗೆದಾಗ ಹೆದರಿಕೆಯಾಗುವುದು, ಕೆಲವು ಬಡಪಾಯಿಗಳು ನಡುಗುತ್ತಾರೆ, ಮೆಹರ್‌ಬಾನ್,'' ಎಂದು ವಜೀರನು ಉತ್ತರಕೊಟ್ಟನು.

"ಆಹಾ, ಅದು ನಿಮಗೆ ಇನ್ನೂ ಜ್ಞಾಪಕವಿದೆಯೇ?'' ಎಂದು ಹೇಳಿ ನಕ್ಕು ಬಾದಷಹನು ಬೇರೆ ಮಾತನ್ನೆತ್ತಿದನು. ಆ ದಿನ ಹೊರಟು ಹೋಗುವುದಕ್ಕೆ ಮೊದಲು ವಜೀರನು ಉಸಾಫಖಾನನನ್ನು ಕುರಿತು "ಬಾದಷಹರು ನಿನ್ನ ವಿಚಾರವಾಗಿ ಚೆನ್ನಾಗಿ ಮಾತನಾಡಿದರಯ್ಯ'' ಎಂದನು.

ಉಸಾಫನಿಗೆ ಇವರೆಲ್ಲರ ವಿಷಯದಲ್ಲಿಯೂ ಸಂದೇಹ. ಆಸ್ಥಾನದಲ್ಲಿದ್ದ ಕೆಲವರಿಗೆ, ಇವನು ಮೊನ್ನೆ ಬಂದವನು, ಎಷ್ಟು ದೊಡ್ಡ ಮನುಷ್ಯನಾದ, ಎಂದು ಸ್ವಲ್ಪ ಅಸೂಯೆ. ವಜೀರನು ಇವನ ಸ್ವಭಾವವನ್ನು ಅರಿಯದವನಾದ್ದರಿಂದ ಅಷ್ಟು ವಿಶ್ವಾಸವೂ ಇಲ್ಲ ಅಷ್ಟು ಬಿಗಿಯೂ ಇಲ್ಲದೆ ಸಾಮಾನ್ಯವಾಗಿ ಕಾಣುತ್ತಿದ್ದನು. ಇದನ್ನು ನೋಡಿ ಉಸಾಫಖಾನನಿಗೆ ಇವರಿಗೆಲ್ಲಾ ತನ್ನ ಮೇಲೆ ಹೊಟ್ಟೆಯುರಿಯೆಂದು ಭಾವನೆ. ಯಾರಾದರೂ ಒಳ್ಳೆಯ ಮಾತನ್ನೇ ಆಡಿದರೂ ಅದರಲ್ಲಿ ಏನೇನೋ ಅರ್ಥವನ್ನು ಕಾಣುವನು. ಇಂದು ವಜೀರನು ಹೇಳಿದ ಮಾತನ್ನು ಕೇಳಿ,

"ಸರಿ, ಸ್ವಾಮಿ'' ಎಂದನು.

"ದೊಡ್ಡವರ ಮನಸ್ಸು ಒಂದು ಮಾದರಿಯಲ್ಲವಪ್ಪ, ಜೋಕೆಯಾಗಿರು. ಅವರ ಜಮಖಾನವೋ ರತ್ನಗಂಬಳಿಯೋ ಕೊಳೆಯಾದರೂ ಅವರು ಸಹಿಸರು. ಭದ್ರವಾಗಿ ನೋಡಿಕೋ.''

ಉಸಾಫನು "ಅಪ್ಪಣೆ ಪ್ರಕಾರ'' ಎಂದು ಸಲಾಮು ಮಾಡಿದನು. ಮನಸ್ಸಿನಲ್ಲಿ ಮಾತ್ರ ಇವರು ಯಾರು ಯಾವ ಸಮಯದಲ್ಲಿ ತನ್ನನ್ನು

ಕಷ್ಟಕ್ಕೆ ತಂದಿಕ್ಕಿಯಾರೋ ಎಂದು ಸಂದೇಹ. ವಜೀರನಿಗೂ ಕೂಡ ತನ್ನ ಮೇಲೆ ಹೊಟ್ಟೆಯುರಿ ಇದೆ ಎಂದೇ ಅವನು ತಿಳಿದಿದ್ದನು.

ಕೆಲವು ದಿನ ಹೀಗೆಯೇ ಕಳೆಯಿತು. ಒಂದು ಶುಕ್ರವಾರ ಬೈಟಖ್ ಖಾನೆಯಲ್ಲಿ ದೊರೆ ಕೂಡುವ ಕಡೆ ದೊರೆಯ ಅತ್ಯಂತಪ್ರಿಯವಾದ ಷಿರಾಜ್ ಕಂಬಳಿಯನ್ನು ಹಾಸಿದೆ. ಉಸಾಫನಿಗೆ ನಾಲ್ಕು ಕಡೆಯೂ ಕಣ್ಣು. ಬಾದಷಹನು ಬಂದು ಕುಳಿತನು. ಕೆಲಸವೆಲ್ಲಾ ಮುಗಿಯಿತು. ವಜೀರನು ಹೊರಟುಹೋದನು. ಷಹನು ಅಲ್ಲೇ ಕುಳಿತು ವಿಶ್ರಾಂತಿ ತೆಗೆದುಕೊಳ್ಳುತ್ತಾ ಉಸಾಫನನ್ನು ಕರೆದು "ನಿನ್ನನ್ನು ಮುಸಾಹೇಬ ನನ್ನಾಗಿ ಮಾಡಬೇಕೆಂದು ವಜೀರರಿಗೆ ಹೇಳುವುದನ್ನು ಮರೆತೆ. ಈ ಉಂಗುರವನ್ನು ತೆಗೆದುಕೊಂಡು ಹೋಗಿ ಅವರಿಗೆ ತೋರಿಸಿ ನಾಳೆ ಹುಕುಂ ಬರೆದುಕೊಂಡು ಬರಬೇಕೆಂದು ನಾನು ಹೇಳಿದ್ದಾಗಿ ತಿಳಿಸಿ ಬಾ" ಎಂದು ಕಳುಹಿಸಿದನು. ಉಸಾಫನು ಹಿಂದಕ್ಕೆ ಬರುವುದು ಸ್ವಲ್ಪ ಸಾವಕಾಶವಾಯಿತು. ಬಂದು ಜವಾನರನ್ನು ಕರೆದು ಬಾದಷಹನ ಕಂಬಳಿ ಯನ್ನು ಹೊರತು ಮಿಕ್ಕದ್ದನ್ನೆಲ್ಲ ಮಡಿಸಿ ಇರಿಸಿ ಎಂದು ಹೇಳಿದನು. ಅವನಿಗೆ ಬಹಳ ಸಂತೋಷ ಉಂಟಾಗಿತ್ತು. "ತನ್ನಲ್ಲಿ ಬಾದಷಹನಿಗೆ ಬಹಳ ಗೌರವ ಹುಟ್ಟಿತ್ತು. ಇದನ್ನು ಪ್ರಯತ್ನ ಪೂರ್ವಕವಾಗಿ ಉಳಿಸಿ ಕೊಳ್ಳಬೇಕು. ವಜೀರನಿಗೆ ಬಾದಷಹನು ಹೇಳಿದ ಮಾತನ್ನು ತಾನು ತಿಳಿಸಿ ದಾಗ ಅವನು ಮುಖವನ್ನು ಗಂಟಿಕ್ಕಿದನು. ಪ್ರಾಯಶಃ ಇವರು ತನ್ನನ್ನು ತೊಂದರೆಗೆ ತರುವುದೇ ನಿಜ, ಆದರೆ ತಾನು ಸಿಕ್ಕಬಾರದು" ಎಂದು ಕೊಳ್ಳುತ್ತಾ ಅವನು ಜವಾನರು ತಮ್ಮ ಕೆಲಸವನ್ನು ಮುಗಿಸಿದ್ದನ್ನು ಕಂಡು, ತಾನೇ ಷಿರಾಜ್ ಕಂಬಳಿಯನ್ನು ಮಡಿಸಲು ಹೋದನು. ಹೋಗಿ ನೋಡಿದರೆ, ಸರ್ವನಾಶ! ಕಂಬಳಿಯ ಒಂದು ಮೂಲೆಯಲ್ಲಿ ಒಂದು ಒಳ ಗೈಯಷ್ಟಗಲ ಸುಟ್ಟುಹೋಗಿದೆ. ಬಾದಷಹನಿಂದ ತಾನು ಹುಕ್ಕಾವನ್ನು ತೆಗೆದುಕೊಂಡು ಕೆಳಗೆ ಇಟ್ಟಾಗ ಅದನ್ನು ತಾನು ಕಂಬಳಿಗೆ ತಗಲದಂತೆ ದೂರವಾಗಿ ಸರಿಯಾಗಿ ಇಟ್ಟದ್ದು ಅವನಿಗೆ ಜ್ಞಾಪಕವಿತ್ತು. ಈಗ ಆ ಹುಕ್ಕಾವಿಂದ ಕೆಂಡ ಒಂದು ಬಿದ್ದು ಕಂಬಳಿಯ ಅಂಚಿನಲ್ಲಿ ನೆಯ್ದಿದ್ದ ನವಿಲಿನ ರೆಕ್ಕೆಯನ್ನು ಸುಟ್ಟುಬಿಟ್ಟಿತ್ತು. ಉಸಾಫನಿಗೆ ಗುಂಡಿಗೆ ಬಿರಿಯಿತು.

ಸುತ್ತಲೂ ನೋಡಿದನು, ಹತ್ತಿರ ಯಾರೂ ಕಾಣಲಿಲ್ಲ. ಹುಕ್ಕಾವನ್ನು ತೆಗೆದು ಇಟ್ಟು ಕಂಬಳಿಯನ್ನು ಮಡಿಸಿ ಜವಾನನನ್ನು ಕರೆದು ತೆಗೆಯಿಸಿಕೊಂಡು ಹೋಗಿ ಪೆಟ್ಟಿಗೆಯಲ್ಲಿಟ್ಟನು. "ಈ ಕಂಬಳಿಯನ್ನು ತನಗೆ ಆಗದವರು ಯಾರೋ ಸುಟ್ಟಿರಬೇಕು. ತಾನು ಹುಕ್ಕಾವನ್ನು ದೂರವಾಗಿಟ್ಟಿದ್ದರೂ ಅದು ಬಂದು ಕಂಬಳಿಗೆ ಸೋಕಿ ಕಂಬಳಿ ಸುಟ್ಟದ್ದು ಹೇಗೆ? ಯಾರೋ ಅದನ್ನು ಕಂಬಳಿಯ ಬಳಿಗೆ ಕದಲಿಸಿರಬೇಕು. ಇಷ್ಟು ಜನಕ್ಕೆ ತನ್ನಮೇಲೆ ಹೊಟ್ಟೆಯುರಿ ಇರುವಾಗ ಯಾರುತಾನೇ ಹಾಗೆ ಮಾಡಿದ್ದರೆ ಬೇಡವೆಂದೀತು? ವಜೀರನಿಗೆ ತನ್ನಲ್ಲಿ ಹೊಟ್ಟೆಯುರಿ. ಹಿಂದೆ ಒಂದು ಸಲ ಜೋಕೆ, ಕಂಬಳಿಗಳನ್ನು ಸರಿಯಾಗಿ ಇಡಬೇಕು, ಎಂದು ಹೇಳಿದ್ದನು. ಆಗ ಅವನ ಮಾದರಿಯನ್ನು ನೋಡಿದರೆ ಸಂದೇಹಕರವಾಗಿತ್ತು. ಈ ಅನಾಹುತವನ್ನು ಅವನೇ ನಡೆಸಿದನೋ ಏನೋ" ಎಂದು ಮೊದಲಾಗಿ ಯೋಚನೆಮಾಡಿ, ಕಂಬಳಿಯನ್ನು ಸರಿಮಾಡಿಸಿ ಬಿಡಬೇಕು, ಈ ಸಮಾಚಾರ ದೊರೆಗೆ ತಿಳಿಯಬಾರದು, ಎಂದು ಮನಸ್ಸು ಮಾಡಿದನು.

ಕೆಲವು ದಿನದಮೇಲೆ ಪುನಃ ಆ ಕಂಬಳಿಯನ್ನು ಬೈಟಖ್‌ಖಾನೆಯಲ್ಲಿ ಹಾಕಬೇಕಾಗಿತ್ತು. ಹಾಕಿದಾಗ ಅದರಲ್ಲಿ ಹಿಂದೆ ಸುಟ್ಟಿದ್ದ ಗುರುತು ಇರಲಿಲ್ಲ. ನವಿಲು ಎಂದಿನಂತೆ ಗರಿಗಳನ್ನು ಕೆದರಿಕೊಂಡು ಸಂತೋಷದಲ್ಲಿತ್ತು. ಕಂಬಳಿ ಮೊದಲಿನಂತೆಯೇ ಕಂಡಿತು.

ಬಾದಷಹನು ಬಂದು ಕಂಬಳಿಯ ಮೇಲೆ ಕುಳಿತನು. ಬಂದಿದ್ದ ಕೆಲವು ಆಪ್ತರ ಸಂಗಡ ಮಾತು ಕತೆ ಮುಗಿಯಿತು. ಇಷ್ಟರಲ್ಲಿ ಮುಸಾಬನಾಗಿದ್ದ ಉಸಾಫನು ಸಂತೋಷದಿಂದ ತಾನು ದೊರೆಯ ಹಾಸ್ಯಕ್ಕೆ ಒಂದೆರಡು ಮೃದು ಧ್ವನಿಗಳಿಂದ ಜೊತೆಯಾಗಿ ಸೇರಿದನು. ಮಾತು ಕತೆ ಮುಗಿದಮೇಲೆ ಎಲ್ಲರೂ ಎದ್ದು ಹೊರಟು ಹೋದರು.

ಬಾದಷಹನು ಉಸಾಫನನ್ನು ಕುರಿತು "ಇದು ಯಾವುದಯ್ಯ ಕಂಬಳಿ ಇದು? ನನ್ನ ಷಿರಾಜ್ ಕಂಬಳಿಯೇ?" ಎಂದನು.

"ಹೌದು, ಖಾವಿಂದ್" ಎಂದು ಉಸಾಫನು ಉತ್ತರ ಕೊಟ್ಟನು.

"ಇದೇನು ಸರಿಹೋಗಿದೆ! ಆ ದಿನ ನೀನು ಹೊರಟು ಹೋದಮೇಲೆ ನಾನು ಆ ಹುಕ್ಕಾವನ್ನು ತಿರುಗಿ ಎಳೆದುಕೊಂಡೆ, ಒಂದು ಕೆಂಡ ಇದರ

ಮೇಲೆ ಬಿದ್ದು ಇದು ಸ್ವಲ್ಪ ಸುಟ್ಟಿತು. ಜವಾನರು ಯಾರೂ ಹತ್ತಿರ ಇರಲಿಲ್ಲವಾದ್ದರಿಂದ ಒಳಗೆ ಹೋದೆ, ಮರೆತೇ ಹೋಯಿತು. ಇದನ್ನು ಸರಿಮಾಡಿಸಿದೆಯೊ?''

ಉಸಾಫನಿಗೆ ಶಂಕೆ ಹತ್ತಿತು. ಆದರೆ ಬಾದಷಹನಲ್ಲಿ ಅಷ್ಟು ಕೃತ್ರಿಮವೆಲ್ಲಿಯದು ಎಂದು ಧೈರ್ಯಮಾಡಿಕೊಂಡು:

"ಹೌದು ಮಹಾಸ್ವಾಮಿ, ತಮಗೆ ತಿಳಿಯದೆ ಸರಿಮಾಡಿಸಿ ಸ್ವಾಮಿಯವರ ಮನಸ್ಸಿಗೆ ಖುಷಿಮಾಡಬೇಕೆಂದು ಹಾಗೆ ಮಾಡಿಸಿದೆ'' ಎಂದನು.

"ನನಗೆ ಇದು ಬಹಳ ಖುಷಿಯಾಯಿತು, ಉಸಾಫ್. ನಿನಗೆ ಎಷ್ಟು ಮರ್ಯಾದೆ ಮಾಡಿದರೂ ನನ್ನ ಮನಸ್ಸಿಗೆ ತೃಪ್ತಿಯಿಲ್ಲ. ಅದು ಹಾಗಿರಲಿ, ಈ ಜಮಖಾನವನ್ನೂ ಆ ಚೀಲವನ್ನೂ ಒಬ್ಬನಲ್ಲಿಯೇ ಕೊಟ್ಟು ಸರಿ ಮಾಡಿಸಿದೆಯಾ? ಚೀಲವನ್ನು ಕತ್ತರಿಸಿ ಸರಿಮಾಡುವವರು ಯಾರೂ ಇರಲಾರರೆಂದು ಹೇಳಿದೆಯಲ್ಲ?''

ಉಸಾಫನು ಬಾದಷಹನ ಕಾಲಿಗೆಬಿದ್ದು, "ತಪ್ಪಾಯಿತು ಖಾವಿಂದ್, ರಕ್ಷಿಸಬೇಕು,'' ಎಂದು ಅಳುತ್ತಾ ಕರೆಯುತ್ತಾ ಬೇಡಿಕೊಂಡನು.

ಮಾರನೆಯ ದಿನದ ಸಭೆಯಲ್ಲಿ ಅಂದು ಜನ ನೆರೆದಂತೆ ಜನ ನೆರೆ ದಿದ್ದರು. ಉಸಾಫನ ವಿವಾದ ಪುನಃ ವಿಚಾರಣೆಯಂತೆ ಎಂದು ಸೀಮೆಯೇ ಬಂದಿತ್ತು. ಇಲ್ಲಿ ಉಸಾಫ, ಇಲ್ಲಿ ಮಾತಿಯ, ದೊರೆಯ ಮುಂದೆ ನಿಂತಿದ್ದಾರೆ. ದೊರೆ ಗಂಭೀರವಾಕ್ಕಿನಿಂದ:

"ಮಾತಿಯಾ, ನೀನು ಹೇಳಿದ್ದು ನಿಜ. ನೀನು ಹಾಕಿದ್ದ ಕಾಗದ ಪತ್ರವೇ ಬೇರೆ, ಫಸೀಲರು ನೋಡಿದ ಕಾಗದ ಪತ್ರವೇ ಬೇರೆ. ಚೀಲ ತನ್ನ ಬಳಿ ಇದ್ದಾಗ ಉಸಾಫನು ಅದನ್ನು ಕತ್ತರಿಸಿ ಅದರಿಂದ ನೀನು ಇಟ್ಟಿದ್ದ ಕಾಗದ ಪತ್ರಗಳನ್ನು ತೆಗೆದುಕೊಂಡು ಬೇರೆ ಸುಳ್ಳು ಕಾಗದ ಪತ್ರಗಳನ್ನು ಇಟ್ಟನು. ಅದರಿಂದಲೇ ಅನ್ಯಾಯವಾದದ್ದು. ಹೀಗೆ ನಡೆದದ್ದನ್ನು ಉಸಾಫನೇ ನಮಗೆ ಹೇಳಿದ್ದಾನೆ. ಹೌದೇನಯ್ಯ?'' ಎಂದನು.

ಉಸಾಫನು ತಲೆಯನ್ನು ತಗ್ಗಿಸಿಕೊಂಡು, "ಹೌದು, ಖಾವಿಂದ್'' ಎಂದನು.

ಬಾದಷಹನು "ಮಾತಿಯಾ, ಇವನು ನಿನ್ನಲ್ಲಿ ಅಪರಾಧಿ. ಇವನಿಗೆ ಯಾವ ಶಿಕ್ಷೆಯನ್ನು ಮಾಡಬೇಕೆಂದು ನೀನು ಹೇಳಿದರೆ ಆ ಶಿಕ್ಷೆಯನ್ನು ನಾನು ಕೊಡುತ್ತೇನೆ. ಏನು ಶಿಕ್ಷೆ ಕೊಡೋಣ ಹೇಳು. ಆನೆಯಿಂದ ತುಳಿಸೋಣವೆ? ತಲೆಯನ್ನು ಕಡಿಸೋಣವೆ? ಗಡೀಪಾರು ಮಾಡೋಣವೇ?" ಎಂದನು.

ಮಾತಿಯನು, "ಬಾದಷಹ, ಅವನಿಗೆ ಶಿಕ್ಷೆ ಮಾಡೆನ್ನುವುದು ನಮ್ಮ ಮತಕ್ಕೆ ವಿರೋಧ. ತಪ್ಪುಮಾಡಿದವನು, ಇಂದು ದುಃಖಪಡುತ್ತಾನೆ. ತಮ್ಮ ಕೃಪೆಯಿಂದ ನಾನು ಇದುವರೆಗೆ ಸುಖಿಯೇ ಸರಿ. ತಮಗೆ ಸಮ್ಮತ ವಾದರೆ ನನಗೆ ಬರಬೇಕಾದ ಹಣವನ್ನು ಕೊಡಿಸಿಬಿಡಿ. ಸ್ವಾಮಿಯ ರಾಜ್ಯದ ಐಶ್ವರ್ಯವನ್ನು ವೃದ್ಧಿಗೊಳಿಸಲು ಯತ್ನಮಾಡುತ್ತೇನೆ. ಉಸಾಫ್ ಖಾನನನ್ನು ತೊಂದರೆಗೊಳಿಸಬೇಕೆಂದು ನನಗೆ ಇಷ್ಟವಿಲ್ಲ. ಅವನು ಪುನಃ ಬರುವುದಾದರೆ ನಾವು ತಿರುಗಿ ಪಾಲುವ್ಯಾಪಾರ ಮಾಡುವೆವು. ಮೋಸ ದಲ್ಲಿ ಸುಖವಿಲ್ಲ ಎಂದು ಅವನು ತಿಳಿದುಕೊಂಡಿದ್ದರೆ ಪುನಃ ಹೀಗೆ ಮಾಡ ಲಾರನು. ನನ್ನ ವಿಜ್ಞಾಪನೆ ಇಷ್ಟೇ, ಖಾವಿಂದ್" ಎಂದನು.

ಬಾದಷಹನು "ನಿನ್ನ ಸ್ವತ್ತು ನಿನಗೆ ಬರುವುದರಲ್ಲಿ ಸಂದೇಹವಿಲ್ಲ. ಆದರೆ ಇವನನ್ನು ಸುಮ್ಮನೆ ಬಿಡಲಾಗದು. ವಜೀರ್, ಇವನನ್ನು ಕತ್ತೆಯ ಮೇಲೆ ಕೂಡಿಸಿ ಬೀದಿ ಬೀದಿಯಲ್ಲೂ ಹೀಗೆ ಮಾಡಿದನೆಂದು ಟಾಮ್ ಟಾಮ್ ಹೊಡೆಸುತ್ತಾ ಎಲ್ಲಾ ಜನರಿಗೂ ಈ ಸಮಾಚಾರ ತಿಳಿಯುವಂತೆ ಮೆರವಣಿಗೆ ಮಾಡಿ ಕೊನೆಗೆ ಮಾತಿಯನ ಮನೆಯಲ್ಲಿ ಬಿಡಿಸಿಬಿಡಿ. ಉಸಾಫ್, ನೀನು ಇಂದಿನಿಂದ ಮಾತಿಯನ ಗುಲಾಮ. ಜೋಕೆಯಾಗಿರು" ಎಂದು ಹೇಳಿದನು. ಸಭೆ ಮುಗಿಯಿತು.

ಉಸಾಫನಿಗೆ ತಕ್ಕ ಮರ್ಯಾದೆ ಆದಮೇಲೆ ಅವನನ್ನು ಮಾತಿಯ ನಿಗೆ ಗುಲಾಮನನ್ನಾಗಿ ರಾಜಾಜ್ಞೆಯಂತೆ ಕೊಟ್ಟುಬಿಟ್ಟರು. ಮಾತಿಯನು ಅವನನ್ನು ಮರ್ಯಾದೆಯಿಂದ ಕಂಡು ತನ್ನ ಕಾರುಬಾರಿಯನ್ನಾಗಿ ನೇಮಿಸಿಕೊಂಡನು.

ಸಭೆ ಮುಗಿದ ತರುವಾಯ ಬಾದಷಹನೂ ವಜೀರನೂ ಫಸೀಲನೂ ಮತ್ತೆ ಕೆಲವು ಆಪ್ತರೂ ಸೇರಿ ಮಾತನಾಡುತ್ತಾ ಇದ್ದರು. ದೊರೆ

ಮಾಡಿದ್ದ ನ್ಯಾಯದ ವಿಚಾರದಲ್ಲಿ ಎಲ್ಲರಿಗೂ ಆಶ್ಚರ್ಯ, ಇವನು ಹೇಗೆ ಕಂಡುಹಿಡಿದನೆಂದು ತಿಳಿಯಲು ಎಲ್ಲರಿಗೂ ಕುತೂಹಲ. ವಜೀರನು "ಬಾದಷಹ, ತಾವು ಉಸಾಫನಿಂದ ಈ ಸಮಾಚಾರವನ್ನು ತಿಳಿದ ಬಗೆ ಹೇಗೆ?" ಎಂದನು.

"ಮಾತಿಯು ಬಂದು ಫಿರ್ಯಾದು ಮಾಡಬೇಕಾದರೂ ಕಾರಣ ವಿದ್ದಿರಬೇಕು. ಅವನು ಕಾಗದಗಳನ್ನು ಇಡುವಲ್ಲಿ ತನಗೆ ಸರಿಯಾದ ಕಾಗದಗಳನ್ನು ಇಟ್ಟಿದ್ದಾನೇ ಹೊರತು ತಪ್ಪು ಕಾಗದಗಳನ್ನು ಇಟ್ಟಿರ ಲಾರನು. ಅದರಿಂದ ಅವನಿಗೆ ವಿರೋಧವಾಗಿ ಯಾವಾಗ ಫೈಸಲು ಬಂತೋ ಆಗ, ಇಲ್ಲವೇ ಅವನೆಂದುಕೊಂಡದ್ದೇ ಒಂದು, ಅಲ್ಲಿ ಇಟ್ಟದ್ದೇ ಒಂದು, ಆಗಿದ್ದಿರಬೇಕು. ಇಲ್ಲವೇ ಇಟ್ಟದ್ದು ಬದಲಾಯಿಸಿರಬೇಕು. ವ್ಯಾಪಾರಿ ಇಡುವುದರಲ್ಲಿ ತಪ್ಪುಮಾಡಿರಲಾರ. ಅದನ್ನು ಯಾರೋ ಬದಲಾಯಿಸಿರ ಬೇಕೆಂದಾಯಿತು. ನಾನು ಹಾಕಿದ ಮೊಹರು ಬದಲಾಯಿಸಿರಲಿಲ್ಲ. ಫಸೀಲರು ಅನ್ಯಾಯ ಮಾಡಿರಲಾರರು. ಹಾಗಾದರೆ ಯಾರು ಕಾಗದ ಗಳನ್ನು ಬದಲಾಯಿಸಿರಬೇಕು? ಉಸಾಫ್, ಆ ಅಂದವಾದ ರತ್ನ ಗಂಬಳಿಯ ಬಟ್ಟೆಯನ್ನು ಕತ್ತರಿಸಿ ಆಮೇಲೆ ಸರಿಮಾಡಿಸುವುದು ಸಾಧ್ಯವಲ್ಲ ವೆಂದಲ್ಲವೆ? ಸುಲಭ ಸಾಧ್ಯವಲ್ಲ. ಆದರೆ ತೀರ ಸಾಧ್ಯವಲ್ಲದೆ ಇದ್ದಿರ ಲಾರದು. ಅಲ್ಲದೆ 'ನನ್ನ ಹತ್ತಿರ ಇದ್ದದ್ದರಿಂದ ಮಾತಿಯನು ಸಂದೇಹ ಪಡಬಹುದು ಸ್ವಾಮಿ, ಆದರೆ ಮೊಹರು ಸರಿಯಾಗಿತ್ತು, ಜಮಖಾನವನ್ನು ಕತ್ತರಿಸಿ ಸರಿಮಾಡಿಸುವುದು ಯಾರಿಂದಲೂ ಆಗದು,' ಎಂದು ಉಸಾಫನು ಹೇಳಿದಾಗ ಇವನು ಈ ವಿಚಾರ ಯೋಚನೆ ಮಾಡಿರಬೇಕೆಂದು ನನಗೆ ಗೊತ್ತಾಯಿತು. ಮಾತಿಯನನ್ನು ನೋಡಿ; ಅವನನ್ನು 'ಇಟ್ಟ ಕಾಗದ ಹೇಗೆ ಬದಲಾಯಿಸಿತು' ಎಂದು ಕೇಳಿದರೆ, ಅದು ಹೇಗೋ ಸ್ವಾಮಿ, ಬದಲಾಯಿಸಿದ್ದು ನಿಜ, ಹೇಗೊ ನಾನು ಹೇಳಲಾರೆ, ಎಂದನು. ನಾನು ಮಾಡಿರಬೇಕಲ್ಲವೇನಯ್ಯ ಎಂದಾಗ ಕೂಡ, ಕಂಬಳಿಯನ್ನು ಕತ್ತರಿಸಿ ಸರಿ ಮಾಡಿರಬಹುದು, ಎಂದು ಹೇಳಲು ಅವನಿಗೆ ತೋರಲಿಲ್ಲ. ಅದು ಉಸಾಫ್ ಖಾನನಿಗೆ ತೋರಿತ್ತು. ಆದರ ಮೇಲೆ ಸಂದೇಹಪಟ್ಟು ಮಾತಿಯನ ಮೇಲೆ ಕೋಪಗೊಂಡಂತೆ ನಟಿಸಿ ಉಸಾಫ್ ಖಾನನನ್ನು ಬೈಟಖ್ ಖಾನೆಯ ಭಕ್ಷಿ

ಯನ್ನಾಗಿ ಮಾಡಿದೆ. ಅವನಿಗೆ ಅಧಿಕಾರ ಹೆಚ್ಚು ಮಾಡುತ್ತೇನೆ ಎಂತ ಆಸೆ ತೋರಿಸುತ್ತಾ ಕಂಬಳಿ ಕೆಟ್ಟರೆ ತಲೆ ಹೋಗುವುದೆಂಬ ಹೆದರಿಕೆಯನ್ನೂ ಹುಟ್ಟಿಸಿದೆ. ಷಿರಾಜ್ ಕಂಬಳಿಯನ್ನು ಅವನು ಕಾಣದ ಹಾಗೆ ನಾನೇ ಸ್ವಲ್ಪ ಸುಟ್ಟುಹಾಕಿದೆ. ಅವನು ಯಾರೋ ಸುಟ್ಟರೆಂದು ನನಗೆ ಹೆದರಿ ರಹಸ್ಯವಾಗಿ ಸರಿಮಾಡಿಸಿದನು. ಚೀಲವನ್ನು ಕತ್ತರಿಸಿ ಸರಿಮಾಡಿದ ಬುದ್ಧಿವಂತನಿಗೆ ಈ ಕಂಬಳಿಯನ್ನು ಸರಿಮಾಡಿಸುವುದು ಕಷ್ಟವೆ? ನಾನು ಪುನಃ ನೋಡಿದಾಗ ಕಂಬಳಿ ಸರಿಯಾಗಿತ್ತು. ಏನಯ್ಯಾ ಎಂದೆ. ಒಪ್ಪಿಕೊಂಡ.''

''ಹಾಗಾದರೆ ಉಸಾಫ್ ಖಾನನು ಕಂಬಳಿ ಕತ್ತರಿಸುವ ಮಾತನಾಡುವುದಕ್ಕೆ ಮೊದಲು ತಮಗೆ ಅವನ ಮೇಲೆ ಸಂದೇಹವಿರಲಿಲ್ಲ?''

''ಇಲ್ಲ. ಅವನು ಹಾಗೆ ಹೇಳುತ್ತಲೂ ಹೇಗೋ ಮನಸ್ಸಿಗೆ ಹೊಳೆಯಿತು. ಇವನ ಕೈಯಲ್ಲಿ ಕಂಬಳಿ ಸರಿಮಾಡಿಸಬೇಕೆಂದು ಬೈಟಖ್ ಖಾನೆಯ ಭಕ್ಷಿಯನ್ನಾಗಿ ಮಾಡಿದೆ.''

ವಜೀರನು ''ಹಾಗಾದರೆ ನಾನು ಅಂದು ಬಂದು ಅವನಿಗೆ ಕೆಲಸ ಕೊಟ್ಟದ್ದು ತಪ್ಪೆಂದು ಹೇಳಿದಾಗ ಆಮೇಲೆ ನಡೆದಿರುವ ವಿಷಯವೆಲ್ಲ ತಮ್ಮ ಮನಸ್ಸಿನಲ್ಲಿ ಮೊದಲೇ ಗೊತ್ತಾಗಿತ್ತು?'' ಎಂದನು.

''ಹೌದು. ಇನ್ನು ಸುಮ್ಮನೆ ನನ್ನನ್ನು ಪ್ರಶ್ನೆ ಕೇಳಬೇಡಿ. ಫಸೀಲರು ತಮ್ಮ ನ್ಯಾಯದ ವಿಷಯದಲ್ಲಿ ಉಚ್ಚಾಭಿಮಾನವನ್ನು ಇಟ್ಟುಕೊಂಡು ಮನುಷ್ಯಮಾತ್ರನಿಗೆ ಬೇರೆ ವಿಧವಾದ ತೀರ್ಪು ಸಾಧ್ಯವಲ್ಲವೆಂದರು. ನಾನೇನೋ ಬೇರೆಯೊಂದನ್ನು ಮಾಡಿದೆ'' ಎಂದು ಬಾದಷಹನು ಹೇಳಿದನು.

ಫಸೀಲನು ಸ್ವಲ್ಪ ಮುಖ ತಗ್ಗಿಸಿದನು. ಉತ್ತರಕ್ಷಣದಲ್ಲಿಯೇ ರಾಜಸೇವಕರಿಗೆ ಸ್ವಭಾವವಾದ ಸೌಲಭ್ಯದಿಂದ ''ನಾನು ಈಗಲೂ ಕೂಡ ಈ ತೀರ್ಪು ಮನುಷ್ಯಮಾತ್ರನಿಂದ ಸಾಧ್ಯವಲ್ಲವೆಂದೇ ಹೇಳುವೆನು'' ಎಂದು ಹೇಳಿ ಹಿಂದಿನ ಅಹಂಕಾರದ ಮಾತನ್ನು ಇಂದು ಮೃಷಾಸ್ತುತಿಯಾಗಿ ಪರಿಣಾಮ ಮಾಡಿದನು.

ರಾಜನೂ ಕೋಪಗೊಳ್ಳಲಿಲ್ಲ. ತಾನು ಅಪೇಕ್ಷಿಸಿ ನಿರೀಕ್ಷಿಸಿದ್ದ ಉತ್ತರವನ್ನು ಪಡೆದವನ ಸಂತೋಷದಿಂದ ಅವನ ಮುಖದಲ್ಲಿ ಒಂದು ಮುಗುಳ್ನಗೆ ತೋರುತ್ತಿತ್ತು.

# ರಂಗಸಾಮಿಯ ಅವಿವೇಕ

ರಂಗಸಾಮಿ ಸ್ಫುರದ್ರೂಪಿ. ಪುಣ್ಯವಂತರ ಮಗ. ದೇವರು ಅವನನ್ನು ಎಲ್ಲಾ ವಿಷಯದಲ್ಲೂ ಸರಿಯಾಗಿಟ್ಟಿದ್ದ. ಅವನು ರೂಪಿಗೆ ತಕ್ಕಂತೆ ಚೆಲುವೆಯಾದ ಹುಡುಗಿಯನ್ನು ಮದುವೆಯಾಗಿದ್ದನು. ಆ ಹುಡುಗಿಯೋ, ಮೊದ್ದು ಹುಡುಗಿ, ಯಾವಾಗಲೂ ಗಂಡನ ಬಳಿ ಹೋಗಿ ಕುಳಿತು ಕೊಂಡು ಇರುತ್ತಾ ಅವನಿಗೆ ಜಂಬ ಬರುವಹಾಗೆ ಮಾಡಿದ್ದಳು. ರಂಗಸಾಮಿ ತಾನು ರೂಪವಂತನೆಂದು ಚೆನ್ನಾಗಿ ಬಲ್ಲನು. ಬೆಳಗಿನ ಹೊತ್ತು ಮುಖ ತೊಳೆದುಕೊಳ್ಳುವುದೇ ಅರ್ಧ ಗಂಟೆ. ಅವನು ಮುಖ ವನ್ನು ತಿಕ್ಕುವುದರಲ್ಲಿ ಬೆಳ್ಳಗಿದ್ದ ಆ ಮುಖ ಕೆಂಪಗಾಗುವುದು. ಅವನು ಮುಖಕ್ಷೌರ ಮಾಡಿಸಿಕೊಳ್ಳುತ್ತಿದ್ದನು. ತಲೆಯ ಕೂದಲನ್ನು ಮೊಟಕಾಗಿ ಕತ್ತರಿಸಿ ಪರಂಗಿಯವರಂತೆ ಬೈತಲೆ ಬಿಡಿಸಿ ಈಕಡೆ ಆಕಡೆ ತಿರುಗಿಸಿರುವನು. ಒಂದೊಂದು ಸಲ ಕನ್ನಡಿಯ ಎದುರಿಗೆ ನಿಂತಾಗ ಅವನಿಗೆ ತನ್ನ ಮುಖವನ್ನು ನೋಡಿ ತನಗೇ ಮುದ್ದಾಗುವುದು. ತನ್ನ ಹೆಂಡತಿ ತನ್ನನ್ನು ಪ್ರೀತಿಸುವುದು ನ್ಯಾಯವೇ ಸರಿ ಎಂದುಕೊಳ್ಳುವನು. ಪುಣ್ಯವಂತರ ಮಗನಾಗಿ ರೂಪವಂತನಾಗಿರುವ ಗಂಡನನ್ನು ಹೆಂಡತಿ ಪ್ರೀತಿಸುವುದು ಏನಾಶ್ಚರ್ಯ? ಇದಕ್ಕೆ ತಕ್ಕಹಾಗೆ ಸೀತೆ ತನ್ನ ಗಂಡನನ್ನು ಎಷ್ಟು ಪ್ರೀತಿಯಿಂದ ಪ್ರೀತಿಸಿದರೂ ಇಂತಹ ಗಂಡನಿಗೆ ತಕ್ಕಷ್ಟು ಪ್ರೀತಿ ತನ್ನ ಹೃದಯದಲ್ಲಿಲ್ಲವೆಂದೆಣಿಸಿ ಮತ್ತೆ ಮತ್ತೆ ತನ್ನ ಪ್ರೀತಿಯನ್ನು ತೋರಿಸುವಳು. ಅಂತೂ ರಂಗಸಾಮಿಯ ಸ್ವಪ್ರಯತ್ನದಿಂದಲೂ, ಸೀತೆಯ ಅಸಾಧಾರಣ ಪ್ರೀತಿಯ ಕಾರಣದಿಂದಲೂ, ತರುಣನಿಗೆ ತನ್ನ ರೂಪು ಅತಿಶಯವಾದುದೆಂದು ಭಾವನೆ ಹುಟ್ಟಿತು.

ಒಂದು ದಿನ ರಾತ್ರಿ ರಂಗಸಾಮಿ ತನ್ನ ಕೊಟಡಿಯಲ್ಲಿ ಕುಳಿತು ಓದುತ್ತಿದ್ದನು. ಕ್ಷತ್ರಿಯ ರಮಣಿಯೊಬ್ಬಳ ವರ್ಣನೆ. ವರ್ಣನೆಯನ್ನು ಓದುತ್ತ ಇದು ಯಾರಂತೆ ಎಂದು ಯೋಚನೆಮಾಡಿದನು. ಸೀತೆಯಂತಲ್ಲ. ಈ ಧೈರ್ಯವೊ, ಈ ಸ್ಥೈರ್ಯವೊ, ಕೋಪದಿಂದ ಪ್ರಜ್ವಲಿಸುವ

ಈ ಕಣ್ಣುಗಳೋ! ಸೀತೆ ನಳನಳಿಸುವ ನಳಿದಾವರೆಯಂತೆ ಕೋಮಲ ಶರೀರೆ. ತಾವರೆಯ ಮೃದುವಾದ ಎಸಳಂತೆ ಕೋಮಲವಾದ ಸ್ವಭಾವವುಳ್ಳವಳು. ಸೀತೆ ಕೋಪಿಸಿಕೊಂಡರೆ ಭಯವಾಗದು. ಅವಳ ಕೋಪಕ್ಕೂ ಅಳುವಿಗೂ ಬಹಳ ಹತ್ತಿರ. ಅವಳಿಗೆ ಕೋಪ ಬಂದಾಗ ಮೊದಲು ಮುಖವನ್ನು ಗಂಟಿಕ್ಕುವಳು; ಕಣ್ಣು ಸ್ವಲ್ಪ ದೊಡ್ಡದಾಗುವುದು; ಕೋಪ ಕಣ್ಣಿನಲ್ಲಿ ಸ್ವಲ್ಪ ಮಿಂಚಿದರೂ ಮಿಂಚಬಹುದು; ಆದರೆ ಒಡನೆಯೇ ಮಳೆ ಬಂದುಬಿಡುವುದು. ಅವಳ ಕೋಪದ ಈ ನಾಲ್ಕು ಅವಸ್ಥೆಗಳಲ್ಲಿ ಯಾವುದನ್ನು ನೋಡಿದರೂ ಇನ್ನಷ್ಟು ಮುದ್ದಾಗುವುದು; ಭಯವಾಗದು. ಈ ಕ್ಷತ್ರಿಯ ರಮಣಿಗೆ ಕೋಪ ಬಂದಾಗ ಕಣ್ಣಿನಲ್ಲಿ ನೀರೆಂದರೇನು? ಬರಿಯ ಕಿಡಿಮಿಂಚು; ಮಿಂಚಾದ ಮೇಲೆ ಸಿಡಿಲು. ಸೀತೆ ಇವಳಂತಲ್ಲ. ಇಂದಿರಾದೇವಿಯೋ? ಇಂದಿರಾದೇವಿ ಸುಮಾರು ಈ ಕ್ಷತ್ರಿಯ ರಮಣಿಯಂತೆ ಆದಾಳು. ಎತ್ತರವಾದ ಹೆಂಗಸು; ಸೀತೆಯ ದೇಹಕ್ಕಿಂತಲೂ ತುಂಬಿದ ದೇಹ; ಎರಡು ಮೂರು ವರುಷ ಮಾತ್ರ ಅವಳಿಗಿಂತ ದೊಡ್ಡವಳಾದರೂ ನಡೆನುಡಿಯಲ್ಲಿ ಚೆನ್ನಾಗಿ ಅರಿತ ಹೆಂಗಸು ಎಂಬಂತೆ ತೋರುತ್ತಿದ್ದಳು. ಕಣ್ಣುಗಳು ದೊಡ್ಡವಾಗಿರುವುವು. ಕೋಪಿಸಿಕೊಂಡರೆ ಮತ್ತಷ್ಟು ದೊಡ್ಡವಾಗುವುವು. ಅಳು? ಅಳುವೊ ಗಿಳುವೊ; ಇಂದಿರಾದೇವಿಯ ಕೋಪ ಬರಿಯ ಮಿಂಚಿನ ಕೋಪ, ಸುಮಾರು ಸಿಡಿಲಿನ ಕೋಪ, ಮಳೆಗರೆಯುವ ಕೋಪ ತೀರಾ ಅಲ್ಲ.

ಅಷ್ಟು ಯೋಚನೆ ಮಾಡುವ ಹೊತ್ತಿಗೆ ಸೀತೆ ಅಲ್ಲಿಗೆ ಬಂದಳು. ಬಂದು ಪಕ್ಕದಲ್ಲಿ ಕುಳಿತುಕೊಂಡು "ನನಗೆ ಯಾಕೋ ಸುಮ್ಮನೆ ತಲೆ ನೋಯುತ್ತದೆ" ಎಂದಳು.

"ಯಾಕೆ?"

"ನಿಮ್ಮ ಓದನ್ನು ನೋಡಿ. ನಾಲ್ಕು ಹೊತ್ತೂ ಪುಸ್ತಕ ಪುಸ್ತಕ. ನಾನು ಬಂದರೆ ತಲೆಯೆತ್ತಿ ನೋಡುವುದೇ ಇಲ್ಲ."

"ಮದುವೆ ಮಾಡಿದ್ದು ತಪ್ಪುಕೆಲಸವಾಯಿತು, ಹುಡುಗ ಓದುವುದೇ ಇಲ್ಲ, ಎಂದು ತಂದೆಯವರು ಹೇಳುವುದನ್ನು ಕೇಳಲಿಲ್ಲವೇನು?"

"ಅವರು ಹೇಳುವುದಕ್ಕೇನು? ಅವರೇನು ಹುಡುಗಿಯೆ?"

ಕೂದಲು ಅರೆ ನರೆತಿದ್ದ ನಲವತ್ತೈದು ವರುಷದ ಮುದುಕ ಹುಡುಗಿಯೆ? ತನ್ನ ಮಾತನ್ನು ಕೇಳಿ ತನಗೇ ನಗುಬಂದು ಸೀತೆ ನಕ್ಕಳು. ರಂಗಸಾಮಿಗೂ ನಗು ಬಂದಿತು. ಅವನು ಸ್ವಲ್ಪ ನಕ್ಕು,

"ಅಯ್ಯೊ ಗಂಡುಬೀರಿ!" ಎಂದನು.

ಒಂದು ನಿಮಿಷ ಬಿಟ್ಟುಕೊಂಡು "ಮಧ್ಯಾಹ್ನ ಏನುಮಾಡು ತ್ತಿದ್ದೆ?" ಎಂದು ಕೇಳಿದನು.

"ನೀವು ಎಷ್ಟು ಹೊತ್ತಿಗೆ ಕಾಲೇಜಿನಿಂದ ಬರುವಿರೋ ಎಂದು ಎದುರು ನೋಡುತ್ತಿದ್ದೆ" ಎಂದು ಸೀತೆ ಉತ್ತರಕೊಟ್ಟಳು.

"ಅದು ಸರಿ; ಅದು ನೀನು ದಿನವೂ ಮಾಡುವ ಕೆಲಸ; ಅದಲ್ಲದೆ ಇನ್ನೇನು ಮಾಡುತ್ತಿದ್ದೆ?"

"ಮಾಡುವುದೇನಣ್ಣ? ಜಡೆ ಹಾಕಿಸಿಕೊಂಡೆ, ಸ್ವಲ್ಪ ಕಸೂತಿ ಹಾಕಿದೆ."

"ಜಡೆ ಯಾರು ಹಾಕಿದರು, ಬಹಳ ಚೆನ್ನಾಗಿ ಬಂದಿದೆಯಲ್ಲ. ಅಮ್ಮ ಹಾಕಿದರೆ?"

"ಇಲ್ಲ, ಇಂದಿರಾದೇವಿ ಹಾಕಿದಳು. ಅವಳು ಯಾವುದನ್ನು ಮಾಡಿದರೂ ಸರಿಯೆ, ಚೆನ್ನಾಗಿ ಮಾಡುತ್ತಾಳೆ. ಜಡೆ ಹಾಕುವುದು, ರಂಗವಲ್ಲಿ ಹಚ್ಚುವುದು, ಕಸೂತಿ ಹಾಕುವುದು, ಯಾವುದಾದರೂ ಹಾಗೆಯೆ."

"ಉಂ, ಸರಿ."

"ಒಂದೊಂದು ಸಲ ನನಗೆ ಅಷ್ಟು ಬುದ್ಧಿ ಇಲ್ಲವಲ್ಲ ಎನ್ನಿಸುತ್ತದೆ."

"ಈಗ ಇರುವ ಬುದ್ಧಿ ಸಾಲದೇನು?"

"ಇಂದಿರಾದೇವಿಯ ಬುದ್ಧಿಯನ್ನು ನೋಡಿದರೆ ನೀವು ಏನು ಹೇಳುವಿರೋ. ಅವಳಿಗಿರುವಷ್ಟು ಬುದ್ಧಿ ನನಗೆ ಇದ್ದಿದ್ದರೆ ನಿಮಗೆ ಒಳ್ಳೆಯ ಹೆಂಡತಿಯಾಗಿರುತ್ತಿದ್ದೆನೆಂದು ಒಂದೊಂದು ಸಲ ಎಂದು ಕೊಳ್ಳುತ್ತೇನೆ."

"ನೀನು ಈಗ ನನಗೆ ಒಳ್ಳೆಯ ಹೆಂಡತಿಯಲ್ಲವೇನು?"

"ಏನು ಒಳ್ಳೆಯ ಹೆಂಡತಿ ಹೇಳಿ. ನಿಮ್ಮ ಮಾತಿಗೆ ಸರಿಯಾಗಿ ಮಾತನಾಡಲಾರೆ. ನಿಮಗೆ ಬೇಕಾದ ಸುಖವೆಲ್ಲವನ್ನೂ ಕೊಡಲಾರೆ. ನಿಮ್ಮ ಬುದ್ಧಿಗೆ ಸರಿಯಾಗಿ ನನಗೆ ಬುದ್ಧಿ ಇಲ್ಲ. ನಿಮ್ಮ ಹೆಂಡತಿ ಎನ್ನುವುದಕ್ಕೋಸ್ಕರ ನೀವು ಮುದ್ದಾಡಿದರೆ ಆಡಿಕೊಳ್ಳಬಹುದು. ಅಷ್ಟೇ ಹೊರತು ಇನ್ನೇನೂ ಇಲ್ಲವಲ್ಲ. ಇಂದಿರಾದೇವಿಯಂತೆ ಬುದ್ಧಿವಂತ ಳಾಗಿದ್ದರೆ ನಿಮಗೆ ತಕ್ಕವಳಾಗಿರುತ್ತಿದ್ದೆ, ಸರಿಯಾದ ಹೆಂಡತಿಯಾಗಿ ರುತ್ತಿದ್ದೆ."

"ನನಗೆ ನೀನು ಸಾಕು ಸೀತೆ. ಬುದ್ಧಿ ಸ್ವಲ್ಪ ಕಡಿಮೆಯಾದರೇನು? ನಿನಗೆ ಬೇಕಾದಷ್ಟು ಇದೆ. ಇನ್ನು ಹೆಚ್ಚಾಗಿ ಇಟ್ಟುಕೊಂಡು ಏನು ಮಾಡುವುದು?"

ಹೀಗೆಂದು ರಂಗಸಾಮಿ ಸೀತೆಯ ಮುಖವನ್ನು ಮುಗುಳ್ನಗೆಯಿಂದ ನೋಡಿದನು. ಅಂದಿಗೆ ಇನ್ನು ಅವನ ಓದು ಮುಗಿಯಿತು. ಯಾವ ಮನುಷ್ಯನಿಗೇ ಆಗಲಿ ತನ್ನ ಹೆಂಡತಿ ಹತ್ತಿರ ಇರುವಾಗ, ಯಾರೋ ಬ್ರಹ್ಮನಂತೆ, ಅವನ ಹೆಂಡತಿಯ ಗೊಡವೆಯೇಕೆ, ನೀವು ಹೇಳಿ!

ಕ್ಷತ್ರಿಯ ರಮಣಿಯ ವರ್ಣನೆಯಿಂದ ಇಂದಿರಾದೇವಿಯ ರೂಪಿನ ವಿಷಯವನ್ನು ಯೋಚಿಸುವ ವೇಳೆಗೆ ಸರಿಯಾಗಿ ಸೀತೆಯಿಂದ ಅವಳ ಬುದ್ಧಿಯ ಸ್ತೋತ್ರವನ್ನು ಕೇಳಿ ಅಭಿಮಾನದಿಂದ ಶಿಥಿಲವಾದ ರಂಗಸಾಮಿಯ ಸದ್ವೃತ್ತಿಯ ಭಿತ್ತಿಯಲ್ಲಿ ಸರ್ಪಪ್ರವೇಶಕ್ಕೆ ಸಣ್ಣ ದೊಂದು ರಂಧ್ರವಾಯಿತು.

"ನನಗೆ ನೀನು ಸಾಕು" ಎಂದದ್ದು ಅಭಿಮಾನಿಯು ಆಶ್ರಿತಳಲ್ಲಿ ಕೇವಲ ದಯೆಯಿಂದ ಹೇಳಿದ ಮಾತು. ನಿಜವಾಗಿಯೂ ರಂಗಸಾಮಿ ಒಂದೊಂದು ಸಲ ಸೀತೆ ತನಗೆ ತಕ್ಕ ಹೆಂಡತಿಯೆ ಎಂದು ಯೋಚಿಸು ವುದುಂಟು. ಕ್ಷತ್ರಿಯ ರಮಣಿಯ ವರ್ಣನೆಯನ್ನೋದಿ "ಇದು ಸೀತೆ ಯಂತಲ್ಲ, ಯಾರಂತೆ?" ಎಂದು ಯೋಚಿಸಿದನೆಂದಾಗಲೇ ನಿಮಗೆ ಈ ವಿಷಯ ತೋರಿರಬಹುದು. ಅಲ್ಲದೆ ನಾವು ಹೇಳುತ್ತೇವೆ ಕೇಳಿ. ಸೀತೆಗಿಂತಲೂ ಇಂದಿರಾದೇವಿ ಹೆಚ್ಚು ಅಪೇಕ್ಷಣೀಯ ವಸ್ತು. ಇದರಲ್ಲಿ ಸಂದೇಹವಿಲ್ಲ. ಸೀತೆ ಬಹು ಸ್ವಾದು ಸ್ತ್ರೀಯೇ ಸರಿ. ಆದರೆ ಗಂಡಸಿಗೆ

ಸ್ತ್ರೀಯಲ್ಲಿ ಬೇಕಾದುದು ಕೇವಲ ಸ್ವಾದುಭಾವ ಮಾತ್ರವಲ್ಲ. ಮತ್ತೇನು ಬೇಕು? ಅದನ್ನೆಲ್ಲ ಇಲ್ಲಿ ಹೇಳಲು ಅವಕಾಶವಿಲ್ಲ. ಮುಖ್ಯ ಏನೆಂದರೆ ಪ್ರತಿಯೊಬ್ಬ ಮನುಷ್ಯನೂ ತನ್ನ ಪತ್ನಿ ತನ್ನನ್ನು ಅವಳ ಸ್ವತ್ತಾಗಿ ಕಾಣಬೇಕೆಂದು ಅಪೇಕ್ಷಿಸುವನು. ಇವನಿಗೆ ತಕ್ಕ ಹೆಂಡತಿಯೇ ನಾನು? ಎಂದು ಸಂದೇಹದಲ್ಲಿರುವವಳು ಗಂಡನನ್ನು ಸ್ವತ್ತಾಗಿ ಹೇಗೆ ಭಾವಿಸಿ ಯಾಳು? ಸೀತೆಗೆ ಹಾಗೆ ಭಾವಿಸುವುದಕ್ಕೆ ಧೈರ್ಯ ಸಾಲದು. ಅವಳು ಇನ್ನೂ ಚಿಕ್ಕ ಹುಡುಗಿ. ಇಂದಿರಾದೇವಿ ಹೀಗೆ ಭಾವಿಸಬಲ್ಲ ಹೆಂಗಸೆಂದು ಅವಳನ್ನು ನೋಡಿದವರಿಗೆ ತೋರುವುದು. ಈ ಕಾರಣ ಇಷ್ಟು ವಿವರ ವಾಗಿ ರಂಗಸಾಮಿಯ ಮನಸ್ಸಿನಲ್ಲಿ ಕಾಣದಿದ್ದರೂ ಅವನು ಇಂದಿರಾ ದೇವಿಯ ವಿಷಯ ಸ್ವಲ್ಪ ಹೆಚ್ಚಾಗಿ ಯೋಚಿಸುವುದಕ್ಕೆ ಪ್ರಾರಂಭ ಮಾಡಿದನು. ಸ್ವಲ್ಪ ಹೆಚ್ಚಾಗಿ ಅವರ ಮನೆಗೆ ಹೋಗಿಬರಲು ಮೊದಲು ಮಾಡಿದನು.

* * * *

ಒಂದು ದಿನ ಭಾನುವಾರ ಬೆಳಗ್ಗೆ ರಂಗಸಾಮಿ ಎದ್ದು ಹೊರಗೆ ಬಂದಾಗ ಇಂದಿರಾದೇವಿ ತನ್ನ ಮನೆಯ ಪವುಳಿಯಲ್ಲಿದ್ದ ಮಲ್ಲಿಗೆಯ ಪೊದೆಯಲ್ಲಿ ಹೂವನ್ನು ಬಿಡಿಸುತ್ತಿದ್ದಳು. ಸ್ತ್ರೀರೂಪು ಗಂಡಸರಿಗೆ ಎಲ್ಲಾ ನಿಲುವಿನಲ್ಲೂ ಅಂದವಾಗಿ ಕಾಣುವುದು. ಹೂಬಿಡಿಸುವ ನಿಲುವಿನಲ್ಲಿ ಅದು ಬಹು ಅಂದವಾಗಿ ತೋರುತ್ತದೆ. ಶರೀರವೂ ಲತೆಯೂ ಸಾಮಾನ್ಯ ಗುಣಗಳನ್ನು ಸ್ಪರ್ಧೆಯಿಂದ ತೋರಿಕೊಳ್ಳುವಂತೆ ಒಂದರ ಪಕ್ಕದಲ್ಲೊಂದು ಸೇರಿರುವುವು. ತಳಿರುಗಳಂತೆ ಇರುವ ಕೈಗಳು ತಳಿರುಗಳ ನಡುವೆ ತೂರಿ ಪುಷ್ಪಗಳನ್ನು ಹಿಡಿದುಕೊಳ್ಳುವುವು. ತನ್ನ ಜನ್ಮ ಸಾರ್ಥಕವಾಯಿ ತೆಂಬಂತೆ ಪುಷ್ಪ ಆ ಕೈಯನ್ನು ಸೇರುವುದು. ಲತೆಯ ಬಳಿ ಲತೆ ಪುಷ್ಪಗಳ ಬಳಿ ಪುಷ್ಪಗಳು. ಪುಷ್ಪಶ್ರೇಷ್ಠದಲ್ಲಿ ಆತ್ಮಸಮರ್ಪಣ ಮಾಡಿ ಅದಕ್ಕೆ ಮರ್ಯಾದೆ ತೋರುವಂತೆ ಪುಷ್ಪಗಳು ಕೈದಾವರೆಯನ್ನೈದುವುವು. ಎತ್ತಿದ ತೋಳು, ಸ್ವಲ್ಪ ಸರಿದ ಸೆರಗು, ಕೊಂಚವಾಗಿ ಕಾಣುವ ಕಂಚುಕ, ಗೌರವದ ಆಪ್ತತೆಯಿಂದ ಅದಕ್ಕೆ ಬಂದಿರುವ ಹೆಮ್ಮೆ, ಇವೆಲ್ಲ ಪುರುಷರ ಮನಸ್ಸನ್ನು ಅಪಹರಿಸುವುವು. ಇಂದಿರೆ ಅವಳ ಪಾಡಿಗೆ ಅವಳು

ಹೂಬಿಡಿಸುತ್ತ ನಿಂತಿದ್ದ ನಿಲುವನ್ನು ನೋಡಿ ರಂಗಸಾಮಿಯ ಮನಸ್ಸು ಮೋಸಹೋಯಿತು. ಅವನು ಹಾಗೆಯೇ ಸುತ್ತುವವನಂತೆ ನಟಿಸುತ್ತಾ ತನ್ನ ಮನೆಯ ಪವುಳಿಯಲ್ಲಿ ಅವಳಿಗೆ ಸಾಧ್ಯವಾದಷ್ಟೂ ಹತ್ತಿರ ಬಂದು ನಿಂತನು. ಆಗಾಗ ಪುನಃ ಪುನಃ ಆ ಕಡೆ ನೋಡಿದನು. ಆ ಸುಂದರವಾದ ಆಕಾರವನ್ನು ನೋಡಿ ಆನಂದಪಟ್ಟನು. ಪುನಃ ಪುನಃ ನೋಡೋಣ ವೆಂದು ಮತ್ತಷ್ಟು ಆಸೆಯಾಯಿತು. ಅಷ್ಟು ಹೊತ್ತಿಗೆ ಇಂದಿರಾದೇವಿ ರಂಗಸಾಮಿಯನ್ನು ನೋಡಿ ಮನೆಯೊಳಕ್ಕೆ ಹೊರಟುಹೋದಳು.

ಆ ದಿನ ಮಧ್ಯಾಹ್ನ ಸೀತೆ ಇಂದಿರಾದೇವಿಯ ಮನೆಗೆ ಹೋಗಿದ್ದಳು. ರಂಗಸಾಮಿ ಅದನ್ನು ಬಲ್ಲನಾದ್ದರಿಂದ ರಾತ್ರಿ,

"ಇಂದಿರಾದೇವಿ ಹಾಕಿದ್ದಲ್ಲವೆ ಜಡೆ, ಬಹಳ ಚೆನ್ನಾಗಿ ಬಂದಿದೆ" ಎಂದನು.

"ಹೌದು. ನಾನು ಅವಳಿಗೆ ಜಡೆಹಾಕಿದೆ, ಅದೂ ಚೆನ್ನಾಗಿ ಬಂದಿದೆ. ಅವಳು ನನಗೆ ಎಲ್ಲವನ್ನೂ ಹೇಳಿಕೊಡುತ್ತಿದಾಳೆ."

"ಏನೇನನ್ನು ಹೇಳಿಕೊಟ್ಟಳು?"

"ಜಡೆ ಹಾಕುವುದನ್ನು ಹೇಳಿಕೊಟ್ಟಳು. ಕಸೂತಿ ಹೇಳಿಕೊಡು ತ್ತಿದಾಳೆ. ರಂಗವಲ್ಲಿ ಹಚ್ಚುವುದನ್ನು ಹೇಳಿಕೊಡುತ್ತಿದಾಳೆ. ಜಾಣನಾದ ಗಂಡನಿಗೆ ತಕ್ಕ ಹೆಂಡತಿಯಾಗಿರುವುದು ಹೇಗೆಂದು ಹೇಳಿಕೊಡು ತ್ತಿದಾಳೆ" ಎಂದು ಹೇಳಿ ಸೀತೆ ಗಂಡನಿಗೆ ಒಂದು ಮುತ್ತನ್ನು ಕೊಟ್ಟಳು.

"ಹಾಗೆಂದರೇನೆ?"

"ಅದನ್ನೆಲ್ಲಾ ಹೇಳುತ್ತಾರೆಯೆ, ನಿಮಗೆ? ಗಂಡಸಿಗೆ ಯಾಕೆ ಗೌರೀ ದುಃಖ?"

"ಹಾಗಾದರೆ ಅದು ನನಗೆ ತಿಳಿಯುವ ಬಗೆ ಹೇಗೆ?"

"ಈಗ ಯಾಕೆ ತಿಳಿಯಬೇಕು? ನಾನು ಇನ್ನು ಮೇಲೆ ಇರುವುದನ್ನು ನೋಡಿದರೆ, ತಾನೇ ತಿಳಿಯುವುದು.

ಸ್ವಲ್ಪ ಹೊತ್ತು ಬಿಟ್ಟುಕೊಂಡು ಸೀತೆ "ನೀವು ಸಂಗೀತ ಕಲಿಯ ಬಾರದೆ" ಎಂದಳು.

"ನನಗೇಕೆ ಸಂಗೀತ?"

"ಇಂದಿರಾದೇವಿ, ನೋಡಿ, ನರಸಿಂಹಮೂರ್ತಿಗಳಿಗೆ ದಿನವೂ ಈಗ ವೀಣೆ ಹೇಳಿಕೊಡುತ್ತಿದಾಳೆ. ಅವಳೇ ನನಗೂ ಹೇಳಿದವಳು."

"ಏನೆಂದು?"

"ನಿಮ್ಮ ಧ್ವನಿ ಚೆನ್ನಾಗಿದೆ, ಹಾಡಿದರೆ ಕೇಳುವುದಕ್ಕೆ ಚೆನ್ನಾಗಿದ್ದೀತು, ಹೇಳಿಕೊಡು, ಎಂದು."

"ಹಾಗಾದರೆ ನಾಳೆಯಿಂದ ಹೇಳಿಕೊಡು."

ರಂಗಸಾಮಿ ಇದುವರೆಗೆ ಇಂದಿರಾದೇವಿಯ ಆಕಾರವನ್ನು ಬಾಹ್ಯ ದೃಷ್ಟಿಯಿಂದ ನೋಡಿದ್ದು ಮಾತ್ರವೇ. ಮನಸ್ಸಿನ ಔನ್ನತ್ಯವನ್ನು ಆ ಆಕಾರಕ್ಕೆ ಅನುಗುಣವಾಗಿ ಊಹಿಸಿ ಇದ್ದನು, ಅಷ್ಟೇ. ಈಗ ಆ ಸುಂದರವಾದ ಆಕಾರವನ್ನು ಅಲಂಕರಿಸುತ್ತಿದ್ದ ಆ ಮನಸ್ಸನ್ನು ಇವನ ಮನಸ್ಸು ಸೋಕಿದಂತಾಯಿತು. ರಂಗಸಾಮಿಗೆ ಸ್ವಲ್ಪ ಉತ್ಸಾಹವೇರಿತು; ಸ್ವಲ್ಪ ಕನಿಕರವಾಯಿತು; ಸ್ವಲ್ಪ ಕುತೂಹಲವೂ ಮನಸ್ಸಿನಲ್ಲಿ ತಲೆದೋರಿತು. ಅಂತಹ ಹುಡುಗಿ ತನ್ನ ವಿಷಯ ಯೋಚಿಸುತ್ತಿದ್ದಳೆಂದು ಉತ್ಸಾಹ. ಅಯ್ಯೋ ಪಾಪ ಆದರೆ ಅಂಥ ಹುಡುಗಿಗೆ—ಬುದ್ಧಿವಂತಳು, ರೂಪವಂತಳು, ಸೀತೆ ಹೇಳುವ ಮಾತನ್ನು ಕೇಳಿದರೆಯೇ ಇಂದಿರಾದೇವಿ ಎಷ್ಟು ಸ್ನೇಹಪರಳು ಎಂದು ತೋರುತ್ತಿತ್ತು—ಅಂತಹ ಹುಡುಗಿಗೆ— ಹುಡುಗಿಯೇ? ಸೀತೆ ಹುಡುಗಿ, ಇಂದಿರೆ ಹುಡುಗಿಯೆ? ಹುಡುಗಿಯಲ್ಲದೆ ಏನು? ಸೀತೆಗಿಂತ ಎರಡು ಮೂರು ವರುಷ ದೊಡ್ಡವಳು ಅಷ್ಟೆ,— ಇಂತಹ ಹುಡುಗಿಗೆ ನರಸಿಂಹಮೂರ್ತಿಯಂತಹ ಗಂಡ. ನರಸಿಂಹಮೂರ್ತಿ ಒಳ್ಳೆಯ ಮನುಷ್ಯನೇ ಸರಿ, ಆದರೆ ಸರಸಿಯಲ್ಲ. ಅಲ್ಲದೆ ಸ್ವಲ್ಪ ವಯಸ್ಸಾದವನು. ಇಂದಿರೆ ಅವನಿಗೆ ಎರಡನೆಯ ಹೆಂಡತಿ. ಎಲ್ಲರಿಗೂ ಹೇಗಿದ್ದರೂ, ಇಂದಿರಾದೇವಿಯಂತಹ ಹುಡುಗಿಯರಿಗೆ ಅವರ ಕೂಡ ಚೆಲ್ಲಾಟವಾಡಬಲ್ಲ ಗಂಡನು ಬೇಕು. ಅಂಥವಳಿಗೆ ಎರಡನೆಯ ಪಂಕ್ತಿಯಲ್ಲಿ ನೀರು ಸೇರಿಸಿದ ಪಾಯಸವೆ? ಗಂಭೀರವಾಗಿ ಕುಳಿತು ಯಜಮಾನನಂತಿರುವ ಗಂಡನೆ? ಹಾಗಿದ್ದರೆ ಏನು ಸುಖ? ಇನಿಯನೂ ಮನದನ್ನನೂ ಆದ ಗಂಡನಾದರೆ ಅವನಿಗೂ ಸುಖ,

ಅವಳಿಗೂ ಸುಖ. ನಾನು ನರಸಿಂಹಮೂರ್ತಿಯಾಗಿದ್ದಿದ್ದರೆ! ಇಂದಿರೆಯು ಕೂಡ ಎಷ್ಟು ಸ್ನೇಹವಾಗಿದ್ದಿರಬಹುದಾಗಿದ್ದಿತು! ಸೀತೆಯು ಕೂಡ ಅಷ್ಟು ಆಟಕ್ಕೆ ಅವಕಾಶವಿರಲಿಲ್ಲ. ಸೀತೆ ಒಳ್ಳೆಯ ಹುಡುಗಿಯೇನೋ ಹೌದು; ಅವಳ ಪ್ರೀತಿ ಬಹಳ; ಆದರೆ ಅವಳು ಇನ್ನೂ ಚಿಕ್ಕವಳು, ಸರಸವಾಗಿರುವುದನ್ನು ಅಷ್ಟು ಕಾಣಳು. ತನಗೆ ಸೀತೆ ಹೇಗೋ ಇಂದಿರೆಗೆ ನರಸಿಂಹಮೂರ್ತಿ ಹಾಗೆ. ಒಳ್ಳೆಯ ಮನುಷ್ಯ, ಆದರೆ ಸರಸವಾಗಿರುವುದನ್ನು ಕಾಣನು. ಅಯ್ಯೋ ಪಾಪ, ಅದರಿಂದಲೇ ಇರಬೇಕು, ಇಂದಿರೆ ತನ್ನ ವಿಚಾರದಲ್ಲಿ ಸೀತೆಯು ಸಂಗಡ ಅಷ್ಟು ಮಾತನ್ನಾಡುತ್ತಿದ್ದದ್ದು. ಅವಳನ್ನು ತಾನು ಇನ್ನೂ ಎಂದೂ ಮಾತನಾಡಿಸಿರಲಿಲ್ಲ. ಒಂದು ದಿನ ಮಾತನಾಡಿಸಿ ನೋಡಬೇಕು. ಸೀತೆಯು ಮೂಲಕ ಬಂದ ಮಾತೇ ಮನಸ್ಸಿಗೆ ಇಷ್ಟು ಆನಂದವನ್ನುಂಟುಮಾಡಿದರೆ, ಎದುರಿಗೇ ಅವಳು ಅಂತಹ ಮಾತನ್ನಾಡಿದರೆ ಹೇಗಿರಬೇಕು? ತಾನು ಮಾತನಾಡಿಸಿದರೆ, ಅವಳಿಗೂ ಸುಖ ಉಂಟೊ? ಇಲ್ಲದೆ ಉಂಟೆ? ತನ್ನ ವಿಚಾರ ಇಷ್ಟು ಹಚ್ಚಿಕೊಳ್ಳುವವಳಿಗೆ ತನ್ನೊಂದಿಗೆ ಮಾತನಾಡಬೇಕೆಂದು ಆಸೆಯೇ ಇರಬಹುದು. ಇತ್ಯಾದಿ, ಇತ್ಯಾದಿ. ರಂಗಸಾಮಿ ಹೀಗೆ ಬಹಳ ಹೊತ್ತು, ಅನೇಕ ವೇಳೆ, ಯೋಚನೆಮಾಡಿದ್ದನ್ನೇ ಮಾಡುತ್ತಾ ಇಂದಿರಾದೇವಿಯನ್ನು, ತನಗಾಗಿ ಅಲ್ಲ, ಅವಳ ಮೇಲೆ ಕನಿಕರಕ್ಕಾಗಿ, ಮಾತನಾಡಿಸಬೇಕೆಂದು ತನಗೆ ತಾನೇ ಹೇಳಿಕೊಳ್ಳುವನು.

ಹೀಗಿರುವಲ್ಲಿ ಅವನು ಒಂದು ದಿನ ನರಸಿಂಹಮೂರ್ತಿಯನ್ನು ನೋಡುವುದಕ್ಕೆಂದು ಅವರ ಮನೆಗೆ ಹೋದನು. ಮೊದಲು ಹಾಗೆ ಹೋದಾಗಲೆಲ್ಲ ನರಸಿಂಹಮೂರ್ತಿಯನ್ನು ನೋಡುವುದು, ಮೊದಲ ಯೋಚನೆಯಲ್ಲ, ಒಂದೇ ಯೋಚನೆಯಾಗಿರುತ್ತಿತ್ತು. ಈಗ ಇಂದಿರಾದೇವಿಯನ್ನು ನೋಡುವುದು, ಅವಳ ಮಾತನ್ನು ಕೇಳುವುದು, ಇವು ಮೊದಲ ಯೋಚನೆಯಾಗಿಯೂ, ನರಸಿಂಹಮೂರ್ತಿಯನ್ನು ನೋಡುವುದು ಒತ್ತಟ್ಟಿನ ಎರಡನೆಯ ಯೋಚನೆಯಾಗಿಯೂ ಪರಿಣಮಿಸಿದ್ದವು. ಪರೀಕ್ಷಿತನಿಗೆ ನಿಂಬೆಯಿಂದ ಬಂದ ಸಣ್ಣ ಕ್ರಿಮಿ ತಕ್ಷಕನಾಯಿತು. ರಂಗಸಾಮಿಯ ಸದ್ವೃತ್ತಿಯ ಭಿತ್ತಿಯಲ್ಲಿ ಅಭಿಮಾನದಿಂದ ಆಯಿತೆಂದು

ಮೇಲೆ ನಾವು ಹೇಳಿದ ರಂಧ್ರದಿಂದ ಪ್ರವೇಶಿಸಿದ ಬಹು ಸೂಕ್ಷ್ಮವಾದ ವಿಷಕ್ರಿಮಿ ದೊಡ್ಡ ಸರ್ಪವಾಗುತ್ತ ಬಂತು.

ಸರ್ಪಪ್ರವೇಶಕ್ಕೆ ರಂಧ್ರವಾಯಿತೆಂದು ಮಾತ್ರ ಮೇಲೆ ಹೇಳಿದೆ. ಸರ್ಪ ಪ್ರವೇಶಿಸಿತೆಂದು ಹೇಳಿಲ್ಲವಲ್ಲ, ಎನ್ನುವಿರಾ? ಅದನ್ನು ಹೇಳ ಬೇಕಾದದ್ದಿಲ್ಲ. ರಂಧ್ರವಿದ್ದಲ್ಲಿ ಸರ್ಪವುಂಟು. ಇದು ಸ್ವತಸ್ಸಿದ್ಧ.

ರಂಗಸಾಮಿ ಹೋದ ವೇಳೆ ಇಂದಿರೆ ನರಸಿಂಹಮೂರ್ತಿ ಇದ್ದ ಕಡೆ ಇರಲಿಲ್ಲ. ನರಸಿಂಹಮೂರ್ತಿಯೊಂದಿಗೆ ಇವನು ಸ್ವಲ್ಪ ಹೊತ್ತು ಅನ್ಯ ಮನಸ್ಸಿನಿಂದ ಮಾತನಾಡುತ್ತಿದ್ದನು. ನರಸಿಂಹಮೂರ್ತಿ ಸ್ವಭಾವ ವಾಗಿಯೂ ಬಹಳ ಮಾತಿನವನಲ್ಲ. ಆದರೆ ಆಡುವ ಕೊಂಚ ಮಾತು ಸ್ವಾರಸ್ಯವಾಗಿರುವುದು. ಈಗ ರಂಗಸಾಮಿಗೆ ನರಸಿಂಹಮೂರ್ತಿಯ ಹೆಚ್ಚು ಮಾತಾಗಲಿ ಸ್ವಾರಸ್ಯವಾದ ಮಾತಾಗಲಿ ಯಾವುದೂ ಬೇಕಾಗಿರ ಲಿಲ್ಲ. ಹೀಗೆ ಸ್ವಲ್ಪ ಹೊತ್ತು ಮಾತನಾಡುತ್ತಿರುವಲ್ಲಿ ಪಕ್ಕದ ಕೋಣೆಯಿಂದ ಬಾಗಿಲನ್ನು ತೆರೆದ ಶಬ್ದವಾಯಿತು. ರಂಗಸಾಮಿಯೂ ನರಸಿಂಹಮೂರ್ತಿಯೂ ಆ ಕಡೆ ನೋಡಿದರು. ಯಾರೂ ಒಳಗೆ ಬರಲಿಲ್ಲ. ನರಸಿಂಹಮೂರ್ತಿ ಬಾಗಿಲಬಳಿ ಹೋದನು. ಅಲ್ಲಿ ಇಂದಿರಾ ದೇವಿ ನಿಂತಿದ್ದಳು. ಅವರವರು ಆಡಿದ ಮಾತು ರಂಗಸಾಮಿಯ ಕಿವಿಗೆ ಬಿತ್ತು.

"ಸೀತೆಯ ಯಜಮಾನರೆ?"

"ಹೌದು."

"ಕಾಫಿಮಾಡಲೇನು?"

"ಹಾಗೆಯೇ ಸ್ವಲ್ಪ ತಿಂಡಿಯನ್ನು ತಾ."

ರಂಗಸಾಮಿಗೆ ಬಹಳ ಸಂತೋಷ. ಇಂದಿರಾದೇವಿಗೆ ತನ್ನ ವಿಷಯ ದಲ್ಲಿ ಎಷ್ಟು ಆದರ! ಅವಳ ಧ್ವನಿ ಎಷ್ಟು ಮೃದು! ಅಯ್ಯೋ ಈ ತಾತ ನಂತಹ ಮನುಷ್ಯನನ್ನು ಕಟ್ಟಿಕೊಂಡು ಅವಳಿಗೆ ಎಷ್ಟು ಸುಖ ಅಭಾವ ವಾಗಿತ್ತು! ಅಂತೂ ತನ್ನ ವಿಷಯದಲ್ಲಿ ಅವಳಿಗೆ ಒಂದು ಅಗತ್ಯಹುಟ್ಟಿತ್ತು. ಕಾಫಿ ತರಲೆ ಎಂದು ಗಂಡನನ್ನು ತಾನಾಗಿಯೇ ಕೇಳಿದಳಲ್ಲ. ಇಂದಿರಾ ದೇವಿ ಬಹು ಒಳ್ಳೆಯ ಹುಡುಗಿ, ಬಹು ವಿಶ್ವಾಸಿ.

ಇಂದಿರಾದೇವಿ ವಿಶ್ವಾಸಿಯೇನೋ ಹೌದು. ಆದರೆ ರಂಗಸಾಮಿ ಎಣಿಸಿದ ರೀತಿಯಲ್ಲಿ ವಿಶ್ವಾಸಿಯಲ್ಲ. ಅವಳು ಸೀತೆಯನ್ನು ತನ್ನ ತಂಗಿಯ ಹಾಗೆ ಕಾಣುತ್ತಿದ್ದಳು. ಹುಡುಗಿಯರ ವಿಶ್ವಾಸ ಒಂದು ತೆರನಾದದ್ದು. ಅವರಿಗೆ ಗಂಡಸರಿಗೆ ಇರುವಷ್ಟು ನಾಚಿಕೆ ಇರುವುದಿಲ್ಲ. ಒಡನಾಡಿಯರು ಒಬ್ಬರಿಗೊಬ್ಬರು ಬಹು ಧಾರಾಳವಾಗಿ ಮಾತನಾಡುವರು. ಚಿಕ್ಕಂದಿನಲ್ಲಿ ಗಂಡನ ಮಾತಂತೂ ಬಹು ಧಾರಾಳ. ಒಬ್ಬರಿಗೊಬ್ಬರು ಜಡೆ ಹಾಕಿಕೊಳ್ಳುವುದು ಎಷ್ಟು ಸುಲಭವೋ ತಮ್ಮ ತಮ್ಮ ಗಂಡಂದಿರ ಮಾತನ್ನಾಡುವುದೂ ಅವರಿಗೆ ಅಷ್ಟು ಸುಲಭ. ಈ ಸೀರೆಯನ್ನು ಹೀಗೆ ಉಟ್ಟುಕೊ ಎಂದು ಒಬ್ಬರಿಗೊಬ್ಬರು ಹೇಳಿಕೊಳ್ಳುವಂತೆ ಗಂಡನನ್ನು ಹೀಗೆ ಕಾಣು, ಗಂಡನಿಗೆ ಹೀಗೆ ಮಾಡು, ಎಂದು ಹೇಳಿಕೊಳ್ಳುವರು. ಇಂದಿರಾದೇವಿ ವಿಶ್ವಾಸಿ, ಚೆಲ್ಲಾಟವನ್ನು ಬಲ್ಲ ಹುಡುಗಿ, ತಾನು ಗಂಡನನ್ನು ಪ್ರೀತಿಯಿಂದ ಕಾಣುತ್ತ ಸುಖವಾಗಿರುತ್ತಿದ್ದಳು. ಅವಳಿಗೆ ಸೀತೆಯನ್ನು ನೋಡಿ ವಿಶ್ವಾಸ, ಸ್ವಲ್ಪ ಕನಿಕರ. ಅಯ್ಯೋ ಪಾಪ, ತಿಳಿಯದ ಹುಡುಗಿ, ಹೇಳಿಕೊಡೋಣ, ಎಂದು ಹೀಗೆ ಮಾಡು ಹಾಗೆ ಇರು ಎಂದು ಆಗಾಗ ಹೇಳುತ್ತಿದ್ದಳು. ಹೀಗೆ ಹೇಳುವುದರಲ್ಲಿ ರಂಗಸಾಮಿಯ ಮಾತನ್ನು ಆಡಬೇಕಾಗುತ್ತಿತ್ತು. ಅಲ್ಲದೆ ಸಂಕೋಚಕ್ಕೆ ವಿಶೇಷ ಕಾರಣವಿಲ್ಲ. ಸೀತೆಗೆ ಬುದ್ಧಿ ಹೇಳುವಾಗ ಅವನ ಮಾತನ್ನೆತ್ತಲೇಬೇಕು. ಇಷ್ಟು ಹೊರತು ಇಂದಿರಾದೇವಿಗೆ ರಂಗಸಾಮಿಯ ವಿಷಯ ಯಾವ ಯೋಚನೆಯೂ ಇರಲಿಲ್ಲ. ಅವರ ಮನೆಗೆ ಬರುತ್ತ ಹೋಗುತ್ತ ಇದ್ದುದರಿಂದ ಮರ್ಯಾದೆಗಾಗಿ ಎಷ್ಟರಮಟ್ಟಿಗೆ ನೋಡಬೇಕೋ ಹಾಗೆ ನೋಡುತ್ತಿದ್ದಳು. ಇವಳು ಹೀಗೆ ನೋಡುವುದನ್ನೂ ಸೀತೆಯ ಸಂಗಡ ತನ್ನ ವಿಷಯ ಮಾತನಾಡುವುದನ್ನೂ ರಂಗಸಾಮಿ ತಪ್ಪಾಗಿ ತಿಳಿದುಕೊಂಡನು. ಮಂಕು ಪ್ರಾರಂಭವಾದದ್ದೇ ಸಾವಕಾಶ, ಸುಮ್ಮನೆ ಬೆಳೆಯಿತು.

ಕೊಂಚ ದಿನದಲ್ಲಿ ರಂಗಸಾಮಿ ಕ್ರಾಪ್ ಮಾಡಿಕೊಂಡಿದ್ದ ತಲೆಗೆ ಕೇಶರಂಜನದ ಎಣ್ಣೆಯನ್ನು ಹಚ್ಚಿ ಜುಟ್ಟನ್ನು ಬೆಳೆಸಿದನು. ಸ್ನೇಹಿತರು ಅದೇನು ಅದೇನು ಎಂದು ಕೇಳುವರು. ಅವನು ಸುಮ್ಮನೆ ಎಂದು ಉತ್ತರಕೊಡುವನು. ಇನ್ನು ನಿಜವನ್ನು ಹೇಳುವುದು ಹೇಗೆ? ಇಂದಿರಾದೇವಿ

ಒಂದು ದಿನ ಸೀತೆಯನ್ನು, ಇದೇನೆ ಸೀತಮ್ಮ, ನಿಮ್ಮ ಯಜಮಾನರು ಜುಟ್ಟನ್ನು ಕತ್ತರಿಸಿ ಇದ್ದಾರೆ, ಅವರಿಗೆ ನೀನು ಹೂ ಮುಡಿಸುವುದು ಹೇಗೆ, ಎಂದು ಕೇಳಿದಳು. ಸೀತೆ ತನ್ನ ಯಜಮಾನನಿಗೆ ಈ ಮಾತನ್ನು ಹೇಳಿ ಜುಟ್ಟನ್ನು ಬೆಳೆಯಿಸಿ ಎಂದಳು. ರಂಗಸ್ವಾಮಿ ಮಾರನೆಯ ದಿನವೇ ಕೇಶರಂಜನದ ಎಣ್ಣೆಯನ್ನು ತಂದನು. ಸೀತೆಗೆ ತನ್ನ ಗಂಡನು ತಾನು ಹೇಳಿದಂತೆ ಕೇಳುತ್ತಾನಲ್ಲ ಎಂದು ಸಂತೋಷ. ತಾನು ಹೇಳುವಂತೆ ಅಲ್ಲ, ಇಂದಿರೆ ಹೇಳಿದಂತೆ, ಎಂದು ಅವಳಿಗೆ ತಿಳಿಯಲಿಲ್ಲ. ಆಗಲೂ ತಿಳಿಯಲಿಲ್ಲ, ಆಮೇಲೂ ತಿಳಿಯಲಿಲ್ಲ. ಮುಗ್ಧೆ. ರಂಗಸ್ವಾಮಿಯೋ ಕಂಡಕಂಡ ಅಲ್ಪಸ್ವಲ್ಪದರಲ್ಲೆಲ್ಲ ತನ್ನ ದುರಭಿಪ್ರಾಯಕ್ಕೆ ಆಧಾರವನ್ನು ಕಾಣುತ್ತ ದಿನದಿನಕ್ಕೂ ಮತ್ತೆ ಮತ್ತೆ ಹುಚ್ಚನಾಗುತ್ತ ಬಂದನು. ನಾವು ಇಲ್ಲಿ ಹೇಳುವುದು ಬಹಳ ಸ್ವಲ್ಪ. ಅವನ ಹೊರಗಣ ಪರಿವರ್ತನವನ್ನು ಸೂಚಿಸಿ ಮನಸ್ಸಿನ ಪರಿವರ್ತನೆ ಎಷ್ಟು ಶೀಘ್ರವಾಗಿಯೂ ಎಷ್ಟು ಸಂಪೂರ್ಣವಾಗಿಯೂ ನಡೆಯಿತೆಂದು ನಿಮ್ಮ ಊಹೆಗೆ ಬಿಟ್ಟಿದ್ದೇವೆ. ಇಲ್ಲಿ ಹೇಳಿರುವುದು ಒಂದು ಮಾತು, ನಡೆದದ್ದು ಇದರಂತೆ ನೂರು. ಹೀಗೆ ಇಂದಿರಾದೇವಿಗೆ ತಿಳಿಯದೆ, ಸೀತೆಗೆ ತಿಳಿಯದೆ, ನರಸಿಂಹಮೂರ್ತಿಗೆ ತಿಳಿಯದೆ, ರಂಗಸ್ವಾಮಿ ಈ ಹುಚ್ಚನ್ನು ಹಿಡಿದನು. ಇದು ಸಾಧ್ಯವೇ ಎನ್ನುವಿರಿ. ಹೀಗೆ ಸಣ್ಣ ಸಣ್ಣ ವಿಷಯಗಳನ್ನು ತಪ್ಪಾಗಿ ಎಣಿಸುವವರು ಉಂಟೆ ಎನ್ನುವಿರಿ. ಸ್ವಾಭಿಮಾನವನ್ನು ಚೆನ್ನಾಗಿ ಬೆಳೆಯಿಸಿ; ಪ್ರಪಂಚ ನಿಮಗೆ ಸೋತಿದೆ ಎಂದು ತಿಳಿಯುವುದು ನಿಮಗೆ ಸುಲಭವಾಗುವುದು. ಅದನ್ನು ಬೆಳೆಯಿಸುವುದು ಅಷ್ಟು ಕಷ್ಟವಿಲ್ಲವಲ್ಲವೆ? ನಾನು ಶ್ರೇಷ್ಠನೆಂದು ನಾನೇ ದೃಢವಾಗಿ ನಂಬಿದರೆ, ಹೊಡೆಯುವುದಕ್ಕೆಂದು ಎತ್ತಿದ ಕೈಯನ್ನು ಸಲಾಮಿನ ಕೈಯೆಂದು ತಿಳಿದುಕೊಳ್ಳುವೆನು. ಏಟು ಬಿದ್ದಾಗ್ಗೆ? ಎನ್ನುವಿರಿ. ನಿಜ ಆಮೇಲೆ ಬೇರೆಯ ಮಾತು. ಬೀಳುವವರೆಗೆ ಹಾಗೆ ತಿಳಿಯಬಹುದಲ್ಲ? ನಾವು ಹೇಳುವುದು ಬೀಳುವವರೆಗಿನ ಮಾತ್ರದ ಮಾತು.

ಕೆಲವು ದಿನ ಕಳೆಯಿತು. ಒಂದು ದಿನ ರಂಗಸ್ವಾಮಿ ಕಾಲೇಜಿನಿಂದ ಮನೆಗೆ ಬಂದಾಗ ಸೀತೆಯೂ ಇಂದಿರೆಯೂ ಇವರ ಮನೆಯಲ್ಲಿ ಕುಳಿತು

ಮಾತನಾಡುತ್ತಿದ್ದರು. ರಂಗಸಾಮಿ ಬಂದದನ್ನು ನೋಡಿ ಇಂದಿರಾದೇವಿ "ನಾನು ಬರುತ್ತೇನಮ್ಮ ಸೀತಮ್ಮ" ಎಂದು ಎದ್ದಳು. ಏನೋ ತಮಾಷೆಯಾದ ಮಾತನಾಡುತ್ತಿದ್ದರೆಂದು ಕಾಣುತ್ತದೆ, ಅವಳ ಮುಖದ ಮೇಲೆ ಇನ್ನೂ ನಗು ಇತ್ತು. ರಂಗಸಾಮಿ ಬಂದಾಗ ಅವನ ಕಡೆ ನೋಡಿದಳಷ್ಟೆ; ರಂಗಸಾಮಿ ಆ ನಗುವನ್ನು ನೋಡಿ ಅದು ಅವಳು ತನ್ನ ಕಡೆ ನೋಡಿ ನಕ್ಕ ನಗುವೆಂದು ತಿಳಿದನು. ಬುದ್ಧಿ ಇದ್ದ ಕಾಲದಲ್ಲಿ ಅದು ತನಗಾಗಿ ನಕ್ಕ ನಗುವಲ್ಲವೆಂದೂ ಮುಖವನ್ನು ಸಿಣಕದೆ ತನ್ನ ಕಡೆ ನೋಡಿದವರೆಲ್ಲ ತನ್ನಲ್ಲಿ ಮೋಹಗೊಂಡಿರುವರೆಂದು ತಿಳಿಯಬಾರದೆಂದೂ ರಂಗಸಾಮಿಗೆ ತೋರಬಹುದಾಗಿತ್ತು. ಈಗ ಅದಕ್ಕೆ ಅವಕಾಶವಿಲ್ಲ. ಹೀಗೆಯೇ ಇನ್ನೊಂದು ಸಲ ಇವನು ನರಸಿಂಹಮೂರ್ತಿಯ ಮನೆಗೆ ಹೋದಾಗ ಇಂದಿರಾದೇವಿ ಗಂಡನ ಸಂಗಡ ಮಾತನಾಡುತ್ತಿದ್ದಳು. ಇವನನ್ನು ಕಂಡು ಒಳಗೆ ಹೋದಳು. ಆಗಲೂ ಅವಳ ಮುಖದ ಮೇಲೆ ನಗು ಇತ್ತು. ರಂಗಸಾಮಿ "ನನ್ನ ಕಡೆ ನೋಡಿ ನಗುತ್ತಾ ಹೋಗಿರಬೇಕು. ಅವಳು ನಗುವ ಹಾಗೆ ನರಸಿಂಹಮೂರ್ತಿ ಅವಳಿಗೆ ಏನನ್ನು ಹೇಳಬಲ್ಲನು, ಈ ತಾತ" ಎಂದುಕೊಂಡನು. ನ್ಯಾಯದ ಮಾತು! ಇವನ ರಸಿಕತೆ ಎಲ್ಲರಿಗೂ ಹೇಗೆ ಬರಬೇಕು?

ಹೀಗಿರುತ್ತಾ ಅವನು, ಒಂದು ದಿನ ಹೋಗಿ ಇಂದಿರೆಯನ್ನು ಮಾತನಾಡಿಸಬೇಕೆಂದು ಮನಸ್ಸು ಮಾಡಿದನು. ಸೀತೆ ಊರಲ್ಲಿರಲಿಲ್ಲ. ಆ ಬೇಜಾರು ಬೇರೆ. ಆ ದಿನ ಶನಿವಾರ; ಕಾಲೇಜಿಲ್ಲ, ಆಫೀಸು ಉಂಟು. ನರಸಿಂಹಮೂರ್ತಿ ಆಫೀಸಿಗೆ ಹೋಗಿರುವನು. ರಂಗಸಾಮಿ ಮಧ್ಯಾಹ್ನ ನಾಲ್ಕು ಗಂಟೆಯ ಸಮಯದಲ್ಲಿ ಅವರ ಮನೆಯ ಬಳಿ ಹೋದನು. ತಲೆಯಲ್ಲಿ ಯಾವ ಯಾವ ಯೋಚನೆ ಗುಂಪುಕಟ್ಟಿತೋ ಹೇಳುವುದು ಕಷ್ಟ. ಇಂದಿರೆ ಹೊರಗಡೆ ಕೊಟಡಿಯಲ್ಲಿ ಕುಳಿತು ಏನನ್ನೋ ಓದುತ್ತಿದ್ದಳು. ರಂಗಸಾಮಿ ಮನೆಯ ಕೈಸಾಲೆಗೆ ಹೋಗಿ, ನರಸಿಂಹಮೂರ್ತಿಗಳೇ, ಎಂದು ಕೂಗಿದನು.

ಇಂದಿರೆ ಎದ್ದು ಬಾಗಿಲ ಬಳಿ ಬಂದು ಒಂದು ಕಡೆ ನಿಂತು, ಅವರು ಮನೆಯಲ್ಲಿಲ್ಲ, ಎಂದಳು.

ಕದನದಲ್ಲಿ ಸಾಯಬೇಕಾಗಿ ಬಂದಾಗ ಹುಟ್ಟು ಹೇಡಿಗಿರುವ ಧೈರ್ಯ ಅಡಕೆಯನ್ನು ಕದಿಯುವುದಕ್ಕೆ ಬಂದಿರುವ ಶೂರನಿಗೆ ಇರುವುದಿಲ್ಲ. ಏನೇನನ್ನೋ ಎಣಿಸಿಕೊಂಡು ಹೋದ ರಂಗಸಾಮಿ ಅದೊಂದನ್ನೂ ಮಾಡಲಾರದೆ ಹೋದನು. ಇಂದಿರೆಯ ಈ ಮಾತನ್ನು ಕೇಳಿ, "ಓ ಈ ದಿನ ಶನಿವಾರ," ಎಂದುಕೊಳ್ಳುತ್ತ ಇಂದಿರೆಯನ್ನು ಸ್ವಲ್ಪ ನೋಡಿ ಸುಮ್ಮನೆ ಹಿಂದಿರುಗಿದನು.

ಇಂದಿರೆಯ ಮುಖ ಸ್ವಭಾವವಾಗಿ ನಗುಮುಖ. ಏನಾದರೂ ಕಾರಣದಿಂದ ಅಸಮಾಧಾನ ಉಂಟಾದಾಗಲೇ ಅವಳು ಅಹಸನ್ಮುಖಿಯಾಗಿರಬೇಕಾದರೆ, ಮಿಕ್ಕ ಹಾಗೆ ಆ ಮುಖದಲ್ಲಿ ಒಂದು ಮಾದರಿಯ ಲಾಲಿತ್ಯವೂ ಸೌಂದರ್ಯವೂ ಸ್ಥೈರ್ಯವೂ ಕಾಣುವುವು. ರಂಗಸಾಮಿ ಒಂದು ಕಡೆ ನಿಂತ ಅವಳನ್ನು ನೋಡಿ ಮುಗ್ಧನಾದನು. ಹೋಗಿ ಹಿಡಿದುಕೊಳ್ಳೋಣವೆಂದು ತೋರಿತು. ಆದರೆ ಧೈರ್ಯಸಾಲದೆ ಸುಮ್ಮನೆ ನೋಡಿ ಹಿಂದಿರುಗಿದನು. ಅವನು ತನ್ನ ಕಡೆ ಹಾಗೆ ನೋಡಿದ್ದಕ್ಕೆ ಇಂದಿರಾದೇವಿ, "ಇದೇಕೆ ಇವನು ಹೀಗೆ ನೋಡುತ್ತಾನೆ," ಎಂದು ಸ್ವಲ್ಪ ಯೋಚಿಸಿದಳು. ಆ ಅಸಮಾಧಾನ ಮುಖದಲ್ಲಿ ತೋರಿತು. ಆ ವೇಳೆಗೆ ಹಿಂದಿರುಗಿದ್ದ ರಂಗಸಾಮಿ ಆ ಅಸಮಾಧಾನವನ್ನು ನೋಡಿ ತಾನು ಹಿಂದಿರುಗಿದ್ದರಿಂದಲೇ ಅವಳು ಅಸಮಾಧಾನಪಟ್ಟಿರಬೇಕೆಂದು ಊಹಿಸಿಕೊಂಡು ಹೊರಟುಹೋದನು. ಆದರೇನು ಇನ್ನೊಂದು ದಿನ ಬಂದರೆ ಸರಿ!

ಆ ವಾರವೆಲ್ಲಾ ರಂಗಸಾಮಿಯ ಮನಸ್ಸು ಸ್ತಿಮಿತವಿಲ್ಲ. ಹೇಗೋ ದಿನಗಳು ಕಳೆದವು. ಶನಿವಾರ ಪುನಃ ಬಂದೀತೆ ಎಂದು ಕಾದಿದ್ದವನಿಗೆ ಶನಿವಾರ ಬಂದಿತು.

ಅವನು ಆ ದಿನ ಬೆಳಗ್ಗೆಯೆಲ್ಲಾ ಆ ಯೋಚನೆ ಈ ಯೋಚನೆ ಮಾಡುತ್ತಿದ್ದು ಮಧ್ಯಾಹ್ನದವರೆಗೆ ಕಾಲ ಕಳೆದನು. ಒಂದು ಕ್ಷಣ ಒಂದು ವರ್ಷದಂತೆ ಕಂಡಿತು. ಯಾವುದೋ ಒಂದು ಹುಚ್ಚು ಆಸೆಯನ್ನಿಟ್ಟುಕೊಂಡು ತಾನು ಮಾಡುವುದು ಸರಿಯೋ ತಪ್ಪೋ ಎಂದು ಅವನು ಯೋಚನೆಮಾಡದೆ ಹೋದನು. ಅಲ್ಲದೆ ಇದು ತನಗಾಗಿ ಮಾತ್ರವೇ ಅಲ್ಲ, ಇಂದಿರೆಗೂ ಇಷ್ಟವೆಂದಲ್ಲವೆ ತಿಳಿದಿದ್ದನು! ಹಿಂದಿನ ಶನಿವಾರ

ಹೋದರೂ ಮಾತನಾಡಿಸದೆ ಬಂದದ್ದು ತಪ್ಪು, ಇಂದು ಹೋಗಿ ಮಾತನಾಡಿಸಿಯೇ ಬರಬೇಕು, ಎಂದು ಅವನ ಮನಸ್ಸನ್ನು ಗಟ್ಟಿಮಾಡಿ ಕೊಂಡನು. ಸೀತೆಯೂ ಇಷ್ಟರಲ್ಲೇ ಹಿಂದಕ್ಕೆ ಬರುವಳಾದ್ದರಿಂದ ಈಗಲೇ ಈ ಪ್ರಯತ್ನವನ್ನು ಮಾಡಿಬಿಡಬೇಕು.

ಮಧ್ಯಾಹ್ನ ಬಹಳ ಬಿಸಿಲು; ಮೂರು ಗಂಟೆಯ ಸಮಯ; ನರಸಿಂಹಮೂರ್ತಿ ಆಫೀಸಿಗೆ ಹೋಗಿದಾನೆ. ಇಂದಿರಾದೇವಿಯನ್ನು ನೋಡುವುದಕ್ಕೆಂದು ರಂಗಸಾಮಿ ನರಸಿಂಹಮೂರ್ತಿಯ ಮನೆಗೆ ಹೊರಟನು. ಬೀದಿಯ ಬಾಗಿಲಲ್ಲಿ ಯಾರೂ ಇರಲಿಲ್ಲ. ಪಡಸಾಲೆಯಲ್ಲಿ ಕೋಣೆಗಳಲ್ಲಿ ಯಾರೂ ಇರಲಿಲ್ಲ. ನೋಡುತ್ತಾ ರಂಗಸಾಮಿ ಹಿಂದಣ ಬಾಗಿಲ ಕಡೆ ಹೋದನು. ಹಿಂದಿನ ಕೈಸಾಲೆಯಲ್ಲಿ ಇಂದಿರಾದೇವಿ ಕುಳಿತು ಕಸೂತಿ ಹಾಕುತ್ತಿದ್ದಳು. ಅವನು ಬಂದ ಒಡನೆ ಇವನನ್ನು ಅವಳು ನೋಡಲಿಲ್ಲ. ತನ್ನಪಾಡಿಗೆ ತಾನು ಏನನ್ನೋ ಹಾಡಿಕೊಳ್ಳುತ್ತ ಕಸೂತಿ ಹಾಕುತ್ತಿದ್ದಳು. ರಂಗಸಾಮಿ ಬಾಗಿಲಲ್ಲಿ ನಿಂತು ಒಂದು ಅರೆ ನಿಮಿಷ ನೋಡಿದನು. ಅವನ ತಲೆಯಲ್ಲಿಯ ಯೋಚನಾಯಂತ್ರ ಬಿಚ್ಚಿದ್ದ ಗಡಿಯಾರದ ಸುರಳಿಯಂತೆ ಸರ್ರೆಂದು ತಿರುಗುತಲಿತ್ತು. ಒಂದು ಕ್ಷಣದ ಮೇಲೆ ಇಂದಿರೆ ಯಾಕೋ ತಲೆಯನ್ನು ತಿರುಗಿಸಿ ಇವನು ಅಲ್ಲಿ ನಿಂತಿರು ವುದನ್ನೂ ತನ್ನನ್ನು ನೋಡುತ್ತಿರುವುದನ್ನೂ ಕಂಡಳು.

ನೋಡಿದ ಕ್ಷಣದಲ್ಲಿ ಯಾರೋ ಇರುವಾಗ ತಾನು ಹಾಡುತ್ತ ಇದ್ದದಕ್ಕೆ ಅವಳಿಗೆ ಸ್ವಲ್ಪ ನಗು ಬಂತು. ಆ ನಗು ಸ್ವಲ್ಪ ಮುಖದ ಮೇಲೆ ತೋರುತ್ತ ಇದ್ದಹಾಗೆಯೇ ಎದ್ದು ಒಂದು ಕಡೆ ಸರಿದು ನಿಂತು ಕೊಂಡಳು. ಇವನು ಏಕೆ ಬಂದಿದಾನೆ? ಇನ್ನೇನು ಗತಿ? ಎಂದು ಹಿಂದಿನ ಶನಿವಾರವನ್ನು ನೆನೆದುಕೊಂಡು ಸ್ವಲ್ಪ ಹೆದರಿದಳು. ಆಮೇಲೆ, ಯಜಮಾನರಿಗೆ ಬೇಕಾದವನು ಎಂದುಕೊಂಡು, ಏಕೆ ಬಂದಿದಾನೋ ಎಂದು, ಅವನ ಕಡೆ ಸ್ವಲ್ಪ ನೋಡಿ ಸುಮ್ಮನಿದ್ದಳು.

ರಂಗಸಾಮಿ ಆ ಸ್ವಲ್ಪ ನಗುವನ್ನು ನೋಡಿದನು. ತನ್ನ ಕಡೆ ತಿರುಗಿ ಎಲ್ಲೋ ಹೋದ ದೃಷ್ಟಿಯನ್ನು ನೋಡಿದನು. ಇಂದಿರೆ ನೋಡುವುದಕ್ಕೆ ಬಹು ಅಂದವಾಗಿ ಕಂಡಳು. ಎತ್ತರವಾದ ಹೆಂಗಸು;

ತುಂಬಿದ ದೇಹ; ದೊಡ್ಡ ಕಣ್ಣುಗಳು; ಹಣೆ ಹುಬ್ಬು ಮೂಗು ಅಚ್ಚು ಹಾಕಿದಂತಿದ್ದವು. ಕೈಗಳು ತುಂಬಿ ದುಂಡುದುಂಡಾಗಿವೆ. ಆ ಕಂಚುಕ ಅಂದು ತಾನು ನೋಡಿದ್ದದ್ದೇ. ಅವನು ಬಹು ಆಸೆಯಿಂದ ಅವಳ ಹತ್ತಿರಕ್ಕೆ ಬಿರ್ರನೆ ಹೋದನು. ಹೋಗಿ, ಹಿಡಿದುಕೊಳ್ಳಲು ಯತ್ನಿಸಿದನು.

ಇಂದಿರೆಗೆ ಸಂದೇಹ ನಿವೃತ್ತಿಯಾಯಿತು. ರಂಗಸಾಮಿ ಹತ್ತಿರ ಬಂದಾಗ ಎಡಗೈಯಿಂದ ತನ್ನ ಸೀರೆಯನ್ನು ಒತ್ತಿ ಹಿಡಿದುಕೊಂಡು ಗೋಡೆಯ ಬಳಿಗೆ ಸರಿದು, ಬಲಗೈಯನ್ನು ಅಡ್ಡ ಹಿಡಿದು, ಹುಬ್ಬನ್ನು ಗಂಟಿಕ್ಕಿ, ಕೋಪಗೊಂಡ ಸಿಂಹಿಯಂತೆ "ಇದೇನು ಈ ಹುಚ್ಚು" ಎನ್ನುತ್ತ, "ಮುನಿಸಾಮಿ, ಇವರು ಯಜಮಾನರನ್ನು ಕೇಳುವುದಕ್ಕೆ ಬಂದಿದ್ದಾರೆ, ಇಲ್ಲವೆಂದು ಹೇಳಪ್ಪ. ಮುನಿಸಾಮಿ, ಮುನಿಸಾಮಿ" ಎಂದು ಕೂಗಿದಳು.

ರಂಗಸಾಮಿಗೂ ಸಂದೇಹ ನಿವೃತ್ತಿಯಾಯಿತು. ಈ ಸಿಂಹಿಯನ್ನೇ ತಾನು ಕೆಣಕಹೋದದ್ದು? ತಾನು ಕೈಹಾಕಿದ್ದು ಈ ಹಾವಿನ ಹುತ್ತಿನಲ್ಲಿ? ಇದೇನು ಕೋಪ! ಕಿಡಿಸುರಿಸುವ ಕಣ್ಣುಗಳು, ಕೋಪದಿಂದ ನಡುಗುವ ಮೈ ತಲೆ ತುಟಿ, ಕಡಿದಿರುವ ಹಲ್ಲು, ಅಡಗಿದ ಕೋಪದಿಂದ ಕಠಿಣವಾಗಿರುವ ಧ್ವನಿ. ಪುಸ್ತಕದ ಕ್ಷತ್ರಿಯ ರಮಣಿಯನ್ನು ಪ್ರತ್ಯಕ್ಷವಾಗಿ ಕಂಡಹಾಗಾಯಿತು. ಸೋತೆನೆಂಬ ನೋವಿನ ನಡುವೆ ನನಗೆ ತಕ್ಕ ಶಿಕ್ಷೆಯಾಯಿತು ಎಂಬ ಒಂದು ಭಾವವೂ ಅವನಿಗೆ ಬಂದಿತು. ತನ್ನ ಮರುಳುತನಕ್ಕೆ ತಾನೇ ಉನ್ಮತ್ತನಂತೆ ನಗೋಣವೆಂದು ತೋರಿತು. ಇದರ ನಡುವೆ ತಾನು ಕೆಟ್ಟವನಾದರೂ ತನ್ನ ಮಾನವನ್ನು ಕಾಪಾಡುವುದಕ್ಕೋಸ್ಕರ ಆ ಸ್ತ್ರೀರತ್ನ ತಾನು ಬಂದದ್ದಕ್ಕೆ ಬೇರೊಂದು ನೆಪವನ್ನು ಸೂಚಿಸಿ ತನ್ನನ್ನು ನೋಡುತ್ತಾ ಮುನಿಸಾಮಿಯನ್ನು ಕೂಗಿದ್ದಕ್ಕೆ ಅವನು ಅವಳಿಗೆ ಮನಸ್ಸಿನಲ್ಲಿ ವಂದಿಸಿದನು. ತನ್ನನ್ನು ಇಷ್ಟು ಲಘುವಾಗಿ ಕಂಡಳಲ್ಲ ಎಂಬ ಅವಮಾನ; ಇವಳು ಎಷ್ಟು ಚೆನ್ನಾಗಿದ್ದಾಳೆ ಎಂದು ಮೆಚ್ಚಿಗೆ; ಇನ್ನು ಇದು ಯಾರು ಯಾರಿಗೆ ತಿಳಿಯುವುದೋ ಎಂದು ಯೋಚನೆ. ಇದಿಷ್ಟು ಯೋಚನೆಯೂ ಬಂದ ಆ ಕ್ಷಣದಲ್ಲಿ ಮುನಿಸಾಮಿ ತೋಟದ ಕಡೆಯಿಂದ ಇವನು ನಿಂತಿದ್ದ ಕಡೆಗೆ ಬಂದನು. ಇಂದಿರೆ ಒಳಗೆ ಹೊರಟುಹೋದಳು.

ಮುನಿಸಾಮಿ, "ಅವರು ಇಲ್ಲ ಸ್ವಾಮಿ," ಎಂದನು.

ರಂಗಸಾಮಿ, "ಸರಿಯಪ್ಪ," ಎಂದು ಹೇಳಿ ಹಿಂದಿರುಗಿದನು. ಪಡಸಾಲೆಯಲ್ಲಿ ಹೊರಟು ಬೀದಿಗೆ ಹೋಗಬೇಕು.

ಪಡಸಾಲೆಯ ಪಕ್ಕದ ಕೋಣೆಯ ಬಾಗಿಲಲ್ಲಿ ಇಂದಿರೆ ನಿಂತಿದ್ದಳು. ರಂಗಸಾಮಿ ಮುಖವನ್ನು ತಿರುಗಿಸಿಕೊಂಡು ಮುಂದೆ ನಡೆದನು. ಇಂದಿರೆ ಅವನನ್ನು ಹಳಿಯುವಂತೆ, "ಸೀತೆಯ ಪುಣ್ಯಕ್ಕೆ ಎಣೆಯೇ ಇಲ್ಲ," ಎಂದಳು.

ರಂಗಸಾಮಿಗೆ ಆ ಮಾತನ್ನು ಕೇಳಿ ಪ್ರಾಣ ಬಿಡುವಂತಾಯಿತು.

ಅವನು ಜಾಗ್ರತೆಯಾಗಿ ಮನೆಗೆ ಹೋಗಿ ಕೊಟಡಿಯ ಬಾಗಿಲನ್ನು ಹಾಕಿ ಒಳಗೆ ಕುಳಿತು, "ಸೀತೆಗೆ ಇದುವರೆಗೆ ತಕ್ಕ ಗಂಡನಾಗಿದ್ದೆ, ಇಂದು ಅಯೋಗ್ಯನಾದೆ. ಅವಳಂತಹ ಹುಡುಗಿಗೆ ನನ್ನಂತಹ ಪಾಪಿಯೆ ಯಜಮಾನ?" ಎಂದು ಅತ್ತನು.

# ನಮ್ಮ ಮೇಷ್ಟರು

ಆ ದಿನ ಗುರುವಾರ. ಸ್ಕೂಲಿಗೆ ಹೋಗುವುದಕ್ಕೆ ಹೊತ್ತಾಗಿ ಹೋಯಿತಲ್ಲಾ ಎಂದು ಅವಸರವಸರವಾಗಿ ಬರುತ್ತಾ ಇದ್ದೆ. ಲಕ್ಷ್ಮಿ ನನ್ನ ಹಿಂದೆ ಬರುತ್ತಾ ಇದ್ದಳು; ಪುಟ್ಟ ಪುಟ್ಟ ಕಾಲನ್ನು ದಡದಡನೆ ಹಾಕುತ್ತಾ ಓಡಿಬರುತ್ತಿದ್ದಳು. ಹೊತ್ತಾಯಿತಲ್ಲ, ಲಕ್ಷ್ಮಿಯನ್ನು ಕರೆದುಕೊಂಡು ಹೋಗೋಣ, ಎಂದು ನಾನು ಹೋಗಿ ಕರೆಯುವ ಹೊತ್ತಿಗೆ ಅವಳು ಇನ್ನೂ ಎದ್ದೇ ಇರಲಿಲ್ಲ. ಅದರಿಂದ ಇನ್ನಷ್ಟು ಹೊತ್ತಾಯಿತು. ಹೀಗೆ ಹೋಗುತ್ತಾ ಇರುವಾಗ, ನಮ್ಮ ಎದುರಿಗೆ ಸ್ವಲ್ಪದೂರದಲ್ಲಿ ಮೇಷ್ಟರು ಸಾವಕಾಶವಾಗಿ ನಡೆಯುತ್ತಾ ಸ್ಕೂಲಿಗೆ ಹೋಗುತ್ತ ಇದ್ದರು. ಮೇಷ್ಟರೇ ಈಗ ಹೋಗುವಾಗ ನಮಗೇನು ಸ್ಕೂಲಿನಲ್ಲಿ ಅವಸರ ಎಂದು ನಾನು ಮೆಲ್ಲಗೆ ನಡೆಯುವುದಕ್ಕೆ ಆರಂಭಿಸಿದೆ.

ಅಷ್ಟು ಹೊತ್ತಿಗೆ ಶಾಸ್ತ್ರಿಗಳು ಇನ್ನೊಂದುಕಡೆಯಿಂದ ಬಂದು ಮೇಷ್ಟರನ್ನು ಕಂಡರು. "ಏನು ವೆಂಕಟರಮಣಯ್ಯನವರೇ, ಸ್ಕೂಲಿಗೆ ಹೊರಟಿರೋ?" ಎಂದು ಕೇಳಿದರು.

ಮೇಷ್ಟರು "ಹೌದು ಸ್ವಾಮಿ, ಹೊರಟೆ, ಒಂದು ಚಿಟಿಕೆ ನಸ್ಯ ಇದ್ದರೆ ಕೊಡುವಿರಾ?" ಎಂದರು.

"ಕೊಟ್ಟೆ, ಇನ್ನೇನು ಸಮಾಚಾರ, ಸ್ವಲ್ಪ ಹೊತ್ತಾಯಿತಲ್ಲವೆ" ಎಂದು ಶಾಸ್ತ್ರಿಗಳು ಕೇಳಿದರು.

"ಏನೋ ಸ್ವಾಮಿ, ಮನೆಯಲ್ಲಿ ಉಪ್ಪಿಲ್ಲ ಎಂದರು. ಈಗ ತರುವುದಕ್ಕೆ ಆಗುವುದಿಲ್ಲ, ಸ್ಕೂಲಿಗೆ ಹೊತ್ತಾಯಿತು ಎಂದೆ. ಅದಕ್ಕೆ ಏನೇನೋ ಹೇಳಿದರು. ಈ ಗಲಾಟೆಯಲ್ಲಿ ಉಪ್ಪು ತರುವುದಕ್ಕೆ ಹೋಗಿದ್ದರೆಯೇ ಒಳ್ಳೆಯದಾಗಿತ್ತೆಂತ ತೋರಿತು. ಇಷ್ಟು ಹೊತ್ತಿಗೆ ಉಪ್ಪು ತಂದುಕೊಟ್ಟು ಸ್ಕೂಲಿನಲ್ಲಿ ಇರಬಹುದಾಗಿತ್ತು. ಏನುಮಾಡುವುದು ಹೇಳಿ" ಎಂದು ನಮ್ಮ ಮೇಷ್ಟರು ಹೇಳಿದರು.

ಶಾಸ್ತ್ರಿಗಳು "ಅದಕ್ಕೇನು, ನಮ್ಮ ಹುಡುಗರ ಕೈಲಿ ಯಾರ ಕೈಲಾದರೂ ತೆಗೆದುಕಳುಹಿಸುತ್ತೇನೆ. ದುಡ್ಡಿದೆಯೇ? ಕೊಡಿ" ಎಂದರು.

ಇವರು ಹೀಗೆ ಮಾತನಾಡುತ್ತಿರುವಾಗ, ನಾವು ಸುಮ್ಮನೆ ಯಾತಕ್ಕಿರಬೇಕು, ಮೇಷ್ಟರು ಇಲ್ಲಿದ್ದರೆ ನಾವು ಸ್ಕೂಲಿಗೆ ಹೋಗಿ ಮಾಡುವುದೇನನ್ನ, ಎಂದು ನಾನೂ ಲಕ್ಷ್ಮಿಯೂ 'ಗುಚ್ಚಮ್ಮ ನಕ್ಷತ್ರ' ಆಡುತ್ತಾ ಕುಳಿತೆವು. ಆಡುತ್ತ ಕುಳಿತದ್ದರಲ್ಲಿ ಹೊತ್ತೇ ತೋರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ನೋಡಿದರೆ ಮೇಷ್ಟರು ಸ್ಕೂಲಿಗೆ ಹೊರಟುಹೋಗಿದ್ದರು. "ಲಕ್ಷ್ಮಿ, ಹೊತ್ತಾಯಿತು, ಹೋಗೋಣ ಬಾರೆ, ಮೇಷ್ಟರು ಕೋಪಿಸಿಕೊಳ್ಳುತ್ತಾರೆ" ಎಂದು ಹೇಳಿ ಎದ್ದೆ.

ಲಕ್ಷ್ಮಿ ಅಳುತ್ತಾ ಕುಳಿತಳು. ಆಟದಲ್ಲಿ ಅವಳ ಬಳಪವನ್ನೆಲ್ಲಾ ನನಗೆ ಸೋತಿದ್ದಳು. ನಾನೇನೂ ಅನ್ಯಾಯಮಾಡಿ ಬಳಪ ಗೆಲ್ಲಲಿಲ್ಲ. ಅವಳಿಗೆ ಆಟ ಚೆನ್ನಾಗಿ ಬಾರದು, ಸೋತಳು. ಈಗ ಬಾರೆ ಎಂದರೆ, "ನನ್ನ ಬಳಪ, ನನ್ನ ಬಳಪ" ಎಂತ ಅಳುತ್ತಾ ಕುಳಿತಳು. ಅವಳಿಗೆ ಏನೇನೋ ಹೇಳಿದೆ. ಕೇಳಿದರೆ! ನ್ಯಾಯವೂ ಇಲ್ಲ, ಧರ್ಮವೂ ಇಲ್ಲ. ಬಳಪ, ಬಳಪ: ಅವಳಿಗೆ ತಿಳಿದದ್ದು ಅಷ್ಟೇ. ಆಟದಲ್ಲಿ ಸೋತದ್ದು ಎಲ್ಲೋ ಹೋಯಿತು. ಕೊನೆಗೆ ನಾನು ಇವಳ ಸಂಗಡ ಏನು ಎಂತ ಅವಳಿಂದ ಗೆದ್ದಿದ್ದ ಬಳಪವನ್ನೆಲ್ಲಾ ಹಿಂದಕ್ಕೆ ಕೊಟ್ಟು "ನಮ್ಮಮ್ಮ, ನನ್ನ ಕಂದ" ಎಂದು ಕರೆದೆ. ಅವಳು "ನನ್ನ ಬಳಪ ಎಲ್ಲಾ ಕೊಡು" ಎಂದು ಅಳುತ್ತಾ ನಿಂತಳು. ಎಲ್ಲವನ್ನೂ ಕೊಟ್ಟಿದ್ದೆ. "ಎಲ್ಲಾ ಕೊಟ್ಟಿದ್ದೇನಲ್ಲ" ಎಂತ ಹೇಳಿದರೆ "ನಿನ್ನ ಜೇಬಿನಲ್ಲಿ ಇನ್ನೂ ಇದೆಯಲ್ಲಾ" ಎಂದಳು. ನನ್ನ ಜೇಬಿನಲ್ಲಿ ಇನ್ನೂ ಬಳಪ ಇದ್ದದ್ದು ನಿಜ, ಆದರೆ ಅದು ನನ್ನದು; ಅವಳ ಬಳಪವನ್ನೆಲ್ಲಾ ಕೊಟ್ಟುಬಿಟ್ಟಿದ್ದೆ. ಜೇಬಿನಲ್ಲಿರುವ ಆ ಬಳಪ ನನ್ನದು ಎಂದರೆ ಕೇಳಳು. ಕೊನೆಗೆ ನನ್ನ ಬಳಪವನ್ನೆಲ್ಲಾ ಕೊಟ್ಟೆ. ಕೊಡದೆ ಇದ್ದರೆ ಅವಳು ಸ್ಕೂಲಿಗೆ ಬರುವುದಿಲ್ಲ. ಮೇಷ್ಟರು ಹೊತ್ತಾಯಿತೇನಮ್ಮ ಎಂದರೆ, ಲಕ್ಷ್ಮಿಯನ್ನು ಕರೆದುಕೊಂಡು ಬರುವುದಕ್ಕೆ ಹೋಗಿದ್ದೆ ಮೇಷ್ಟರೆ, ಎಂದು ಹೇಳುವುದಕ್ಕಿಲ್ಲದೆ ಹೋಗುವುದು. ಇದಕ್ಕೋಸ್ಕರ ನನ್ನ ಬಳಪವನ್ನೆಲ್ಲ ಅವಳಿಗೆ ಕೊಟ್ಟೆ. ಆಟ ಗೆದ್ದವಳು ನಾನು, ಬಳಪ ಗೆದ್ದವಳು ಅವಳು. ಹೋದಸಲ ಇನ್‌ಸ್ಪೆಕ್ಟರು ಬಂದಾಗ ಗೌರಿಗಿಂತಲೂ ಸರಸ್ವತಿಗೆ ಹೆಚ್ಚು ನಂಬರು ಬಂದದ್ದು ಹೇಗೋ ಹಾಗಾಯಿತು

ಎಂತ ಎಂದುಕೊಂಡು ಲಕ್ಷ್ಮಿಯನ್ನೂ ಕರೆದುಕೊಂಡು ಸ್ಕೂಲಿಗೆ ಹೊರಟೆ.

ಹೋಗುವ ಹೊತ್ತಿಗೆ ಮೇಷ್ಟರು ಕುಳಿತುಕೊಂಡು ಒಂದನೇ ಕ್ಲಾಸಿಗೆ ಪಾಠ ಕೊಡುತ್ತಾ ಇದ್ದರು. ನಾನೂ ಲಕ್ಷ್ಮಿಯೂ ನುಸುಳಿ ಹೋಗಿ ಒಂದು ಕಡೆ ಕುಳಿತುಕೊಂಡೆವು.

ಮೇಷ್ಟರು ಒಂದನೇ ಕ್ಲಾಸಿಗೆ ಪಾಠ ಹೇಳಿ ನಮ್ಮಕಡೆ ತಿರುಗುತ್ತಾ, "ಗೌರಮ್ಮ, ಸೀತಮ್ಮ ಏಕೆ ಬರಲಿಲ್ಲ ಇನ್ನೂ" ಎಂತ ಕೇಳಿದರು.

"ನಾನು ಆಗಲೆ ಬಂದೆ ಮೇಷ್ಟರೆ" ಎಂತ ನಾನು ಹೇಳಿದೆ.

"ಓಹೋ, ಬಂದೆಯಾ, ನಮ್ಮಮ್ಮ ಒಳ್ಳೆಯ ಹುಡುಗಿ, ಸ್ವಲ್ಪ ಜಾಗ್ರತೆ ಬಾರಮ್ಮ ಇನ್ನುಮೇಲೆ" ಎಂದು, ನಾನು ಲಕ್ಷ್ಮಿಯನ್ನು ತೋರಿಸುವುದಕ್ಕೆ ತಲೆ ತಿರುಗಿಸಿದ್ದನ್ನು ನೋಡಿ "ಓ ಲಕ್ಷ್ಮಿಯನ್ನು ಕರೆದುಕೊಂಡು ಬಂದೆಯೋ? ನಿನಗೆ ದಿನವೂ ಲಕ್ಷ್ಮಿಯನ್ನು ಕರೆದು ಕೊಂಡು ಬರುವುದಕ್ಕೆ ಹೊತ್ತಾಗುತ್ತದೆ. ಇನ್ನು ಕೊಂಚದಿನ ಅವಳನ್ನೂ ಕರೆದುಕೊಂಡು ಜಾಗ್ರತೆ ಸ್ಕೂಲಿಗೆ ಬಾರಮ್ಮ. ಇನ್‌ಸ್ಪೆಕ್ಟರು ಬರುವ ದಿನ. ಇಷ್ಟರಲ್ಲೇ ಬಂದಾರು. ಎಲ್ಲರೂ ಸರಿಯಾಗಿ ಸ್ಕೂಲಿಗೆ ಬನ್ನಿರಮ್ಮ. ಪಾಠಗಳನ್ನು ಸರಿಯಾಗಿ ಓದಬೇಕು. ಈಸಲ ಬರುವವರು ಹೊಸ ಇನ್‌ಸ್ಪೆಕ್ಟರು. ಚೆನ್ನಾಗಿ ಓದಿದವರಿಗೆಲ್ಲಾ ಮುತ್ತಿನಹಾರ ಇನಾಮಾಗಿ ಕಳುಹಿಸುತ್ತಾರೆ. ಸರಸ್ವತಮ್ಮ, ಚೆನ್ನಾಗಿ ಓದು ತಾಯಿ. ಗೌರಮ್ಮ ಓದಿದಹಾಗೆ ಓದಬೇಕು."

ಸರಸ್ವತಿ "ಅವಳೇ ಚೆನ್ನಾಗಿ ಓದಲಿ ಮೇಷ್ಟರೆ, ನನಗೇನು ಮೆಳ್ಳೆಗಣ್ಣೆ?" ಎಂದಳು.

ಎಲ್ಲರೂ ಗಟ್ಟಿಯಾಗಿ ನಕ್ಕುಬಿಟ್ಟರು. ನಾನು ನಗಕೂಡದು ಎಂದರೂ ತಡೆಯುಲಿಲ್ಲ, ನಗು ಬಂದುಬಿಟ್ಟಿತು. ಲಕ್ಷ್ಮಿ ಚಪ್ಪಾಳೆ ಹಾಕುತ್ತ ನಕ್ಕಳು. ತುಂಟಹುಡುಗಿ, ಮೇಷ್ಟರಿಗೆ ಕೂಡಾ ನಗು ಬಂತು. ಅವರು ತಡೆದುಕೊಂಡು, "ಛೆ, ಹಾಗೆಲ್ಲಾ ಹೇಳಬಾರದು" ಎಂದರು.

ಸರಸ್ವತಿಯದು ಇದೊಂದು ಜಂಬ, ನೋಡಿ. ತನಗೆ ಕಣ್ಣು ಮೂಗು ಸರಿಯಾಗಿದೆ ಎಂತ ಗೌರಿಯ ಮೆಳ್ಳೆಗಣ್ಣನ್ನು ಹಾಸ್ಯಮಾಡುವುದು

ಅವಳ ವಾಡಿಕೆ. ನಾನು ಕಣ್ಣು ಮೂಗು ಸರಿಯಾಗಿದ್ದವಳೆ; ಲಕ್ಷ್ಮಿಯೂ ಸರಿಯಾಗಿದ್ದವಳೆ; ಮುಕ್ಕಾಲುಪಾಲು ಜನಕ್ಕೆಲ್ಲ ಕಣ್ಣು ಮೂಗು ಸರಿಯಾಗಿಯೇ ಇರುತ್ತೆ. ಅದಕ್ಕೆ ಸರಸ್ವತಿಯದು ಬಹಳ ಜಂಬ. ಹುಡುಗಿಯರೇ ಹಾಗೆ ಎಂದು ತೋರುತ್ತದೆ. ಅವರು ಯಾವ ಕೆಲಸಕ್ಕೂ ಕಣ್ಣು ಮೂಗು ಸರಿಯಾಗಿದ್ದರೆ ಸಾಕು ಎಂದುಕೊಳ್ಳುತ್ತಾರೆ. ಹೆಂಗಸರ ಕೆಲಸ ಗಂಡಸರ ಮನಸ್ಸು ಒಪ್ಪಿಸುವುದು. ಅದಕ್ಕೆ ಯಾವುದು ಬೇಕೋ ಅದು ಎಲ್ಲಕ್ಕೂ ಸಾಕು ಎಂತ ಅವರ ತಿಳಿವಳಿಕೆ. ಗಂಡಸರೂ ಹಾಗೆಯೇ. ಒಬ್ಬ ಹುಡುಗ ಬಿ.ಎ. ಪರೀಕ್ಷೆ ಮಾಡಿದ ಎಂತ ಇಟ್ಟು ಕೊಳ್ಳಿ. ಅವನಿಗೆ ಒಂದು ಕಣ್ಣಾದರೂ, ಅವನು ಕಪ್ಪಗಿದ್ದರೂ, ಅವನ ಮುಸುಡಿ ಸೊಟ್ಟಾಗಿದ್ದರೂ, ಅವನು ತಾನು ಬಿ.ಎ. ಪ್ಯಾಸು ಮಾಡಿರು ವುದರಿಂದ ಹೆಂಗಸರೆಲ್ಲರೂ ತನ್ನನ್ನು ಮೆಚ್ಚುವರೆಂದುಕೊಳ್ಳುವನು. ಗಂಡಸರ ಕೆಲಸ ಸಂಪಾದಿಸುವುದು: ಸಂಪಾದಿಸುವುದಕ್ಕೆ ಯಾವುದು ಇರಬೇಕೋ ಅದು ಇದ್ದರೆ ಹುಡುಗ ತಾನು ಹುಡುಗಿಯರ ಕಣ್ಣಿಗೆ ಅಂದ ವಾಗಿರುತ್ತೇನೆ ಎಂದುಕೊಳ್ಳುತ್ತಾನೆ. ವಿದ್ಯದಿಂದ ರೂಪು ಬರುವುದಿಲ್ಲ ವೆಂದು ಗಂಡಸರಿಗೆ ತಿಳಿಯದು. ರೂಪಿನಿಂದ ಪ್ಯಾಸಾಗುವುದಿಲ್ಲ ಎಂತ ಹೆಂಗಸರಿಗೆ ತಿಳಿಯದು. ರೂಪಿಲ್ಲದ ಹುಡುಗ ವಿದ್ಯೆಯೇ ರೂಪು ಎಂದು ಕೊಳ್ಳುವನು. ಓದದ ಹುಡುಗಿ ಸರಸ್ವತಿ ರೂಪೇ ವಿದ್ಯವೆಂದುಕೊಂಡಿದ್ದಳು. ಅದಕ್ಕೆ ತಕ್ಕಹಾಗೆ, ಹಿಂದಿನ ವರುಷ ಇನ್‌ಸ್ಪೆಕ್ಟರು ಬಂದಾಗ ಅವಳು ಓದದೇ ಇದ್ದರೂ ಅವಳಿಗೆ ಶಾಬಾಸ್‌ಗಿರಿ ಬಂದಿತ್ತು. ಅದುವರೆಗೆ ಸ್ನೇಹಿತರಾಗಿದ್ದ ಗೌರಿ ಸರಸ್ವತಿಯರಿಗೆ ಅಂದಿನಿಂದ ದಿನವೂ ಜಗಳ. ಇನ್‌ಸ್ಪೆಕ್ಟರು ಕ್ಲಾಸನ್ನು 'ನದಿ' ಎಂದರೇನಮ್ಮಾ? ಎಂತ ಕೇಳಿದರು. ಸರಸ್ವತಿಗೆ ತಿಳಿಯಲಿಲ್ಲ. ಬಾಯಿಪಾಠಮಾಡಿದರೆ ಅಲ್ಲವೆ ಬರುವುದು? ಅವಳು ಸುಮ್ಮನಿದ್ದಳು. ಅವರು ಗೌರಮ್ಮನನ್ನು ಕೇಳಿದರು. ರಘುನಾಥ ರಾಯರ ಭೂವಿವರಣೆಯಲ್ಲಿ ಹೇಗೆ ಬರೆದಿದೆಯೋ ಹಾಗೆ ಗೌರಿ ಒಪ್ಪಿಸಿ ಬಿಟ್ಟಳು. ಗೌರಿಗೆ ಜಯ ಆದರೆ ನಮಗೆ ಯಾರಿಗೂ ಹೊಟ್ಟೆಯುರಿ ಇಲ್ಲ. ಗೌರಿ ಓದುವ ಹುಡುಗಿ ಎಂದು ನಮಗೆಲ್ಲಾ ಗೊತ್ತು. ಆಮೇಲೆ ಇನ್‌ಸ್ಪೆಕ್ಟರು "ನದಿ ಹ್ಯಾಗಾಗುತ್ತೆ" ಎಂತ ಕೇಳಿದರು. ಗೌರಿಗೆ.

ತಿಳಿಯಲಿಲ್ಲ. ಸರಸ್ವತಿಯ ಟರ್ನು ಬಂತು. ಸರಸ್ವತಿ "ಅಲ್ಲಿ ಇಲ್ಲಿ ಬಿದ್ದ ನೀರು ಎಲ್ಲಾ ಸೇರಿ ಹೋಗಿ ನದಿಯಾಗುತ್ತೆ" ಎಂದಳು. ಇನ್‌ಸ್ಪೆಕ್ಟರು ಶಾಭಾಸ್ ಎಂದರು. ಮೇಷ್ಟರ ಕಡೆ ತಿರುಗಿ, ಈ ಹುಡುಗಿಯನ್ನು ಚೆನ್ನಾಗಿ ತರಪೇತುಮಾಡಿದ್ದೀರಿ, ಮೇಷ್ಟರೆ, ಎಂದರು. ಮೇಷ್ಟರು ತರಪೇತು ಮಾಡಿದ್ದು ಗೌರಿಯನ್ನು; ಇನ್‌ಸ್ಪೆಕ್ಟರು ಹೇಳಿದ್ದು ಸರಸ್ವತಿಯನ್ನು. ಮೇಷ್ಟರಿಗೆ ಅದು ತಿಳಿಯದು. ಇನ್‌ಸ್ಪೆಕ್ಟರು ಹೇಳಿದ್ದು ಗೌರಿಯನ್ನೇನೋ ಎಂದು ಅವರು, "ಮಹಾಸ್ವಾಮಿ, ಕಷ್ಟಪಟ್ಟಿದ್ದೇನೆ, ಸ್ವಾಮಿಯವರಿಗೇ ಅದು ವೇದ್ಯ, ಭೂವಿವರಣೆಯಲ್ಲಿರುವ ಅಂಶ ಯಾವದನ್ನು ಕೇಳಿದರೂ ಆ ಹುಡುಗಿ ಉತ್ತರಕೊಡಬಲ್ಲಳು" ಎಂದರು. ಇನ್‌ಸ್ಪೆಕ್ಟರು, ಮೇಷ್ಟರು ಹೇಳುವುದು ಗೌರಿಯನ್ನು ಎಂದು ತಿಳಿದು, "ಈ ಹುಡುಗಿಯನ್ನೇ? ಹೌದು ಅವಳೂ ಚೆನ್ನಾಗಿ ಓದಿದಾಳೆ. ನಾನು ಹೇಳುವುದು ಈ ಹುಡುಗಿಯನ್ನು" ಎಂದು ಸರಸ್ವತಿಯನ್ನು ತೋರಿಸಿ, "ನಿಮ್ಮ ಹೆಸರೇನಮ್ಮ" ಎಂದರು. ಸರಸ್ವತಿ, "ಸರಸ್ವತೀಬಾಯಿ," ಎಂದಳು. "ಸರಸ್ವತೀಬಾಯನ್ನು ನಾನು ಹೇಳುವುದು" ಎಂದು ಇನ್‌ಸ್ಪೆಕ್ಟರು ಹೇಳಿದರು. ಮೇಷ್ಟರು, "ಹೌದು ಮಹಾಸ್ವಾಮಿ, ಅವಳಿಗೆ, ಪಾಠ ಹೇಳಿಹೇಳಿ ನನ್ನ ಎದೆಗೂಡು ಒಣಗಿ ಹೋಗಿದೆ," ಎಂದರು. ನಿಜದಮಾತು. 'ನೀಕು ವಚ್ಚೇಲೇದು, ನಾಕು ಮರಚೇಲೇದು' ಎನ್ನುವ ಹಾಗೆ ಸರಸ್ವತಿಗೆ ಪಾಠ ಹೇಳಿ ಹೇಳಿ ಮೇಷ್ಟರು ಶುಷ್ಕವಾಗಿದ್ದರು. ಅಂತೂ ಮೇಷ್ಟರು ಹೇಳಿಕೊಡದೇ ಇದ್ದ ಯಾವುದೋ ಒಂದು ಮಾತನ್ನು ಹೇಳಿ ಸರಸ್ವತಿ ಶಾಬಾಸ್‌ಗಿರಿ ಪಡೆದಿದ್ದಳು. ಇದು ಗೌರಿಗೆ ಹೊಟ್ಟೆಯುರಿ. ಅಂದಿನಿಂದ ಅವರಿಬ್ಬರಿಗೂ ಆಗದು. ಗೌರಿ ಸರಸ್ವತಿಯನ್ನ "ಓಹೋ ಶಾಬಾಸ್‌ಗಿರಿಯೆ, ಓದಲಿಲ್ಲ ಮಾಡಲಿಲ್ಲ, ಜಂಬಕ್ಕೇನು" ಎನ್ನುವಳು. ಸರಸ್ವತಿಯದು ಅದಕ್ಕೆಲ್ಲಾ ಏಕಮಂತ್ರ. "ಹೌದಮ್ಮ ನಾನೇನು ಮಾಡಲಿ ಹೇಳು; ನನಗೆ ಮೆಳ್ಳೆಗಣ್ಣಿಲ್ಲ. ನನ್ನ ಕಣ್ಣು ಸರಿಯಾಗಿದೆ," ಎನ್ನುವಳು. ಹೀಗೆ ಇವರಿಬ್ಬರಿಗೂ ಆಗದು. ಮೇಷ್ಟರು ಇದನ್ನು ಅಷ್ಟು ಚೆನ್ನಾಗಿ ಕಾಣರು. ಎಂದಾದರೂ ಒಂದುದಿನ ಸರಸ್ವತಿಗೆ ಬುದ್ಧಿಮಾತನ್ನು ಹೇಳೋಣವೆಂದು

ಗೌರಿಯು ಹಾಗೆ ಓದು ಎಂದರೆ ಅವಳು ಹೀಗೆ ಮಾತಾಡಿ ಗೌರಿಗೆ ಅವಮಾನವನ್ನು ಮಾಡುವಳು.

ಇನ್ನು ಆ ಗುರುವಾರದ ಮಾತನ್ನು ಹೇಳುತ್ತೇನೆ. ಮೇಷ್ಟರು 'ಹಾಗೆಲ್ಲಾ ಹೇಳಬಾರದು' ಎಂದು ಹೇಳಿ, ಎಲ್ಲರಿಗೂ ಪಾಠಗಳನ್ನು ಕೊಟ್ಟರು. ಹುಡುಗಿಯರು ಆಗಾಗ ಸರಸ್ವತಿಯ ಮಾತನ್ನು ನೆನೆದು ನೆನೆದು ಕಿಲಕಿಲನೆ ನಗುವರು, ಪಿಸುಗುಟ್ಟಿ ಮಾತನಾಡುವರು, ಮಿಕ್ಕ ಏನನ್ನಾದರೂ ಮಾಡುವರು, ಪಾಠವನ್ನು ಮಾತ್ರ ಓದರು. ಮಡಲಲ್ಲಿ ಹಾಕಿಕೊಂಡು ಬಂದಿದ್ದ ಚಕ್ಕುಲಿ, ಮುಚ್ಚೋರೆ, ಅವಲಕ್ಕಿ ಇವುಗಳ ಸೇವನೆಯ ಕಟುಂ ಕುಟುಂ, ಗರುಂ ಗುರುಂ ಶಬ್ದಮಾತ್ರ ಕೇಳುತ್ತ ಲಿತ್ತು. ಗೌರಿಗೆ ಅವಮಾನವು ಇನ್ನೂ ಮರೆತಿರಲಿಲ್ಲ. ಮಿಕ್ಕವರಿಗೆ ಓದುವ ಇಷ್ಟವಿಲ್ಲ. ಓದುವ ಹುಡುಗಿ ಅವಳೊಬ್ಬಳೂ ಮುಖವನ್ನು ಗಂಟಿಕ್ಕಿಕೊಂಡು ತೆಪ್ಪಗೆ ಕುಳಿತಿದ್ದಳು. ಮೇಷ್ಟರು 'ಪಾಠ ಒಪ್ಪಿಸಿ, ಬನ್ನಿ' ಎಂದು ಯಾವಾಗ ಕರೆಯುವರೋ ಎಂದು ನಾನು ನಿರೀಕ್ಷಿಸುತ್ತಿದ್ದೆ. ನಡುನಡುವೆ ಲಕ್ಷ್ಮಿಯಿಂದ ಉಪಾಯವಾಗಿ ನನ್ನ ಬಳಪಗಳನ್ನು ಹಿಂದಕ್ಕೆ ತೆಗೆದುಕೊಳ್ಳಲು ಪ್ರಯತ್ನಮಾಡಿದೆ. ಪ್ರಯೋಜನವಾಗಲಿಲ್ಲ. ಇನ್ನೇನು ತೀರ ಬೇಜಾರಾಗಬೇಕು, ಅಷ್ಟರಲ್ಲಿ, ತಮಾಷೆಗೆ ಮತ್ತೊಂದು ಅವಕಾಶ ಉಂಟಾಯಿತು.

ಮೇಷ್ಟರು "ಮನೆಯಲ್ಲಿ ಉಪ್ಪಿಲ್ಲದೆ ಬಿಟ್ಟು ಬಂದೆನಲ್ಲ, ಮನೆಗೆ ಹೋದರೆ ಏನೇನಾಗಬೇಕೆಂದು ಹಣೆಯಲ್ಲಿ ಬರೆದಿದೆಯೋ" ಎಂದು ಪ್ರಾಪಂಚಿಕ ವಿಷಯವನ್ನು ಕುರಿತು ಯೋಚಿಸುತ್ತಿದ್ದರೋ, ಇಲ್ಲವೆ ಯಾವುದಾದರೊಂದು ಆಧ್ಯಾತ್ಮಿಕವಾದ ವಿಷಯವನ್ನೋ ಋಕ್ಸಂಹಿತೆ ಶಾಸ್ತ್ರವನ್ನೋ ಕುರಿತು ವಿಚಾರಮಾಡುತ್ತಿದ್ದರೋ ನಾನು ಹೇಳಲಾರೆ. ಅದರ ನಡುವೆ ಅದಕ್ಕೆ ಅಡ್ಡಲಾಗಿ ಒಬ್ಬಾಕೆ ಸ್ಕೂಲಿನೊಳಕ್ಕೆ ಬಂದರು. ಅವರು ಬಾಗಿಲಿನಲ್ಲಿ ಕಂಡೊಡನೆಯೇ ಮೇಷ್ಟರಿಗೆ ಮನೆಯಲ್ಲಾಗತಕ್ಕದ್ದು ಇಲ್ಲೇ ಬಂತೆಂದು ತೋರಿರಬೇಕು, ಅವರು ನೆಮ್ಮದಿಯಾಗಿ ಕುಳಿತಿದ್ದವರು ಗಾಬರಿಯಿಂದ ಆಕೆಯ ಕಡೆ ನೋಡುತ್ತ ಏನೋ ಮಾತನಾಡುವುದಕ್ಕೆ ತೊಡಗಿದರು. ಅಷ್ಟರಲ್ಲಿ ಅವರ ಹೆಂಡತಿ

"ಉಪ್ಪಿಲ್ಲವೆಂದು ನಾನು ಹೇಳಿದ್ದರೂ ನೀವು ಸುಮ್ಮನೆ ಸ್ಕೂಲಿಗೆ ಬಂದು ಬಿಟ್ಟರೆ ನಾನು ಏನು ಮಾಡಬೇಕು ಎಂದುಕೊಂಡಿರಿ?" ಎಂದು ಸ್ವಲ್ಪ ಗಟ್ಟಿಯಾಗಿ ಕೇಳಿದರು. ಮೇಷ್ಟರು "ನೀನು ಅದಕ್ಕೋಸ್ಕರ ಸ್ಕೂಲಿಗೆ ಬರುವುದೆ?" ಎಂದರು. "ನಾನು ಯಾವುದನ್ನಾದರೂ ಕೇಳಿದರೆ, ನೀವು ಓಡಿಹೋಗಿ ಸ್ಕೂಲಿನಲ್ಲಿ ಸೇರಿಕೊಳ್ಳುವುದು; ಏನೇ ಆಗಲಿ ಸ್ಕೂಲಿಗೆ ಮಾತ್ರ ಬರಬೇಡ ಎಂದು ಮಾತ್ರ ಶಾಸನ ಮಾಡುವುದು; ನಾನೇನು ಮಾಡಲಿ? ಇನ್ನುಮೇಲೆ ನೀವು ಸ್ಕೂಲಿನಲ್ಲಿರಿ, ಎಲ್ಲಿಯಾದರೂ ಇರಿ, ನಾನು ಬರುವುದೇ ನಿಜ. ಇಲ್ಲದ್ದನ್ನು ತನ್ನಿ ಎನ್ನುವುದೇ ನಿಜ. ಈ ಸಂಕಟ ನನ್ನಿಂದಾಗುವುದಿಲ್ಲ."

"ಪಕ್ಕದ ಮನೆಯಲ್ಲಿ ಸ್ವಲ್ಪ ಕೇಳಿ ತಂದಿದ್ದರಾಗದೆ? ನೀನು ಇಲ್ಲಿರುವಾಗ ಯಾರಾದರೂ ಬಂದರೆ ನನ್ನ ಮಾನ ಹೋಗುವುದಲ್ಲ?" ಎಂದು ಮೇಷ್ಟರು ಹೇಳಿದರು.

ಆಕೆ "ಯಾರಾದರೂ ಬಂದರೆ ನಿಮ್ಮ ಮಾನ ಹೋಗುವುದು ಹಾಗಿರಲಿ, ಯಾರೂ ಬಾರದೆಯೇ ದಿನವೂ ನನ್ನ ಮಾನ ಹೋಗುತ್ತ ಇದೆ. ಎಲ್ಲರ ಮನೆಯಲ್ಲೂ ನಿನ್ನೆ ಅಕ್ಕಿ, ಇಂದು ಬೇಳೆ, ನಾಳೆ ಉಪ್ಪು, ಸುಮ್ಮನೆ ಸಾಲ ಕೇಳಿ ತಂದು ತಂದು ಸಾಕಾಯಿತು. ಇನ್ನು ಹೋಗಿ ನಾನು ಯಾರನ್ನೂ ಕೇಳುವುದಿಲ್ಲ. ದುಡ್ಡಿದ್ದರೆ ತನ್ನಿ; ತರುತ್ತೇನೆ ಎನ್ನಿ; ಸ್ಕೂಲಿಗೆ ಹೊತ್ತಾಯಿತೆಂದು ಹೇಳಿ ಹೊರಟುಹೋಗಬೇಡಿ. ದುಡ್ಡಿಲ್ಲ ದಿದ್ದರೆ ಇಲ್ಲವೆನ್ನಿ. ಉಪ್ಪಿಲ್ಲದೆಯೇ ತಿನ್ನೋಣ" ಎಂದು ಹೇಳಿದರು.

ಇಷ್ಟು ನಡೆಯುವ ಹೊತ್ತಿಗೆ ಸ್ಕೂಲಿನಲ್ಲಿ ಹುಡುಗಿಯರ ಅವಾಂತರವೊ ಅವಾಂತರ. ಲಕ್ಷ್ಮಿ ಬೀದಿಯಲ್ಲಿ ಗರುಡಮರಿಯನ್ನು ನೋಡಿ—ಗರುಡಮರಿ ಏನೆ?

ಗರುಡಮರಿ ಒಂದು ಚಿಕ್ಕ ಬೆಕ್ಕಿನಮರಿ; ನೋಡುವುದಕ್ಕೆ ಬಹು ಅಂದವಾಗಿತ್ತು. ಸ್ಕೂಲಿನ ಹುಡುಗಿಯರು ಪೊರಕೆ ಕಡ್ಡಿಯನ್ನು ಅದರಿದಿರಿಗೆ ಆಡಿಸುತ್ತ ಅದರಿಂದ ಇಲಿ ಹಿಡಿಯುವ ಆಟವನ್ನು ಆಡಿಸು ವರು. ಅದರ ಬಾಲವನ್ನು ಹಿಡಿದು ಎಳೆದು ಅದು ಸಿರ್ರೆನ್ನುವಂತೆ ಮಾಡುವರು. ಆಗಾಗ ತಂದಿದ್ದ ತಿಂಡಿಯಲ್ಲಿ ಅದಕ್ಕೆ ಭಾಗವನ್ನು

ಕೊಡುವರು. ಆದ್ದರಿಂದ ಆ ಮರಿಗೆ ನಮ್ಮನ್ನೆಲ್ಲ ಕಂಡರೆ ಬಹಳ ಪ್ರೀತಿ. ನಮ್ಮ ಅಷ್ಟು ಜನದಲ್ಲಿ ಲಕ್ಷ್ಮಿಯನ್ನು ಕಂಡರೆ ಹೆಚ್ಚು ಪ್ರೀತಿ. ಒಂದು ಸಲ ಅವಳು ಅವರಮ್ಮನನ್ನು ಕೇಳಿಯೋ ಕೇಳದೆಯೋ ತುಂಬ ತಂಬಿಟ್ಟನ್ನು ತಂದಿದ್ದಳು. ನಾವೆಲ್ಲಾ ಹತ್ತಿರ ಸೇರಿ ಅವಳನ್ನು ಆಶ್ರಯಿಸಿ ನಮಗೂ ಸ್ವಲ್ಪ ಸ್ವಲ್ಪ ಬರುವಂತೆ ಏರ್ಪಾಡು ಮಾಡಿದೆವು. ನಾನು, ಸರಸ್ವತಿ, ಗೌರಿ. ಗ್ರಹಚಾರ ಕಡಿಮೆಯಾಗಿ ಲಕ್ಷ್ಮಿ ಗರುಡ ಮರಿಯನ್ನು ಹತ್ತಿರಕ್ಕೆ ಕರೆದು ಆಟಕ್ಕೆ ಅದರೆದುರಿಗೆ ಆ ತಂಬಿಟ್ಟನ್ನು ಇಟ್ಟಳು. ಅದು ಅದನ್ನು ಆಟವೆಂದು ಬಿಡಲಿಲ್ಲ. ನಿಜವಾಗಿಯೇ ಬಾಯಲ್ಲಿ ಕಚ್ಚಿಕೊಂಡುಬಿಟ್ಟಿತು. ಯಾರನ್ನೂ ಹತ್ತಿರ ಬರಗೊಡಿಸದೆ ಫಜೀತಿ ಮಾಡಿಬಿಟ್ಟಿತು. 'ದಿನವೂ ಹೀಗೆಯೇ ತಂಬಿಟ್ಟು ಸಿಗುವು ದೇನೋ ಈ ಹುಡುಗಿಯ ಹತ್ತಿರ' ಎಂದು ಲಕ್ಷ್ಮಿಯಲ್ಲಿ ಬಹಳ ಸ್ನೇಹವನ್ನು ತೋರಿಸುತ್ತಿತ್ತು. ಲಕ್ಷ್ಮಿ ಕೂಡ ತಂಬಿಟ್ಟು ಹೋದರೂ ಬೆಕ್ಕಿಗೆ ತನ್ನ ಮೇಲೆ ಪ್ರೀತಿ ಹೆಚ್ಚಾಗಿದೆಯಲ್ಲಾ ಎಂಬ ಜಂಬದಿಂದ ಅದನ್ನು ಹಿಡಿದು ಹಿಸಿಕಿ, ಔಕಿ, ಅದರ ಪ್ರಾಣವನ್ನು ತೆಗೆಯುವಳು. ಅವಳೇ ಅದರ ಸೊಗಸಿಗೋಸ್ಕರ ಅದಕ್ಕೆ 'ಗರುಡಮರಿ' ಎಂದು ಹೆಸ ರಿಟ್ಟವಳು. ಮರಿ ಚೆನ್ನಾಗಿತ್ತು; ಮೈ ಸ್ವಲ್ಪ ಭಾಗ ಮೈಲು ಬಣ್ಣ; ಸ್ವಲ್ಪವೆಲ್ಲಾ ಬಿಳುಪು; ಕುತ್ತಿಗೆಯೆಲ್ಲಾ ಮೃದುವಾದ ಬಿಳುಪು; ಮೂಗೂ ಹಣೆಯೂ ಬಿಳುಪು, ಅಲ್ಲಲ್ಲಿ ಸ್ವಲ್ಪ ಕಪ್ಪು; ಮುಸುಡಿ ಮಾಗಿದ ಪರಂಗಿ ಹಣ್ಣಿನ ಹೊರಭಾಗದ ಕೆಂಪು; ಕಣ್ಣುಗಳು ಒಳ್ಳೆಯ ಪುಷ್ಯರಾಗ; ಉಗುರು ಅದರಿಂದ ಪರಚಿಸಿಕೊಂಡವರಿಗೆ ಗೊತ್ತು. ಇದೀಗ ಗರುಡಮರಿ.—

ಲಕ್ಷ್ಮಿ ಈ ಗಲಭೆಯಲ್ಲಿ ಬೀದಿಯಲ್ಲಿ ಗರುಡಮರಿಯನ್ನು ನೋಡಿ ತಾನೂ ಅದರ ಹಿಂದೆ ಓಡಿ ಅದನ್ನು ಹಿಡಿದು ಸ್ಕೂಲಿಗೆ ತಂದಳು. ನಾನೂ ಅವಳೂ ಇನ್ನೂ ಕೆಲವು ಹುಡುಗಿಯರೂ ಅದನ್ನು ನಡುವೆ ಇಟ್ಟು ಕೊಂಡು ಆಡುತ್ತ ಇದ್ದೆವು. ಮೇಷ್ಟರೂ ಮೇಷ್ಟರ ಹೆಂಡತಿ ಇನ್ನೇನು ಹೇಳಿಕೊಂಡರೋ, ಅದೇನೇನು ನಡೆಯಿತೋ ನಾನು ಕಾಣೆ. ನಮ್ಮ ಆಟದ ಮಂಪರದಲ್ಲಿ ನಾವು ಯಾವುದನ್ನೂ ನೋಡಲಿಲ್ಲ. ಸ್ವಲ್ಪ ಹೊತ್ತಿನ

ಮೇಲೆ ಮೇಷ್ಟರು ಮಾತ್ರ, ಸರಿಯಾಗಿ ಕುಳಿತುಕೊಳ್ಳಿರಮ್ಮ, ಎಂದು ಗಾಬರಿಯಿಂದ ಕೂಗಿದರು. ಅದನ್ನು ಕೇಳಿ ನಾವೆಲ್ಲ ಅಲ್ಲಲ್ಲಿ ಸರಿದು ನಮ್ಮ ನಮ್ಮ ಜಾಗದಲ್ಲಿ ಕುಳಿತೆವು. ಬೆಕ್ಕು ಲಕ್ಷ್ಮಿಯ ಮಡಲಲ್ಲಿ ಸೇರಿತು. ಎಲ್ಲರೂ ನಮ್ಮ ನಮ್ಮ ಪುಸ್ತಕಗಳನ್ನು ಕೈಯಲ್ಲಿ ಹಿಡಿದು ಇದೇನಾಯಿತೆಂದು ನೋಡಿದೆವು.

ಬಾಗಿಲಲ್ಲಿ ಮುದುಕರೊಬ್ಬರು ನಿಂತಿದ್ದರು. ನಿಂತು ಎಲ್ಲವನ್ನೂ ಸರ್ವಸ್ವ ಅಧಿಕಾರವುಳ್ಳವರಂತೆ, ಒಂದು ಕಡೆಯಿಂದ ನೋಡುತ್ತಿದ್ದರು. ಮೇಜಿನ ಹತ್ತಿರ ನಿಂತಿದ್ದ ನಮ್ಮ ಮೇಷ್ಟರನ್ನು "ನೀವು ಇಲ್ಲಿ ಮೇಷ್ಟರೇನಯ್ಯ?" ಎಂದು ಕೇಳಿದರು.

ಅವರು ಇನ್‌ಸ್ಪೆಕ್ಟರು. ಸ್ಕೂಲು ಮೇಷ್ಟರುಗಳನ್ನು ಬೇರೆ ಇನ್ನು ಯಾರೂ ಹಾಗೆ ಮಾತನಾಡಿಸುವುದಿಲ್ಲ. ಮೇಷ್ಟರುಗಳನ್ನು ಎಲ್ಲರೂ ಮಾತನಾಡಿಸುವುದು ಒಂದು ರೀತಿ. ಇನ್‌ಸ್ಪೆಕ್ಟರುಗಳು ಮಾತನಾಡಿಸುವುದೇ ಒಂದು ರೀತಿ. ನಾನು ಹೇಳುವ ಮಾತಿಗೆ ಯಾರೂ ಕೋಪಿಸಬಾರದು. ಹೇಳುವುದೂ ಕೂಡ ಸ್ವಲ್ಪ ತಮಾಷೆಗೂ ಹೇಳುತ್ತೇನೆ. ಇಲಿಗಳನ್ನು ಹಿಡಿಯುವ ಶೌರ್ಯ ಬೆಕ್ಕಿಗೆ ಹೇಗೋ ಹಾಗೆ ಸ್ಕೂಲು ಮೇಷ್ಟರುಗಳ ಮೇಲೆ ಇನ್‌ಸ್ಪೆಕ್ಟರುಗಳಿಗೆ ಅಧಿಕಾರ. ಇವರ ಪ್ರಶ್ನೆಯನ್ನು ಕೇಳುತ್ತಲೂ ಮೇಷ್ಟರಿಗೆ ಅವರು ಇನ್‌ಸ್ಪೆಕ್ಟರೆಂದು ಗೊತ್ತಾಯಿತು. "ಹೌದು ಮಹಾಸ್ವಾಮಿ" ಎಂದು ಅವರು ಜವಾಬುಕೊಟ್ಟರು.

ಇನ್‌ಸ್ಪೆಕ್ಟರು "ರುಮಾಲು ಹಾಕಿಕೊಳ್ಳಿರಯ್ಯ, ಬರೀ ತಲೆಯಲ್ಲಿ ಇದೀರಿ ಇದೇನು?" ಎಂದರು.

"ನಮ್ಮ ಮೇಷ್ಟರು ಶಾಸ್ತ್ರವನ್ನು ಬಲ್ಲರು, ವೇದವನ್ನು ಬಲ್ಲರು. ರಘುವಂಶವನ್ನು ಎಲ್ಲಿಂದ ಎಲ್ಲಿಗಾದರೂ ಬಾಯಿಪಾಠ ಒಪ್ಪಿಸುವರು. ತತ್ವಾರ್ಥದ ವಿಚಾರವನ್ನು ಯಾರಿಗಾದರೂ ಹೇಳಿಕೊಟ್ಟಾರು. ಮನಸ್ಸೋ ನಿಷ್ಕಲ್ಮಷ. ಈಚೆಗೆ ನನಗೆ ಮನುಷ್ಯರ ಸ್ವಭಾವ ಅಷ್ಟಿಷ್ಟು ತಿಳಿದಿದೆ. ನನ್ನ ಎಳೆಯ ಮಕ್ಕಳನ್ನು ನೋಡಿ, ಮಕ್ಕಳ ಮನಸ್ಸು ಎಷ್ಟು ಅಚ್ಚ, ಎಷ್ಟು ಎಳಸು, ಎಷ್ಟು ಮೆಚ್ಚಾದದ್ದೆಂದು ತಿಳಿದಿದೆ. ನಮ್ಮ ಮೇಷ್ಟರ ಮನಸ್ಸು ಮಗುವಿನ ಮನಸ್ಸಿನಹಾಗೆ, ನೋಡಿ. ಬಹು ಅಚ್ಚವಾದದ್ದು.

ಬಹು ಎಳಸು. ಬಹು ಮೆಚ್ಚಾದದ್ದು. ಅವರು ಒಬ್ಬರ ಕಷ್ಟವನ್ನು ನೋಡಿ ಧರಿಸರು. ಅದರಿಂದಲೇ ಅವರಲ್ಲಿ ಆಗಾಗ ಉಪ್ಪಿಗೆ ಕಾಸಿಲ್ಲದೆ ಹೋಗುತ್ತಿತ್ತು. ಅಕುಟಿಲವೆಂದರೆ ಅವರ ಮನಸ್ಸಿನಂತೆ ಬೇರೆ ಇರಲಾರದು. ಒಂದು ರೀತಿಯಲ್ಲಿ ಬಹಳ ಧೈರ್ಯಶಾಲಿಗಳೂ ಹೌದು.'' ಒಂದು ಸಲ ಬೀದಿಯಲ್ಲಿ ಕೆಲವು ಮಕ್ಕಳು ಆಡುತ್ತಿರುವ ಕಡೆಗೆ ನಾಗರಹಾವು ಬರುತ್ತಿರುವುದನ್ನು ಕಂಡು ಅವರು, ನಾಗರಹಾವನ್ನು ಕೊಲ್ಲಕೂಡದೆಂಬ ಶಾಸ್ತ್ರವನ್ನು ತಿಳಿದಿದ್ದರೂ ಅದನ್ನು ಒಂದು ಕಡೆ ಇಟ್ಟು, ಅದು ತನ್ನ ಮೇಲೆ ಬಿದ್ದರೆ ಸಾವೇ ನಿಜವೆಂದು ತಿಳಿದಿದ್ದರೂ ಆ ಭಯವನ್ನು ಒಂದು ಕಡೆ ಇಟ್ಟು, ಹಾವನ್ನು ನೋಡಿ ಬಡಿದು ಕೊಂದರು. ಜನವೆಲ್ಲ ಸುತ್ತಲೂ ಸೇರಿ ಹಾರುವನ ಧೈರ್ಯವನ್ನು ಹೊಗಳುತ್ತಿರುವಾಗ ಮೇಷ್ಟರು ನಸ್ಯದ ಬುರುಡೆಯನ್ನು ತೆಗೆದು ಒಂದು ದೊಡ್ಡ ಚಿಟಕೆ ನಸ್ಯವನ್ನು ಆ ಹಾವಿನ ತಲೆಯ ಮೇಲೆ ಹಾಕಿದರು. ಹಾವನ್ನು ಹಿಡಿಯಬೇಕಾದರೆ ಹಾವಾಡಿಗರು ಅದರ ಬಾಯಲ್ಲಿ ಒಂದು ಚಿಟಕೆ ನಸ್ಯವನ್ನು ಹಾಕುವರೆಂದೂ, ಅದರಿಂದ ಅದು ತಲೆ ತಿರುಗಿ ಬೀಳುವುದೆಂದೂ, ಆಗ ಅವರು ಅದನ್ನು ಹಿಡಿದು ಅದರ ಕೋರೆಹಲ್ಲುಗಳನ್ನು ಕೀಳುವರೆಂದೂ ಕತೆ ಉಂಟಷ್ಟೆ? ನಮ್ಮ ಮೇಷ್ಟರು ಆ ಹಾವಿನ ತಲೆಗೆ ನಸ್ಯವನ್ನು ಹಾಕಿದ್ದಕ್ಕೂ ಇದೇ ಉದ್ದೇಶ. ಇವರ ಕೈಯಲ್ಲಿ ನಸ್ಯ ಹಾಕಿಸಿಕೊಳ್ಳುವಷ್ಟು ತೆಪ್ಪಗಾಗಿರುವ ಹಾವಿಗೆ ಅದರ ರುಚಿ ತಿಳಿಯುವುದಿಲ್ಲವೆಂದು ಅವರಿಗೆ ತಿಳಿಯದು. ಶುದ್ಧ ಮಗುವಿನಂತಹ ನಿಷ್ಕಪಟವಾದ ಮನಸ್ಸು, ನಿಷ್ಕಪಟವಾದ ಬುದ್ಧಿ. ''ಇಷ್ಟು ಧೈರ್ಯಶಾಲಿಯಾದರೂ ನಮ್ಮ ಮೇಷ್ಟರಿಗೆ ಎರಡು ವಸ್ತುವನ್ನು ಕಂಡರೆ ಮನಸ್ಸಿಗೆ ಭಯ. ಒಂದು ಅವರ ಹೆಂಡತಿ, ಎರಡನೆಯದು ಇನ್‌ಸ್ಪೆಕ್ಟರು.' ''ರುಮಾಲು ಹಾಕಿಕೊಳ್ಳಿರಯ್ಯಾ'' ಎಂದು ಇನ್‌ಸ್ಪೆಕ್ಟರು ಹೇಳುತ್ತಲೂ ಅಂಜುವವರ ಮೇಲೆ ಕಪ್ಪೆ ಹಾಕಿದ ಹಾಗಾಗಿ ಮೇಷ್ಟರು ಮೇಜಿನಮೇಲಿದ್ದ ರುಮಾಲನ್ನು ಎತ್ತಿ ಗಾಬರಿಯಲ್ಲಿ ಹಿಂದುಮುಂದಾಗಿ ಇಟ್ಟುಕೊಂಡರು. ಭಯದಿಂದ ಮುಖವೆಲ್ಲ ಬೆವತುಹೋಗಿತ್ತು. ಆಗ ಅವರ ಭಯವನ್ನು ನೋಡಿ ನನಗೆ ಅಯ್ಯೋ ಪಾಪ ಎನ್ನಿಸಿತು. ವೇಷವನ್ನು ನೋಡಿದರೆ ನಗು ಬರುವಂತಿತ್ತು.''

ರುಮಾಲು ಹಿಂದುಮುಂದಾದದ್ದನ್ನು ನೋಡಿ ಇನ್ಸ್ಪೆಕ್ಟರು "ರುಮಾಲನ್ನು ಸರಿಯಾಗಿ ಇಟ್ಟುಕೊಳ್ಳಿರಯ್ಯಾ" ಎಂದರು. ಎನ್ನುತ್ತಲೂ ಮೇಷ್ಟರು ರುಮಾಲನ್ನು ತೆಗೆದು 'ಮಹಾಸ್ವಾಮಿ' ಎನ್ನುತ್ತ ಅದನ್ನು ಸರಿಯಾಗಿ ಇಟ್ಟುಕೊಳ್ಳಹೋದರು. ಅವರ ಅದೃಷ್ಟಕ್ಕೆ ತಕ್ಕಹಾಗೆ ಅದು ಬಿಚ್ಚಿಹೋಯಿತು. ಮೊದಲೇ ಸರಿ. ಇನ್ನು ಈ ಗಲಭೆಯನ್ನು ಕುರಿತು ಹೇಳಬೇಕಾದದ್ದಿಲ್ಲ. "ಇತ್ತ ರುಮಾಲು ಬಿಚ್ಚಿಹೋಯಿತು. ಇನ್ಸ್ಪೆಕ್ಟರೋ ಕೋಪಗೊಂಡಿರುವಂತಿದೆ. ಹುಡುಗಿಯರು ಚೆನ್ನಾಗಿ ಓದಿದವರು ಯಾರೂ ಇಲ್ಲ. ಪರೀಕ್ಷೆ ಮಾಡಿದರೆ ಕೆಲಸಕ್ಕೆ ಊನ ಬಂದೀತೆಂದು ಹೆದರಿಕೆ. ತನ್ನ ಹೆಂಡತಿ ಬೇರೆ ಬಂದು ಸ್ಕೂಲಿನೊಳಗೆ ಕುಳಿತಿದ್ದಾಳೆ. ಇನ್ಸ್ಪೆಕ್ಟರಿಗೆ ಈ ಸಮಾಚಾರ ತಿಳಿದು ತನ್ನಪಾಡು ಏನಾಗುವುದೋ ಎಂದು ಮನಸ್ಸಿನಲ್ಲಿ ತತ್ತರ. ಅವರು, ಇವರು ಯಾರು, ಅವರು ಯಾರು, ಎನ್ನುತ್ತ ಈಕೆ ಯಾರು ಎಂದು ತನ್ನ ಹೆಂಡತಿಯನ್ನು ತೋರಿಸಿ ಕೇಳಿದರೆ ಏನು ಜವಾಬನ್ನು ಹೇಳುವುದು? ಎಂದು ಮೊದಲಾಗಿ ಯೋಚನೆಯಿಂದ ಮೇಷ್ಟರ ಮನಸ್ಸು ಕಳವಳಿಸುತ್ತಿತ್ತು. ಕಳವಳ ವೆಷ್ಟೆಂದು ಊಹಿಸಿಕೊಳ್ಳಿ. ನಾನು ಹೇಳುವುದು ಸಾಧ್ಯವಲ್ಲ.

ಇನ್ಸ್ಪೆಕ್ಟರು ಮೇಷ್ಟರ ಹೆಂಡತಿಯ ಕಡೆ ತಿರುಗಿ "ಈಕೆ ಯಾರು? ಒಬ್ಬ ಮೇಷ್ಟರೋ?" ಎಂದು ಕೇಳಿದರು.

ನಮ್ಮ ಮೇಷ್ಟರು, ಗಾಬರಿಯಿಂದ ಏನೂ ತೋರದೆ ರುಮಾಲನ್ನು ಸರಿಮಾಡುವಂತೆ ತೋರಿಸಿಕೊಳ್ಳುತ್ತ "ಮಹಾಸ್ವಾಮಿ" ಎಂದರು.

ಇನ್ಸ್ಪೆಕ್ಟರು ಇನ್ನೇನು ಹೇಳುತ್ತಿದ್ದರೋ, ಇನ್ನೇನು ಆಗುತ್ತಿತ್ತೋ, ಅಷ್ಟರಲ್ಲಿ ಮೇಷ್ಟರ ಹೆಂಡತಿ ತಾನು ಮಾಡಿದ್ದು ತಾನು ಎಣಿಸಿದ್ದಕ್ಕಿಂತ ಕಷ್ಟಕ್ಕೆ ಬಂತೆಂದು ತಿಳಿದು, ಏನಾದರೂ ಮಾಡಿ ಈ ತಂಟೆಯಿಂದ ತಟಹಾಯಬೇಕೆಂದು 'ಅಲ್ಲ' ಎಂದು ಸಮಯಕ್ಕೆ ಸರಿಯಾಗಿ ಉತ್ತರ ಕೊಟ್ಟರು.

"ವಿದ್ಯಾರ್ಥಿಯೋ?" ಎಂದು ಇನ್ಸ್ಪೆಕ್ಟರು, ಕೇಳಿದರು.

ಮೇಷ್ಟರು "ಮಹಾಸ್ವಾಮಿ" ಎಂದರು.

ಮೇಷ್ಟರ ಹೆಂಡತಿ "ಹೌದು," ಎಂದರು.

ಇನ್‌ಸ್ಪೆಕ್ಟರು ಮೇಷ್ಟರ ಕಡೆ ತಿರುಗಿ "ಏನಯ್ಯ ಒಳ್ಳೇ ಬಲಿತ ಹುಡುಗಿಯನ್ನೇ ಹಿಡಿದಿದ್ದೀರಿ?" ಎಂದರು.

ಮೇಷ್ಟರು, "ಮಹಾಸ್ವಾಮಿ," ಎಂದರು.

ಮೇಷ್ಟರ ಹೆಂಡತಿಗೆ ಬಹಳ ಕೋಪ ಬಂತು.

ಇನ್‌ಸ್ಪೆಕ್ಟರು, "ನೀವು ಯಾವ ಕ್ಲಾಸಮ್ಮಾ?" ಎಂದರು.

ಮೇಷ್ಟರ ಹೆಂಡತಿ ಮುಖದಲ್ಲಿ ಕೋಪವನ್ನು ತೋರಿಸುತ್ತಾ ಮಾತನಾಡದೆ ನೇರವಾಗಿ ಬಾಗಿಲ ಕಡೆಗೆ ಹೋಗಿ, "ಬಲಿತ ಹುಡುಗಿಯಂತೆ, ಬಲಿತ ಹುಡುಗಿ, ಯಾರೋ ಎಳೆಯ ನಿಂಬೆಯಕಾಯಿ," ಎಂದು ಹೇಳುತ್ತಾ ಹೊರಟುಹೋದರು. ಇನ್‌ಸ್ಪೆಕ್ಟರು "ಇದೇನಯ್ಯಾ ಇದು, ಮಾತನಾಡದೇ ಹೊರಟುಹೋದರು. ಆಕೆ ಯಾವ ಕ್ಲಾಸು?" ಎಂದರು.

ಮೇಷ್ಟರು "ಮಹಾಸ್ವಾಮಿ," ಎಂದರು.

ಇನ್‌ಸ್ಪೆಕ್ಟರಿಗೆ ಬೇಜಾರಾಯಿತು. "ಇದೇನಯ್ಯಾ, ಮಹಾಸ್ವಾಮಿ, ಮಹಾಸ್ವಾಮಿ ಎಂತ ಒಂದೇ ಮಾತು ಆಡುತ್ತ ಇದೀರಿ. ನಿಮಗೇನು ಬಂತು?" ಎಂದರು.

ಮೇಷ್ಟರು, "ಮಹಾಸ್ವಾಮಿ," ಎಂದರು.

ಇನ್‌ಸ್ಪೆಕ್ಟರು, "ಆಕೆ ಕೋಪಿಸಿಕೊಂಡರೇನಯ್ಯ?" ಎಂದರು.

ಮೇಷ್ಟರು, "ಇರಬೇಕು, ಮಹಾಸ್ವಾಮಿ," ಎಂದರು.

ಇನ್‌ಸ್ಪೆಕ್ಟರು, "ಹೌದಪ್ಪ, ಬಲಿತ ಹುಡುಗಿ ಎಂದದ್ದು ತಪ್ಪಾಯಿತು" ಎಂತ ಹೇಳುತ್ತ "ಹೋಗಲಿ, ಈ ಕ್ಲಾಸು ಯಾವುದನ್ನಾದರೂ ಪರೀಕ್ಷೆ ಮಾಡೋಣವೋ" ಎಂದರು.

"ಮಹಾಸ್ವಾಮಿಯವರಿಗೆ ಪ್ರಯಾಣದಿಂದ ಆಯಾಸವಾಗಿ ಇರಬಹುದು. ನಾಳೆ ಪರೀಕ್ಷೆ ಮಾಡಿದರೆ ಅನುಕೂಲ," ಎಂದು ಮೇಷ್ಟರು ಉತ್ತರಕೊಟ್ಟರು.

"ಹಾಗೇ ಆಗಲಿ. ಈಗ ಚೆನ್ನಾಗಿ ಹಾಡುವ ಹುಡುಗಿಯ ಕೈಲಿ ಒಂದು ಹಾಡನ್ನು ಹಾಡಿಸಿ, ಕೇಳೋಣ, ಸಾಕು," ಎಂದು ಇನ್‌ಸ್ಪೆಕ್ಟರು ಹೇಳಿದರು. ॥

ಚೆನ್ನಾಗಿ ಹಾಡುವವಳು ಲಕ್ಷ್ಮಿ. ಮೇಷ್ಟರು "ಲಕ್ಷ್ಮವ್ಮ ಹಾಡಮ್ಮ; ಶ್ರೀಜಾರ್ಜ ಹಾಡು" ಎಂದರು.

ಲಕ್ಷ್ಮಿ ಎದ್ದುನಿಂತು ಹಾಡುವುದಕ್ಕೆ ಪ್ರಾರಂಭಿಸಿದಳು. ಮಡಲಲ್ಲಿ ಬೆಕ್ಕಿನ ಮರಿ. ಹಾಡುವುದನ್ನು ಸರಿಯಾಗಿ ಕೇಳುವುದಕ್ಕೆ ಇನ್‌ಸ್ಪೆಕ್ಟರು ಹತ್ತಿರಬಂದು ನಿಂತರು. ಲಕ್ಷ್ಮಿ ಹಾಡುವುದಕ್ಕೆ ಪ್ರಾರಂಭಿಸುತ್ತಲೂ ಬೆಚ್ಚಗೆ ಮಡಲಲ್ಲಿ ನಿದ್ದೆಹೋಗುತ್ತಿದ್ದ ಗರುಡಮರಿ ಎಚ್ಚರಗೊಂಡು ಹೊರಗೆ ಬರಲು ಸ್ವಲ್ಪ ಅಲುಗಾಡುವುದಕ್ಕೆ ಪ್ರಾರಂಭಿಸಿತು.

ಇನ್‌ಸ್ಪೆಕ್ಟರ ದೃಷ್ಟಿ ಕದಲುತಿದ್ದ ಮಡಲಿನಮೇಲೆ ಬಿತ್ತು. ಅವರು ಅದೇನಮ್ಮಾ ಎಂದು ಬೆರಲುತೋರಿಸಿ ಕೇಳಿದರು.

ಲಕ್ಷ್ಮಿಗೆ ಹೇಳಬಹುದೋ ಕೂಡದೋ ಎಂದು ಸಂದೇಹ. ಅವಳು ನನ್ನ ಕಡೆ ತಿರುಗಿ ನೋಡಿದಳು. ಇನ್‌ಸ್ಪೆಕ್ಟರು, "ನಿನ್ನ ಮಗುವೋ?" ಎನ್ನುತ್ತ ಇದೇನೊ ಎಂದು ನೋಡುವುದಕ್ಕೋಸ್ಕರ — ಲಕ್ಷ್ಮಿ ಕೂಸು, ಅವರ ಮೊಮ್ಮಗಳಾಗಿರಬಹುದು ನೋಡಿ, ಅಷ್ಟು ಚಿಕ್ಕವಳು — ಅವಳ ಮಡಲಲ್ಲಿ ಕೈ ಇಟ್ಟರು.

ಗರುಡಮರಿ ಹೊರಗೆ ಬರಲು ಪ್ರಯತ್ನಪಟ್ಟು ಆಗದೆ ಕೋಪದಲ್ಲಿತ್ತು. ಸ್ವಲ್ಪದರಲ್ಲೇ ಲಕ್ಷ್ಮಿಯ ಹೊಟ್ಟೆಯನ್ನು ಪರಚಬೇಕು. ಅಷ್ಟರಲ್ಲಿ ಇನ್‌ಸ್ಪೆಕ್ಟರ ಕೈ ಬಂದು ತಗುಲಿತೋ ಇಲ್ಲವೊ, ಯಾರೋ ಹುಡುಗಿಯರು ಬಾಲವೆಳೆಯುವುದಕ್ಕೆ ಬಂದರೆಂದು ಭ್ರಮೆಯಿಂದ ಸಿರ್ರೆಂದು ಹಾರಿ ಅವರ ಕೈಯನ್ನು ಚೆನ್ನಾಗಿ ಪರಚಿಟ್ಟಿತು.

ಇನ್‌ಸ್ಪೆಕ್ಟರು ಕೈಯನ್ನು ಸರ್ರನೆ ಹಿಂದಕ್ಕೆ ಎಳೆದುಕೊಂಡರು.

ಗರುಡಮರಿಯು ಉಗುರನ್ನು ಅದರ ಕೈಲಿ ಪರಚಿಸಿಕೊಂಡವರು ಬಲ್ಲರೆಂದು ನಾನು ಮೊದಲೇ ಹೇಳಿದ್ದೇನೆ. ಅಂದು ಇನ್‌ಸ್ಪೆಕ್ಟರಿಗೆ ಅದರ ಪರಿಚಯ ಉಂಟಾಯಿತು. "ಇದೇನು ಸ್ಕೂಲಯ್ಯಾ, ನಿಮ್ಮದು? ಆ ಹುಡುಗಿ ಕೋಪಿಸಿಕೊಂಡು ಹೋದಳು. ಈ ಹುಡುಗಿಯ ಹತ್ತಿರ ಬೆಕ್ಕಿನ ಮರಿ. ಇದೇನಪ್ಪಾ ಇದು?" ಎಂದು ಅವರು ಮೇಷ್ಟರನ್ನು ಕೇಳಿದರು.

ಮೇಷ್ಟರು, "ಮಹಾಸ್ವಾಮಿ, ನಾನು ಪಡುತ್ತಿರುವ ಕಷ್ಟವನ್ನು ಆ ದೇವರು ಬಲ್ಲ ಹುಡುಗಿಯರು ದೊಡ್ಡವರಾದರೆ ಅವರಿಗೆ ಕೋಪ

ಹೆಚ್ಚಾಗುತ್ತದೆ. ತುಟಿಪಿಟಕ್ಕೆನ್ನಬಾರದು. ಪಾಠವನ್ನೇ ಓದುವುದಿಲ್ಲ. ಸ್ಕೂಲಿನಲ್ಲೂ ನಿಲ್ಲುವುದಿಲ್ಲ. ಚಿಕ್ಕವರಾದರೆ ಬೆಕ್ಕಿನ ಮರಿ. ಅದು ಬೇಡವಮ್ಮ ಎಂದರೆ ಸ್ಕೂಲಿಗೇ ಬರುವುದಿಲ್ಲ. ಮಹಾಸ್ವಾಮಿಯವರು ಕೊಡುವ ಉಪ್ಪಿಗೆ ಎರಡೆಣಿಸಬಾರದೆಂದು ಕೆಲಸಮಾಡುತ್ತಿರುವುದಾಗಿದೆ, ಮಹಾಸ್ವಾಮಿ. ತಾವೇ ನೋಡೋಣವಾಯಿತು. ಈ ಸ್ಕೂಲಿನಲ್ಲಿ ಪಾಠ ಹೇಳಿ ನನ್ನ ಎದೆಗೂಡು ಒಣಗಿಹೋಯಿತು. ಮಹಾಸ್ವಾಮಿ,'' ಎಂದರು.

ಇನ್‌ಸ್ಪೆಕ್ಟರು, ''ಅಯ್ಯಾ, ನಿಮಗೆಷ್ಟು ಸಂಬಳ?'' ಎಂದು ಕೇಳಿದರು.

ಮೇಷ್ಟರು, ''ಒಂದು ತಿಂಗಳು ದುಡಿದರೆ ಹತ್ತು ರೂಪಾಯಿ,'' ಎಂದರು.

''ಈ ಹೊತ್ತು ಬರೆದು ಹಾಕುತ್ತೇನೆ ಸುಮ್ಮನಿರಿ, ಹನ್ನೆರಡು ರೂಪಾಯಿಗೆ ಪ್ರಮೋಷನ್ ಆಗುವಹಾಗೆ,'' ಎಂದು ಇನ್‌ಸ್ಪೆಕ್ಟರು ಹೇಳಿದರು.

ಅಂದಿಗೆ ಸ್ಕೂಲು ಮುಗಿಯಿತು.

ಮೂರು ದಿನದ ಹಿಂದೆ ನಮ್ಮ ಮೇಷ್ಟರು ನಮ್ಮ ಮನೆಗೆ ಬಂದಿದ್ದರು. ನಾನು ಇಲ್ಲಿಗೆ ಬರುವ ವೇಳೆಯಲ್ಲಿ ಹೋಗಿಬರುತ್ತೇನೆಂದು ಹೇಳುವುದಕ್ಕೆ ಹೋಗಿದ್ದೆ. ಅವರು ''ಅಮ್ಮಯ್ಯ, ನೀನು ಒಳ್ಳೇ ಗಂಡನನ್ನು ಮದುವೆಯಾಗುತ್ತೀಯೆ ಎಂದು ಹೇಳಿದ್ದೆ. ಹಾಗೆಯೇ ಆಯಿತು. ನಿಮ್ಮ ಮನೆಗೆ ಯಾವಾಗಲಾದರೂ ಬರುತ್ತೇನೆ. ಜ್ಞಾಪಕವಿರಲಮ್ಮ,'' ಎಂದು ಹೇಳಿದ್ದರು. ಮೂರು ದಿನದ ಹಿಂದೆ ಬಂದರು. ನಮ್ಮ ಯಜಮಾನರಿಗೆ ಹೇಳಿ ತನಗೆ ಪ್ರಮೋಷನ್ ಮಾಡಿಸಬೇಕೆಂದು ನನ್ನನ್ನು ಕೇಳಿದರು. ನಮ್ಮ ಯಜಮಾನರನ್ನೂ ಕೇಳಿದರು. ನಾನೂ ಕೂಡ ಅವರಿಗೆ ಸಹಾಯ ಮಾಡಬೇಕೆಂದು ನಮ್ಮ ಯಜಮಾನರಿಗೆ ಹೇಳಿದೆ. ಅವರು ಆಗಲಿ ಎಂದರು. ನಮ್ಮ ಮೇಷ್ಟರ ವಿಷಯವನ್ನು ತಿಳಿಸುವುದಕ್ಕಾಗಿ ಈ ಕತೆಯನ್ನು ಅವರಿಗೆ ಹೇಳಿದೆ. ಅವರು ಬಹಳ ನಕ್ಕರು. ಅಯ್ಯೋ ಪಾಪ, ಎಂದು ಹೇಳಿ ಅವರಿಗೆ ಸಂಬಳ ಹೆಚ್ಚುಮಾಡಿಸಿದರು. ಈಗ ಹುಕುಂ ಆಯಿತಂತೆ. ಮೇಷ್ಟರು ಬಂದಿದ್ದಾಗ ''ಸೀತಮ್ಮ, ನೀನು ಏನು

ಸಹಾಯಮಾಡಿದರೂ ಅವಳೇನೂ ಅನುಭವಿಸುವ ಹಾಗಿಲ್ಲ,'' ಎಂದರು. ''ಅವಳು ಯಾರು ಎಂದು ಕೇಳುವಂತಿಲ್ಲ; ಈಗಿನವರಿಗೆ ''ಅವಳು'' ಎನ್ನುವರು ಹೆಚ್ಚಾಗಿರಬಹುದು; ಹಿಂದಿನ ಕಾಲದವರಿಗೆ ''ಅವಳು'' ಒಬ್ಬಳೇ. ''ಅವಳು ಅನುಭವಿಸುವ ಹಾಗಿಲ್ಲ'' ಎಂದರು. ನಾನು ''ಯಾಕೆ ಮೇಷ್ಟರೆ?'' ಎಂದೆ. ಅವರು ''ಅಮ್ಮಯ್ಯ, ಅವಳು ತೀರಿ ಹೋದಳು. ಒಂದು ಹೆಣ್ಣು ಕೂಸನ್ನು ಬಿಟ್ಟುಹೋಗಿದ್ದಾಳೆ. ಅದನ್ನು ನೋಡಿಕೊಳ್ಳಬೇಕು'' ಎಂದು ಕಣ್ಣೀರು ಸುರಿಸಿಕೊಂಡು ''ಕಷ್ಟದಲ್ಲೇ ಹೋದಳು ತಾಯಿ. ಈಗ ಇದ್ದಿದ್ದರೆ ಒಳ್ಳೇ ಸೀರೆಯನ್ನು ತೆಗೆದುಕೊಡು ತ್ತಿದ್ದೆ. ಉಟ್ಟು ಸಂತೋಷಪಡುತ್ತಿದ್ದಳು. ನಾನು ಕೇಳಿಬರಲಿಲ್ಲ,'' ಎಂದರು. ನಾನು ವ್ಯಸನದಿಂದ ಏನೂ ಹೇಳಲಾರದೆ ಸುಮ್ಮನೆ ಇದ್ದೆ. ''ಅವಳ ಪ್ರೀತಿ ಬಹಳ ಪ್ರೀತಿ ಸೀತಮ್ಮ. ಕೊನೆಗೆ ನನ್ನ ಕಾಲನ್ನು ಹಿಡಿದುಕೊಂಡು 'ನಾನು ಹೋಗುತ್ತೇನೆ. ನನ್ನ ಮೇಲೆ ಏನೂ ಕೋಪ ವನ್ನು ಇಟ್ಟುಕೊಳ್ಳಬೇಡಿ. ನಿಮಗೆ ಬಹಳ ಕಷ್ಟವಾಗುವಹಾಗೆ ಮಾಡಿದೆ ಎಷ್ಟೋ ಸಲ' ಎಂದಳು. ನಾನು 'ನನ್ನಪ್ಪ, ನನಗೆ ನೀನು ಏನು ಕಷ್ಟವನ್ನೂ ಕೊಡಲಿಲ್ಲ, ನನ್ನಿಂದ ನೀನು ಯಾವ ಸುಖವನ್ನೂ ಪಡೆಯ ಲಿಲ್ಲ' ಎಂದೆ. 'ನಿಮಗೆ ತಿಳಿಯದು, ನಾನು ಸುಖವಾಗಿಯೇ ಇದ್ದೆ, ಅದು ಆಗ ನನಗೆ ತಿಳಿಯಲಿಲ್ಲ. ಈಗ ನಿಮ್ಮನ್ನು ಬಿಡುವ ಕಾಲ ಬಂತು. ಈಗ ತಿಳಿಯಿತು' ಎಂದಳು. ಅವಳ ಪ್ರೀತಿ ಒಳ್ಳೆಯ ಪ್ರೀತಿ ಸೀತಮ್ಮ. ಆ ನಿಷ್ಕಾಪಟ್ಯವೋ ತಾಯಿ. ಆಡುವುದು ಸ್ವಲ್ಪ ಒರಟು ಮಾತು; ಮನಸ್ಸು ಬೆಣ್ಣೆಯಂತಹ ಮನಸ್ಸು. ನಿಷ್ಕಾಪಟ್ಯಕ್ಕೆ ಹೇಳುತ್ತೇನೆ. ಆ ಇನ್‌ಸ್ಪೆಕ್ಟರು ಬಂದ ದಿನ ಜ್ಞಾಪಕವಿದೆಯೇ ನಿನಗೆ? ಆ ದಿನ 'ಇನ್‌ಸ್ಪೆಕ್ಟರು ಪ್ರಮೋಷನ್ ಕೊಡುತ್ತಾರೆ' ಎಂತ ಹೇಳಿದೆ. ಎಲ್ಲ ವನ್ನೂ ಕೇಳಿ, 'ಅವರು ನಾನೂ ಒಬ್ಬ ಹುಡುಗಿ ಎಂದುಕೊಂಡು ನನ್ನಂತಹವರಿಗೆ ಪಾಠ ಹೇಳುವ ಕಷ್ಟಕ್ಕೋಸ್ಕರ ಎಂತ ಪ್ರಮೋಷನ್ ಕೊಟ್ಟಾರು, ನಿಜವನ್ನು ಹೇಳಿಬಿಡಿ' ಎಂದಳು. 'ಅವರು ನಿನ್ನನ್ನು ಬಲಿತ ಹುಡುಗಿ ಎಂದದ್ದು ಬೇರೆ ಯಾರ ಕಿವಿಗಾದರೂ ಬಿದ್ದೀತು ಎಂದು ಗಾಬರಿಯಾಗಿದಾರೆ' ಎಂದೆ. 'ಛೆ, ಅವರಿಗೆ ಬುದ್ಧಿ ಇಲ್ಲ. ಹುಡುಗಿಯರ

ಸ್ಕೂಲಿನಲ್ಲಿ ಹಾಗೆಲ್ಲಾ ಮಾತನಾಡುವುದೆ? ಹ್ಯಾಗೊ. ಅವರು ಎಂತಹವರೋ ನಮಗೇನು. ನಾನು ಬಂದದ್ದನ್ನು ಇರುವ ಮಾತು ಇರುವ ಹಾಗೆ ಹೇಳಿ, ನಾನು ಓದುವ ಹುಡುಗಿಯಲ್ಲ ಎಂದು ತಿಳಿಸಿಬಿಡಿ' ಎಂದಳು. ಸೀತಮ್ಮ, ಹೇಳಿಯೇ ಬಿಟ್ಟೆ. ಇನ್ಸ್‌ಪೆಕ್ಟರು ಮೊದಲು ಸ್ವಲ್ಪ ಕೋಪಿಸಿಕೊಂಡು ಆಮೇಲೆ ಘೊಳ್ಳೆಂದು ನಕ್ಕರು. ನಕ್ಕು, 'ಆಗಲಯ್ಯ ಮೇಷ್ಟರೆ, ಆಕೆ ನಿಮ್ಮ ವಿದ್ಯಾರ್ಥಿಯೆಂದು ಹನ್ನೆರಡು ರೂಪಾಯಿಗೆ ಸಿಪಾರ್ಸು ಮಾಡಿವೆ. ಹೆಂಡತಿ ಎಂದಿದ್ದರೆ ಹದಿನೈದು ರೂಪಾಯಿಗೆ ಮಾಡುತ್ತಿದ್ದೆನಯ್ಯ. ಆಕೆ ನಿಮ್ಮ ಹೆಂಡತಿಯೇ? ಅಯ್ಯೋ ನಮ್ಮಪ್ಪ' ಎಂದರು. ಅವರೇನು ಬಲ್ಲರು ಪಾಪ?'' ನಮ್ಮ ಮೇಷ್ಟರು ಮಾತನ್ನು ಮುಗಿಸಿ ಸ್ವಲ್ಪ ಯೋಚಿಸುತ್ತ ಕುಳಿತರು.

ಯಾರ ಜೀವನದ ವಿಚಾರವನ್ನು ಯಾರು ಬಲ್ಲರು?

# ಬೀದಿಯಲ್ಲಿ ಹೋಗುವ ನಾರಿ

ಆ ನಾರಿ ಬಹು ಸುಂದರಿಯಾಗಿದ್ದಳು. ರೈಲ್ವೆ ಸ್ಟೇಷನ್ನಿನಲ್ಲಿದ್ದವರಲ್ಲಿ ಮುಕ್ಕಾಲುಪಾಲು ಜನ ಅವಳ ಕಡೆ ನೋಡುತ್ತಿದ್ದರು. ಜನರ ಗುಂಪು ಬಹಳ ಇತ್ತು. ಅದರಿಂದ ಹೆಂಗಸು ಒಂದು ಕಡೆಗೆ ನಿಂತು ಯಾರನ್ನೋ ಹುಡುಕುವಂತೆ ಅಲ್ಲಿ ಇಲ್ಲಿ ನೋಡುತ್ತಿದ್ದಳು. ಹತ್ತಿರ ಸಣ್ಣದೊಂದು ಪೆಟ್ಟಿಗೆ, ಒಂದು ಮೂಟೆ. ಈ ಕೋಲಾಹಲದಲ್ಲಿ ಸಿಕ್ಕಿ ಹೆದರಿದವಳಂತೆ ತೋರುತ್ತಿದ್ದಳು. ಹೆದರಿದಂತೆ ತೋರುತ್ತಿದ್ದುದರಿಂದ ಮತ್ತಷ್ಟು ಸುಂದರಿ ಯಾಗಿ ಕಾಣುತ್ತಿದ್ದಳು. ರೈಲ್ವೆ ಸ್ಟೇಷನ್ನಿಗೆ ಬರುವ ದೊಡ್ಡ ಮನುಷ್ಯರು ಬಹು ಮಾದರಿ ಇರುತ್ತಾರೆ. ಕೆಲವರು ಪ್ರಯಾಣಕ್ಕಾಗಿ ಬಂದಿರುತ್ತಾರೆ. ಕೆಲವರು ಸೊಗಸುಮಾಡಿಕೊಂಡು ಯಾರಾದರೂ ಹೆಂಗಸರು ನೋಡಿ ಮೆಚ್ಚಿದರೆ ಮೆಚ್ಚಲಿ ಎಂದು ಬಂದಿರುತ್ತಾರೆ. ಹಾಗೆ ಮೆಚ್ಚುವುದಕ್ಕೆ ಎಲ್ಲರಿಗೂ ಸ್ವಲ್ಪ ಅವಕಾಶ ಕೊಡೋಣವೆಂದು ಹೆಂಗಸರು ಯಾವ ಗಾಡಿಯಲ್ಲಿ ಕುಳಿತಿದ್ದರೆ ಆ ಗಾಡಿಯ ಹತ್ತಿರವೆಲ್ಲಾ ಇವರು ಒಂದೊಂದು ಅರೆಗಳಿಗೆ ನಿಲ್ಲುವರು. ಅವರಿಗೆ ಸಾಕಾಯಿತೋ ಇಲ್ಲವೋ ಎಂದು ಕ್ಷಣಕ್ಕೊಂದು ಸಲ ಅವರ ಕಡೆ ನೋಡುವರು. ಅವರು ಇವರ ಕಡೆ ನೋಡುತ್ತಾ ಇದ್ದರೆ ಇನ್ನೂ ಸಾಕಾಗಲಿಲ್ಲವೆಂದು ಗೊತ್ತಷ್ಟೆ? ಮತ್ತೆ ಸ್ವಲ್ಪಹೊತ್ತು ಅಲ್ಲಿಯೇ ನೋಡುವರು. ಅವರಿಗೆ ಇವರನ್ನು ನೋಡಿ ಸಾಕಾಗಿ ಅವರು ಮುಖವನ್ನು ಬೇರೆ ಕಡೆ ತಿರುಗಿಸಿಕೊಂಡರೆ ಆಮೇಲೆ ಸ್ವಲ್ಪಹೊತ್ತು ಅಲ್ಲೇ ಇದ್ದು, ಇವರಿಗೆ ಇನ್ನು ನಮ್ಮನ್ನು ನೋಡುವುದು ಬೇಕಾಗಿಲ್ಲ ಎಂದು ದೃಢಮಾಡಿಕೊಂಡು ಬೇರೆ ಹೆಂಗಸರಿರುವ ಗಾಡಿಯ ಬಳಿಗೆ ಹೋಗುವರು. ಈ ರೀತಿ ಪ್ರಯಾಣಕ್ಕಾಗಿ ಬಂದಿರುವುದು ಒಂದು ಗುಂಪು, ಸೊಗಸನ್ನು ತೋರಿಸಿ ದೃಷ್ಟಿಗೆ ಸಂತೋಷವನ್ನುಂಟುಮಾಡು ವುದಕ್ಕಾಗಿ ಬಂದಿರುವುದು ಒಂದು ಗುಂಪು. ಇಂದು ಈ ಹೆಂಗಸನ್ನು ನೋಡಿ ಸೊಗಸುಗಾರರು ಹತ್ತಿರ ಹತ್ತಿರ ಸುಳಿಯುತ್ತಾ ಮೆಲ್ಲ ಮೆಲ್ಲನೆ ಹತ್ತಿರಕೆ ಸರಿಯುತ್ತಾ ಏನೋ ಮಾತನಾಡುವ ಭರದಲ್ಲಿ ಅವಳನ್ನು ಸೋಕಿದ್ದು

ತಿಳಿಯಲಿಲ್ಲವೆಂದು ನಟಿಸುತ್ತಾ ವಿಲಾಸಗಳನ್ನೆಲ್ಲಾ ತೋರಿಸುತ್ತಿದ್ದರು. ಹೆಂಗಸು ಸ್ವಲ್ಪ ಸ್ವಲ್ಪ ಸರಿದು ಸರಿದು ಒಂದು ಮೂಲೆಯ ಕಡೆಗೆ ನಡೆಯುತ್ತಿದ್ದಳು.

ಸೊಗಸನ್ನು ತೋರುವುದಕ್ಕೆ ಬಂದವರಿಗೆ ಈ ಹೆಂಗಸಿನಿಂದ ತೊಂದರೆಯೇನೂ ಆಗದಿದ್ದರೂ ಪ್ರಯಾಣ ಮಾಡುವವರಿಗೆ ಇವಳಿಂದ ತೊಂದರೆಯೇ ಬಂತು. ಒಬ್ಬ ಗೆಣೆಯನು ಸ್ಟೇಷನ್‌ಮೇಷ್ಟರ ಕೈಗೆ ಒಂದು ನೋಟನ್ನು ಕೊಟ್ಟು ಇಂಥ ಟಿಕೇಟ್ ಬೇಕು ಎಂದನು. ತನ್ನ ಟಿಕೇಟಿಗೆ ಮೂರು ರೂಪಾಯಿ ಹದಿನೈದಾಣೆ ಆಗುವುದೆಂದು ಗೊತ್ತು. ಸ್ಟೇಷನ್ ಮೇಷ್ಟರು ತನಗೆ ಟಿಕೇಟನ್ನು ಕೊಟ್ಟು ಒಂದು ರೂಪಾಯಿ ಒಂದಾಣೆ ಕೊಡಬೇಕು. ಟಿಕೇಟ್ ಸಂದಿಯಲ್ಲಿ ಕೈ ಇಟ್ಟುಕೊಂಡಿದ್ದಾನೆ. ಇತ್ತ ಈ ಹೆಂಗಸನ್ನು ನೋಡಬೇಕೆಂದು ಆಸೆ; ತಲೆಯನ್ನು ಅವಳ ಕಡೆ ತಿರುಗಿಸಿಕೊಂಡಿದ್ದ. ಮೇಷ್ಟರು ಟಿಕೇಟನ್ನೂ ಹಣವನ್ನೂ ಇವನ ಕೈಯಲ್ಲಿಟ್ಟು, ಎತ್ತು, ಒಂದು ರೂಪಾಯಿ ಒಂದಾಣೆ, ಎಂದರು. ಹೆಂಗಸನ್ನು ನೋಡುವ ಸಂಭ್ರಮದಲ್ಲಿ ಇವನು ತನ್ನ ಕೈಯಲ್ಲಿ ಬಂದ ನಾಣ್ಯವೇನೆಂಬುದನ್ನು ನೋಡಲಿಲ್ಲ. ಟಿಕೇಟನ್ನೂ ಹಣವನ್ನೂ ತೆಗೆದುಕೊಂಡು ಈಚೆಗೆ ಬಂದನು. ಕೂಲಿಯವನಿಗೆ ಕೂಲಿ ಕೊಡುವುದಕ್ಕೆ ಒಂದಾಣೆ ಕೊಡಬೇಕೆಂದು ಆಗ ನೋಡಿದನು. ಕೈಯಲ್ಲಿ ಒಂದು ಒಂದಾಣೆಯ ನಾಣ್ಯವೂ ಒಂದು ಅರ್ಧಾಣೆಯ ನಾಣ್ಯವೂ ಇದ್ದುವು. ಅವನು ಸ್ಟೇಷನ್‌ಮೇಷ್ಟರ ಬಳಿಗೆ ಹೋಗಿ "ಇದೇನಪ್ಪ, ರೂಪಾಯಿಗೆ ಬದಲು ಆರುಕಾಸು ಕೊಟ್ಟಿದ್ದೀರಿ" ಎಂದನು. ಸ್ಟೇಷನ್‌ಮೇಷ್ಟರು ತಮಿಳು ಸೀಮೆಯವರೋ ಮಲೆಯಾಳದವರೋ ಅದೇನೋ ಬಹು ರಭಸದಿಂದ ಒಳ ಒಳ ಎಂದು ಬಲವಾಗಿ ಒದರಿದರು. ಇಷ್ಟು ಮಾತು ಹೇಳುತ್ತಿರುವವರು ಕಾಸನ್ನು ಕೊಟ್ಟಾರು ಎಂದು ಗೆಣೆಯನು ಆತ ಹೇಳಿದ್ದನ್ನೆಲ್ಲಾ ಕೇಳಿದನು; ಆದರೆ ಕಾಸು ಬರಲಿಲ್ಲ. ತಂಟೆಮಾಡಲು ಪ್ರಯತ್ನಿಸಿದನು. ಸ್ಟೇಷನ್‌ಮೇಷ್ಟರು ಕೊನೆಗೆ ಇವನನ್ನು ಹಿಡಿದು ತಳ್ಳಿಬಿಟ್ಟರು.

ಇದಿಷ್ಟೂ ಆಗುವ ಹೊತ್ತಿಗೆ ಶ್ರೀನಿವಾಸಯ್ಯ ಸ್ಟೇಷನ್‌ಗೆ ಬಂದನು. ದೊಡ್ಡಮನುಷ್ಯನ ಹಾಗೆ ಕಂಡದ್ದರಿಂದ ಹಣ ಕಳೆದುಕೊಂಡ ಗೆಣೆಯನು ಹತ್ತಿರ ಬಂದು, "ನೋಡಿ ಸ್ವಾಮಿ, ಈ ಸ್ಟೇಷನ್‌ಮೇಷ್ಟರು ರೂಪಾಯಿಗೆ

ಬದಲಾಗಿ ಆರುಕಾಸನ್ನು ಕೊಟ್ಟು ಮೋಸಮಾಡಿದ್ದಾರೆ" ಎಂತ ಫಿರ್ಯಾದು ಹೇಳಿದನು. ಸ್ಟೇಷನ್‌ಮೇಷ್ಟರು ಶ್ರೀನಿವಾಸಯ್ಯನನ್ನು ಕಂಡೊಡನೆಯೇ "ಗುಡ್‌ಮಾರ್ನಿಂಗ್ ಸರ್, ಒಳಗೆ ಬನ್ನಿ, ಎಂದ ಊರಕ್ ಪೋಹವೇಣಂ" ಎಂದು ಕೂಗಿದನು. ಇವನನ್ನು ಮೊದಲು ನೋಡಿದವನಲ್ಲ; ಆದರೆ ರೈಲಿನವರಲ್ಲಿ ಅದು ವಾಡಿಕೆ. ಶ್ರೀನಿವಾಸಯ್ಯ ಒಳಗೆ ಹೋಗುತ್ತಲೂ ಅವನು "ತಮ್ಮಲ್ಲಿ ಫಿರ್ಯಾದು ಮಾಡುತ್ತಾನಲ್ಲಾ ಅವನು ಒಬ್ಬ ಫೂಲ್. ಅದೋ ನೋಡಿ, ಅಲ್ಲಿ ಒಬ್ಬಾಕೆ ಹೆಂಗಸು ನಿಂತಿದ್ದಾರೆ. ಅವರ ಕಡೆ ನೋಡುತ್ತ ಎಲ್ಲೋ ಕೈ ಹಿಡಿದಿದ್ದ. ನಾನು ಸರಿಯಾಗಿಟ್ಟಿದ್ದ ಹಣವನ್ನು ನೋಡಲಿಲ್ಲ. ಯಾರೋ ಅವನ ಕೈಯಿಂದ ರೂಪಾಯನ್ನು ಎತ್ತಿಕೊಂಡು ಆರುಕಾಸನ್ನು ಇಟ್ಟಿರಬೇಕು. ನಾನಿಟ್ಟೆನೆಂದು ಹೇಳುತ್ತಾನೆ" ಎಂದು ಗೆಣೆಯನಿಗೆ ಆಂಗ್ಲೇಯರ ಬೈಗಳನ್ನು ಪ್ರಯೋಗ ಮಾಡಿದನು. ಹೆಂಗಸಿನ ಮಾತನ್ನು ಎತ್ತುತ್ತಲೇ, ಇನ್ನು ಇಲ್ಲಿದ್ದು ಪ್ರಯೋಜನವಿಲ್ಲ, ತಾನು ಮಾಡಿದ್ದು ಬೇಕೂಫ್ ಕೆಲಸ, ಎಂದು ಗೆಣೆಯನು ಹೊರಟುಹೋದನು.

ಸ್ಟೇಷನ್‌ಮೇಷ್ಟರು ಹೀಗೆ ಹೇಳುತ್ತಲೂ ಶ್ರೀನಿವಾಸಯ್ಯ ಹೆಂಗಸಿನ ಕಡೆ ನೋಡಿದನು. ಅವಳನ್ನು ಮೊದಲು ಎಲ್ಲೋ ನೋಡಿದ್ದ ಹಾಗೆ ತೋರಿತು. ಎಲ್ಲಿ ಎಂದು ತಿಳಿಯಲಿಲ್ಲ. ಅವನು ನೋಡಿದಾಗ ಹೆಂಗಸೂ ಅವನ ಕಡೆ ನೋಡುತ್ತಿದ್ದಳು. ಒಂದು ಮೂಲೆಗೆ ಸರಿದು ನಿಂತಿದ್ದಳು. ಹತ್ತಿರ, ನಾವು ಮೊದಲೇ ಹೇಳಿದಂತೆ, ಕೆಲವು ಸಜ್ಜನರು ಸುಳಿದಾಡುತ್ತಿದ್ದರು. ಇದನ್ನು ನೋಡಿ ಶ್ರೀನಿವಾಸಯ್ಯ ಸ್ವಲ್ಪ ಅಸಮಾಧಾನಪಟ್ಟು "ಆಕೆ ಯಾರು?" ಎಂದು ಸ್ಟೇಷನ್‌ಮೇಷ್ಟರನ್ನು ಕೇಳಿದನು.

"ಯಾರೋ ಕಾಣೆ, ಈಗ ಅರ್ಧ ಗಂಟೆಯಿಂದ ಅಲ್ಲೇ ನಿಂತಿದ್ದಾಳೆ. ಅವಳಿಗೆ ಬೇಕಾದವರು ಯಾರೂ ಇದ್ದ ಹಾಗೆ ಕಾಣೆ" ಎಂದು ಸ್ಟೇಷನ್ ಮೇಷ್ಟರು ಹೇಳಿದನು.

ಶ್ರೀನಿವಾಸಯ್ಯನ ಮನಸ್ಸು ಬಹಳ ಎಳೆಯ ಮನಸ್ಸು. ಅವನು ಹೆಂಗಸನ್ನು ನೋಡಿದನು. ಇದ್ದದರಲ್ಲಿ ಚಿಕ್ಕ ವಯಸ್ಸಿನವಳು; ಜೊತೆಗೆ

ಯಾರೂ ಇಲ್ಲ; ಹತ್ತಿರ ಹವಿಸ್ಸಿಗಾಗಿ ಸುಳಿದಾಡುವ ನಾಯಿಗಳಂತೆ ಸೊಗಸುಗಾರರು. ಸ್ವಭಾವವಾಗಿಯೂ ಸಂಕೋಚ ಪ್ರಕೃತಿಯಾದರೂ ಶ್ರೀನಿವಾಸಯ್ಯ ಕಷ್ಟದಲ್ಲಿರುವ ಹೆಂಗಸನ್ನು ಸಹಾಯಬೇಕೆ ಎಂದು ಕೇಳದೆ ಇರಲಾಗುವುದೆ? ಇನ್ನು ಯಾರಾದರೂ ಇಂತಹ ಕೆಲಸದಲ್ಲಿ ವಾಡಿಕೆ ಇದ್ದವರು ಬಂದಿದ್ದು ಅವಳ ಕಷ್ಟಸುಖವನ್ನು ವಿಚಾರಿಸುವರಿದ್ದರೆ ತಾನು ಸುಮ್ಮನೆ ಹೊರಟು ಹೋಗುತ್ತಿದ್ದನು. ಇಲ್ಲಿ ಇಂದು ಯಾರೂ ಇಲ್ಲದಂತೆ ತೋರಿತು. ಅದರಿಂದ ಅವನು ಆ ಹೆಂಗಸಿನ ಬಳಿ ಹೋಗಿ "ನಿಮ್ಮ ಜೊತೆಗೆ ಯಾರೂ ಇಲ್ಲವೇನಮ್ಮ?" ಎಂದನು.

ಹೆಂಗಸು ಸೆರಗನ್ನು ಸರಿಮಾಡಿಕೊಂಡು, ತಲೆಯನ್ನು ತಗ್ಗಿಸಿ, ಕಾಲಬೆರಲನ್ನು ನೆಲಕ್ಕೆ ಅವುಕಿ ಆಡಿಸುತ್ತಾ "ಇಲ್ಲ" ಎಂದಳು.

ಹೆಂಗಸು ಬಹು ನಾಚಿಕೆಯಿಂದಲೂ ಅಡಕದಿಂದಲೂ ಮಾತನಾಡಿದಂತೆ ಶ್ರೀನಿವಾಸಯ್ಯನಿಗೆ ತೋರಿತು. ಸೆರಗನ್ನು ಸರಿಮಾಡಿಕೊಂಡದ್ದನ್ನು ನೋಡಿ ಅವನು ಪಾಪ, ಈಕೆ ಬಹಳ ನಾಚಿಕೊಂಡಿರುವಂತೆ ಇದೆ, ಎಂದು ಎಲ್ಲೋ ನೋಡುತ್ತಾ "ನೀವು ಎಲ್ಲಿಗೆ ಹೋಗಬೇಕು?" ಎಂದನು.

ಶ್ರೀನಿವಾಸಯ್ಯನಿಗೆ ಈ ರೀತಿಯ ವಿಲಾಸಗಳು ತಿಳಿಯವು. ಹೆಂಗಸು ಸೆರಗನ್ನು ಸರಿಮಾಡಿಕೊಂಡದ್ದು ನಿಜವೋ ಸುಳ್ಳೊ; ಅದು ಕಂಚುಕವೆಲ್ಲವನ್ನೂ ಮುಚ್ಚಿದ್ದರಿಂದ, ಈ ಹಾಳುಬಟ್ಟೆ, ಇದೇನು ಮೈಯನ್ನೆಲ್ಲಾ ಮುಚ್ಚಿಕೊಂಡಿದೆ, ಎಂದು ತಳ್ಳಿದಳೋ ಏನೊ; ಸೆರಗೇನೋ ಮತ್ತಷ್ಟು ಸರಿದು ಕಂಚುಕ ಮತ್ತಷ್ಟು ಕಾಣುವಂತಾಯಿತು. ಸ್ತ್ರೀಯೂ ಕೂಡ ಪುನಃ ಅದರ ತಂಟೆಗೆ ಹೋಗದೆ ಹಾಗೆಯೇ ಬಿಟ್ಟಳು. ಬಿಟ್ಟು ಸ್ವಲ್ಪ ಶ್ರೀನಿವಾಸಯ್ಯನ ಕಡೆ ನೋಡಿದಳು. ಅವನು ಶುಕಮುನಿಯಂತೆ ಇರುವುದನ್ನು ಕಂಡು 'ನಾಚಿಕೊಳ್ಳಬೇಕಾದವಳು ಹೆಂಗಸು, ನನಗೇ ನಾಚಿಕೆ ಇಲ್ಲ. ಇವನಿಗೆ ಹೆಂಗಸಿಗಿಂತಲೂ ಹೆಚ್ಚು ನಾಚಿಕೆಯಾಗಿದೆ!' ಎಂದುಕೊಂಡಿರಬೇಕು. ಸೆರಗನ್ನು ಮುಚ್ಚಿಕೊಂಡರೂ ಒಂದೇ ಇಲ್ಲದಿದ್ದರೂ ಒಂದೇ, ಇವನಲ್ಲಿ ಪ್ರಯೋಜನವಿಲ್ಲ, ಎಂಬಂತೆ ಮೇಲಕ್ಕೆ ಪುನಃ ಎಳೆದುಕೊಂಡಳು.

ಇದೊಂದೂ ಶ್ರೀನಿವಾಸಯ್ಯನಿಗೆ ತಿಳಿಯಲಿಲ್ಲ. ಇವನು ಯಾರು, ಶನಿ ಬಂದ, ಎಂದು ದೊಡ್ಡನಾಯನ್ನು ನೋಡಿ ದೂರ ದೂರ ಹೋಗುವ ಸಣ್ಣ ನಾಯಿಗಳಂತೆ ವಿಲಾಸಗಾರರು ದೂರದೂರ ಹೊರಟುಹೋಗಿದ್ದರು. ಇದನ್ನೆಲ್ಲಾ ನೋಡಿ ಅವರ ಮನಸ್ಸಿನಲ್ಲಿ ಬೂದಿಯಾಗಿದ್ದ ಅಭಿಲಾಷೆ ಪುನಃ ಉತ್ತೇಜಿನಗೊಂಡಿತು. ಅವರು ಇವರ ಕಡೆಯೇ ನೋಡುತ್ತಿದ್ದರು.

"ನೀವು ಎಲ್ಲಿಗೆ ಹೋಗಬೇಕು" ಎಂದು ಶ್ರೀನಿವಾಸಯ್ಯ ಕೇಳಿದ್ದಕ್ಕೆ ಹೆಂಗಸು "ಮಯಿಳೂರಿಗೆ" ಎಂದಳು.

ಬೆಂಗಳೂರು ಎಂದರೆ ಮೈಸೂರಿನವರಿಗೆ ಕೋಪ; ಮಯಿಸೂರು ಎಂದರೆ ಬೆಂಗಳೂರಿನವರಿಗೆ ಕೋಪ; ಅದರಿಂದ ನಾವು ಮಯಿಳೂರು ಎಂದು ಬರೆದಿದ್ದೇವೆ.

ಶ್ರೀನಿವಾಸಯ್ಯ "ಹಾಗೆಯೇ? ನಾನೂ ಮಯಿಳೂರಿಗೆ ಹೋಗುತ್ತೇನೆ, ನಿಮಗೂ ಟಿಕೆಟ್ಟು ತರುತ್ತೇನೆ, ಇಲ್ಲೆ ಇರಿ" ಎಂದು ಸ್ಟೇಷನ್ ಮೇಷ್ಟರ ಬಳಿ ಹೋಗಿ ಎರಡು ಟಿಕೆಟ್ಟುಗಳನ್ನು ತೆಗೆದುಕೊಂಡನು: ಸೆಕೆಂಡು ಕ್ಲಾಸ್ ಟಿಕೆಟ್ಟು.

ಹಣ ಕಳೆದುಕೊಂಡನೆಂದು ಮೊದಲು ಹೇಳಿದ್ದೆವಲ್ಲ, ಆ ಗೆಣೆಯ ಇದನ್ನೆಲ್ಲಾ ನೋಡಿದನು. ಬೀದಿಯಲ್ಲಿ ಬಿದ್ದಿರುವ ಕಾಸು ಸಿಕ್ಕುವುದಾದರೆ ನಿಮಗೆ ಸಿಕ್ಕುವುದಕ್ಕೆ ಬದಲಾಗಿ ನಮಗೆ ಸಿಕ್ಕಿದರೆ ಬೇಡವೆಂದಿತೇನು? ಅದು ನಿಮಗೆ ಯಾಕೆ ಸಿಕ್ಕಬೇಕು? ನೀವು ಹೇಳಿ. ಯಾರೂ ಕೇಳುವರಿಲ್ಲದ ಹೆಂಗಸು ರೈಲ್ವೆ ಸ್ಟೇಷನ್‌ನಲ್ಲಿ ಇದ್ದರೆ ಇವನು ಯಾರು ಬಂದು ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳುವುದಕ್ಕೆ ಎಂದು ಅವನಿಗೆ ಶ್ರೀನಿವಾಸಯ್ಯನ ಮೇಲೆ ಹೊಟ್ಟೆಯುರಿ. ಅಲ್ಲದೆ ಈ ಹೆಂಗಸಿನ ಸಲುವಾಗಿ ಹದಿನೈದೂವರೆ ಆಣೆ ಕಳೆದುಕೊಂಡಿದ್ದ ನೋಡಿ. ಹದಿನೈದೂವರೆ ಆಣೆ ಹೋಗಿ ಏನೂ ಇಲ್ಲದ ಹಾಗಾಯಿತು. ಇನ್ನಷ್ಟು ರೂಪಾಯಿ ಹೋದರೂ ಹೋಗಲಿ. ಇವಳೂ ಅವನೂ ಎಲ್ಲಿ ಕುಳಿತುಕೊಂಡರೆ ಅಲ್ಲೇ ನಾನೂ ಕುಳಿತುಕೊಳ್ಳಬೇಕು, ಎಂದು ಹೋಗಿ ಅವನು ತಾನು ಮೊದಲು ತೆಗೆದುಕೊಂಡಿದ್ದ ಮೂರನೇ ಕ್ಲಾಸು ಟಿಕೆಟ್ಟನ್ನು ಹಿಂದಕ್ಕೆ ಕೊಟ್ಟು

ಮೇಲೆ ಮತ್ತಷ್ಟು ದುಡ್ಡನ್ನು ಹಾಕಿ ತಾನೂ ಸೆಕೆಂಡು ಕ್ಲಾಸ್ ಟಕೆಟ್ಟು ತೆಗೆದುಕೊಂಡನು.

ರೈಲುಬಂತು. ರೈಲಿನಲ್ಲಿ ಕೂಡುವಾಗ್ಗೆ ದೊಡ್ಡ ಗಲಾಟೆ. ಸೆಕೆಂಡ್ ಕ್ಲಾಸ್ ಕಂಪಾರ್ಟಮೆಂಟು ಎರಡು ಇದ್ದವು. ಶ್ರೀನಿವಾಸಯ್ಯ ಒಂದರಲ್ಲಿ ಹೆಂಗಸನ್ನು ಕೂರಿಸಿ ತಾನು ಇನ್ನೊಂದರಲ್ಲಿ ಕುಳಿತುಕೊಳ್ಳಹೋದನು. ಅಷ್ಟರಲ್ಲಿ ನಮ್ಮ ಗೆಣೆಯ ಹೆಂಗಸು ಕೂತಿದ್ದ ಕಂಪಾರ್ಟಮೆಂಟಿನಲ್ಲಿ ಕೂಡಲು ಹೋದದ್ದನ್ನು ಕಂಡು, ಯಾರಯ್ಯಾ ಅದು ಇಲ್ಲಿ ಬಂದು ಕುಳಿತುಕೊಳ್ಳಿ " ಎಂದನು.

ಗೆಣೆಯ, "ನಾವು ಇಲ್ಲೇ ಕುಳಿತುಕೊಳ್ಳುತ್ತೇವೆ ಸ್ವಾಮಿ," ಎಂದನು.

ಶ್ರೀನಿವಾಸಯ್ಯ, "ಅಲ್ಲಿ ಕುಳಿತುಕೊಳ್ಳಕೂಡದು, ಇಲ್ಲಿ ಕುಳಿತು ಕೊಳ್ಳಿ," ಎಂದನು.

ಗೆಣೆಯ, "ಇರಲಿ, ಬಿಡಿರಿ, ನಿಮಗೇನು? ನಿಮ್ಮ ಮುದ್ದು ಮುಖ ನೋಡೋದಕ್ಕೆ ಅಲ್ಲ ನಾನು ಆರು ರೂಪಾಯಿ ಕಳೆದುಕೊಂಡದ್ದು!" ಎಂದು ಹೇಳಿದನು.

ಶ್ರೀನಿವಾಸಯ್ಯನಿಗೆ ಕೋಪಬಂತು. ಈ ಮನುಷ್ಯ ಅಸಹಾಯ ಳಾದ ಸ್ತ್ರೀಯ ಕಂಪಾರ್ಟಮೆಂಟಿನಲ್ಲಿ ಪ್ರಯಾಣ ಮಾಡಬೇಕೆನ್ನುವುದಕ್ಕೆ ಏನು ಕಾರಣ? ಅಲ್ಲದೆ ತನ್ನ ಮುಖವನ್ನು ಮುದ್ದುಮುಖ ಎಂದನಲ್ಲ! ಅದರ ಮೇಲೆ ಅವನು ಸ್ಟೇಷನ್‌ಮೇಷ್ಟರ ಬಳಿಗೆ ಹೋಗಿ, "ಈ ಮನುಷ್ಯ ಬದಮಾಯಿಷ, ಜೊತೆಗೆ ಯಾರೂ ಇಲ್ಲದ ಹೆಂಗಸಿಗೆ ತಂಟೆಮಾಡ ಹೋಗುತ್ತಾನೆ. ಇವನಿಗೆ ನನ್ನ ಕಂಪಾರ್ಟಮೆಂಟಿನಲ್ಲಿ ಪ್ರಯಾಣ ಮಾಡುವಂತೆ ತಾಕೀತುಮಾಡಿ" ಎಂದನು. ರಂಪುರಾದ್ಧಾಂತವಾಗಿ ಕೊನೆಗೆ ಗೆಣೆಯ, "ಹೆಂಗಸು ಸುಮ್ಮನೆ ಇರುವಾಗ ಇವರ ಗಲಾಟೆ ಏನು?" ಎಂದನು. ಆದರೆ ಒಬ್ಬ ಹೆಂಗಸಿನ ಬಳಿ ಹೋಗಿ, ಈ ಮನುಷ್ಯ ನಿನ್ನ ಕೂಡ ಪ್ರಯಾಣಮಾಡಬಹುದೇ ಕೂಡದೇ, ಎಂದು ಕೇಳುವುದು ಹೇಗೆ? ಕೊನೆಗೂ ಆರು ರೂಪಾಯಿಗೆ ಗೆಣೆಯನಿಗೆ ಸಿಕ್ಕಿದ್ದು ಶ್ರೀನಿವಾಸಯ್ಯನ ಮುಖವೇ. ಈ ಗಲಾಟೆಯಲ್ಲಿ ರೈಲು ಹೊರಡುವುದು

ಐದು ನಿಮಿಷ ಸಾವಕಾಶ. ಸ್ಟೇಷನ್‌ಮೇಷ್ಟರು ಗೆಣೆಯನನ್ನು ಶ್ರೀನಿವಾಸಯ್ಯನ ಗಾಡಿಯೊಳಕ್ಕೆ ತಳ್ಳಿ ರೈಲು ಬಿಡುವಂತೆ ಸೀಳುಹಾಕಿಸಿ ಹಿಂದಕ್ಕೆ ಬಂದನು. ಹಿಂದಕ್ಕೆ ಬಂದು ದೊಡ್ಡ ಸ್ಟೇಷನ್‌ಮೇಷ್ಟರ ಬಳಿ,

"ಒಬ್ಬ ಹೆಂಗಸಿನಿಂದ ಎಷ್ಟು ಜನ ಹುಚ್ಚರಾಗುತ್ತಾರೆ. ಆ ದೊಡ್ಡ ಕೋರಿನ ರುಮಾಲಿನ ಆ ಮಗು ಒಬ್ಬ ಹುಚ್ಚ. ಅವನು ಅವಳ ಕೂಡ ಹೋಗಬೇಕು ಎಂತ ಸೆಕೆಂಡು ಕ್ಲಾಸು ಟಿಕೆಟ್ಟು ತೆಗೆದುಕೊಂಡವನು ಅವನೊಬ್ಬ ಹುಚ್ಚು. ನಾನೂ ಹುಚ್ಚುಮುಂಡೆಯಾಗಿದ್ದೆ—" ಎಂದನು.

"ಯಾಕೆ, ನೀನೇನು ಮಾಡಿದೆ?" ಎಂದು ದೊಡ್ಡವನು ಕೇಳಿದನು.

"ಎಂದೂ ಅಂಥಾ ತಪ್ಪು ಮಾಡಿದ್ದಿಲ್ಲ. ಇಂದು ಅವಳ ಕಡೆ ನೋಡುತ್ತಾ ಒಬ್ಬನಿಗೆ ಚಿಲ್ಲರೆ ಕೊಡುವಾಗ ಮೂರುಕಾಸಿಗೆ ಬದಲಾಗಿ ಅರ್ಧರೂಪಾಯಿ ನಾಣ್ಯವನ್ನು ಕೊಟ್ಟುಬಿಟ್ಟೆ. ತಿರುಗಿ ಮೇಜಿನ ಮೇಲೆ ನೋಡಿದರೆ ನಾಣ್ಯ ಇರಲಿಲ್ಲ. ಇಂದು...."

"ಹಾಗಾದರೆ ಏಳೂಮುಕ್ಕಾಲು ಆಣೆ ಬೇಸ್ತು."

ಚಿಕ್ಕವನು "ಇಲ್ಲ! ಓ, ನಾನೋ! ಆ ಹುಚ್ಚ, ಸೆಕೆಂಡು ಕ್ಲಾಸು ಟಿಕೆಟ್ಟು ತೆಗೆದುಕೊಂಡನಲ್ಲಾ ಅವನಿಗೆ ಟಿಕೆಟ್ಟು ಕೊಡುವಾಗ ಅವನು ಅವಳ ಕಡೆ ನೋಡುತ್ತಾ ಇದ್ದ. ಸಮಯನೋಡಿ, ಒಂದು ರೂಪಾಯಿಗೆ ಬದಲಾಗಿ ಆರುಕಾಸನ್ನಿಟ್ಟೆ, ಅವನು ಬೇಸ್ತುಬಿದ್ದ. ಏನೋ ದೇವರ ಕೃಪೆ ಇದ್ದರೆ ನಮ್ಮ ನಷ್ಟವೇ ನಮಗೆ ಲಾಭ ತರುತ್ತದೆ. ಆದರೆ ಬುದ್ಧಿ ಇರಬೇಕು. ನ್ಯಾಯವಾಗಿ ಹದಿನೈದೂವರೆ ಆಣೆ ಲಾಭವಾಗಬೇಕು. ಆದರೆ ಮೊದಲೇ ಏಳೂಮುಕ್ಕಾಲು ಆಣೆ ಹಳ್ಳಕ್ಕೆ ಬಿದ್ದಿತ್ತು. ದಂಡಿನಲ್ಲಿ ಹುಟ್ಟಿ ದಾಳಿಯಲ್ಲಿ ಹೋಯಿತು ಎನ್ನುವಹಾಗೆ! ಅಂತೂ ಒಟ್ಟಿನಲ್ಲಿ ಏಳೂಮುಕ್ಕಾಲು ಆಣೆ ಲಾಭ! ಆ ಹೆಂಗಸು ನಮ್ಮ ಲಕ್ಷ್ಮಿಯಹಾಗೆ ಬಂದಳು" ಎಂದನು.

ಇತ್ತ ರೈಲಿನಲ್ಲಿ ಗೆಣೆಯನ ಮನಸ್ಸಿನಲ್ಲಿ ಕೋಪವೂ ಆಸೆಯೂ; ಶ್ರೀನಿವಾಸಯ್ಯನ ಮನಸ್ಸಿನಲ್ಲಿ ಕೋಪವೂ ಚಿಂತೆಯೂ; ಹೆಂಗಸಿನ ಮನಸ್ಸಿನಲ್ಲಿ ನಿರೀಕ್ಷೆಯೂ ಅಸಮಾಧಾನವೂ, ಹೇಗೆಂದರೆ:

ತಾನು ಪಕ್ಕದ ಕಂಪಾರ್ಟ್‌ಮೆಂಟಿನಲ್ಲಿ ಕುಳಿತುಕೊಳ್ಳಹೋದರೆ ಇವನು ಯಾರೋ ಬಂದು ತಂಟಿಮಾಡಿದನಲ್ಲಾ ಎಂದು ಗೆಣೆಯನಿಗೆ ಶ್ರೀನಿವಾಸಯ್ಯನ ಮೇಲೆ ಕೋಪ. ಶ್ರೀನಿವಾಸಯ್ಯನ ಮುದ್ದುಮುಖ ನೋಡುವುದಕ್ಕೆಂದು ದುಡ್ಡು ಖರ್ಚುಮಾಡದೆ ಇದ್ದರೂ ಗೆಣೆಯನು ಶ್ರೀನಿವಾಸಯ್ಯನ ಮುಖವನ್ನೇ ಸ್ವಲ್ಪ ಹೊತ್ತು ದುರದುರ ನೋಡಿದನು. ಏನಾದರೂ ಪುನಃ ಮಾತನ್ನೆತ್ತಿದರೆ ಚೆನ್ನಾಗಿ ಹೊಡೆದರೂ ಹೊಡೆದು ಬಿಡುವುದೆಂದು ಮನಸ್ಸಿನಲ್ಲಿ ಮಾಡಿಕೊಂಡು ಬಿಡದೆಯೇ ಅವನಕಡೆ ಬಹಳ ಉಗ್ರದೃಷ್ಟಿಯಿಂದ ನೋಡಿದನು. ಅದರಿಂದ ಪ್ರಯೋಜನ ವಾಗಲಿಲ್ಲ. ಆಮೇಲೆ, "ಇವನು ಹೀಗೆ ಮಾಡಿದರೇನು, ಇಂದು ರಾತ್ರಿ ಅವಳ ಮನೆಗೆ ಹೋದರೆ ಸರಿ" ಎಂದುಕೊಂಡು ಅವಳು ಕಿಟಕಿಯಿಂದ ಕಾಣುವುದಾದರೆ ನೋಡೋಣವೆಂದು ತಲೆಯನ್ನು ಹೊರಗೆ ಇಟ್ಟು ಕೊಂಡನು.

ಶ್ರೀನಿವಾಸಯ್ಯ ಇದಾವುದನ್ನೂ ನೋಡಲಿಲ್ಲ. ಗೆಣೆಯನಿಗೂ ನಮ್ಮ ಪ್ರಿಯಪಾಠಕರಿಗೂ ವ್ಯಕ್ತವಾಗಿರುವ ಒಂದು ಅಂಶ ಶ್ರೀನಿವಾಸ ಯ್ಯನ ಅಸಂಸ್ಕೃತವಾದ ಮನಸ್ಸಿಗೆ ತಿಳಿಯಲಿಲ್ಲ. ಈ ಹೆಂಗಸು, ಪಾಪ, ಸಹಾಯವಿಲ್ಲದೆ ಕಷ್ಟದಲ್ಲಿ ಸಿಕ್ಕಿದ್ದಳು. ತಾನು ಬರದೆ ಇದ್ದಿದ್ದರೆ ಅವಳಿಗೆ ಯಾರು ಗತಿ? ಒಳ್ಳೆಯವರು ಯಾರಾದರೂ ನೋಡಿಕೊಳ್ಳು ತಿದ್ದರೆಂಬುದೇನೋ ನಿಜ. ಆದರೆ ಒಳ್ಳೆಯವರಿಗೆ ಅವಳ ಹತ್ತಿರಹೋಗಿ ಮಾತನಾಡಲು ಸಂಕೋಚ ಇದ್ದೇ ಇರುವುದು. ದುಷ್ಟನಿಗೆ ಅಂತಹ ಸಂಕೋಚವಿರಲಾರದು. ನಲ್ಮೆ ನಾಚಿಕೆಯಿಂದ ಅನೇಕ ವೇಳೆ ಫಲಕಾರಿ ಯಲ್ಲದೆ ಹೋಗುವುದು. ನಲ್ಮೆಗೆ ನಾಚಿಕೆ ಏಕೆ? ಅದಕ್ಕೆ ತನ್ನ ವಿಷಯ ದಲ್ಲಿ ತನಗೆ ನಾಚಿಕೆ ಅಲ್ಲ; ತಾನು ದೌಷ್ಟ್ಯದಂತೆ ಎಲ್ಲಿ ಕಾಣುವೆನೋ ಎಂದು ನಾಚಿಕೆ. ಭಿಕ್ಷುಕನಿಗೆ ಕಾಸುಕೊಡುವವನು ಸುತ್ತಲೂ ನೋಡಿ ಯಾರೂ ನೋಡದವೇಳೆಯಲ್ಲಿ ಕಾಸನ್ನು ಹಾಕುವನು. ಏಕೆ? ಕಾಸು ಕೊಡುವುದಕ್ಕೆ ನಾಚಿಕೆ ಅಲ್ಲ. ಯಾರಾದರೂ ನೋಡಿದರೆ ಡಂಭಾಚಾರಕ್ಕೆ ಹಾಕುತ್ತಿದಾನೆಂದು ತಿಳಿದುಕೊಂಡಾರು ಎಂದು ನಾಚಿಕೆ. ಯಾವ ಕೆಲಸವನ್ನು ಮಾಡಿದರೂ ಅದನ್ನು ತಪ್ಪಾಗಿ ಎಣಿಸುವುದು ಜನರಿಗೆ

ಸಾಧ್ಯ. ಈಗ ತಾನು ಈ ಹೆಂಗಸನ್ನು ಹೋಗಿ ಮಾತನಾಡಿಸಿದ್ದೂ, ಅವಳಿಗೆ ಟಿಕೆಟ್ಟನ್ನು ತೆಗೆದುಕೊಟ್ಟದ್ದೂ ನೋಡುವವರಿಗೆ ಏನಾಗಿ ಕಂಡಿರಬಹುದು? ಇನ್ನು ಇವಳನ್ನು ಮಯಿಳೂರಿನಲ್ಲಿ ಮನೆಯತನಕ ಕರೆದುಕೊಂಡುಹೋಗಿ ಬಿಡಬೇಕಾಗುವುದೇನೋ? ಅಂತೂ ಒಳ್ಳೆಯ ತಂಟೆಗೆ ಸಿಕ್ಕಿದ ಹಾಗಾಯಿತು, ಎಂದು ಅವನು ಸ್ವಲ್ಪ ಚಿಂತೆ ಯಲ್ಲಿದ್ದನು.

ಇವನೊಬ್ಬ ಹುಚ್ಚ ಎನ್ನುವಿರಾ? ಹುಚ್ಚೋ ಹೌದು, ಪಾಠಕ ಮಹಾಶಯ. ಶ್ರೀನಿವಾಸಯ್ಯನಿಗೆ ನವೀನಕಾಲದ ತಿಳಿವಿನ ಅಂಶ ವಾದ ನಾಣಿಲಿತನ ಇಲ್ಲದೆ ಹೋಗಿತ್ತು. ಅವನಿಗೂ ಅವನ ತರದ ಜನರಿಗೂ ಲಕ್ಷ್ಮಣನು ತನ್ನ ಅತ್ತಿಗೆಯನ್ನು ಅವಳ ಅಂದಿಗೆಯಿಂದ ಗುರುತಿಸುತ್ತಿದ್ದನೆಂಬುದು ಬರಿಯ ಕಥೆಯಮಾತಲ್ಲ, ಜೀವನಪಥದಲ್ಲಿ ಅನುಸರಣೀಯವಾದ ಶಾಸನದ ಮಾತಾಗಿರುತ್ತದೆ. ಎಷ್ಟರಮಟ್ಟಿಗೆ ಅವನಿಗೆ ಈ ಹುಚ್ಚು ಎನ್ನುವಿರಿ? ಇವನ ಈ ನಡತೆಯಿಂದ ಪೋಲೀಸಿನವರು ಇವನಿಗೆ ಟರ್ನ್‌ಚನ್ ನಿಲ್ಲುವುದನ್ನು ಬಿಟ್ಟುಬಿಟ್ಟಿದ್ದರು. ಒಂದು ದಿನ ಇವನು ಪಕ್ಕದಲ್ಲಿ ಹೋದಾಗ ಕುಪ್ಪಣ್ಣ—ಪಳಗಿದ ಕಾನ್‌ಸ್ಟೆಬಲ್ಲು—ಟರ್ನ್‌ಚನ್ ನಿಲ್ಲದೆ ಸುಮ್ಮನಿದ್ದ. ಹುಚ್ಚಣ್ಣ—ಹೊಸ ಕಾನ್‌ಸ್ಟೆಬಲ್ಲು—"ಇದೇನಯ್ಯಾ, ಟರ್ನ್‌ಚನ್ ನಿಲ್ಲಲಿಲ್ಲ?" ಎಂದ. ಕುಪ್ಪಣ್ಣ, "ಯಾರಿಗೆ? ಇವನಿಗೆ?—ಯಾಕೆ ಟರ್ನ್‌ಚನ್?" ಎಂದ. ಹುಚ್ಚಣ್ಣ, "ಸೂಟ್ ಚಂದಾಗದೆ, ಕೋರು ರುಮಾಲು," ಎಂದ. ಕುಪ್ಪಣ್ಣ, "ಬೀದೀಲಿ ಹೋಗೋ ಹೆಂಗಸಿನ ಮುಖ ನೋಡೋದಿಲ್ಲ ಇವನು. ಇವ ಏನು ದೊಡ್ಡಮನುಷ್ಯ?" ಎಂದ. ಅವರವರ ದೇವರು ಅವರವರಿಗೆ. ಇಂತಹ ಹುಚ್ಚನಾದ್ದರಿಂದಲೇ ಶ್ರೀನಿವಾಸಯ್ಯನಿಗೆ ಈ ಸಮಯದಲ್ಲಿ ಚಿಂತೆ. ನೀವು ಯಾರಾದರೂ ಆಗಿದ್ದರೆ ನಿಮಗೇನೂ ಚಿಂತೆ ಇರುತ್ತಿರಲಿಲ್ಲವೆನ್ನುವಿರೇನೋ? ನೀವು ಅವನಂತೆ ಹುಚ್ಚರಲ್ಲ, ಬುದ್ಧಿವಂತರು, ಎಂದು ಹೇಳಿದ ಹಾಗಾಯಿತು, ಅಷ್ಟೇ! ಇದು ತಿಳಿದೇ ಇದೆ. ಆದರಲ್ಲಿ ಆಶ್ಚರ್ಯವೇನು?

ಇವರಿಬ್ಬರ ಮಾತೂ ಹೀಗಾದ ಮೇಲೆ ಹೆಂಗಸಿನ ಮನಸ್ಸಿನಲ್ಲಿ ಅಸಮಾಧಾನವೂ ನಿರೀಕ್ಷೆಯೂ ಎಂದು ಮೊದಲೇ ಹೇಳಿದೇವೆ. ಅಸಮಾಧಾನವೇಕೆ, ನಿರೀಕ್ಷೆಯೇಕೆ, ಎಂದು ಮುಂದಕ್ಕೆ ತಿಳಿಯುತ್ತದೆ.

ಹೀಗೆ ಸ್ವಲ್ಪ ಹೊತ್ತು ಪ್ರಯಾಣಮಾಡಲು ದಾರಿಮುಗಿದು ಮಯಿಳೂರು ಸ್ಟೇಷನ್ ಬಂತು. ಶ್ರೀನಿವಾಸಯ್ಯ, ತನ್ನ ಸಾಮಾನನ್ನು ಜವಾನನ ವಶಕ್ಕೆ ಕೊಟ್ಟು ಹೋಗಿ ಹೆಂಗಸಿಗೆ ಒಂದು ಗಾಡಿಯನ್ನು ಮಾಡಿಕೊಟ್ಟು ಅವಳಕಡೆಯವರು ಯಾರಾದರೂ ಬಂದಿದ್ದರೆ ಅವರನ್ನು ಅವಳಿಗೆ ಜೊತೆಮಾಡಿ ಕಳುಹಿಸುವುದು, ಇಲ್ಲದೆ ಇದ್ದರೆ ತಾನು ಜೊತೆಗೆ ಹೋಗುವುದು, ಇನ್ನೇನು ಮಾಡುವುದಕ್ಕಾಗುತ್ತದೆ, ಎಂದು ಮನಸ್ಸು ಮಾಡಿಕೊಂಡು ಗಾಡಿಯಿಂದ ಇಳಿದನು. ಆಗ ತನ್ನ ಜವಾನನು ಇನ್ನೂ ಬಂದಿರಲಿಲ್ಲ. ಜನದ ಗುಂಪೋ ಬಹಳ ಗುಂಪು. ಅದರ ಮೇಲೆ ಸುತ್ತಲೂ ನೋಡಿ ತನ್ನ ಕಡೆಯವನನ್ನು ಗುರುತುಹಿಡಿದು ಸಾಮಾನನ್ನು ನೋಡಿಕೋ ಎಂದು ಹೇಳಿ ಪಕ್ಕದ ಕಂಪಾರ್ಟಮೆಂಟಿಗೆ ಹೋಗಿ ನೋಡಿದನು. ಅಲ್ಲಿ ಹೆಂಗಸು ಇರಲಿಲ್ಲ.

ಆಕ್ಷಣದಲ್ಲಿ ಶ್ರೀನಿವಾಸಯ್ಯ ಒಳ್ಳೆಯದಾಯಿತೆಂದುಕೊಂಡನು. ಉತ್ತರಕ್ಷಣದಲ್ಲಿ ಅವಳು ಎಲ್ಲಿಹೋದಳೋ ಏನಾದಳೋ ಏನು ತೊಂದರೆಪಟ್ಟಳೋ ಎಂದು ವ್ಯಾಕುಲದಿಂದ ಸುತ್ತಲೂ ನೋಡಿದನು. ಅವಳು ಕಣ್ಣಿಗೆ ಬೀಳಲಿಲ್ಲ. ಕೊನೆಗೆ ಅವಳ ಜನ ಯಾರಾದರೂ ಬಂದಿರ ಬೇಕು, ಹೊರಟು ಹೋಗಿದ್ದಾಳೆ, ಎಂದು ಧೈರ್ಯಮಾಡಿಕೊಂಡು ಮನೆಗೆ ಹೋದನು.

ಮನೆಗೆ ಹೋದ ಮೇಲೆ ಹೆಂಡತಿ ಮಕ್ಕಳು ತಾಯಿ ಇವರ ಸಂಗಡ ಮಾತನಾಡುತ್ತ ಇರುವುದರಲ್ಲಿ ಶ್ರೀನಿವಾಸಯ್ಯನಿಗೆ ಇವಳ ವಿಷಯ ಚಿಂತೆ ಕಡಮೆಯಾಯಿತು. ಆದರೂ ಅವಳ ಜ್ಞಾಪಕ ಬಂದಾಗ, ಎಲ್ಲಿ ಹೋದಳೋ ಏನಾದಳೋ, ಅವಳು ಯಾರೋ, ಎಂದು ಸ್ವಲ್ಪ ಮನಸ್ಸಿಗೆ ಯೋಚನೆಯಾಗುತ್ತಿತ್ತು.

ರಾತ್ರಿ ಎಂಟುಗಂಟೆ. ಶ್ರೀನಿವಾಸಯ್ಯ ಊಟ ಮುಗಿಸಿಕೊಂಡು, ಎಲೆ ಅಡಕೆ ಹಾಕಿಕೊಳ್ಳುತ್ತ ತನ್ನ ಮನೆಯ ಹಾಲಲ್ಲಿ ಕುಳಿತುಕೊಂಡಿ

ದ್ದನು. ಜವಾನನು ಒಳಗೆಬಂದು "ಯಾರೋ ತಮ್ಮನ್ನು ಕರೆಯು ತಾರೆ" ಎಂದನು. ಒಳಗೆ ಬರಹೇಳು ಎಂದದ್ದಕ್ಕೆ "ತಮ್ಮನ್ನು ಎಲ್ಲಿಗೋ ಕರೆದುಕೊಂಡು ಹೋಗಬೇಕಂತೆ, ಯಾರೋ ಹೇಳಿ ಕಳುಹಿಸಿದ್ದಾರೆ" ಎಂದನು. ಶ್ರೀನಿವಾಸಯ್ಯ ಹೊರಗೆ ಹೋಗಿ ನೋಡಿದನು. ಒಬ್ಬ ಹುಡುಗ— ಹುಡುಗನೇನು, ಮುಖದ ಮೇಲೆ ವಯಸ್ಸಿನ ಚಿಹ್ನೆಗಳಿಲ್ಲ ದಿದ್ದರೂ ಮುಖವು ವಯಸ್ಸಾದ ಮುಖವಾಗಿದ್ದಿತು— ನಮಸ್ಕಾರಮಾಡಿ, "ತಮ್ಮನ್ನು ಕರಕೊಂಡು ಬರಹೇಳಿದರು" ಎಂದನು. ಶ್ರೀನಿವಾಸಯ್ಯ, "ಯಾರು, ಕರೆದುಕೊಂಡು ಬರಹೇಳಿದರು?" ಎಂದನು. ಹುಡುಗನು ಶ್ರೀನಿವಾಸಯ್ಯನ ಮುಖವನ್ನು ಬಾಯಿಬಿಟ್ಟು ಕಣ್ಣುಬಿಟ್ಟು ನೋಡಿ, ಹತ್ತಿರನಿಂತಿದ್ದ ಜವಾನನ್ನು ದೃಷ್ಟಿಸಿ, ಹೇಳುವುದೇ ಬಿಡುವುದೇ ಎಂದು ತೋರದಂತೆ ಪುನಃ ಶ್ರೀನಿವಾಸಯ್ಯನ ಕಡೆಗೆ ನೋಡುತ್ತ, ಕಣ್ಣನ್ನು ಸ್ವಲ್ಪ ಮಿಟಕಿಸಿ ಸ್ವಲ್ಪ ಧ್ವನಿಯನ್ನು ತಗ್ಗಿಸಿ, "ಅವರು," ಎಂದನು.

ಹುಡುಗ ದಡ್ಡನೆಂಬ ವಿಷಯವಲ್ಲದೆ ಶ್ರೀನಿವಾಸಯ್ಯನಿಗೆ ಈ ಆಟ ದಿಂದ ಇನ್ನೇನೂ ತಿಳಿಯಲಿಲ್ಲ. ಅವನು, "ಯಾರಯ್ಯ, ಅವರು?" ಎಂದನು. ಹುಡುಗ, "ಯಾರೆಂದರೆ! ಯಾರೋ ಒಬ್ಬರು. ಕರಕೊಂಡುಬಾ ಎಂದರು," ಎಂದನು. "ಯಾರನ್ನಯ್ಯ ಕರಕೊಂಡು ಬರಹೇಳಿದರು?" "ತಮ್ಮನ್ನೇ, ಕನ್ಸೆಟ್ರನ್ನ. ಸ್ವಲ್ಪ ಮುಳ್ಳುಮುಖ ಎಂತ ಹೇಳಿದರು. ಅವರು ಹೇಳಿದ್ದೂ ಮುಳ್ಳುಮುಖ, ತಮ್ಮ ಮುಖವೂ ಮುಳ್ಳುಮುಖ." ಇದೇಕೋ ವರ್ಣನೆ ಬಹಳ ತಪಶೀಲಿಗೆಬಂತು, ಈ ದಡ್ಡನ ಸಂಗಡ ಏನುಮಾತು, ಎಂದು ಶ್ರೀನಿವಾಸಯ್ಯ, "ನಿನ್ನನ್ನು ಕಳುಹಿಸಿದವರು ಯಾರು, ಹೇಳಿದರೆ ಬರುತ್ತೇನೆ. ಇಲ್ಲದಿದ್ದರೆ ಹೋಗು," ಎಂದನು. ಹುಡುಗ ಪುನಃ ಸುತ್ತುಮುತ್ತಲೂ ನೋಡಿ ಬಾಯಿಗೆ ಕೈಯನ್ನು ಸ್ವಲ್ಪ ಅಡ್ಡಮಾಡಿಕೊಂಡು ಶ್ರೀನಿವಾಸಯ್ಯನ ಹತ್ತಿರ ಬಂದು ಕಿವಿಯಲ್ಲಿ, "ಮಧ್ಯಾಹ್ನ— ರೈಲು— ನಗ" ಎಂದು ಮಾತನ್ನು ನಿಲ್ಲಿಸಿ, "ತಿಳಿಯಿತೋ ಇಲ್ಲವೋ," ಎಂದು ಕಣ್ಣನ್ನು ಮಿಟಕಿಸಿದನು.

ಶ್ರೀನಿವಾಸಯ್ಯ, ಹುಡುಗನು ತನಗಾಗಿ ಬಂದಿರುವುದೇನೋ ನಿಜ, ಆದರೆ ಹೇಳಿಕಳುಹಿಸುವವರು ಸ್ವಲ್ಪ ಬುದ್ಧಿ ಇರುವ ಹುಡುಗನ ಕೈಲಿ

ಹೇಳಿಕಳುಹಿಸಬಾರದಾಗಿತ್ತೆ, ಈ ನಾಟಕದ ದಡ್ಡ ಆಟ ಆಡುತ್ತಾನೆ, ಮಾತನಾಡಲೊಲ್ಲ, ಎಂದುಕೊಂಡು "ಮಧ್ಯಾಹ್ನ ನಾನು ಟಿಕೆಟ್ಟು ತೆಗೆದುಕೊಟ್ಟೆನಲ್ಲ ಆಕೆಯೇನೋ?" ಎಂದನು. ಹುಡುಗ "ಆ! ವಂತಕಾರಿ ನಮ್ಮಪ್ಪ. ತಿಳಿದೂ ತಿಳಿದೂ ನನ್ನ ಯಾಕೆ ಕೇಳುವುದು?" ಎಂದನು. ಶ್ರೀನಿವಾಸಯ್ಯ ಆ ಹೆಂಗಸಿನ ವಿಷಯವನ್ನು ಚಿಂತಿಸುತ್ತಿದ್ದ ನಾದ್ದರಿಂದ ಅಂಗಿ ರುಮಾಲನ್ನು ಹಾಕಿಕೊಂಡು, ನಡೆ, ಎಂದು ಅವನ ಜೊತೆಗೆ ಹೊರಟನು. ದಾರಿಯಲ್ಲಿ ಒಂದು ಗಾಡಿಯನ್ನು ಮಾಡಿಕೊಂಡು ಒಂದು ಮೈಲಿದೂರ ಹುಡುಗ ಹೇಳಿದಕಡೆ ಹೊಡೆಸಿಕೊಂಡು ಹೋಗಲು, ಒಂದು ಸಣ್ಣ ಬೀದಿಯಲ್ಲಿ ಒಂದು ಮುಹಡಿಯ ಮನೆ, ಅದರ ಎದುರಿಗೆ ಬಂದರು. ಹುಡುಗನು ಅಲ್ಲಿ ಇಳಿದು, ಬನ್ನಿ, ಎಂದು ಹೇಳಿ ಮನೆಯೊಳಗೆ ಹೊಕ್ಕನು.

ಶ್ರೀನಿವಾಸಯ್ಯ ಹುಡುಗನ ಜೊತೆಯಲ್ಲಿ ಮುಂದಿನ ಪಡಸಾಲೆ ಯನ್ನು ಪ್ರವೇಶಿಸಿ ಅಲ್ಲಿಂದ ಕೆಲವು ಮೆಟ್ಟಲುಗಳನ್ನೇರಿ ಮುಹಡಿಯ ಮೇಲಿನ ಹಾಲನ್ನು ಸೇರಿದನು. ಹುಡುಗನು ಅವನನ್ನು ಅಲ್ಲಿಬಿಟ್ಟು ಕೂತುಕೊಳ್ಳಿ ಎಂದು ಹೇಳಿ ಹೊರಟುಹೋದನು.

ಶ್ರೀನಿವಾಸಯ್ಯ ಒಂದೆರಡು ನಿಮಿಷ ಒಬ್ಬನೇ ಕುಳಿತಿದ್ದನು. ಸುಸಜ್ಜಿತವಾದ ಹಾಲು; ಸೋಫಾ, ಕುರ್ಚಿ, ಮೇಜು; ಕುರ್ಚಿಯ ಮೇಲೆ ಹುಲಿಯ ಚರ್ಮ, ಮೇಜಿನ ಮೇಲೆ ಬನಾತಿನ ಬಟ್ಟೆ. ಅವನು ಇವರು ಒಳ್ಳೆ ನೆಮ್ಮದಿವಂತರು ಎಂದುಕೊಂಡನು. ಅಷ್ಟರಲ್ಲಿ ಚೆನ್ನಾಗಿ ಅಲಂಕಾರಮಾಡಿಕೊಂಡಿದ್ದ ಒಬ್ಬ ಸ್ತ್ರೀ ಪಕ್ಕದ ಒಂದು ಬಾಗಿಲಿನಿಂದ ಹಾಲಿನೊಳಕ್ಕೆ ಬಂದಳು.

ಅವಳನ್ನು ಬಾಗಿಲಲ್ಲಿ ಕಾಣುತ್ತಲೇ ಆಕೆ ಮಧ್ಯಾಹ್ನ ತಾನು ಟಿಕೆಟ್ಟು ತೆಗೆದುಕೊಟ್ಟ ಹೆಂಗಸು ಎಂದು ಶ್ರೀನಿವಾಸಯ್ಯನಿಗೆ ತಿಳಿಯಿತು. ಅಲಂಕಾರದ ರೀತಿಯನ್ನು ನೋಡಿ ಅವನ ಅಸಂಸ್ಕೃತವಾದ ಬುದ್ಧಿಗೂ ಸಂದೇಹ ತಟ್ಟಿತು.

ಹೆಂಗಸು ಬಂದು ಸ್ವಲ್ಪ ದೂರದಲ್ಲಿ ಕುರ್ಚಿಯ ಮೇಲೆ ಕುಳಿತು, "ನನ್ನ ಧೈರ್ಯವನ್ನು ನೋಡಿ ತಮಗೆ ಅಸಮಾಧಾನವಿರಬಹುದು,"

ಎಂದಳು. ಶ್ರೀನಿವಾಸಯ್ಯನಿಗೆ ಏನೂ ತೋಚಲಿಲ್ಲ. ಹೆಂಗಸು ಹೆದರಿದರೆ ಗಂಡಸು ಧೈರ್ಯ ಹೇಳಬಹುದು. ಹೆಂಗಸು ಧೈರ್ಯಮಾಡಿದರೆ ಗಂಡಸಿನ ಪಾಡು ನಾಯಿಪಾಡು. ಏನಾದರೂ ಹೇಳಬೇಕಲ್ಲಾ ಎಂದು ಅವನು "ರೈಲಿಳಿದು ನಾನು ನಿಮ್ಮನ್ನು ಹುಡುಕಿದೆ. ನೀವು ಸ್ಟೇಷನಿನಲ್ಲಿ ಎಲ್ಲೂ ಕಾಣಲಿಲ್ಲ. ನಿಮ್ಮವರಾರಾದರೂ ಬಂದು ಕರೆದುಕೊಂಡು ಬಂದಿರಬೇಕೆಂದು ಕಾಣುತ್ತದೆ" ಎಂದನು.

ಹೆಂಗಸು, "ಹೌದು ತಮಗೆ ಹೇಳದೆ ಬಂದದ್ದರಿಂದಲೇ ಈಗ ನಾನು ಹೇಳಿಕಳುಹಿಸಿದ್ದು" ಎಂದು, ಮನಸ್ಸಿನಲ್ಲಿ, "ಈಗ ಹೇಳಿಕಳು ಹಿಸುವುದಕ್ಕೋಸ್ಕರವೇ ಆಗ ಹೇಳದೆ ಬಂದದ್ದು," ಎಂದುಕೊಂಡಳು.

"ಈಗ ಹೇಳಿಕಳುಹಿಸಿದ್ದು ಏನು?" ಎಂದು ಶ್ರೀನಿವಾಸಯ್ಯ ಕೇಳಿದನು.

ಹೆಂಗಸು, "ತಾವು ನನಗಾಗಿ ಪಟ್ಟ ಕಷ್ಟಕ್ಕೆ ನನ್ನ ವಂದನೆಗಳನ್ನು ತಿಳಿಸುವುದಕ್ಕೋಸ್ಕರ," ಎಂದಳು.

ಶ್ರೀನಿವಾಸಯ್ಯ "ಅದೇನೂ ಅವಶ್ಯಕವಿರಲಿಲ್ಲ. ನೀವು ಬಂದು ಸುಖವಾಗಿ ಮನೆ ಸೇರಿದ್ದೆಲ್ಲಾ ಒಂದು. ಆದರೆ ಜೊತೆಗೆ ಯಾರೂ ಇಲ್ಲದೆ ನೀವು ರೈಲಿನಲ್ಲಿ ಪ್ರಯಾಣಮಾಡಲು ಕಾರಣವೇನೋ ತಿಳಿಯ ಲಿಲ್ಲ" ಎಂದನು.

"ನನ್ನ ಜೊತೆಗೆ ಇದ್ದರು. ಅವರೊಡನೆ ನಮ್ಮ ಮನೆಗೆ ಬಂದದ್ದು," ಎಂದು ಹೆಂಗಸು ಹೇಳಿದಳು.

"ನಾನು ಕೇಳಿದಾಗ ಯಾರೂ ಇಲ್ಲವೆಂದು ಹೇಳಿದಿರಲ್ಲ?"

"ತಾವೇ ಇದ್ದೀರೆಂದು ಹೇಳೋಣವೆಂದುಕೊಂಡೆ. ಅಷ್ಟರಲ್ಲಿ ಏನೋ ಸುಮ್ಮನೆ, ಯಾರೂ ಇಲ್ಲ. ಎಂದು ಹೇಳಿದೆ," ಎಂದು ಹೆಂಗಸು ಶ್ರೀನಿವಾಸಯ್ಯನ ಕಡೆ ಪ್ರಣಯ—ವೇಶ್ಯಾಪ್ರಣಯ—ಕಟಾಕ್ಷವನ್ನು ಬೀರಿದಳು.

ಶ್ರೀನಿವಾಸಯ್ಯನಿಗೆ ತಾನು ಮಾಡಿದ್ದ ತಪ್ಪೆಲ್ಲವೂ ತಿಳಿದಹಾಗಾ ಯಿತು. ಸ್ವಲ್ಪ ಮಾತ್ರ ಇನ್ನೂ ಸಂದೇಹ. ಆದರೆ ನೀನು ವೇಶ್ಯೆಯೇ ಎಂದು ಹೇಗೆ ಕೇಳುವುದು? ಸ್ವಲ್ಪ ಸುಮ್ಮನಿದ್ದು,

"ಹಾಗಾದರೆ ನಾನು ಮಧ್ಯಾಹ್ನ ಮಾಡಿದ್ದು ನಿಮಗೇನೂ ಉಪಕಾರ ಮಾಡಿದಂತಾಗಲಿಲ್ಲ," ಎಂದನು.

ಸ್ತ್ರೀ ನಕ್ಕಳು. ನಕ್ಕು, "ನಿಜ, ಆದರೆ ನಾನು ತಮ್ಮ ಸೇವೆಮಾಡ ಬಹುದಾದರೆ ನನಗೆ ತಾವು ಪರಮೋಪಕಾರ ಮಾಡಿದಂತಾಯಿತು," ಎಂದಳು.

ಶ್ರೀನಿವಾಸಯ್ಯ, "ನನಗೆ ತಿಳಿಯಲಿಲ್ಲ. ಇತರರು ತೊಂದರೆ ಕೊಟ್ಟಾರು ಎಂದು ಸಹಾಯಕ್ಕಾಗಿ ಬಂದೆ. ಮತ್ತೆ ಯಾವ ಅಭಿಪ್ರಾಯ ದಿಂದಲೂ ಬಂದವನಲ್ಲ," ಎಂದನು.

ಹೆಂಗಸು, "ಹಾಗಾದರೆ ಅದು ನನ್ನ ದುರದೃಷ್ಟ. ತಮ್ಮಂತಹವರ ಸೇವೆ ನಮಗೆ ದುರ್ಲಭ," ಎಂದಳು.

"ಈ ಮನೆ ಒಳ್ಳೆಯ ಮಹಡಿಯಮನೆ, ನೀವು ನೆಮ್ಮದಿ ಯಾಗಿದ್ದೀರಿ."

"ಅವರಿವರು ತಂದುಕೊಟ್ಟದ್ದು. ಅವರಿವರ ಉಪಯೋಗಕ್ಕಾಗಿ ಅಲಂಕಾರ ಮಾಡಿಕೊಳ್ಳುತ್ತೇವೆ. ಅವರಿವರ ಉಪಯೋಗಕ್ಕಾಗಿ ಮನೆ ಯನ್ನು ಸೊಗಸು ಮಾಡುತ್ತೇವೆ."

ಶ್ರೀನಿವಾಸಯ್ಯ, "ಅದೂ ನಿಜ" ಎಂದು ಹೇಳಿ ಮುಖವನ್ನು ಸ್ವಲ್ಪ ದೃಷ್ಟಿಸಿ ನೋಡಿ, "ಇನ್ನು ನಾನು ಬರುತ್ತೇನೆ," ಎಂದು ಎದ್ದನು.

ಶ್ರೀನಿವಾಸಯ್ಯ ಅವಳ ಮುಖವನ್ನು ದೃಷ್ಟಿಸಿ ನೋಡಿದ್ದಕ್ಕೆ ಕಾರಣವೇನೆಂದರೆ ಅವಳ ಮುಖ ಯಾರ ಮುಖವನ್ನೋ ಅವನ ಮನಸ್ಸಿಗೆ ಜ್ಞಾಪಕಕ್ಕೆ ತರುತ್ತಿತ್ತು. ಮಧ್ಯಾಹ್ನವೂ ಹಾಗೆಯೇ ತೋರಿತ್ತು. ಆದರೆ ಆಗ ಅವಳನ್ನು ಸರಿಯಾಗಿ ನೋಡಲಿಲ್ಲ. ಈಗ ಹತ್ತಿರದಿಂದ ನೋಡಿದ್ದರಲ್ಲಿ ಯಾವುದೋ ಚೆನ್ನಾಗಿ ತಿಳಿದ ಮುಖದಂತೆ ತೋರಿತು. ಇಂಥವರದೆಂದು ತಿಳಿಯಲಿಲ್ಲ. ಅದಕ್ಕೆ, ಯಾರದಿರಬಹುದು ಎಂದು ದೃಷ್ಟಿಸಿ ನೋಡಿದನು. ಇವನು ಹೀಗೆ ನೋಡಿದ್ದನ್ನು ಸ್ತ್ರೀ ಬೇರೆ ಕಾರಣ ದಿಂದಲೆಂದು ತಿಳಿದು,

"ಸ್ವಾಮಿ, ನಾನು ವಯಸ್ಸಾದವಳೇ ಸರಿ. ನನ್ನ ಮಗಳಿದ್ದಾಳೆ, ಅವಳಿಂದ ಶುಶ್ರೂಷೆಯನ್ನು ಕೈಗೊಳ್ಳಬಹುದು," ಎಂದಳು.

ಶ್ರೀನಿವಾಸಯ್ಯ, "ನಾನು ಇಲ್ಲಿ ಬರಬಾರದಾಗಿತ್ತು. ನಾನು ಅದಕ್ಕೋಸ್ಕರ ನೋಡಲಿಲ್ಲ," ಎಂದನು. ಹೀಗೆಂದು ಅವನು ಜೇಬಿನಿಂದ ಒಂದು ನೋಟನ್ನು ತೆಗೆದು, "ನಾನು ಅಡ್ಡಿ ಬಾರದೇ ಇದ್ದಿದ್ದರೆ ಮತ್ತೆ ಯಾರಾದರೂ ನಿಮ್ಮ ಸಂಗಡ ಬರುತ್ತಿದ್ದರು. ನಾನು ಬಂದು ನಿಮಗೆ ಪ್ರಯೋಜನವಿಲ್ಲದೆ ಹೋಯಿತು," ಎಂದು ಅದನ್ನು ಅವಳಿಗೆ ಕೊಡ ಹೋದನು.

ಸ್ತ್ರೀ, "ಸ್ವಾಮಿ, ನನಗೆ ಹಣ ಬೇಕಾಗಿಲ್ಲ. ತಾವು ನಮ್ಮ ಸೇವೆಯನ್ನು ಸ್ವೀಕರಿಸಿದರೆ ನಾವು ಧನ್ಯರು. ಅಲ್ಲದೆ, ಇಲ್ಲಿರುವ ಐಶ್ವರ್ಯವೆಲ್ಲ ನಿಮ್ಮದೂ ಹೌದು," ಎಂದಳು.

ಸ್ತ್ರೀ ಒಂದು ಕೊಟಡಿಯೊಳಕ್ಕೆ ಹೋಗಿ ಒಂದು ಫೋಟೋವನ್ನು ತಂದಳು. ಶ್ರೀನಿವಾಸಯ್ಯನ ಮನಸ್ಸಿನಲ್ಲಿ ಏನೋ ಭಯ ಹುಟ್ಟಿತು.

ಸ್ತ್ರೀ ಫೋಟೋವನ್ನು ತಂದು ಅವನೆದುರಿಗೆ ಹಿಡಿದಳು. ಅದರಲ್ಲಿದ್ದ ಚಿತ್ರ ಅವನ ತಂದೆಯದು.

ಕ್ಷಣ ಬಿಟ್ಟು ಅವಳು, "ಇವರು ನಮ್ಮ ತಾಯನ್ನು ಉದ್ಧಾರ ಮಾಡಿದರು. ತಾವು ನನ್ನನ್ನು ಉದ್ಧಾರಮಾಡಿ," ಎಂದು ಶ್ರೀನಿವಾಸಯ್ಯನ ಕಾಲಿಗೆ ಬಿದ್ದಳು.

ಶ್ರೀನಿವಾಸಯ್ಯ ದೂರ ಸರಿದನು.

ಸ್ತ್ರೀ ಅದನ್ನು ನೋಡಿ ಸ್ವಲ್ಪ ಅಸಮಾಧಾನದಲ್ಲಿ ಎದ್ದು, "ನಾನು ಪತಿತೆ, ತಾವು ನನ್ನನ್ನು ಮುಟ್ಟಲೂಬಾರದು," ಎಂದಳು.

ಶ್ರೀನಿವಾಸಯ್ಯ ಹತ್ತಿರ ಬಂದು ಅವಳನ್ನು ಕರೆದುಕೊಂಡು ಹೋಗಿ ಒಂದು ಕುರ್ಚಿಯ ಮೇಲೆ ಕುಳ್ಳಿರಿಸಿ, ಅವಳು ಪತಿತೆಯಾದದ್ದರಿಂದ ತಾನು ಅವಳನ್ನು ಮುಟ್ಟಕೂಡದೆಂಬ ಭಾವ ತನ್ನಲ್ಲಿಲ್ಲವೆಂದು ತೋರಿಸುವಂತೆ, ಅವಳ ಹಣೆಗೆ ಒಂದು ಮುತ್ತನ್ನು ಕೊಟ್ಟನು. ಸ್ತ್ರೀಯ ಮುಖ ಸಂತೋಷದಿಂದ ಕೂಡಿತು.

"ಇನ್ನು ನಾನು ಬರುತ್ತೇನೆ."

ಸ್ತ್ರೀ, "ಅಯ್ಯೋ? ಉಂ, ಹೋಗಲಿ. ನನ್ನಿಂದ ಏನನ್ನಾದರೂ ತೆಗೆದುಕೊಂಡು ಹೋಗಿ. ನನ್ನ ಗುರುತಾಗಿ ಇರಲಿ," ಎಂದು ಹೇಳಿದಳು.

ಶ್ರೀನಿವಾಸಯ್ಯ ಸ್ವಲ್ಪ ಯೋಚಿಸಿ ಅವಳಿಗೆ ಬೆಲೆಯಿಲ್ಲದ್ದೂ ತನಗೆ ಬೆಲೆಯುಳ್ಳದ್ದೂ ಆದ ಪದಾರ್ಥವನ್ನು ಕೇಳಬೇಕೆಂದು, "ಆ ಫೋಟೋವನ್ನು ನನಗೆ ಕೊಡುವೆಯಾ?" ಎಂದನು.

ಸ್ತ್ರೀ "ತೆಗೆದುಕೊಳ್ಳಿ. ಇನ್ನೇನಾದರೂ ಬೆಲೆಯ ಸಾಮಾನನ್ನು ಕೇಳಿ," ಎಂದಳು.

"ನನಗೊಂದೂ ಬೇಡ. ಅದನ್ನು ಕೊಡು ಸಾಕು," ಎಂದು ಶ್ರೀನಿವಾಸಯ್ಯ ಹೇಳಿದನು.

ಸ್ತ್ರೀ "ಹಾಗೇ ಆಗಲಿ. ನಿಮ್ಮ ಇಷ್ಟಕ್ಕೆ ತೋರಿದ್ದನ್ನು ತೆಗೆದುಕೊಂಡು ಹೋಗಬಹುದು," ಎಂದು, "ಇದೇನು, ನೀವು ಮೊದಲು ನನ್ನನ್ನು 'ನೀವು ನಿಮ್ಮ' ಎಂದು ಹೇಳಿ ಈಗ ಬಹು ಜಾಗ್ರತೆ 'ನೀನು, ಕೊಡು,' ಎಂದು ಹೇಳುತ್ತಿದ್ದೀರಿ," ಎಂದು ಕೇಳಿದಳು.

ಶ್ರೀನಿವಾಸಯ್ಯ ಫೋಟೋವನ್ನು ತೆಗೆದುಕೊಂಡು ಹೊರಡಲು ಸನ್ನದ್ಧನಾಗಿ "ನೀನು ನನ್ನ ತಂಗಿ; ನಿನ್ನಲ್ಲಿ ಮರ್ಯಾದೆಯೇ?" ಎಂದು ಹೊರಟನು.

ಹೆಂಗಸಿನ ಕಣ್ಣಲ್ಲಿ ನೀರು ಬಂತು. ಶ್ರೀನಿವಾಸಯ್ಯ ಹೊರಟು ಹೋದಮೇಲೆ ಅವಳು ಇದ್ದಲ್ಲಿಯೇ ಕುಳಿತು ಕಯ್ಯಲ್ಲಿ ತಲೆಯನ್ನಿರಿಸಿ ಕೊಂಡು, "ತನ್ನ ತಂಗಿಯಂತೆ! ನನಗೆಲ್ಲಿ ಆ ಪುಣ್ಯ. ನನ್ನ ಹಣೆಯಲ್ಲಿ ಬರೆದದ್ದು ಇದು," ಎಂದು ಬಹಳವಾಗಿ ಚಿಂತೆಮಾಡುತ್ತಾ ಕದಲದೆ ಜೋಲುಮುಖ ಮಾಡಿಕೊಂಡಿದ್ದಳು.

ಶ್ರೀನಿವಾಸಯ್ಯ ಹೊರಗೆ ಹೋಗುವುದರಲ್ಲಿ ಮೊದಲು ಇವನನ್ನು ಕರೆತಂದ ಹುಡುಗ ಇವನನ್ನು ಸೇರಿದನು. ಪಡಸಾಲೆಯಲ್ಲಿ ಹೋಗುವಾಗ ಪೂರ್ಣಿಮೆಯ ಚಂದ್ರನಂತೆ ಸುಂದರ ಮುಖದ ಯುವತಿಯೊಬ್ಬಳು ಬಾಗಿಲಿಂದ ಶ್ರೀನಿವಾಸಯ್ಯನನ್ನು ಇಣಿಕಿ ನೋಡಿದಳು. ಆ ಕ್ಷಣದಲ್ಲಿ ಶ್ರೀನಿವಾಸಯ್ಯ, "ಕಮಲು ಇಲ್ಲಿ ಎಲ್ಲಿ ಬಂದಳು," ಎಂದುಕೊಂಡನು. ಕಮಲು ಅವನ ಮಗಳು. ಇಣಿಕಿನೋಡಿದವಳು ಮನೆಯವಳ ಮಗಳು. ಶ್ರೀನಿವಾಸಯ್ಯ ಉತ್ತರಕ್ಷಣದಲ್ಲಿ ಎಚ್ಚತ್ತು, "ಆಹಾ ಇದೇನು ಸೌಂದರ್ಯ, ಇದಕ್ಕೆ ಬಂದ ಗತಿಯೇನು," ಎಂದುಕೊಂಡನು. ಬೀದಿಗೆ

ಹೋಗುವಲ್ಲಿ ಜಟಕಾ ಅಲ್ಲಿಯೇ ನಿಂತಿತ್ತು. ಶ್ರೀನಿವಾಸಯ್ಯ ಜಟಕಾದಲ್ಲಿ ಕುಳಿತು, "ಬಿಡಯ್ಯಾ," ಎಂದನು. ಜಟಕಾದವನು ಗಾಡಿಯನ್ನು ತಿರುಗಿಸುವುದರಲ್ಲಿ ಅದನ್ನು ಸುರೆಯಿಂದ ಉಲ್ಲಾಸಗೊಂಡು ಅಸ್ಥಿರವಾದ ನಡೆಯಿಂದ ಬರುತ್ತಿದ್ದ ಒಬ್ಬ ಮನುಷ್ಯನ ಮೇಲೆ ಬಿಟ್ಟನು. ಮನುಷ್ಯನು, "ಯಾವನೋ ಅವನು ಗಾಡಿಯಲ್ಲಿ! ಬೇಕೂಫ್," ಎಂದನು. ಜಟಕಾದವನು ಜಗಳದಲ್ಲಿ ಗಾಡಿಯೊಳಗೆ ಇರುವವನನ್ನೂ ಸೇರಿಸಿಕೊಂಡರೆ ತನ್ನ ತಪ್ಪು ಮರೆಯಾಗುವುದೆಂದು, "ಬೇಕೂಫ್ ಗೀಕೂಫ್ ಎನ್ನಬೇಡ, ನಿನಗಿಂತ ನಮ್ಮ ಸ್ವಾಮಿದೇನೂ ಬೇಕೂಫ್ ಗಿರಿ ಕಡಮೆ ಇಲ್ಲ," ಎಂದನು. ಜಟಕಾದವನು ಮುಸಲ್ಮಾನ. 'ಹೆಚ್ಚಾಗಿಲ್ಲ' ಎಂದು ಹೇಳಬೇಕು. ಕನ್ನಡ ಬಾರದೆ 'ಕಡಮೆ ಇಲ್ಲ' ಎಂದನು. ತತ್ಕಾಲದ ಯಜಮಾನನ ಪರವಾಗಿ ಚಾತುರ್ಯಕ್ಕಿಂತ ಭಕ್ತಿ ಹೆಚ್ಚು.

ಸುರೆಯ ಸ್ವಾಧೀನದಲ್ಲಿದ್ದ ಮನುಷ್ಯನು ಸಾಹೇಬನ ಮೇಲೆ ಕೋಪದಿಂದ, "ಮುಚ್ಕೋ ಬಾಯಿ! ಕಡಮೆ ಇಲ್ಲ ಎನ್ನುತ್ತೀಯಾ? ಬಾ, ತೋರಿಸುತ್ತೇನೆ. ಕಡಮೆಯೋ ಹೆಚ್ಚೋ," ಎನ್ನುತ್ತ "ಯಾವನೋ ಅವನು ಒಳಗೆ? ಬಾ ತೋರಿಸುತ್ತೇನೆ ಕಡಮೆ ಅಂತ," ಎಂದು ಜಟಕಾದ ಹಿಂದುಗಡೆಯಿಂದ ಇಣಿಕಿ ನೋಡಿದನು. ಶ್ರೀನಿವಾಸಯ್ಯ ಬೀದಿಯ ದೀಪದ ಬೆಳಕಿನಿಂದ ಮನುಷ್ಯನನ್ನು ಗುರುತಿಸಿ, "ಬಿಡು ಸಾಹೇಬ್ ಗಾಡಿ," ಎಂದನು. ಗೆಣೆಯನೂ ಆ ವೇಳೆಗೆ ಶ್ರೀನಿವಾಸಯ್ಯನನ್ನು ಗುರುತಿಸಿ ಅವನನ್ನು, "ಎಲಾ ಬೊಡ್ಡೀ ಹೈದ, ಇಲ್ಲಿಗೂ ಬಂದ್ಯಾ," ಎಂದು ಬೈಯುತ್ತ ಹಿಂದಕ್ಕೆ ಸರಿದನು. ಜಟಕಾ ಮುಂದಕ್ಕೆ ಹೋಯಿತು.

ಶ್ರೀನಿವಾಸಯ್ಯನ ಮನಸ್ಸು ಅಂದು ನಡೆದ ವಿಷಯಗಳಿಂದೆಲ್ಲ ಕಲಕಿ ಹೋಗಿತ್ತು. ಅವನಿಗೆ, ತನ್ನ ತಂದೆ, ಮೊದಲು ತಮ್ಮೂರಲ್ಲಿದ್ದು ಆಮೇಲೆ ಮಯಿಳೂರನ್ನು ಸೇರಿದ ಒಬ್ಬ ವೇಶ್ಯೆಯಲ್ಲಿ ಸ್ನೇಹ ಇಟ್ಟು, ಪೂರ್ವಿಕರ ಆಸ್ತಿಯಲ್ಲಿ ಮೂರು ಪಾಲನ್ನು ಕಳೆದಿದ್ದನೆಂದೂ ಅದರಿಂದ ಅನೇಕ ವಿಧಗಳಲ್ಲಿ ಅವನಿಗೆ ಸಂಸಾರದಲ್ಲಿ ಸುಖವಿಲ್ಲದೆ ಹೋಗಿತ್ತೆಂದೂ ಗೊತ್ತಿತ್ತು. ಆದರೆ ಅದುವರೆಗೆ ತನ್ನ ತಂಗಿಯೊಬ್ಬಳು ವೇಶ್ಯೆಯಾಗಿದ್ದಳು

ಎಂದು ಅವನಿಗೆ ತೋರಿರಲಿಲ್ಲ. ತಂಗಿ ಹೇಗೆ? 'ತಂಗಿ' ಎಂದು ಯಾವ ಸಂಬಂಧಕ್ಕೆ ಹೇಳುತ್ತಾರೋ ಅದಕ್ಕೂ ಇದಕ್ಕೂ ವ್ಯತ್ಯಾಸವೇನು? ಒಡಹುಟ್ಟು ಬರುವುದು ಏತರಿಂದ? ಒಂದು ಪಿಂಡದ ಭಾಗವನ್ನು ಶರೀರದಲ್ಲಿ ಇಟ್ಟುಕೊಂಡಿರುವುದರಿಂದ. ತನ್ನ ತಂದೆಯ ಶರೀರದ ಅಂಶ ತನ್ನಲ್ಲಿ ಹೇಗೋ ಅವಳಲ್ಲೂ ಹಾಗೆಯೇ ಇತ್ತು. ಮನೆಯಲ್ಲಿ ಹುಟ್ಟಿದ್ದರೆ ಅವಳ ಜೀವನಪಥ ಶುದ್ಧವಾಗಿರುತ್ತಿತ್ತು. ಈಗ? ಶ್ರೀನಿವಾಸಯ್ಯನಿಗೆ ಅದನ್ನು ನೆನೆದುಕೊಂಡು ಮನಸ್ಸು ಬಹಳ ಕಂದಿತು. ತನ್ನ ತಂದೆ ಇದ್ದಿದ್ದರೆ ಅವನಿಗೆ ಹೀಗೇನಾದರೂ ತೋರುತಿತ್ತೆ ಎಂದು ಅವನು ಯೋಚಿಸಿದನು. ತೋರದೆ ಇದ್ದಿರಲಾರದು. ಹೇಗೆ ತೋರದೇ ಇದ್ದೀತು? ಯಾವುದಿಲ್ಲದಿದ್ದರೂ ಆ ಹೋಲಿಕೆ ಇತ್ತಲ್ಲ? ಅದರಿಂದ ಲಾದರೂ ಆ ಯೋಚನೆ ಬರುತ್ತಿದ್ದಿತು. ಹೋಗುವುದು ವೇಶ್ಯೆಯ ಮನೆಗೆ. ಮನೆಯಲ್ಲಿ, ನನ್ನ ಹೆಂಡತಿ ಒಳ್ಳೆಯವಳು ನನ್ನ ಹೆಣ್ಣುಮಕ್ಕಳು ಸತ್ಯವಂತರು, ಎಂದು ಜಂಬ. ಬಾಯಲ್ಲಿ ಜಂಬ. ಮನಸ್ಸಿನಲ್ಲೂ ಜಂಬ. ಬಾಯಜಂಬ ಹಾಗಿರಲಿ: ನಾವು ಬದುಕುವುದೇ ಬಾಯಜಂಬದಿಂದ. ಆ ಮನಸ್ಸಿನ ಜಂಬವೋ? ಅದೂ ಕೂಡ ನಮ್ಮ ಬದುಕಿಗೆ ಬೇಕಾಗಿದೆಯೋ? ಇಲ್ಲ. ಇದು ಮನುಷ್ಯನ ಅಜ್ಞಾನ ಹೊರತು ಬೇರೆಯಲ್ಲ. 'ಬೆಂಗಳೂರಲ್ಲಿ ಸತ್ಯವಂತನಾಗಿದ್ದರೆ ಸರಿ, ಮೈಸೂರಲ್ಲಿ ಕಳ್ಳನಾಗಿರಬಹುದು' ಎಂದರೆ ಹೇಗೆ ಹುಚ್ಚುಮಾತೋ ಹಾಗೆಯೇ ಮನೆಯ ಹೊರಗಡೆ ಇರುವ ಮಗಳು ವೇಶ್ಯೆಯಾದರೂ ಮನೆಯಲ್ಲಿರುವ ಮಗಳು ಸತ್ಯವಂತಳು ಎಂಬ ಈ ಜಂಬವೂ ಹುಚ್ಚು ಜಂಬ. ಆದರೆ ಈ ಯೋಚನೆ ವೇಶ್ಯೆಯ ವಾಟಿಗೆ ಹೋಗುವವರಿಗೆ ತಿಳಿಯುವುದಿಲ್ಲವಲ್ಲ ಎಂದು ಶ್ರೀನಿವಾಸಯ್ಯ ಬಹಳ ಖಿನ್ನನಾದನು. ಹೀಗೆ ಯೋಚನೆ ಮಾಡುತ್ತ ಮನೆಯನ್ನು ಸೇರಿದನು.

ಇಲ್ಲಿ ಸ್ತ್ರೀಯೂ ಖಿನ್ನಳಾಗಿ ಕುಳಿತಿದ್ದವಳು ಏಳದೆ ಹಾಗೆಯೇ ಇದ್ದಳು. ಶ್ರೀನಿವಾಸಯ್ಯನ ಸ್ಥೈರ್ಯವನ್ನು ನೋಡಿ ಅವಳಿಗೆ ಬಹಳ ಮೆಚ್ಚಿಕೆಯಾಯಿತು. ಅವಳು ಅವನನ್ನು ತನ್ನ ಅಣ್ಣನೆಂದು ಎಣಿಸುವುದು ಕೂಡ ಸ್ವಲ್ಪ ಸಾಧ್ಯವೆಂದು ಎಂದುಕೊಂಡಳು. ಇನ್ನೂ ಏನೇನನ್ನು

ಎಂದುಕೊಳ್ಳಬಹುದಾಗಿತ್ತೋ ಅಷ್ಟರಲ್ಲಿ ಹುಡುಗನು ಅದು ಯಾರನ್ನೋ ಒಳಗೆ ಕರೆತಂದನು. ಶ್ರೀನಿವಾಸಯ್ಯನೇ ಪುನಃ ಬಂದನೇನೋ, ಅಣ್ಣನಿಗೆ ಚೆನ್ನಾಗಿ ಒಂದು ಸಲ ನಮಸ್ಕಾರ ಮಾಡೋಣ, ಅವನ ಕಾಲುಧೂಳು ತನ್ನ ತಲೆಯಲ್ಲಿ ಸೇರಿ ಈ ಪಾಪಿ ದೇಹ ಪುನೀತವಾಗಲಿ, ಎಂದು ಹೆಂಗಸು ಎದ್ದಳು; ಬಂದವನು ಶ್ರೀನಿವಾಸಯ್ಯನಲ್ಲ, ನಮ್ಮ ಗೆಣೆಯ; ನೋಡಿ ಅವಳು ಸ್ವಲ್ಪ ಅಪ್ರತಿಭಳಾದಳು.

ಗೆಣೆಯನು ಬಹು ಹುಮ್ಮಸಿನ ಮೇಲೆ ಮೀಸೆಯನ್ನು ಹುರಿ ತಿರುಗಿಸುತ್ತ ಬಂದು ಕುರ್ಚಿಯಮೇಲೆ ಕುಳಿತುಕೊಂಡು "ನೋಡಿದ್ರೋ? ನಾನು ಬಿಟ್ಟೆನಾ? ಅವರಪ್ಪನಿಗೂ ಬಿಡೆ. ಆದರೆ ಬೊಡ್ಡೀ ಹೈದ! ಅವನಿಲ್ಲಿಗೂ ಬಂದಿದ್ದನೇನು? ಲ—ಮಗ" ಎಂದನು.

ಸ್ತ್ರೀಯ ಮುಖ ಈಗ ಪುನಃ ಎಂದಿನಂತೆ ನಗುಮುಖವಾಗಿತ್ತು. ಹತ್ತಿರ ಬಂದು, "ನೀನು ಯಾಕೆ ಬರಲಿಲ್ಲವೋ ಎಂದಿದ್ದೆ. ಅವನ ಮಾತು ಕಟ್ಟಿಕೊಂಡೇನು? ಬಾ. ಅವನೊಬ್ಬ ಹುಚ್ಚ," ಎಂದು ಅವನ ಕೈಯನ್ನು ಹಿಡಿದು ಕರೆದುಕೊಂಡು ಹೋದಳು. ಗೆಣೆಯನು ಜಯಲಕ್ಷ್ಮಿ ಯಿಂದ ಸ್ವೀಕೃತನಾದ ರಾಜನಂತೆ ತೋರುತ್ತಾ ಮೀಸೆಯನ್ನು ತಿದ್ದಿ ಕೊಳ್ಳುತ್ತಾ ನಿಲುಗನ್ನಡಿಯಲ್ಲಿ ತನ್ನ ಅಂದವನ್ನು ನೋಡಿಕೊಳ್ಳುತ್ತಾ ಅವಳ ಕೂಡ ಹೋದನು.

ಹುಡುಗನು, "ವಂತಕಾರಿ! ಅದೀಗ ಸೈ. ತಂಗಿಯಂತೆ ತಂಗಿ. ಛಟ್," ಎಂದುಕೊಂಡು ಹೊರಗೆ ಬಂದುಬಿಟ್ಟನು.

"ಅವನೊಬ್ಬ ಹುಚ್ಚ! ಅವನ ಕಾಲಿಗೆ ಬೀಳಬೇಕೆಂದಿದ್ದು ಒಂದು ಕ್ಷಣದಲ್ಲಿ ಅವನೊಬ್ಬ ಹುಚ್ಚ ಎಂದಳೆ? ಇದರಲ್ಲಿ ನಿಜವಾದ ಭಾವ ಯಾವುದು?" ಎನ್ನುವಿರಾ? ಎರಡೂ ನಿಜವಿರಬಾರದೇನು? ಬಹು ಹೊಳಪಾದ ಮಿಂಚನ್ನು ನೋಡಿದಾಗ ಕಣ್ಣು, "ಇಂದು ನಾನು ದಿವ್ಯ ಪ್ರಭೆಯನ್ನು ನೋಡಿದೆನು. ನಾನು ದೃಷ್ಟಿಯನ್ನು ಪಡೆದದ್ದು ಸಾರ್ಥಕ ವಾಯಿತು. ನನಗಿನ್ನೇನೂ ಬೇಕಿಲ್ಲ," ಎಂದು ಹೇಳುವುದೋ ಎಂಬಂತೆ ಆ ಕ್ಷಣದಲ್ಲಿ ದೃಷ್ಟಿ ಶಕ್ತಿಯನ್ನು ನೀಗುವುದು. ಒಂದು ಕ್ಷಣ ಮಾತ್ರ. ಪುನಃ ಸಾಮಾನ್ಯ ವಸ್ತುಗಳನ್ನೆಲ್ಲ ನೋಡಿ, ನೋಡಿದ ವಸ್ತುಗಳನ್ನು

ಗುರುತಿಸುತ್ತ, ತನ್ನ ಸಾಮಾನ್ಯ ಕರ್ಮವನ್ನು ಆಚರಿಸಲಾರಂಭಿಸುವುದು. ಮನಸ್ಸೂ ಹಾಗೆಯೇ. ಅಪೂರ್ವ ಗುಣವನ್ನು ಯಾವಾಗಲಾದರೂ ಕಂಡು ಮೋಹಗೊಳ್ಳುವುದು; ಒಂದು ನಿಮಿಷದ ಮೇಲೆ ಆ ಮೋಹದಿಂದ ನಿವೃತ್ತವಾಗುವುದು. ಎಂದೋ ಕಂಡ ಯಾವುದೋ ಸೊಗಸಿಗೆ ಎಂದೆಂದಿಗೂ ಮನಸೋಲಬೇಕೆಂಬುದು ಯಾವ ನ್ಯಾಯ? ಹಾಗಾಗುವುದಾದರೆ ವ್ಯವಹಾರ ಪ್ರಪಂಚ ಆಗ್ಗೆ ಕೊನೆಯಾಗುವುದು. ಆದುದರಿಂದ ಮನಸ್ಸು ಹಾಗೆ ಸೋಲದೆ ಇರುವುದನ್ನು ನಾವು ತಪ್ಪೆಂದು ಎಣಿಸಬಾರದು. ಪರಂತು ಗುಣವನ್ನು ಕಂಡಾಗ್ಗೆ ಅದನ್ನು ಗುರುತಿಸುವೆವಲ್ಲಾ ಅದಕ್ಕೆ ಎಷ್ಟು ಸಂತೋಷಪಟ್ಟರೂ ತೀರದು. ಮಾನವನ ಹೃದಯದ ಕಟ್ಟಡದಲ್ಲಿ ಗುಣವನ್ನು ಗುರುತಿಸುವ ಶಕ್ತಿ ಎಂದೆಂದಿಗೂ ಸ್ಥಿರವಾಗಿರಲಿ!" ಪಾಠಕಮಹಾಶಯ; ಅದಷ್ಟಕ್ಕೆ ನಾವು ಕೃತಜ್ಞರಾಗಿರೋಣ!

ನಾಗರತ್ನಸಾನಿ ಇಲ್ಲಿ ಗೆಣೆಯನನ್ನು ಶುಶ್ರೂಷೆಯಿಂದ ತಣಿಸುತ್ತಿದ್ದಾಗ ಶ್ರೀನಿವಾಸಯ್ಯ ಪತ್ನೀ ಸಮೇತನಾಗಿ ನಿದ್ರಿಸುತ್ತ, ನಾಗರತ್ನಳು ತನ್ನ ನಿಜವಾದ ತಂಗಿ ಎಂದೂ ಅವಳನ್ನು ತಾನು ಸಾಕಿ ಸಲಹಿ ಸತ್ಕುಲಪ್ರಸೂತನಾದ ಯುವಕನೊಬ್ಬನಿಗೆ ಕೊಟ್ಟು ಮದುವೆಮಾಡಿದನೆಂದೂ ಆ ಯುವಕನು ಅವಳನ್ನು ಕರೆದುಕೊಂಡು ಹೋಗುವುದಕ್ಕೆ ತನ್ನ ಮನೆಗೆ ಬಂದಿದ್ದನೆಂದೂ ಮೊದಲಾಗಿ ಸ್ವಪ್ನದಲ್ಲಿ ಕಂಡು ಸ್ವಲ್ಪ ಆನಂದವನ್ನು ಅನುಭವಮಾಡುತ್ತಿದ್ದನು.

# ಇಂದಿರೆಯೋ? ಅಲ್ಲವೊ?

ನಾರಾಯಣಮೂರ್ತಿಗೆ ಸಂಸಾರದಲ್ಲಿ ಸುಖವಿರಲಿಲ್ಲ. ಮನೆಯ ಹೊರಗೆ ಸುಖವಿಲ್ಲ. ಮನೆಯ ಒಳಗೆ ಸುಖವಿಲ್ಲ. ಮನಸ್ಸಿನಲ್ಲಿ ಸುಖವಿಲ್ಲ. ಈಚೆಗಂತೂ ಬಹು ಕಾರಣಗಳಿಂದ ಸರ್ವದಾ ವ್ಯಥೆ. ಅವನು ಆ ದಿನ ಕಚೇರಿಯಿಂದ ಬಂದು, ಎಲೆಯಲ್ಲಿ ಹಾಕಿದ ಒಂದಷ್ಟನ್ನು ಊಟಮಾಡಿ, ಮಲಗುವ ಮನೆಯಲ್ಲಿ ಹೋಗಿ ಕುಳಿತನು. ಹೆಂಡತಿ ಇನ್ನೂ ಒಳಗೆ ಕೆಲಸ ಮಾಡುತ್ತಿದ್ದಳು. "ಅಯ್ಯೋ ಪಾಪ, ಮನೆಗೆಲಸವನ್ನೆಲ್ಲಾ ಅವಳೇ ಮಾಡಬೇಕು. ಸಹಾಯಕ್ಕೆ ಯಾರೂ ಇಲ್ಲ. ಅವಳಿಗೆ ತಾನೇ ಏನು ಸುಖ?" ಎಂದುಕೊಂಡನು. "ಇಂದಿರೆಯೊ? ಅವಳು ಎಲ್ಲಾ ಕೆಲಸವನ್ನೂ ಮಾಡಬೇಕಾಗಿತ್ತು. ಆದರೂ ನಸುನಗುತ್ತಾ ಇದ್ದಳು. ಆದರೆ ಅವಳು ಇಷ್ಟು ಮಕ್ಕಳನ್ನು ಕಟ್ಟಿಕೊಂಡು ಅಳಬೇಕಾಗಿರಲಿಲ್ಲ. ಮಕ್ಕಳು! ಅಯ್ಯೋ ಮಕ್ಕಳೇ! ಇಲ್ಲದವರು ಮಕ್ಕಳಾಗಬೇಕೆನ್ನುವರು. ತನಗೆ ಮಕ್ಕಳಾಗಿ ಸುಖ ಬರಲಿಲ್ಲ. ಅಯ್ಯೊ, ಆ ಷೆಡ್ಡಿನಲ್ಲಿ ಮೊನ್ನೆಯ ದಿನ ತೆಗೆದುಕೊಂಡು ಹೋಗಿ ಹಾಕಿದ ಹುಡುಗ, ಈಗ ಹಾಸಿಗೆಯಲ್ಲಿ ಮಲಗಿದ್ದ ಮಕ್ಕಳಂತೆ ತನ್ನ ಮಗುವಲ್ಲವೆ? ಆದರೂ ಸಾವಿತ್ರಿ ಆ ಪ್ರಾಣವನ್ನು ಈ ಪ್ರಾಣಗಳಂತೆ ಎಣಿಸಲಿಲ್ಲನಲ್ಲಾ! ಇಂದಿರೆ ಹೀಗೆ ಮಾಡುತ್ತಿದ್ದಳೆ? ಬಲ್ಲವರಾರು?"

ಹೀಗೆ ಯೋಚನೆ ಮಾಡುತ್ತಾ ಕುಳಿತಿದ್ದಾಗ, ನಾರಾಯಣ ಮೂರ್ತಿಗೆ ಅರ್ಧ ನಿದ್ರೆ ಬಂದಿತು. ನೊಂದ ಮನಸ್ಸು, ಸೋತ ದೇಹ, ಎರಡಕ್ಕೂ ವಿಶ್ರಾಂತಿ ಬೇಕಾಗಿತ್ತು. ಹಾಗೆಯೇ ಕುರ್ಚಿಯ ಮೇಲೆ ಕುಳಿತಿದ್ದರೆ ಅಲ್ಲಿಗೆ ಇಂದಿರೆ ಬಂದಳು.

ಇಂದಿರೆ ಹೇಗಿದ್ದಳೆಂಬುದನ್ನು ವರ್ಣಿಸದಿದ್ದರೆ, ಇಂದಿರೆ ಬಂದಳು ಎಂಬ ಮಾತನ್ನು ಕೇಳಿ ನಿಮಗೆ ಆ ಬರವಿನ ಸಂಪೂರ್ಣವಾದ ಅರ್ಥ ತಿಳಿಯಲಾರದು. ಇಂದಿರೆ ಬಹಳ ಚೆಲುವೆ. ಸ್ವಲ್ಪ ಉದ್ದವಾದ ಮುಖ. ಹಾಲಕೆನೆಯಂತೆ ಮಿದುವಾದ ಬಿಳುಪಿನ ಸೊಬಗು ಹಣೆಯನ್ನು

ತುಂಬಿತ್ತು. ಸೊಬಗು ಅಲ್ಲಿಂದ ಹುಬ್ಬುಗಳ ನಡುವೆ ಹರಿದು, ಕಣ್ಣುಗಳನ್ನು ಸೇರಿ, ಅಲ್ಲಿ ಮಲ್ಲಿಗೆಯಾಗಿರುವುದು. ಎಸಳಾದ ಮಲ್ಲಿಗೆ. ಅದರ ನಡುವೆ ಒಂದು ಕರಿಯ ತುಂಬಿ ಸಿಕ್ಕಿಕೊಂಡು ಅಲ್ಲಿಂದ ಬರಲಾರದೆ ಬಹು ಚಪಲದಿಂದ ಚಲಿಸುತ್ತಿರುವುದು. ಆ ತುಂಬಿಗೆ, ಬಿಡುತ್ತೇನೆ, ಬಿಡುವುದಿಲ್ಲ, ಎಂದು ಆಸೆ ತೋರಿಸುತ್ತಾ ಎರಡು ಸೊಗಸಾದ ಕಣ್ಣೆವೆಗಳು. ಮೂಗು ಸಣ್ಣವಾಗಿ ನೀಳವಾಗಿತ್ತು; ಮುದ್ದಾದ ಮೂಗು. ಮುದ್ದಾದ ಬಾಯಿ; ಸಣ್ಣಗೆ ಸ್ವಲ್ಪ ತೆರೆದ ಗುಲಾಬಿ ಹೂವಿನಂತಿತ್ತು. ಮುದ್ದಾದ ಗಲ್ಲ. ಬಾಯಲ್ಲಿ ಹಲ್ಲು ಸಾಲಿಟ್ಟ ಸಣ್ಣಕ್ಕಿಯಂತೆ ಇದ್ದುವು. ಸ್ವಲ್ಪ ಅರಿಸಿನ ಹಚ್ಚಿದ ಕೆನ್ನೆ. ಹಣೆಯಲ್ಲಿ ಹುಬ್ಬುಗಳ ನಡುವೆ ಸ್ವಲ್ಪ ಮೇಲೆ ಒಂದು ಸಣ್ಣ ಕುಂಕುಮದ ಬಟ್ಟು. ಪ್ರಿಯನನ್ನು ಕುರಿತು, ಎಲ್ಲಿ ನಿನ್ನ ಬುದ್ಧಿಯನ್ನು ನೋಡೋಣ, ಇಲ್ಲಿಗೆ ಸರಿಯಾಗಿ ಮುತ್ತಿಡು, ಎಂದು ಹೇಳುವಂತಿರುವುದು. ಮೊತ್ತದಲ್ಲಿ ಬಹು ಮುದ್ದಾದ ಮುಖ. ನೋಡುವುದಕ್ಕೆ ಎತ್ತರವಾದ ಹೆಂಗಸಲ್ಲ. ಸಾಮಾನ್ಯವಾಗಿದ್ದಳು. ಅದಕ್ಕೆ ತಕ್ಕ ಗಾತ್ರ, ಯಾರಿಗಾದರೂ ಅತಿ ಸುಂದರಿಯೆಂದು ತೋರುವಳು.

ಅವಳನ್ನು ನೋಡಿದರೆ ಬಹಳ ಸಂತೋಷ ಉಂಟಾಗುವುದು. ಸಂತೋಷ ಉಂಟಾಗುವುದಲ್ಲದೆ ಏನು ಕೋಪವಿದ್ದರೂ ಮಾಯವಾಗುವುದು. ನಮ್ಮ ಕೋಪ ಅಸಮಾಧಾನಗಳನ್ನು ಹೋಗಲಾಡಿಸುವವರು ಬಂದರೆ ನಮಗೆ ಆಗುವುದಿಲ್ಲ. ಅವು "ನಮ್ಮವು" ಅಲ್ಲವೆ? ಇಂದಿರೆ ಬಂದುದನ್ನು ನೋಡಿಯೂ ನಾರಾಯಣಮೂರ್ತಿ ಸುಮ್ಮನೆ ಇದ್ದನು.

ಇಂದಿರೆ ಹತ್ತಿರ ಬಂದಳು; ಬಂದು ಸುಮ್ಮನಿದ್ದವನನ್ನು "ಇದೇನು, ಇಷ್ಟು ಬೇಗ ನಿದ್ದೆಯೆ?" ಎಂದು ಕೇಳುತ್ತ, ಅವನ ಗಲ್ಲವನ್ನು ಎರಡು ಕೈಗಳಿಂದಲೂ ಹಿಡಿದು ನಗುತ್ತ ಅವನ ಮುಖವನ್ನು ನೋಡಿದಳು. "ಮಾತನಾಡುವುದಿಲ್ಲವೆ? ಹಾಗಾದರೆ ಇದಕ್ಕೆ ಇದೇ ಔಷಧಿ" ಎಂದು ಅವನ ತೊಡೆಯ ಮೇಲೆ ಕುಳಿತುಕೊಂಡಳು.

ಪ್ರೇಮ ವಾದದಲ್ಲಿ ಅಸಾಧಾರಣ ಪಾಂಡಿತ್ಯವನ್ನು ಪಡೆದಿದೆ. ತಾಮ್ರಕ್ಕೂ ಚಿನ್ನಕ್ಕೂ ಇರುವ ವ್ಯತ್ಯಾಸ ಹೆಚ್ಚೆ? ಪ್ರಸನ್ನತೆಗೂ ಅಪ್ರಸನ್ನತೆಗೂ ಇರುವ ವ್ಯತ್ಯಾಸ ಹೆಚ್ಚೆ? ವಾದ ತಾಮ್ರವನ್ನು ಚಿನ್ನ

ವನ್ನಾಗಿ ಮಾಡಲಾರದು. ಪ್ರೇಮ ಅಪ್ರಸನ್ನರನ್ನು ಪ್ರಸನ್ನರನ್ನಾಗಿಯೂ ಅವಿಶ್ವಾಸಿಗಳನ್ನು ವಿಶ್ವಾಸಿಗಳನ್ನಾಗಿಯೂ ಅಸುಖಿಗಳನ್ನು ಸುಖಿಗಳನ್ನಾಗಿಯೂ ಮಾಡಬಲ್ಲುದು. ನಕ್ಷತ್ರದಂತಹ ಆ ಲಲನೆ ಬಂದು ತೊಡೆಯ ಮೇಲೆ ಕುಳಿತಾಗ ನಾರಾಯಣಮೂರ್ತಿಯ ಮನಸ್ಸು ಚಂದ್ರನಂತೆ ಶಾಂತವಾಯಿತು. ಅವನ ಕೋಪ ಹೋಯಿತು. ಅವನ ಅಸಮಾಧಾನ ಹೋಯಿತು. ಅವನ ಅಸುಖ ಹೋಯಿತು. ನಾರಾಯಣ ಮೂರ್ತಿ ಶಾಂತನಾಗಿ, ಇಂದಿರೆಯನ್ನು ಅಪ್ಪಿಕೊಂಡು,

"ಇಂದಿರಾ!" ಎಂದನು.

"ಹೋಗಿ, ನಾನು ಮಾತನಾಡಿಸಿದಾಗ ನೀವು ಮಾತನಾಡಲಿಲ್ಲ; ಈಗ ನೀವು ಮಾತನಾಡಿಸಿದರೆ ನಾನೂ ಮಾತನಾಡುವುದಿಲ್ಲ. ಇಂದಿರಾ ಇಂದಿರಾ ಎಂತ ಇಪ್ಪತ್ತು ಸಲ ಕೂಗಿ, ನಾನು ಬಾಯಿ ತೆರೆದರೆ ಸರಿಯೆ."

"ಇಂದಿರಾ,—"

"ನಾನು ಬಾಯಿ ತೆರೆಯುವುದಿಲ್ಲವೆಂದು ಹೇಳಿದೆನಲ್ಲ."

"ಬಾಯಿ ತೆರೆಯದೆಯೇ ಇಷ್ಟು ಮಾತೇನೇ ನಿನ್ನದು?"

"ನೀವು ನನ್ನ ಹೆಸರನ್ನು ಇನ್ನೊಂದು ಸಲ ಹೇಳಲಿ ಎನ್ನುವುದಕ್ಕೋಸ್ಕರ ನಾನು ಹಾಗೆ ಹೇಳಿದೆ."

"ಅದೇನು ಹಾಗೆ?"

"ನೀವು ನನ್ನ ಹೆಸರನ್ನು ಹಿಡಿದು ಕೂಗಿದರೆ ನನಗೆ ಬಹಳ ಆನಂದವಾಗುತ್ತದೆ."

"ನಿಜವಾಗಿಯೂ?"

"ನಿಜ ಬೇರೆ, ಸುಳ್ಳು ಬೇರೆಯೆ, ಇದರಲ್ಲಿ?"

"ಹಾಗಾದರೆ ಸುಳ್ಳು ಎಂದೇ ಇಟ್ಟುಕೊಳ್ಳೋಣ."

ಇಂದಿರೆ ತಲೆಯನ್ನು ನಾರಾಯಣಮೂರ್ತಿಯ ಭುಜದ ಮೇಲೆ ಒರಗಿಸಿ ಇಟ್ಟುಕೊಂಡಿದ್ದಳು. ನಾರಾಯಣಮೂರ್ತಿಗೆ ಅವಳ ಉಸಿರು ತನ್ನ ಕೆನ್ನೆಯ ಮೇಲೆ ಬರುತ್ತ ಹೋಗುತ್ತ ಇರುವ ಹಾಗೆ ಅನುಭವ. ಪ್ರೇಯಸಿಯ ತಲೆಯನ್ನು ಕೈಯಲ್ಲಿ ತೆಗೆದುಕೊಂಡು ಅವಳ ಮುಖವನ್ನು ನೋಡಿದನು. ಮುದ್ದಾದ ಮುಖ, ಮುದ್ದಾದ ಬಾಯಿ; ಆ ಕಣ್ಣುಗಳಲ್ಲಿ

ಅಮಿತವಾದ ಪ್ರೇಮ, ಎಣೆಯಿಲ್ಲದ ಸ್ನೇಹ: ಅವನು ಪುನಃ ಅವಳನ್ನು ಅಪ್ಪಿಕೊಂಡನು.

"ನಾನು 'ಇಂದಿರಾ' ಎಂದರೆ ನಿನಗೆ ಅಷ್ಟು ಸಂತೋಷವಾಗುವುದಕ್ಕೆ ಕಾರಣವೇನು?"

"ಕಾರಣ ನನಗೆ ಗೊತ್ತಿಲ್ಲ."

"ಗೊತ್ತಿಲ್ಲದೆ ಉಂಟೆ? ನಿಜವಾಗಿ ಹೇಳು."

"ನೀವು ಹೇಳಿಕೊಡಿ. ನಾನು ಹೇಳುತ್ತೇನೆ."

"ಹೇಳಿಕೊಟ್ಟರೆ ಹೇಳುವುದಕ್ಕೆ ನಿನ್ನಂತಹ ಚತುರೆ ಬೇಕೆ?"

"ಅಂತೂ ನಾನು ಚತುರೆ?"

"ಅಲ್ಲವೆ?"

"ನಾನು ವೀಣೆ ನುಡಿಸಿದರೆ ಚೆನ್ನಾಗಿರುತ್ತದೆಯೆ?"

"ನುಡಿಸಿದ್ದನ್ನು ಕೇಳಿ ಬಹಳ ದಿನವಾಯಿತು. ಬಹು ಚೆನ್ನಾಗಿರುತ್ತದೆ."

"ಏಕೆ?"

"ಇಂಪಾದ ಧ್ವನಿ ಹೊರಡುವುದರಿಂದ."

"ಅದು ಯಾತರಿಂದ ಹೊರಡುತ್ತದೆ?"

"ವೀಣೆಯಿಂದ;"

"ವೀಣೆಯಿಂದ; ನನ್ನಿಂದ. ನೀವು ಇಂದಿರಾ ಎಂದರೆ ನನ್ನ ಮನಸ್ಸಿನಲ್ಲಿ ಒಂದು ವೀಣೆಯನ್ನು ನುಡಿಸಿದಹಾಗಾಗಿ, ಅದು ಒಂದು ಸೊಗಸಾದ ಹಾಡನ್ನು ನನಗೆ ಮಾತ್ರ ಕೇಳುವಂತೆ ಹಾಡುತ್ತದೆ. ಅದರಿಂದ ನನಗೆ ಸಂತೋಷ."

ನಾರಾಯಣಮೂರ್ತಿ ಸುಮ್ಮನಿದ್ದನು. ಇಂದಿರೆಯೂ ಸುಮ್ಮನಿದ್ದಳು. ಪ್ರಣಯಿಗಳಿಗೆ, ಸಾಮೀಪ್ಯದಲ್ಲಿ, ಮಾತಿದ್ದರೆ ಎಷ್ಟು ಸುಖವೋ ಮಾತಿಲ್ಲದಿದ್ದರೂ ಅಷ್ಟೇ ಸುಖವುಂಟು.

ಸ್ವಲ್ಪ ಹೊತ್ತು ಬಿಟ್ಟುಕೊಂಡು ನಾರಾಯಣಮೂರ್ತಿ, "ಇಂದಿರಾ?" ಎಂದನು.

"ಏನು?"

"ನಿನಗೆ ನಾನು ಎಂದರೆ ಅದೆಷ್ಟು ಪ್ರೀತಿಯೆ?"

ತನ್ನ ಹೆಂಡತಿ ತನ್ನಲ್ಲಿ ಬಹು ವಿಶ್ವಾಸವಿದೆಯೆಂದು ಹೇಳಲಿ ಎಂದು ನಾರಾಯಣಮೂರ್ತಿಗೆ ಆಸೆ. ಯಾವ ಪತಿಗೆ ಇಲ್ಲ?

"ನನಗೆ ನೀವು ಎಂದರೆ ಪ್ರೀತಿ ಅಲ್ಲ."

"ಅಲ್ಲವೆ? ಅದೇಕೆ?" ನಾರಾಯಣಮೂರ್ತಿಗೆ ಆಗಲೇ ಸ್ವಲ್ಪ ಅಸಮಾಧಾನ; ತಾನು ಅಪೇಕ್ಷಿಸಿದ ಉತ್ತರವನ್ನು ಇಂದಿರೆ ಹೇಳಲಿಲ್ಲ ವಲ್ಲಾ ಎಂದು.

"ನನಗೆ ನೀವು ಎಂದರೆ ಪ್ರೀತಿ ಅಲ್ಲ. ನನಗೆ ನೀವು ಎಂದರೆ ಬಹು ಹುಚ್ಚು" ಎಂದು ಹೇಳಿ, ಇಂದಿರೆ, ನಗುತ್ತಾ ನಾರಾಯಣಮೂರ್ತಿಯ ಕೆನ್ನೆಗೆ ಕೆನ್ನೆಯನ್ನಿಟ್ಟಳು.

ನಾರಾಯಣಮೂರ್ತಿಗೆ ಬಹಳ ಉತ್ಸಾಹವಾಯಿತು. ಇಂದಿರೆಯ ಇಷ್ಟು ಸಣ್ಣ ದೇಹದಲ್ಲಿ ಅದೆಷ್ಟು ಪ್ರೀತಿ ತುಂಬಿತ್ತು! ಆ ಪ್ರೀತಿಯನ್ನು ತೋರಿಸುವ ರೀತಿಯೊ? ತಾನು ಎಂದರೆ ಈ ಹುಡುಗಿ ಪ್ರಾಣವನ್ನು ಬೇಕಾದರೂ ಕೊಡುವಳು. 'ಇಂದಿರಾ ಇಂದಿರಾ' ಎಂದು ಮೃದುವಾಗಿ ಅವಳ ಹೆಸರನ್ನು ತನಗೆ ತಾನೇ ಹೇಳಿಕೊಂಡನು. ಬಲ್ಲವರು 'ಓಂ' ಎಂಬ ಶಬ್ದದಲ್ಲಿ ಏನೇನೋ ಅರ್ಥಗಳಿವೆ ಎಂದು ಹೇಳುವರು. ಇಂದಿರಾ ಎಂಬ ಶಬ್ದದಲ್ಲಿ ಅನಂತ ಪ್ರೇಮ, ಅನಂತ ವಿಶ್ವಾಸ, ಅನಂತ ಭಕ್ತಿ, ಅನಂತ ದಯಾ, ಅನಂತ ಮೋಹ, ಅನಂತ ವಿಲಾಸ ತುಂಬಿತ್ತೆಂದು ನಾರಾಯಣಮೂರ್ತಿಗೆ ತೋರಿತು. ಅವನ ಹೃದಯದಲ್ಲಿ ರಕ್ತಚಲನೆ 'ಇಂ—ದಿ—ರಾ' ಶಬ್ದವನ್ನು ಅನುಸರಿಸಿ ನಡೆಯತೊಡಗಿತು.

ಪ್ರೇಯಸಿ ಪತಿಯ ಭುಜದ ಮೇಲೆ ತನ್ನ ತಲೆಯನ್ನು ಇರಿಸಿಕೊಂಡು ಅವನ ಮುಖವನ್ನು ನೋಡುತ್ತಾ ಸುಮ್ಮನೆ ಕುಳಿತಳು. ನಾರಾಯಣಮೂರ್ತಿ ಅವಳನ್ನು ತನ್ನ ಕೈಗಳಿಂದ ಹತ್ತಿರವಾಗಿ ಹಿಡಿದುಕೊಂಡು, ತಲೆಯನ್ನು ಸ್ವಲ್ಪ ಬಾಗಿ, ಅವಳ ಮುಖವನ್ನು ನೋಡುತ್ತ ಕುಳಿತನು. ಹೀಗೆ ಎಷ್ಟು ಹೊತ್ತು ಕುಳಿತಿದ್ದನೋ ಅವನಿಗೆ ತಿಳಿಯಲಿಲ್ಲ. ಕಷ್ಟವನ್ನರಿಯದೆ, ಸುಖದಿಂದಲೇ ಆವೃತವಾದ ಮನಸ್ಸಿಗೆ ಯಾವ ಶಾಂತತೆಯೋ ಆ ಶಾಂತತೆ ನಾರಾಯಣಮೂರ್ತಿಯ ಹೃದಯವನ್ನು

ತುಂಬಿತ್ತು. ಆ ಶಾಂತತೆ ಬರುವುದು ಕಷ್ಟ. ಅದು ಬಂದುದಾವರೆ ಅದರಂತಹ ಉಪಭೋಗ್ಯವಾದ ಸ್ಥಿತಿಯೇ ಆಗಲಿ ವಸ್ತುವೇ ಆಗಲಿ ಬೇರೆ ಇಲ್ಲ. ನಾರಾಯಣಮೂರ್ತಿ ಇಂದಿರೆಯ ಸಾಮಿಪ್ಯದಿಂದ ಉಂಟಾದ ಸುಖದಿಂದ ಶಾಂತನಾಗಿ, ತೃಪ್ತನಾಗಿ, ಸುಮ್ಮನೆ ಕುಳಿತಿದ್ದನು.

ಆದರೆ ಈ ಶಾಂತಿಗೆ ಕುಂದಿಲ್ಲದೆ ಇರಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ನಾರಾಯಣಮೂರ್ತಿಗೆ ಮನಸ್ಸಿನಲ್ಲಿ ತನ್ನನ್ನೇ ಅರಿಯದೆ ಏನೋ ಅಸಮಾಧಾನ ತಲೆದೋರಿತು. ಈಗ ಇಂದಿರೆ ಹತ್ತಿರ ಕುಳಿತಿದ್ದಳು. ಈಗ ತಾನು ಸುಖವಾಗಿದ್ದನು. ಇದಕ್ಕೆ ಮೊದಲು? ಪ್ರಾಪ್ತವಾದ ಸುಖದ ನಿಜತ್ವವನ್ನು ವಿಚಾರಮಾಡುವುದು ಮನುಷ್ಯ ಬುದ್ಧಿಯ ಪ್ರಥಮ ಪ್ರವೃತ್ತಿಗಳಲ್ಲಿ ಒಂದಲ್ಲ. ನಾರಾಯಣಮೂರ್ತಿ ಪ್ರಾಪ್ತವಾದ ಸುಖವನ್ನು ಸ್ವಲ್ಪಹೊತ್ತು ಸುಮ್ಮನೆ ಅನುಭವಿಸಿ, ಆಮೇಲೆ ವಿಚಾರಕ್ಕೆ ಮೊದಲುಮಾಡಿದನು. ಇದಕ್ಕೆ ಮೊದಲು? ಇದಕ್ಕೆ ಮೊದಲು ಏನು ಎನ್ನುವುದು ನಾರಾಯಣಮೂರ್ತಿಗೆ ಮರೆತುಹೋಗಿತ್ತು. ವಿಷಯ ಮರೆತಿದ್ದರೂ ಅದರಿಂದ ಅವನ ಮನಸ್ಸಿನ ಅಂತರಾಳದಲ್ಲಿ ಅಸ್ವಸ್ಥತೆ ಉಂಟಾಗಿತ್ತು. ಇಂದಿರೆ ಈಗ ಇಲ್ಲಿದಾಳೆ; ಇವಳು ಇಲ್ಲಿ ಬರುವುದಕ್ಕೆ ಮೊದಲು? ಎಂದು ಯೋಚನೆ ಮಾಡುತ್ತಾ ಮಾಡುತ್ತಾ ವಿಷಯ ಸ್ವಲ್ಪ ಜ್ಞಾಪಕ ಬಂದಹಾಗಾಯಿತು. ಆದರೆ ಅದು ಅಸ್ಥಿರವಾದ ನೆನವು. ವಿಷಯ ಜ್ಞಾಪಕಬಂದಂತಾಗಿ ಪುನಃ ಕೈತಪ್ಪಿಸಿಕೊಂಡು ಹೋಯಿತು. ಹಾಗೆಯೇ ಒಳಮನಸ್ಸಿನಲ್ಲಿ ತಡಕಾಡುತ್ತಾ ಇರುವಲ್ಲಿ, ಇದಕ್ಕೆ ಮೊದಲು ಏನು ಎನ್ನುವುದು ಇದ್ದಕ್ಕಿದ್ದಹಾಗೆ ಸ್ಫುರಿಸಿತು. ಇದಕ್ಕೆ ಮೊದಲು! ಭಗವಂತ! ಆ ಷೆಡ್ಡಿನಲ್ಲಿದ್ದ ಮಗ; ಮನೆಯಲ್ಲಿದ್ದ ಸಣ್ಣಮಕ್ಕಳು; ಅವರ ತಾಯಿ; ಆ ಮಗನ ತಾಯಿ! ಇಷ್ಟು ತೋರಿಬಂದು ನಿಂತ ಮಿಂಚಿನಂತಾಯಿತು. ಮುಂದಕ್ಕೆ ಜ್ಞಾಪಕಬರಲಿಲ್ಲ. ಅವನು 'ಇಂದಿರಾ' ಎಂದನು.

ಇಂದಿರೆ "ಏನು" ಎಂದಳು.

"ಇಂದಿರಾ, ನೀನು ಯಾವಾಗ ಬಂದೆಯೆ?"

"ಅರ್ಧಗಂಟೆಯಾಗಿರಬಹುದು."

"ಈ ಕೊಟಡಿಗೆ ಬಂದು?"

"ಹೌದು."

"ಎಲ್ಲಿಂದ ಬಂದೆಯೆ?"

"ಇದೇಕೆ ಹೀಗೆ ಕೇಳುವಿರಿ?"

"ನೀನು ಎಲ್ಲಿಗೆ ಹೋಗಿದ್ದೆ?"

"ನಾನು ಎಲ್ಲಿಗೆ ಹೋಗಿದ್ದೆ?"

"ಇದೇಕೆ ಹೀಗೆ? ನಿನ್ನನ್ನು ನೋಡಿ ಬಹಳ ದಿನಗಳಾದಹಾಗೆ ತೋರುತ್ತದೆಯಲ್ಲಾ?"

"ಸರಿ."

"ತಡೆ. ಇಗೋ, ಎಲ್ಲಾ ಸ್ವಲ್ಪ ಜ್ಞಾಪಕ ಬರುತ್ತದೆ. ಓ, ಎಲ್ಲಾ ಜ್ಞಾಪಕಬಂದಿತು" ಎಂದು ಸ್ವಲ್ಪ ನಡುಗಿ, ಇಂದಿರೆಯನ್ನು ಸರಿಯಾಗಿ ಮುಟ್ಟಿನೋಡಿ, "ಇಂದಿರಾ, ನೀನು ಇಲ್ಲಿದೀಯಾ?"

"ಇದೀಗ ಸರಿ, ಇದೇನು ಮಾತು? ಇಲ್ಲಿ ಇಲ್ಲದೆ ಇಲ್ಲಿ ಹೇಗೆ ಇರುತ್ತೇನೆ?"

"ಹಾಗಾದರೆ, ನನಗೆ ಜ್ಞಾಪಕ ಬಂದದ್ದನ್ನು ಹೇಳಲೆ?"

"ಹೇಳಿ."

"ನಾನೂ ನೀನೂ ಮದುವೆಯಾದದ್ದು, ಒಂದು ಸಂಸಾರವನ್ನು ಹೂಡಿದ್ದು, ನಮ್ಮ ತಾಯಿ ನಮ್ಮ ತಂದೆ ನಮ್ಮ ಜೊತೆಯಲ್ಲಿ ವಾಸವಾಗಿದ್ದದ್ದು: ಇದೆಲ್ಲಾ ಸರಿಯಷ್ಟೆ?"

"ಸರಿ."

"ಆಮೇಲೆ ನಮ್ಮ ತಾಯಿ ತೀರಿಹೋದರು. ಅವರನಂತರ ನಮ್ಮ ತಂದೆ ತೀರಿಹೋದರು. ಕೊನೆಗಾಲದಲ್ಲಿ ಅವರು ನಿನ್ನನ್ನು ಹತ್ತಿರ ಬಂದು ಕುಳಿತುಕೊಳ್ಳೆಂದು ಹೇಳಿದರು."

"ಉಂ."

"ಎಲಪ್ಪಾ, ಮಗುವನ್ನು ಚೆನ್ನಾಗಿ ನೋಡಿಕೊ; ಅಮ್ಮಯ್ಯ, ಕೂಸನ್ನು ಚೆನ್ನಾಗಿ ನೋಡಿಕೊ; ಎಂದು ಅವರು ನಮ್ಮಿಬ್ಬರಿಗೂ ಹೇಳಿದರು."

"ಹೌದು."

"ನಾವು ಮಗುವನ್ನು ಬಹು ವಿಶ್ವಾಸದಿಂದ ಸಾಕುತ್ತಿದ್ದೆವು. ನಾನಾದರೂ ಒಂದೊಂದು ಸಲ ಅವನನ್ನು ಬಯ್ಯುತ್ತಿದ್ದೆ. ನೀನು ಒಂದು ದಿನವೂ ಅವನನ್ನು ಬಯ್ಯಲಿಲ್ಲ, ಹೊಡೆಯಲಿಲ್ಲ."

"ಬಯ್ದರೇನು? ಬುದ್ಧಿ ಬರುವುದಕ್ಕೆ ಬಯ್ದಿರಿ."

"ನಾನು ಅದಕ್ಕಾಗಿ ಅಲ್ಲ, ಆ ಮಾತನ್ನು ಹೇಳಿದ್ದು; ನೀನು ಅವನನ್ನು ಎಷ್ಟು ಮುದ್ದಿನಿಂದ ಸಾಕಿದೆ ಎಂದು ಹೇಳುವುದಕ್ಕೆ ಹೇಳಿದೆ. ಹೀಗೆಯೇ ಇದ್ದಾಗ ನೀನು ಒಂದು ದಿನ ಜ್ವರದಿಂದ ಮಲಗಿದೆ."

"ಉಂ."

"ನಾನು ನಿನಗೆ ವಾಸಿಯಾಗಲಿ ಎಂದು ಬಹಳ ಮಾಡಿದೆ, ಇಂದಿರಾ. ನೀನು ಕಾಯಿಲೆಯಿಂದ ಕೃಶಳಾದ ಹಾಗೆಲ್ಲಾ ನನ್ನ ಹೊಟ್ಟೆಯಲ್ಲಿ ಬೆಂಕಿಹಾಕಿದ ಹಾಗಾಯಿತು. ಒಂದು ದಿನ— ಅದೇನು ಸ್ವಪ್ನವೋ ನಿಜವೋ?"

"ಏನು?"

ನಾರಾಯಣಮೂರ್ತಿ ಇಂದಿರೆಯನ್ನು ಭದ್ರವಾಗಿ ಹಿಡಿದುಕೊಂಡು ಹೇಳಿದನು.

"ಒಂದು ದಿನ ನೀನು...."

"ಅಯ್ಯೋ ಹುಚ್ಚೀ!"

"ಹುಡುಗನನ್ನು ನೋಡಿಕೊಳ್ಳುವವರು ಯಾರೂ ಇರಲಿಲ್ಲ. ನಾನು ಬಹಳ ಕಷ್ಟಪಟ್ಟೆ, ಇಂದಿರಾ, ಬಹಳ ಅತ್ತೆ, ಕೊನೆ ಮೊದಲಿಲ್ಲದೆ ಗೋಳಾಡಿದೆ."

"ಅಯ್ಯೋ!"

"ಗೋಳಾಡಿ ಸಾಕಾಗಿ ಮರುಳನ ಹಾಗೆ ಸುಮ್ಮನಿದ್ದೆ—"

ನಾರಾಯಣಮೂರ್ತಿ ಒಂದು ನಿಮಿಷ ಸುಮ್ಮನಾದನು. ಅವನು ಆಗಲೂ ಮರುಳನ ಹಾಗಾಗಿದ್ದನು. ಇಂದಿರೆ ತನ್ನ ಹತ್ತಿರ ಕುಳಿತಿರುವುದೂ ತಾನು ಮಾತಾಡುತ್ತಿದ್ದುದೂ ಸರಿಯೆ. ಆದರೆ ಅವಳು ಆ ದಿನ ಏನೋ ಆದಳು. ಏನೋ ಆದಳಲ್ಲ. ಆದದ್ದು ಏನು? ಏನು ಆದಳು? "ಏನೋ ಆದಳು, ಏನೋ ಆದಳು" ಎಂದು ಮಾತ್ರ ಮನಸ್ಸಿನಲ್ಲಿ

ಧ್ವನಿ. ಏನಾದಳು? ಎಂದು ಯೋಚನೆ. ಅದಕ್ಕೆ ಉತ್ತರ ತೋರಿ ಬರಲಿಲ್ಲ.

ನಾರಾಯಣಮೂರ್ತಿ ಆಗ ಇದ್ದ ಅರ್ಧನಿದ್ರಾವಸ್ಥೆಯಲ್ಲಿ ಮಾನವನ ಮನಸ್ಸು ಬೇರೆ ಬೇರೆ ಅನೇಕ ಪದರಗಳಾಗಿರುತ್ತದೆ. ಕೆಲವು ಪದರಗಳು ಜಾಗರದವಸ್ಥೆಯಲ್ಲಿಯೂ ಕೆಲವು ನಿದ್ರಾವಸ್ಥೆಯಲ್ಲಿಯೂ ಇರುತ್ತವೆ. ನಾವು ದಿನವೂ ಇಂದ್ರಿಯಗಳ ಮೂಲಕ ತಿಳಿಯುವ ವಿಷಯ ಒಂದೊಂದೂ ಅದರದರ ಪದರದಲ್ಲಿ ಹೋಗಿ ನಿಲ್ಲುತ್ತದೆ. ಅರೆನಿದ್ದೆಯಲ್ಲಿರುವಾಗ, ಆಗ ಎಚ್ಚರವಾಗಿರುವ, ಪದರಗಳಲ್ಲಿರುವ ವಿಷಯಗಳು ಜ್ಞಾಪಕಕ್ಕೆ ಬರುತ್ತವೆ. ಮಿಕ್ಕವುಗಳಲ್ಲಿ ಇರುವ ವಿಷಯಗಳು ಜ್ಞಾಪಕ ಬರುವುದಿಲ್ಲ. ಈಗ ನಾರಾಯಣಮೂರ್ತಿಗೆ ಆಗಿದ್ದುದೂ ಅದೇ. ಸಾಮಾನ್ಯವಾಗಿ ಬಹಳ ದಿನಗಳಿಂದ ಅನುಭವಿಸಿದ್ದ ವಿಚಾರಗಳು, ಚೆನ್ನಾಗಿ ಮನಸ್ಸಿನಲ್ಲಿ ನಾಟಿ ಸುಲಭವಾಗಿ ಜ್ಞಾಪಕಕ್ಕೆ ಬಂದುವು. ಅತಿ ಶೋಕಕಾರಿಯಾದ ಒಂದು ಅಂಶ ಮನಸ್ಸಿನಲ್ಲಿ ಮತ್ತೂ ದೂರವಾಗಿ ನಾಟಿ ಈ ಅರೆನಿದ್ದೆಯ ಅವಸ್ಥೆಯಲ್ಲಿ ನೆನವಿನ ಶಕ್ತಿಯನ್ನು ಮೀರಿತ್ತು. ಇಂದಿರೆ ಏನಾದಳೆಂಬುದು ಜ್ಞಾಪಕ ಬರಲಿಲ್ಲ. ಏನೇನು ಮಾಡಿದರೂ ಅದು ಮನಸ್ಸಿಗೆ ಸಿಕ್ಕಲಿಲ್ಲ. ಆದರೆ ಅದು ಏನೋ ಅಶುಭವಾದುದೆಂದೂ ದುಃಖಕರವಾದುದೆಂದೂ ಮಾತ್ರ ಅದಕ್ಕೆ ತೋರುತ್ತಿತ್ತು.

"ಆಮೇಲೆ ಒಂದು ದಿನ ಮನೆಯಲ್ಲಿ ಯಾರೂ ಇಲ್ಲದೆ ಹೋಗಿ ಮಗುವಿಗೆ ಮಧ್ಯಾಹ್ನ ತಿಂಡಿಯಿಲ್ಲದೆ ಹೋಯಿತು. ನಾನು ಕಚೇರಿಯಿಂದ ಬಂದೆ. ಅಳುತ್ತಾ ಇದ್ದ. ಅವನು ಹಸಿದು ತಿಂಡಿಯಿಲ್ಲದೆ ಇದ್ದದನ್ನು ನೋಡಿ ನನಗೆ ಬಹಳ ವ್ಯಸನವಾಯಿತು."

"ಉಂ."

"ಯಾರಾದರೂ ಇದ್ದರೆ ಹುಡುಗನನ್ನು ನೋಡಿಕೊಂಡಾರು; ಅವನನ್ನು ಕೇಳುವವರೇ ಇಲ್ಲ; ಎಂದು ಬಹಳ ಯೋಚನೆಮಾಡಿದೆ. ಆದರೆ ಏನುಮಾಡುವುದೂ ತೋಚಲಿಲ್ಲ. ಆಮೇಲೆ ಒಂದು ದಿನ ಚಿಕ್ಕಪ್ಪನವರು ಬಂದು, ಒಂದು ಹುಡುಗಿ ಇದೆ, ಮದುವೆ ಮಾಡಿಕೊ, ಎಂದು ಹೇಳಿದರು."

"ಉಂ."

"ನನಗೆ ಬೇರೆ ಹುಡುಗಿಯನ್ನು ಮದುವೆಮಾಡಿಕೊಳ್ಳುವುದು ಇಷ್ಟವಿರಲಿಲ್ಲ. ಏಕೆ ಇಷ್ಟವಿರಲಿಲ್ಲವೋ ಕಾಣೆ. ನಮ್ಮ ಚಿಕ್ಕಪ್ಪನವರು ಬಹಳ ಹೇಳಿದರು. ನೋಡಪ್ಪ, ಹುಡುಗಿ ಚೆಲುವೆ, ಎಂದರು. ಹುಡುಗಿಯನ್ನು ತಂದು ತೋರಿಸಿದರು. ಸಾವಿತ್ರಿಯನ್ನ. ಹುಡುಗಿಯೇನೋ ಚೆನ್ನಾಗಿದ್ದಳು. ಆದರೆ ಅವಳನ್ನು ಮದುವೆ ಮಾಡಿಕೊಳ್ಳುವುದು ನನಗೆ ಇಷ್ಟವಿಲ್ಲದೆ ಹೋಯಿತು."

"ಉಂ."

"ನನಗೂ ಬೇಜಾರಾಯಿತು, ಇಂದಿರಾ. ಒಂಟಿಯಾಗಿದ್ದು ಸಾಕಾಯಿತು. ನೀನು–ನೀನು ಇರಲಿಲ್ಲ. ಬೇಜಾರಾಯಿತು. ಒಂದು ದಿನ ಚಿಕ್ಕಪ್ಪನವರು ಪುನಃ ಬಂದು, ಅಪ್ಪಾ ನಿನ್ನ ಪಾಡು ಹ್ಯಾಗಾದರೂ ಇರಲಿ, ಹುಡುಗನನ್ನು ನೋಡೋ, ಹೇಳುವವರು ಇಲ್ಲ, ಕೇಳುವವರು ಇಲ್ಲ, ಆ ಹುಡುಗಿಯನ್ನು ಮದುವೆ ಮಾಡಿಕೊ, ಹುಡುಗನನ್ನು ನೋಡಿಕೊಳ್ಳುತ್ತಾಳೆ, ನಿನ್ನ ಕಷ್ಟಸುಖವನ್ನು ನೋಡಿಕೊಳ್ಳುತ್ತಾಳೆ, ಎಂದು ಹೇಳಿದರು."

"ಉಂ."

"ನಾನು ಆ ಮಾತಿಗೆ ಒಪ್ಪಿದೆ."

"ಹುಂ."

"ಒಪ್ಪಿ ಮದುವೆ ಮಾಡಿಕೊಂಡೆ. ಸಾವಿತ್ರಿ ಮನೆಗೆ ಬಂದಳು. ಬಂದ ಕೊಂಚ ದಿನ ನೀನೇ ಎನ್ನುವಹಾಗಿದ್ದಳು. ಆಮೇಲೆ ಎಲ್ಲವೂ ಬದಲಾಯಿಸಿತು. ಅವಳಿಗೆ ಒಂದು ಮಗುವಾಗುತ್ತಲೂ ಹುಡುಗನನ್ನು ಅಸಡ್ಡೆಯಿಂದ ಕಾಣುವುದಕ್ಕೆ ಪ್ರಾರಂಭಿಸಿದಳು. ನಾನು ಅವಳನ್ನು ಅದಕ್ಕೆ ದೂಷಿಸಿದೆ. ಅವಳು ಕೋಪಿಸಿಕೊಂಡಳು. ಅಂದಿನಿಂದ ನನ್ನ ಮನೆಯ ಸುಖ ಮಾಯವಾಯಿತು."

ಇಂದಿರೆ ಉತ್ತರ ಕೊಡಲಿಲ್ಲ. ಅವಳು ಕಣ್ಣೀರನ್ನು ಸುರಿಸುತ್ತಲಿದ್ದಳೆಂದು ನಾರಾಯಣಮೂರ್ತಿಗೆ ಬೋಧೆಯಾಯಿತು.

"ಅವಳು ಹೆತ್ತ ಮಕ್ಕಳೂ ಅವನೂ ಎಲ್ಲರೂ ನನಗೆ ಒಂದೇ ಆದರೂ, ಅವಳಿಗೆ ಬೇರೆ ಬೇರೆಯಾದರು. ನಾನು ಏನನ್ನೂ ಮಾಡುವ

ಹಾಗೆ ಇರಲಿಲ್ಲ. ಅನ್ನ ಕೊಡುವವಳು ಅವಳು; ನೀರು ಕೊಡುವವಳು ಅವಳು. ನಾನು ಏನುಮಾಡಬಲ್ಲೆ? ಅವಳು ಮಾಡುತ್ತಿದ್ದದನ್ನೆಲ್ಲಾ ನೋಡುತ್ತ ಸುಮ್ಮನಿದ್ದೆ.

ಇಂದಿರೆ ಮಾತನಾಡಲಿಲ್ಲ.

"ಅವನ ಸುಖಕ್ಕೆಂದು ನಾನು ಇವಳನ್ನು ಮದುವೆ ಮಾಡಿಕೊಂಡೆ. ಅವನಿಗೆ ಅದರಿಂದ ಸುಖವಿಲ್ಲದೆ ಹೋಯಿತು. ಹ್ಯಾಗೋ ಸ್ವಲ್ಪ ದೊಡ್ಡವನಾಗುವವರೆಗೆ ಬೆಳೆದರೆ ಆಮೇಲೆ ಹ್ಯಾಗಾದರೂ ಆಗುತ್ತದೆ ಎಂದುಕೊಂಡು ಸುಮ್ಮನಿದ್ದೆ. ಅದಕ್ಕೂ ಕಷ್ಟಬಂದಿತು."

ಇಂದಿರೆ ಸುಮ್ಮನೆ ಕೇಳುತ್ತಿದ್ದಳು.

"ಮೊನ್ನೆಯ ದಿನ ಹುಡುಗ ಎಲ್ಲಿಂದಲೊ ಬಂದು ಜ್ವರವೆಂದು ಮಲಗಿದ. ಡಾಕ್ಟರನ್ನು ಕರೆಸಿದೆ. ಅದು ಪ್ಲೇಗು ಎಂದರು. ಅವನನ್ನು ಮನೆಯಲ್ಲಿಟ್ಟರೆ ಎಲ್ಲರಿಗೂ ಅಪಾಯ. ಷೆಡ್ಡಿನಲ್ಲಿ ಬಿಟ್ಟರೆ ನೋಡುವವರು ಇಲ್ಲ. ಈ ಮಕ್ಕಳನ್ನು ನೋಡಲೇ, ಅವನನ್ನು ನೋಡಲೇ? ನಾನು ಅರೆಮನಸ್ಸಾಗಿದ್ದಾಗ ಸಾವಿತ್ರಿ ಬಂದು, ಅವನನ್ನು ಷೆಡ್ಡಿನಲ್ಲಿ ಬಿಡಿ. ಎಂದು ಹೇಳಿದಳು."

"ಉಂ."

"ಕರೆದುಕೊಂಡುಹೋಗಿ ಷೆಡ್ಡಿನಲ್ಲಿ ಬಿಟ್ಟೆ. ಚಿಕ್ಕಪ್ಪ ಬಂದು ಅಲ್ಲಿದಾರೆ. ನಾನೇ ಅಲ್ಲಿ ಇರೋಣವೆಂದರೆ ಇವಳು ಒಪ್ಪಳು. ತಾನು ಹೋಗಿ ಇರುತ್ತೇನೆ ಎನ್ನುತ್ತಾಳೆ; ನಾನು ಇರಕೂಡದಂತೆ. ಸಾವಿತ್ರಿಯ ಮನಸ್ಸು ಬಹು ಕಲ್ಲುಮನಸ್ಸು, ಇಂದಿರಾ, ಬಹು ಕಲ್ಲುಮನಸ್ಸು."

ಇಂದಿರೆ ಉಸಿರಾಡಲಿಲ್ಲ.

"ಈ ಸಾಯಂಕಾಲ ಹೋಗಿ ನೋಡಿದೆ. ಹುಡುಗ ಕಷ್ಟಪಡುತ್ತಿದ್ದ. ನಾನು ನೋಡಲಾರದೆ ಹೋದೆ. ಅವನನ್ನು ನೋಡಲಾರದ್ದಕ್ಕೂ, ಇಲ್ಲಿ ಮನೆಯಲ್ಲಿ, ಈ ಊರ ಕೊನೆಯಲ್ಲಿ, ಇವರಿರುವುದನ್ನು ನೋಡಿಯೂ ಜಾಗ್ರತೆ ಬಂದುಬಿಟ್ಟೆ. ಸಾಲದ್ದಕ್ಕೆ ಅವನು 'ಅಮ್ಮಾ, ಅಮ್ಮಾ!' ಎಂದು ಕೂಗುತ್ತಿದ್ದ. ಅಮ್ಮನೆಲ್ಲಿ? ಅಯ್ಯೋ, ಎಷ್ಟು ಕಷ್ಟಪಡುತ್ತಿದ್ದನೇ ಅವನು!"

"ನೀವು ಚಿಂತೆಪಡಬೇಡಿ, ಅವನು ಸೌಖ್ಯವಾಗಿದಾನೆ."

"ನನ್ನನ್ನು ಸಮಾಧಾನಪಡಿಸುವುದಕ್ಕೆ ನೀನು ಹೀಗೆ ಹೇಳುತ್ತೀಯೆ. ಸಾಯಂಕಾಲ ಹಾಗಿದ್ದ ಹುಡುಗ ಈಗ ಸುಖವಾಗಿರುವನೆ? ಹೋಗಲಿ ಈಗ ನೀನು ಬಂದಿದೀಯಲ್ಲ. ಒಳ್ಳೆಯದಾಯಿತು. ಅವನನ್ನು ನೀನು ನೋಡಿಕೊಳ್ಳಬಹುದು."

"ಹೌದು."

"ಇನ್ನು ನನಗೆ ಯೋಚನೆ ಏನೂ ಇಲ್ಲ. ನಿನ್ನನ್ನು ನೋಡಿದೆ, ನನ್ನ ಕಷ್ಟವೆಲ್ಲಾ ಎಲ್ಲಿಹೋಯಿತೋ ನೋಡು!"—

ಹೀಗೆಂದು ಹೇಳಿ ನಾರಾಯಣಮೂರ್ತಿ ಇಂದಿರೆಯನ್ನು ಚೆನ್ನಾಗಿ ಅಪ್ಪಿಕೊಂಡು ಮುದ್ದಿಸಿದನು. ಮುದ್ದಿಸಿ,

"ಹುಡುಗನಿಗೆ ವಾಸಿಯೆ?"

"ವಾಸಿ."

"ನೀನು ನೋಡಿದೆಯಾ?"

"ನೀವು ನೋಡಬೇಕೇ?"

"ಎಲ್ಲಿ?"

"ನೋಡಿ—"

ಇಂದಿರೆ ತನ್ನ ಬೆರಳನ್ನು ಬಾಗಿಲ ಕಡೆ ತೋರಿಸಿದಳು. ನಾರಾಯಣ ಮೂರ್ತಿ ಆ ಕಡೆ ನೋಡಿದನು. ಬಾಗಿಲ ಬಳಿ ಗೋಪಾಲ. ಕಾಯಿಲೆ ಇಲ್ಲದೆ ಸುಖವಾಗಿರುವ ಹುಡುಗನಂತೆ ನಿಂತಿದ್ದನು. ನಾರಾಯಣ ಮೂರ್ತಿಗೆ ಅಪರಿಮಿತ ಆನಂದ ಉಂಟಾಯಿತು.

ಅವನು ಸಂತೋಷದಿಂದ ಇಂದಿರೆಯನ್ನು ನೋಡಲು ಕಣ್ಣನ್ನು ತಿರುಗಿಸಿದನು. ಇಂದಿರಾ ರೂಪ ಮಂಕಾಗಿತ್ತು. ಅವನು ಇಂದಿರಾ ಎಂದು ಕೂಗುತ್ತಾ ಅವಳನ್ನು ಹಿಡಿದುಕೊಳ್ಳಲು ಯತ್ನಿಸಿದನು. ಆದರೆ, ಎಲ್ಲೋ ಒಂದು ಸಲ ಪರ್ವತಾಗ್ರವನ್ನು ಏರಿ ನಿಂತು ಅಲ್ಲಿರುವ ಮೋಡವನ್ನು ಹಿಡಿಯಲೆಳಸುವ ಹಸುಳೆಯ ಕೈಗೆ ಆ ಮೋಡ ಸಿಕ್ಕದೆ ಹೋಗುವಂತೆ ಇಂದಿರೆ ಇವನ ಕೈಗೆ ಸಿಕ್ಕದೆಹೋದಳು. ಇಂದಿರಾ ಎಂದು ಕೂಗುತ್ತ ಅವನು ಎಚ್ಚತ್ತನು.

ಇಂದಿರೆ ಸತ್ತು ಹತ್ತು ವರುಷವಾಗಿತ್ತು.

ನಾರಾಯಣಮೂರ್ತಿ ಇಂದಿರೆಯನ್ನು ಹತ್ತು ವರುಷಗಳ ಹಿಂದೆ ಕಳೆದುಕೊಂಡು ಪತ್ನಿವಿಯೋಗದ ದುಃಖವನ್ನು ಅನುಭವಿಸಿದ್ದನು. ಇಂದು ಇಂದಿರೆ ತಾನು ಮೊದಲು ಆಗಾಗ ಹೇಳಿದ್ದ ಮುದ್ದಿನ ಮಾತುಗಳನ್ನು ಹೇಳುತ್ತಾ ನಿದ್ದೆಯಲ್ಲಿ ಕಂಡುಬಂದು ಪುನಃ ಅದೃಶ್ಯಳಾದಳು. ನಾರಾಯಣ ಮೂರ್ತಿಗೆ ಪತ್ನೀವಿಯೋಗ ದುಃಖದ ಅನುಭವ ಇನ್ನೊಂದು ಸಲ ಆಯಿತು. ಮನಸ್ಸಿನಲ್ಲಿ ದುಃಖ ಅಲ್ಲೋಲಕಲ್ಲೋಲವಾಗಿ ಮೇರೆಯನ್ನು ಮೀರಿ ಉರುಬಿನಿಂದ ಉಕ್ಕುತಲಿತ್ತು. ನಾರಾಯಣಮೂರ್ತಿ ಕಿಟಕಿಯಿಂದ ಹೊರಗೆ ನೋಡಿದನು. ಶಾಂತವಾದ ರಾತ್ರಿ. ತುಂಬಿದ ಬೆಳದಿಂಗಳು. ಶುಭ್ರವಾದ ಆಕಾಶದಲ್ಲಿ ಪ್ರೇಯಸೀ ನಕ್ಷತ್ರಗಳ ಸಮೂಹದ ಮಧ್ಯೆ ಚಂದ್ರನು ಆನಂದದಿಂದ ವಿಹರಿಸುತ್ತಿದ್ದನು. ಅವನ ಆತ್ಮದ ತಂಪಿನ ಬೆಳದಿಂಗಳ ಶಾಂತಿ ಪ್ರಪಂಚವನ್ನು ತುಂಬಿ ತೇಲಿಸುತಿತ್ತು. ಆಹಾ! ಅದೆಂತಹ ಶಾಂತಿ!

ಅದೇ ಆ ಶಾಂತವಾದ ಆ ತುಂಬಿದ ಬೆಳದಿಂಗಳ ರಾತ್ರಿಯಲ್ಲಿ ಗೋಪಾಲನು ತನ್ನ ತಾಯಿ ಹೊಂದಿದ್ದ ಅನಂತಶಾಂತಿಯನ್ನು ಐದಿದನೆಂದು ನಾರಾಯಣಮೂರ್ತಿಗೆ ಆಗ ತಿಳಿಯಲಿಲ್ಲ.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ಸುಬ್ಬಣ್ಣ (ಕತೆ)
ವಿಮರ್ಶೆ ೧, ೨, ೩, ೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ರವೀಂದ್ರನಾಥ ಠಾಕೂರರು

ಸಣ್ಣ ಕತೆಗಳು ೪, ೫, ೬
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೧, ೨, ೩, ೪, ೫ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ (ಕಾದಂಬರಿ)
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)
ಚಿಂತನ (ವಿಚಾರ)
ಮಾಸತಿ (ದೃಶ್ಯ)
ಅನಾರ್ಕಳಿ ,,

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು
ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ
ಕನ್ನಡ ಬುಕ್ ಡಿಪೋ, ಈಸಾಮಿಯಾ ಬಜಾರ್, ಹೈದರಾಬಾದ್

# ಸಣ್ಣ ಕತೆಗಳು

ಶ್ರೀನಿವಾಸ

ಜೀವನ ಕಾರ್ಯಾಲಯ
ಬೆಂಗಳೂರು

# ಮೊದಲನೆಯ ಮುದ್ರಣದ ಮುನ್ನುಡಿ

ಈ ಸಣ್ಣ ಪುಸ್ತಕದಲ್ಲಿರುವ ನಾಲ್ಕು ಕತೆಗಳಲ್ಲಿ ಮೊದಲನೆಯದು ಕೆಲವು ವರ್ಷಗಳ ಹಿಂದೆ ಮೈಸೂರಿನ ಮಧುರವಾಣೀ ಪತ್ರಿಕೆಯಲ್ಲಿ ಪ್ರಕಟವಾಯಿತು. ಎರಡನೆಯದೂ ಕೊನೆಯದೂ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಎರಡು ಸಂಚಿಕೆಗಳಲ್ಲಿ ಅಚ್ಚಾದವು; ಮೂರನೆಯದು ಜಯಕರ್ಣಾಟಕದಲ್ಲಿ ಕೆಲವು ತಿಂಗಳ ಹಿಂದೆ ಅಚ್ಚಾಯಿತು.

ನನ್ನ ಕತೆಗಳಿಗೆ ತಮ್ಮ ಪತ್ರಿಕೆಗಳ ಉದಾರಾಶ್ರಯವನ್ನು ಸಂತೋಷದಿಂದ ಕೊಟ್ಟುದಕ್ಕಾಗಿ ಪ್ರಬುದ್ಧ ಕರ್ಣಾಟಕದ ಮತ್ತು ಜಯ ಕರ್ಣಾಟಕದ ಸಂಪಾದಕರಿಗೆ ಈ ಮೂಲಕ ವಂದನೆಗಳನ್ನು ಸೂಚಿಸುತ್ತೇನೆ.

ಮಧುರವಾಣಿಯ ಸಂಪಾದಕರಾಗಿದ್ದ ನನ್ನ ಪ್ರಿಯಮಿತ್ರರಾದ ದಿವಂಗತ ಹನುಮಾನರವರನ್ನು ಈಗ ನಾನು ಯಾವ ವಂದನೆಗಳಿಂದಲೂ ಸಂತೋಷಗೊಳಿಸುವಂತಿಲ್ಲ. ಅವರು ಚಿಕ್ಕವಯಸ್ಸಿನಲ್ಲೇ ತೀರಿಹೋದರು. ಅವರು ಮಾತೃಭಾಷೆಗೆ ಮಾಡಿದ ಸೇವೆ ಕನ್ನಡಿಗರ ಮನಸ್ಸಿನಲ್ಲಿ ಬಹುಕಾಲ ನಿಲ್ಲತಕ್ಕದ್ದಾಗಿದೆ. ಅವರು ಗತಿಸಿದ್ದರಿಂದ ಅವರ ಮಿತ್ರರಿಗೆ ಉಂಟಾದ ಯಾತನೆ ಈ ಭರವಸೆಯಿಂದ ಸ್ವಲ್ಪ ಸಮಾಧಾನಕ್ಕೆ ಬರಬೇಕಾಗಿದೆ.

“ಕೆಲವು ಸಣ್ಣ ಕತೆಗಳನ್ನು” ಪ್ರಕಟಿಸಿದ ಎಂ. ಸುಬ್ಬರಾಯರೂ ನನ್ನ ಚಿಕ್ಕಂದಿನ ಸ್ನೇಹಿತರು. ಅವರೂ ಈಚೆಗೆ ತೀರಿಹೋದರು. ಲಾಭವನ್ನೇ ಮುಖ್ಯವೆಂದೆಣಿಸದೆ ಸಾಹಿತ್ಯ ಗ್ರಂಥಗಳ ಪ್ರಕಟನೆಗೆ ಕೈಹಾಕಿದ ಇವರ ಭಾಷಾಭಕ್ತಿಯೂ ಸರ್ವಥಾ ಸ್ತೋತ್ರಾರ್ಹವಾದದ್ದು. ಇವರ ಹೆಸರೂ ನಮ್ಮ ನಾಡಿನ ಜನರ ಮನಸ್ಸಿನಲ್ಲಿ ಬಹುಕಾಲ ನಿಲ್ಲಲೆಂದು ಕೋರುತ್ತೇನೆ.

ತಾನು ಹೀಗೆ ಕರೆದುಕೊಂಡ ಭಾಷಾಸೇವಕರಂಥ ಇತರ ಸೇವಕರನ್ನು ಭಗವಂತನು ಕನ್ನಡಮಾತೆಗೆ ಸರ್ವದಾ ನೀಡಲಿ.

“ಕೆಲವು ಸಣ್ಣ ಕತೆಗಳ” ವಿಷಯದಲ್ಲಿಯೂ ಅದರಿಂದೀಚೆಗೆ ನಾನು ಪ್ರಕಟಿಸಿದ ಪುಸ್ತಕಗಳ ವಿಷಯದಲ್ಲಿಯೂ ನಮ್ಮ ನಾಡಿನ ಜನರು ಅತಿಶಯ

ವಾದ ಆದರವನ್ನು ತೋರಿರುವರು. ಈ ಪುಸ್ತಕಗಳು ಕನ್ನಡ ನಾಡಿನ ನಾಲ್ಕು ಕಡೆಯಿಂದ ನನಗೆ ಸ್ನೇಹಿತರನ್ನು ತಂದವು. ಇದು ಎಲ್ಲಾ ಗ್ರಂಥಕರ್ತರಿಗೂ ಉತ್ತೇಜಕವಾದ ವಿಷಯ. ಕನ್ನಡ ಸಾಹಿತ್ಯದ ಉಚ್ಚ ಸಂಪ್ರದಾಯಕ್ಕೆ ತಕ್ಕುವಾದ ಗ್ರಂಥಗಳನ್ನು ರಚಿಸುವ ಶಕ್ತಿಯನ್ನು ಸಂಪಾದಿಸುವುದಕ್ಕೆ ಗ್ರಂಥ ಕರ್ತರೂ ಅವರು ತಮ್ಮ ಕಾರ್ಯದಲ್ಲಿ ಜಯಶೀಲರಾಗುವಂತೆ ಅವರನ್ನು ಹುರಿ ಗೊಳಿಸುವುದಕ್ಕೆ ಕನ್ನಡ ನಾಡಿನ ನಮ್ಮ ಜನರೂ ಸರ್ವದಾ ಯತ್ನಮಾಡ ಲೆಂದು ನಾನು ಹಾರೈಸುತ್ತೇನೆ. ನನ್ನ ಪುಸ್ತಕಗಳ ವಿಷಯದಲ್ಲಿ ನಮ್ಮ ಜನರು ತೋರಿರುವ ಆದರಕ್ಕೆ ನಾನು ಬಹಳ ಕೃತಜ್ಞನಾಗಿರುತ್ತೇನೆ.

ಮಧುಗಿರಿ,
ರುಧಿರೋದ್ಗಾರಿ ಸಂ॥ ರಥಸಪ್ತಮಿ.

ಶ್ರೀನಿವಾಸ.

# ಎರಡನೆಯ ಮುದ್ರಣದ ಮುನ್ನುಡಿ

ಮೊದಲನೆಯ ಮುದ್ರಣದ ಪ್ರತಿಗಳು ಮುಗಿದುಹೋದದ್ದರಿಂದ ಈಗ ಈ ಪುಸ್ತಕವನ್ನು ಪುನಃ ಮುದ್ರಿಸಿದೆ.

ಬೆಂಗಳೂರು, ಪ್ರಮೋದೂತ ಸಂ॥
ಭಾದ್ರಪದ ಶುದ್ಧ ದಶಮಿ.

ಶ್ರೀನಿವಾಸ.

# ವಿ ಷ ಯ ಸೂ ಚಿ

# ಇಲ್ಲಿಯ ತೀರ್ಪು

ನಮ್ಮ ತಾತಂದಿರು ಕೋಟ್ನೀಸಾಹೇಬನ ಬಳಿ ಜೋಡೀಶಾಲು ಶಿರಸ್ತೆಯ ಕೆಲಸದಲ್ಲಿದ್ದರು. ಈಚೆಗೆ ನಮ್ಮ ಮನೆಯಲ್ಲಿರುವ ಹಳೆಯ ದಫ್ತರಗಳನ್ನೆಲ್ಲಾ ಪರಿಶೋಧಿಸಿ ಕೆಲಸಕ್ಕೆ ಬಾರದ ಕಾಗದಗಳನ್ನು ಹರಿದು ಹಾಕೋಣವೆಂದು ಎಲ್ಲವನ್ನೂ ಕೊಡವಿದೆನು. ಈ ದಫ್ತರಗಳಲ್ಲಿ ಕೆಲವು ನಮ್ಮ ತಾತಂದಿರ ಕಾಲದ ಕಾಗದಪತ್ರಗಳು. ಇವುಗಳಲ್ಲಿ ಕೋಟ್ನೀ ಸಾಹೇಬನು ಬರೆದ ಒಂದು ಡಯರಿಯ ಕೊಂಚ ಭಾಗ ಸಿಕ್ಕಿತು. ಕೋಟ್ನೀಸಾಹೇಬನನ್ನು ನಾನು ನೋಡಿದ್ದೆನು. ಅವನು ನನಗೆ ಒಂದೆರಡುಸಲ ತಿಂಡಿಯನ್ನು ಕೊಟ್ಟದ್ದೂ ಜ್ಞಾಪಕವಿದೆ. ಆತ ಬಹಳ ಒಳ್ಳೆಯ ಮನುಷ್ಯ. ಡಯರಿಯಲ್ಲಿ ಏನಿರುವುದೋ ಎಂದು ನಡುವೆ ಎತ್ತಿ ಕೆಲವು ಪುಟಗಳನ್ನು ಓದಿದೆನು. ಒಂದು ದಿನದ ವಿಚಾರವನ್ನು ಸ್ವಲ್ಪ ಓದುವುದರಲ್ಲಿ ತೀರಾ ಓದೋಣವೆಂದು ಆಸೆಹುಟ್ಟಿದ್ದರಿಂದ ಓದುತ್ತ ಕುಳಿತೆನು. ಅದು ಅಷ್ಟೇನೂ ಉದ್ದವಾಗಿಯೂ ಇರಲಿಲ್ಲ. ಕೂತಹಾಗೆಯೇ ಓದಿಮುಗಿಸಿದೆನು. ವಿಷಯ ನನಗೆ ಸ್ವಾರಸ್ಯವಾಗಿ ಕಂಡುಬಂದದ್ದರಿಂದ ಇತರರಿಗೂ ಸ್ವಾರಸ್ಯವಾಗಿರಬಹುದೆಂದು ಅದನ್ನು ಇಲ್ಲಿ ಬರೆಯುತ್ತೇನೆ. ಅದು ಡಯರಿಯಲ್ಲಿರುವುದು ಇಂಗ್ಲೀಷಿನಲ್ಲಿ. ಕೋಟ್ನೀಸಾಹೇಬ ಕನ್ನಡವನ್ನು ಚೆನ್ನಾಗಿ ಮಾತನಾಡಬಲ್ಲನು, ಬರೆಯಲೂ ಬಲ್ಲನು; ಈ ಡಯರಿಯಲ್ಲಿ ಅಲ್ಲಲ್ಲಿ ಕೆಲವು ಭಾಗ ಕನ್ನಡದಲ್ಲಿದೆ. ಆದರೆ, ಜಾಗ್ರತೆಯಾಗಿಯೂ ಸುಲಭವಾಗಿಯೂ ಬರೆಯುವ ಉದ್ದೇಶದಿಂದಲೂ ಭಾವವನ್ನು ಸುಲಭವಾಗಿ ವ್ಯಕ್ತಪಡಿಸುವ ಉದ್ದೇಶದಿಂದಲೂ ಇರಬೇಕು, ಹೆಚ್ಚು ಭಾಗವನ್ನು ಇಂಗ್ಲೀಷಿನಲ್ಲಿ ಬರೆದಿದಾನೆ. ನಾನು ಇಲ್ಲಿ ಕೊಡುವುದು ಒಂದು ದಿನದ ಡಯರಿಯ ತರ್ಜುಮೆಯನ್ನು. ಭಾಷೆ ಸ್ವಲ್ಪ ತರ್ಜುಮೆಯ ಭಾಷೆಯಾದರೂ ಆತನ ಸ್ವಭಾವವನ್ನು

ಸೂಚಿಸುವಂತೆ ಇರಲೆಂದು ಪ್ರಯತ್ನ ಪೂರ್ವಕ ಬರೆದಿದೇನೆ. ಭಾಷೆ ಹೇಗಿದ್ದರೂ ವಿಷಯ ಪ್ರಾಯಶಃ ರುಚಿಸಬಹುದು.

"ಈ ದಿನ ನಾನು ಒಂದು ಕೇಸನ್ನು ವಿಚಾರಿಸಿ ತೀರ್ಪುಕೊಟ್ಟೆನು. ಕೇಸಿನಲ್ಲಿ ಫಿರ್ಯಾದಿ ಆರ್ಥರ್ ಹೆನ್ರಿಸಾಹೇಬರು. ಅಪರಾಧಿಗಳು ಒಡ್ಡರ ತಿಮ್ಮಾಬೋಯಿ ರಾಮಾಬೋಯಿ. ಆರ್ಥರ್ ಹೆನ್ರಿಯುವರೂ ಅಪರಾಧಿ ಎಂದೇ ಹೇಳಬೇಕು. ಆದರೆ ನಾನು ಶಿಕ್ಷೆ ಕೊಡಬಹುದಾದರೆ ತಿಮ್ಮಾಬೋಯಿ ರಾಮಾಬೋಯಿಗಳಿಗೇ ಹೊರತು ಹೆನ್ರಿಯುವರಿಗೆ ಅಲ್ಲ. ಹೆನ್ರಿಯುವರ ಧರ್ಮಜ್ಞಾನದ ಮಹಿಮೆಯಿಂದ ಅವರಿಗೆ ಇಂದೋ ಮುಂದಕ್ಕೋ ಉಂಟಾಗಬಹುದಾದ ಪಶ್ಚಾತ್ತಾಪವು ಮಾತ್ರ ಅವರಿಗೆ ಇಲ್ಲಿ ಆಗಬಹುದಾದ ಶಿಕ್ಷೆ. ಕೆಲವು ಪದಾರ್ಥಗಳನ್ನು ಕಳೆದು ಕೊಂಡಿದಾರೆ, ಅದೂ ಅವರಿಗೆ ಶಿಕ್ಷೆಯೆಂದೇ ಹೇಳಬೇಕು. ಇದಲ್ಲದೆ ನಮ್ಮ ತಪ್ಪು ಸರಿಗಳನ್ನು ಎಂದೂ ನೋಡುತ್ತಿರುವ ಭಗವಂತನು ಮುಂದಕ್ಕೆ—ಅವರು ಎಲ್ಲರಿಗೂ ಹೇಳುವಂತೆ—ಅವರಿಗೆ ಯಾವ ಶಿಕ್ಷೆ ಅವಶ್ಯಕವೆಂದು ಕೊಡುವನೋ ಅದು. ಈ ದಿನ ಅಪರಾಧಿಗಳು ತಿಮ್ಮಾಬೋಯಿ ರಾಮಾಬೋಯಿ ಮಾತ್ರ.

"ಬೋಯಿಗಳಿಬ್ಬರೂ ಈ ಚಂದ್ರಪುರ ಡಿವೀಜನ್ನಿನ ಗೂಂಬಿ ತಾಲ್ಲೂಕಿನ ರಾಮಪುರದ ನಿವಾಸಿಗಳು. ರಾಮಪುರವು ಸಣ್ಣ ಹಳ್ಳಿ. ಅದರಲ್ಲಿ ಐವತ್ತು ಅರವತ್ತು ಮನೆಗಳಿರಬಹುದು. ಸುಮಾರು ಮೂವತ್ತು ಮನೆಗಳವರು ರೈತರು. ಮಿಕ್ಕವರು ಕೆಲವರು ತಿಗಳರು, ಕೆಲವರು ಒಡ್ಡರು. ಊರು ನೋಡುವುದಕ್ಕೆ ಸಣ್ಣದಾದರೂ ವಸತಿಯಾದ ಸ್ಥಳವಾದ್ದರಿಂದ ಜನ ಹೋಗುವುದೂ ಬರುವುದೂ ಸ್ವಲ್ಪ ಹೆಚ್ಚು. ಊರಿಗೆ ಸ್ವಲ್ಪದೂರದಲ್ಲಿರುವ ರಾಮದೇವರ ದೇವಾಲಯಕ್ಕೆ ಹರಕೆಗಳನ್ನು ತೀರಿಸುವುದಕ್ಕೂ ಯಾತ್ರಾರ್ಥವಾಗಿಯೂ ಕೆಲವು ಜನರು ಹೋಗುತ್ತ ಬರುತ್ತ ಇರುವರು. ಊರಿನಲ್ಲಿ ಒಡ್ಡರ ಮನೆ ಹತ್ತು ಹದಿನೈದು ಇರಬಹುದು. ಅವರೂ ಕೂಡ ಒಕ್ಕಲಿಗರಂತೆಯೇ ಜಮೀನುಗಳನ್ನು ಮಾಡಿಕೊಂಡು ಕುಡಿಯದೆ ಇದ್ದಾಗ ಯೋಗ್ಯರಾಗಿ ನಡೆದುಕೊಳ್ಳುತ್ತಾರೆ. ಪ್ರಾಯಶಃ ಅವರ ಗೊಡವೆಗೆ ಹೋಗದೇ ಇದ್ದವರಿಗೆ

ಅವರು ಸರಿಯಾಗಿರತಕ್ಕ ಮನುಷ್ಯರೇ. ಧರ್ಮವು ಬಹಳ ಅನನು ಕೂಲಕ್ಕೆ ಕಾರಣವಾಗದಂತಿದ್ದರೆ ಧರ್ಮವನ್ನನುಸರಿಸಿಯೇ ನಡೆಯುವರು. ಮಳೆ ಬೆಳೆ ಸರಿಯಾಗಿತ್ತೆನ್ನಿ—ಕಳ್ಳತನ ಮಾಡರು; ಎದುರಿಗೆ ಒಂದಿಷ್ಟು ರಾಗಿಯನ್ನು ಕಂಡರೆ, ಯಾರೂ ನೋಡದಿದ್ದರೂ ಅದನ್ನು ಹೊತ್ತುಕೊಂಡುಹೋಗರು. ಮುಖ್ಯ ಧರ್ಮವು ವಿಶೇಷ ಅನನುಕೂಲಕ್ಕೆ ಹಾದಿಯಲ್ಲದಿದ್ದರೆ ಧರ್ಮವನ್ನೇ ಅನುಸರಿಸುವರು. ನಮ್ಮಂತಹವರ ಧರ್ಮವನ್ನಲ್ಲದಿರಬಹುದು,—ಅವರಿಗೆ ತಿಳಿದ ಧರ್ಮವನ್ನು.

“ಅವರಿಗೆ ತಿಳಿದದ್ದೆಂಬ ಈ ಧರ್ಮದಲ್ಲಿ ಮೇಲೆಹೇಳಿದ ರಾಮ ದೇವರ ದೇವಾಲಯದ ವಿಗ್ರಹದಲ್ಲಿ ಅವರು ಇಟ್ಟುಕೊಂಡಿರುವ ಭಕ್ತಿಯು ಒಂದು ಅಂಶ. ನಮಗೆ ನಮ್ಮಂಥವರಿಗೆ ಯಾವ ಮಾತನ್ನು ಕೊಟ್ಟಾದರೂ ಕೆಡಿಸಲು ಹೇಸದ ಈ ಬೋಯಿಗಳು ರಾಮದೇವರಿಗೆ ಕೊಡುತ್ತೇವೆಂದು ಹರಸಿಕೊಂಡ ಮೂರು ಕಾಸನ್ನಾದರೂ ಸಲ್ಲಿಸದೆ ಇರರು. ನಮಗೆ ಹತ್ತುರೂಪಾಯನ್ನು ಬೇಕಾದರೂ ಮೋಸಮಾಡು ವರು. ದೇವರಿಗೆ ಸೇರಬೇಕಾದ ಕಾಣಿಕೆಯನ್ನು ತಪ್ಪದೆ ಅವನಿಗೆ ಕೊಡುವರು. ಇವರು ತಮ್ಮ ತಮ್ಮಲ್ಲೂ ಹಾಗೆಯೇ. ಇತರ ಜಾತಿ ಯವರಿಗೆ ಮೋಸಮಾಡುವರು, ತೊಂದರೆಕೊಡುವರು, ಮಾತು ಕೊಟ್ಟು ತಪ್ಪುವರು; ತಮ್ಮ ತಮ್ಮಲ್ಲಿ ಸರಿಯಾಗಿ ನಡೆದುಕೊಳ್ಳುವರು. ಅವರ ಮನಸ್ಸಿನ ಅಂತರಾಳದಲ್ಲಿ ದೇವರು ತಮ್ಮ ಜಾತಿಯವನೆಂದು ತಿಳಿದೇನಾದರೂ ಅವನಿಗೆ ಮೋಸಮಾಡದೆ ಇರುವರೇನೋ ಹೇಳಲಾಗು ವುದಿಲ್ಲ. ಇದು ಇವರಿಗೇ ಅಲ್ಲದೆ ನಮ್ಮವರಿಗೂ ಸ್ವಭಾವವೆಂದು ತೋರುತ್ತದೆ. ನಮ್ಮ ದೇಶೀಯರು ಕೆಲವರು ಈ ಸೀಮೆಗೆ ಬಂದು ಇಲ್ಲಿಯ ಜನಗಳಿಗೆ ಯಾವ ತೊಂದರೆಯನ್ನು ಕೊಡಲೂ ಹಿಂದೆಗೆಯು ವುದಿಲ್ಲ. ಅವರ ಕಷ್ಟಸುಖವನ್ನು ಯೋಚನೆಮಾಡದೆ ಕೆಲಸಗಳನ್ನು ನಡೆಯಿಸುವರು. ಆದರೆ ತಮ್ಮ ತಮ್ಮಲ್ಲಿ ಮಾತ್ರ ನಾನು ಕಂಡಹಾಗೆ ಯಾವಾಗಲೂ ಸರಿಯಾಗಿ ನಡೆದುಕೊಳ್ಳುವರು. ಆದ್ದರಿಂದ ಈ ಸ್ವಜಾತಿ ಪ್ರೇಮವು ಈ ಬೋಯಿಗಳಲ್ಲಿ ಅಸಾಧಾರಣವಾದ ತಪ್ಪೆಂದು ಹೇಳಲಾಗು

ವುದಿಲ್ಲ. ತಪ್ಪೇ ಆಗಲಿ ಸರಿಯೇ ಆಗಲಿ ಈ ಗುಣವೂ ಮೇಲೆ ನಾನು ಹೇಳಿರುವ ಇತರ ಗುಣಗಳೂ ಈ ಜನಕ್ಕೆ ಸಾಮಾನ್ಯವಾದವುಗಳು. ಮೊತ್ತದಲ್ಲಿ ಈ ಒಡ್ಡರು ಯಾವುದೋ ಒಂದು ಧರ್ಮವನ್ನೂ ನೀತಿಯನ್ನೂ ಒಂದು ರೀತಿಯ ಅಕೃತ್ರಿಮವಾದ ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಅನುಸರಿಸುತ್ತಾ, ಇದ್ದದ್ದರಲ್ಲಿ ಅನುಕೂಲವಾಗಿರುವಾಗ ತಕ್ಕಮಟ್ಟಿಗೆ ಜನಸಮುದಾಯದಲ್ಲಿ ಒಳ್ಳೆಯ ಕೆಲಸವನ್ನು ಮಾಡುತ್ತಾ ಯೋಗ್ಯರಾದ ಪ್ರಜೆಗಳಾಗಿರುತ್ತಾರೆ.

“ನಮ್ಮಲ್ಲಿ ಅನೇಕರಿಗೆ ಈ ಧರ್ಮವು ತತ್ತ್ವರಹಿತವಾದುದೆಂದೂ ಉದ್ಧಾರಕಶಕ್ತಿಯಿಲ್ಲದುದೆಂದೂ ತೋರಬಹುದು. ಸಂಸ್ಕೃತವಾದ ನಮ್ಮ ಬುದ್ಧಿಗೆ ಕ್ಲಿಷ್ಟವಾದ ತತ್ತ್ವಗಳೇ ಸಮ್ಮತ; ಸುಲಭವಾದ ತತ್ತ್ವಗಳಿಂದ ನಾವು ಜಿತರಾಗುವುದಿಲ್ಲ. ಇದು ನಾಗರಿಕತೆಯ ಹೃದಯ. ಕೆಲವುವೇಳೆ ಇದು ಒಂದು ದೋಷವೋ ಗುಣವೋ ಎಂದು ನಾನು ಸಂದೇಹಪಟ್ಟಿದೇನೆ. ಒರಟು ಜನರೆನ್ನುವರ ಮನಸ್ಸು ವಸಂತದ ಕೋಗಿಲೆಯ ಕೂಗಿಗೆ ನಲಿಯುವುದು; ಅದು ಕೇವಲ ಒಂದು ಸ್ವರ ಮಾತ್ರ. ನಮ್ಮ ಮನಸ್ಸು ನಲಿಯಲು *ಬೀಟ್ಹೊವನಿನ ಸಿಂಫನಿಗಳೂ ಸಾಲವು. ಆದರೂ ನಾವು ಸಂಸ್ಕೃತರು, ನಮ್ಮದೇ ನಾಗರಿಕತೆ. ನಾವು ರಾಮಾಬೋಯಿಯ ತಿಳಿವನ್ನು ನೋಡಿ,—ಇದು ಮಾನವನನ್ನು ಉದ್ಧಾರ ಮಾಡಬಲ್ಲ ತಿಳಿವಲ್ಲ, ಇವನನ್ನು ನಮ್ಮಂತೆಯೇ ಮಾಡಬೇಕು.—ಎನ್ನುವೆವು. ಆರ್ಥರ್ ಹೆನ್ರಿಸಾಹೇಬರ ಮತವು ಇದೇ. ಇವರು ರಾಮಾಬೋಯಿಯನ್ನೂ ಮತ್ತು ಅವನಂತಹ ಒರಟು ಜನರನ್ನೂ ಅವರ ಈ ತೆರದ ಅಜ್ಞಾನದಿಂದ ಉಳಿಸಿ ಅವರಿಗೆ ಸುಜ್ಞಾನವನ್ನು ಕೊಡಲಿಕ್ಕಾಗಿ ಇಂಗ್ಲಂಡಿನಿಂದ ಇಲ್ಲಿಗೆ ಬಂದಿದಾರೆ. ಬಹಳಮಟ್ಟಿಗೆ ಒಳ್ಳೆಯ ಕೆಲಸವನ್ನು ಮಾಡಿದಾರೆ. ಆದರೆ ಮಾಡುವುದರಲ್ಲಿ ಸ್ವಲ್ಪ ಸರಿಯಾದ ಮಾರ್ಗವನ್ನು ಬಿಟ್ಟದ್ದರಿಂದಲೋ, ಇಲ್ಲ ಸರಿಯಾಗಿದ್ದರೂ ಸಜ್ಜನರಿಗೆ ಆಗಾಗ ತೊಂದರೆಗಳು ಬರಬೇಕಾಗಿರುವುದರಿಂದಲೋ, ಅವರ ಬೋಧನೆಯ ಫಲವಾಗಿ—ಹೀಗೆ ಹೇಳಬಹುದು—ರಾಮಾ

---

*ಸುಪ್ರಖ್ಯಾತನಾದ ಒಬ್ಬ ಪಾಶ್ಚಾತ್ಯ ಗಾಯಕನ ಹೆಸರು. ಸಿಂಫನಿ—ಕೃತಿ.

ಬೋಯಿಯೂ ತಿಮ್ಮಾಬೋಯಿಯೂ ಈ ದಿನ ನನ್ನ ಕೋರ್ಟಿನ ಮುಂದೆ ತಪ್ಪಿತಸ್ಥರಾಗಿದಾರೆ; ಆರ್ಥರ್ ಹೆನ್ರಿಯವರು ನಷ್ಟಪಟ್ಟು ಫಿರ್ಯಾದಿಯಾಗಿ ನಿಂತಿದಾರೆ.

"ರಾಮದೇವರ ದೇವಾಲಯವನ್ನು ಕುರಿತು ನಾನು ಮೊದಲೇ ಹೇಳಿದೇನೆಯಷ್ಟೆ. ನಾನು ಈ ದೇವಾಲಯವನ್ನು ಬಹಳ ಸಲ ನೋಡಿದೇನೆ. ರಾಮಪುರವು ಸಣ್ಣ ಹಳ್ಳಿಯಾದರೂ ಬಹಳ ಸುಂದರವಾದ ಊರು. ಗೂಂಬಿಗೆ ಮೂರು ಮೈಲು ದೂರದ ಸುಮಾರಿನಲ್ಲಿ ನೈರುತ್ಯ ದಿಕ್ಕಿನಲ್ಲಿ ಇದೆ. ಗೂಂಬಿಯಿಂದ ಅಲ್ಲಿಗೆ ಹೋಗಲು ರಸ್ತೆಯಿದೆ. ನಮ್ಮ ಕವಿಶಾಷನರುಗಳ ಪ್ರಯತ್ನದಿಂದಲೂ ಈ ಸೀಮೆಯ ಜನರ ಧರ್ಮಬುದ್ಧಿಯಿಂದಲೂ ಬೆಳೆಯಿಸಲ್ಪಟ್ಟ ಮಹತ್ತರವಾದ ಉಷ್ಣವಲಯದ ಮರಗಳು ರಸ್ತೆಯ ಎರಡು ಕಡೆಯೂ ಸಾಲುಸಾಲಾಗಿ ನಿಂತಿವೆ. ರಾಮಪುರವನ್ನು ಸೇರುವುದಕ್ಕೆ ಮೊದಲು ರಸ್ತೆಯು ಒಂದು ಕೆರೆಯ ಕಟ್ಟೆಯ ಮೇಲೆ ಹೋಗುತ್ತದೆ. ಕೆರೆಯು ರಾಮಪುರದ ಕೆರೆ. ಊರೊಳಕ್ಕೆ ಬಂದು ಸೇರಿದಮೇಲೆ ರಸ್ತೆಯು ಎಲ್ಲಿಯೋ ಮಾಯವಾಗುವುದು. ಊರ ಮುಂದೆ ತುಂಬ ತುಂಬ ದೊಡ್ಡ ಮರಗಳು: ಆಲದವು ನೇರಳೆಯವು ಹೂವರಸೆಯವು; ಇವೆಲ್ಲಕ್ಕೂ ಸೂಕ್ಷ್ಮವಾದ ಅರಳಿಯವು; ಗುಂಪಾಗಿ ಊರಬಾಗಿಲ ಬಳಿ ನಿಂತಿರುವುವು. ಅವುಗಳ ಅಂದವನ್ನು ಹೇಳಲಾಗದು. ಉದಯದಲ್ಲಿಯ ಹೊಂಬಣ್ಣದ ರಶ್ಮಿಯಿಂದ ಸೊಗಯಿಸುವಾಗ ಈ ಉನ್ನತ ವೃಕ್ಷಗಳನ್ನು ನೋಡಿದ್ದಾದರೆ ಸೌಮ್ಯವಾಗಿಯೂ ಗಂಭೀರವಾಗಿಯೂ ನಿಂತಿರುವ ಆ ಆಲದಮರಕ್ಕೂ, ಬಂತೋ ಇಲ್ಲವೋ ಎಂಬಂತೆ ಮೃದುವಾಗಿ ಬೀಸುವ ತಂಗಾಳಿಯ ಸೂಕ್ಷ್ಮ ಚಲನವನ್ನು ತಾನೂ ಹಿಡಿದು ತನ್ನ ಎಲೆಗಳನ್ನು ಮಿತವಾಗಿ ನಯವಾಗಿ ಅಲುಗಾಡಿಸುವ ಆ ಅರಳಿಯಮರಕ್ಕೂ ಮನಸೋಲದವರಿರಲಾರರು. ಊರೊಳಗೆ ಹೋದರೆ ಅಲ್ಲಲ್ಲಿ ಮನೆಗಳು ಬೊಟ್ಟಿಕ್ಕಿದಹಾಗೆ ಇವೆ. ನಮ್ಮ ಊರುಗಳಲ್ಲಿರುವಂತೆ ಕೋಲು ಕೋಲಾದ ಅಸಹ್ಯವಾದ ರಸ್ತೆಗಳಿಲ್ಲ. ಮನೆಮನೆಯವರೂ ಅವರ ಮನೆಯ ಎದುರಿಗೆ ಕಸವನ್ನು ಗುಡಿಸಿ ಬೀದಿಯನ್ನು ಲಕ್ಷಣವಾಗಿ ಇರಿಸಿಕೊಂಡಿರುತ್ತಾರೆ. ಅಲ್ಲಲ್ಲಿ ರಂಗವಲ್ಲಿಯ

ನ್ನಿಕ್ಕುತಿರುವ ಸ್ತ್ರೀಯರು,—ಕೈಗಳಲ್ಲಿ ಕುಡುಗೋಲುಗಳನ್ನೋ ಇತರೆ ಆಯುಧಗಳನ್ನೋ ಹಿಡಿದುಕೊಂಡು ಕೆಲಸಕ್ಕೆ ಹೊರಟಿರುವ ರೈತರು, —ದನಕರುಗಳು,—ಮುಂದಕ್ಕೆ ಹೋದರೆ ಹೊಲಗಳು, ತೋಟಗಳು— ಒಂದೆರಡು ಫರ್ಲಾಂಗು ದೂರದಲ್ಲಿ ನದಿ. ನದಿಯು ದೂರದಿಂದ ಸುತ್ತಿ ಸುತ್ತಿ ಹರಿದುಬರುವ ದಾರಿಯು ಊರ ಹಿಂಭಾಗದಿಂದಲೇ ಕಾಣುವುದು. ಊರಿನ ಅರ್ಧಮೈಲು ದೂರದಲ್ಲಿ ಪಶ್ಚಿಮದಿಕ್ಕಿನಿಂದ ತಿಳಿಯದೆ ದಾರಿತಪ್ಪಿ ಬಂದ ಸಣ್ಣದೊಂದು ಗುಡ್ಡ. ಅದಕ್ಕೆ ರಾಮದೇವರ ಗುಡ್ಡವೆಂದು ಹೆಸರು. ನದಿಯು ಗುಡ್ಡವನ್ನು ಮೂರುಪಾಲು ಸುತ್ತಿಕೊಂಡು ಬರುತ್ತದೆ. ಊರಿನಿಂದ ಗುಡ್ಡಕ್ಕೆ ಹೋಗಬೇಕಾದರೆ, ಹೊಲಗಳಲ್ಲಿ ಬಿದ್ದಿರುವ ಒಂದು ಬಂಡಿಯ ಜಾಡಿನಲ್ಲಿ ಹೋಗಬೇಕು. ನಾನು ಅನೇಕಾವೃತ್ತಿ ನನ್ನ ಕುದುರೆಯ ಮೇಲೆ ಕುಳಿತು ಈ ಗುಡ್ಡದ ಬಳಿ ಹೋಗಿ ಕುದುರೆಯನ್ನು ಮರಕ್ಕೆ ಕಟ್ಟಿಹಾಕಿ ಒಂದು ಗಂಟೆ ಎರಡು ಗಂಟೆ ಹೊತ್ತು ಹೊತ್ತೇ ತಿಳಿಯದೆ ಗುಡ್ಡದಮೇಲೆ ಕಾಲವನ್ನು ಕಳೆದಿದ್ದೇನೆ. ಗುಡ್ಡದ ಸುತ್ತ ಎಲ್ಲಿ ನೋಡಿದರೂ ತೋಪುಗಳು. ಪೂರ್ವದಿಂದ ಇದ್ದು ಈಗ ಶಿಥಿಲವಾಗಿರುವ ಕಲ್ಲುಮೆಟ್ಟಲುಗಳ ಮೇಲೆ ಏರಿ ಗುಡ್ಡದ ತುದಿಯನ್ನು ಸೇರಬಹುದು. ಸೇರಿ ನೋಡಿದರೆ ಕಾಣುವ ಆ ಚಿತ್ರಸರಣಿಯ ವಿವಿಧ ಸೌಂದರ್ಯವನ್ನು ವರ್ಣಿಸುವುದು ಸಾಧ್ಯವಲ್ಲ. ಇಲ್ಲಿ ಅಲ್ಲಿ, ಅಲ್ಲಿ ಅಲ್ಲಿ, ಸಣ್ಣ ಸಣ್ಣ ಗುಡ್ಡಗಳು. ನಡುನಡುವೆ ಹಚ್ಚಗೆ ಹೊಲಗದ್ದೆಗಳು. ಗುಡ್ಡಗಳ ತಳದಲ್ಲಿಯೂ ಮೇಲೂ ತೋಪುಗಳು, ದೊಡ್ಡ ದೊಡ್ಡ ಮರಗಳು,—ಎಲ್ಲಾ ಕಡೆಯೂ ಪ್ರಕೃತಿಮಾತೆಯ ಸೌಮ್ಯಾಕಾರವನ್ನು ಅನುಕರಿಸಿ ಶಾಂತರಾಗಿ ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿರುವ ಜನರು,—ಸಮೃದ್ಧಿಯಾಗಿ ಸಿಕ್ಕುವ ಮೇವನ್ನು ಆತುರವಿಲ್ಲದೆ ಸಾವಧಾನವಾಗಿ ಮೇಯುತ್ತ ತೃಪ್ತವಾಗಿರುವ ದನಕರುಗಳು,—ಈ ಜೀವರಾಶಿ ಹೇಗೋ ಹಾಗೆಯೇ ತಾನೂ ಜೀವವುಳ್ಳದ್ದು ಎಂಬಂತೆ ತೋರುತ್ತ ಎಲ್ಲವನ್ನೂ ವಿಚಾರಿಸಿಕೊಂಡು ಬರುವಂತಿರುವ ಆ ಸಾವಕಾಶವಾಗಿ ಹರಿಯುವ ನದಿ;—ತೋಪುಗಳಲ್ಲಿ ಅಲ್ಲಲ್ಲಿ ಸೇರಿ ಸಂತೋಷದಿಂದ ಧ್ವನಿಮಾಡುತ್ತಿರುವ ಹಕ್ಕಿಗಳು,—ಇವೆಲ್ಲವನ್ನೂ ತನ್ನ ತೇಜಸ್ಸ

ನಿಂದ ಹೊದಿಸಿ ಎಲ್ಲವನ್ನೂ ಶೀಲಯುಕ್ತವನ್ನಾಗಿ ಮಾಡಿರುವ ಆ ಸೂರ್ಯರಶ್ಮಿ,—ಇವೆಲ್ಲವನ್ನೂ ಗುಡ್ಡದ ಮೇಲಿನಿಂದ ನೋಡಿ, ಗುಡ್ಡವೂ ಈ ಸೌಂದರ್ಯದಲ್ಲಿ ಲೀನವಾಗಿರುವುದನ್ನೂ, ಅದರ ಮೇಲಿರುವ ತಾನೂ ಈ ಶಾಂತಿಸಾಗರದಲ್ಲಿ ಮುಳುಗಿರುವೆನೆಂಬುದನ್ನೂ ತಿಳಿದವನ ಮನಸ್ಸಿಗೆ ವರ್ಣಿಸಲಾಗದ ಆನಂದವುಂಟಾಗುವುದು. ಈ ಗುಡ್ಡದ ಮೇಲೆ ನಿಂತು ಈ ಆನಂದವನ್ನು ಅನುಭವಿಸಿ ನಾನು ಅನೇಕ ವೇಳೆ,—ಈ ಹಿಂದುಗಳು ಬಹಳ ಬುದ್ಧಿವಂತರು; ಮಾನವನ ಹೃದಯದ ಯಾವ ಆಕಾಂಕ್ಷೆಗಳಿಂದ ಮತವೆಂಬುದೊಂದು ಅವನಿಗೆ ಬೇಕಾಗುವುದೋ ಆ ಆಕಾಂಕ್ಷೆಗಳನ್ನು ಅರಿತು ತಿಳಿದು ಅವುಗಳ ಪರಿತೃಪ್ತಿಗೆ ಅವಶ್ಯಕವಾದ ಗುಣಗಳನ್ನುಳ್ಳ ಸ್ಥಳಗಳನ್ನೇ ಹುಡುಕಿ ಹುಡುಕಿ ದೇವಾಲಯಗಳನ್ನು ಕಟ್ಟಿರುತ್ತಾರೆ; ಇವರ ಸೌಂದರ್ಯಗ್ರಹಣ ಬುದ್ಧಿಯು ಎಣೆಯಿಲ್ಲದುದು ;—ಎಂದುಕೊಂಡಿದೇನೆ. ಇನ್ನೊಂದೊಂದುವೇಳೆ,—ಈ ಗುಡ್ಡಕ್ಕೆ ಬಂದು, ದೇವದೇವನ ದರ್ಶನಕ್ಕೆ ಸುತ್ತಲೂ ಕಣ್ಣು ತಿರುಗಿಸುವುದನ್ನು ಬಿಟ್ಟು, ಇಲ್ಲಿ ಒಂದು ಮಂಟಪವನ್ನು ಕಟ್ಟಿ, ಅದರಲ್ಲಿ ಒಂದು ವಿಗ್ರಹವನ್ನು ಇಟ್ಟು, ಅದನ್ನು ನೋಡಿ, ದೇವರು ದೇವರು ಎನ್ನುವರಲ್ಲಾ? ಇವರಿಗೆ ದೇವರನ್ನು ಎಲ್ಲಿ ನೋಡಬೇಕೆನ್ನುವುದು ತಿಳಿಯದು ; ಇಂತಹ ಸ್ಥಳದಲ್ಲೂ ಇವರಿಗೆ ವಿಗ್ರಹ ಬೇಕೆ?—ಎಂದುಕೊಂಡಿದೇನೆ. ಒಂದೆರಡು ಗಂಟೆ ಇದ್ದು ಆಮೇಲೆ ಊರಿಗೆ ಬರಬೇಕಲ್ಲಾ ಎಂದು ಮನಸ್ಸಿಲ್ಲದೆ ಹಿಂದಿರುಗಿ ಬಂದಿದೇನೆ. ಈ ಗುಡ್ಡವನ್ನು ನದಿಯು ಮೂರುಕಡೆಯೂ ಸುತ್ತಿ ಕೊನೆಗೆ ಮೆಲ್ಲನೆ ಹೊರಟುಹೋಗುವುದನ್ನು ನೋಡಿದರೆ, ಈ ಸುಂದರವಾದ ಗುಡ್ಡದ ಮೇಲೆ ಹತ್ತುವುದಕ್ಕೆ ಎಲ್ಲಾದರೂ ದಾರಿ ಇದೆಯೋ ಎಂದು ಮೂರುಕಡೆಯೂ ಹುಡುಕಿ ನೋಡಿ ಆಮೇಲೆ ಏನಿದ್ದರೂ ನಾನು ಬೇರೆ ಹತ್ತುವುದಕ್ಕಾಗುವುದಿಲ್ಲ ಎಂದು ವ್ಯಸನದಿಂದಲೋ, ಇಲ್ಲದೆ ಇದು ಎಷ್ಟು ಒಳ್ಳೆಯ ಸ್ಥಳವಾದರೂ ನಾನು ಇರಬೇಕಾದದ್ದು ಈ ಗುಡ್ಡದ ಮೇಲಲ್ಲ ನಾನು ಸಾಗರವನ್ನು ಸೇರಬೇಕು ಎಂದು ಕರ್ತವ್ಯವನ್ನು ನೆನೆದುಕೊಂಡೋ, ಅದು ಮುಂದಕ್ಕೆ ಹರಿಯುತ್ತಿದೆ ಎಂದು ನನಗೆ ತೋರಿದೆ.

"ಈ ಗುಡ್ಡದಮೇಲಣ ರಾಮದೇವರ ದೇವಾಲಯವನ್ನೇ ರಾಮಾ ಬೋಯಿಯೂ ಅವನ ಜನರೂ ಬಹಳ ನಂಬಿಕೆಯಿಂದ ನಂಬಿಕೊಂಡಿದ್ದದ್ದು. ಅವರು ಈ ದೇವರ ಸಾಮರ್ಥ್ಯವನ್ನು ಕುರಿತು ಇಟ್ಟುಕೊಂಡಿರುವ ಅಭಿಪ್ರಾಯವು ನಮಗೆ ಯಾವ ದೇವರಲ್ಲೂ ಇರಲಾರದು. ಈ ದೇವರು ಸಾಮಾನ್ಯವಾಗಿ ಒಳ್ಳೆಯವನೇ. ಆದರೆ ಕೆಟ್ಟದ್ದನ್ನು ಮಾಡಬೇಕೆಂದರೆ ಬಹು ತಕರಾರಿನ ದೇವರು. ನ್ಯಾಯವಾಗಿರುವವರಿಗೆ ಅವನಿಂದ ಸಹಾಯವೇ ಹೊರತು ಬೇರೆಯಿಲ್ಲ. ತಪ್ಪುಮಾಡಿದವರಿಗೆ ಕೆಟ್ಟದನ್ನು ಮಾಡುವನು. ತಪ್ಪುಮಾಡಿದವರಿಗಾದರೂ ಕಾಣಿಕೆಯನ್ನು ಒಪ್ಪಿಸಿದರೆ ಪರಿಹಾರವುಂಟು. ತಲೆನೋವು ಮೂಗುನೋವು ಯಾವ ಕಾಯಿಲೆ ಬಂದರೂ ಹೋಗಿ ಹರಕೆಮಾಡಿಕೊಂಡು ನಿರಕಾದ ಕಾಣಿಕೆಯನ್ನು ಒಪ್ಪಿಸಿದರೆ ರೋಗವು ವಾಸಿಯಾಗುವುದು. ಯಾವನಾದರೂ ಗುಂಪಿನವರಿಗೆ ವಿರೋಧವಾದ ಕೆಲಸವನ್ನು ಎಷ್ಟೇ ರಹಸ್ಯವಾಗಿ ಮಾಡಿದರೂ ಆ ದೇವರೆದುರಿಗೆ ಬಂದುನಿಂತರೆ ಅವನು ನಿಜವನ್ನು ನುಡಿಯುವಂತೆ ಮಾಡುವನಂತೆ. ಹೀಗೆ ರಾಮದೇವರು ಆ ಒಡ್ಡರ ಪೈಕಿ ಒಬ್ಬ ಪ್ರಬಲನಾದ ನಾಯಕನು ಹೇಗೆ ಇರಬಹುದಾಗಿತ್ತೋ ಹಾಗೆ ಪ್ರಬಲನಾದ ದೇವರಾಗಿದ್ದನು. ಯಾವ ನಾಯಕನಾದರೂ ಸ್ವಲ್ಪ ಹೆಚ್ಚು ಕಡಿಮೆಯಾದ ಸ್ವಭಾವವನ್ನು ತೋರಿಸಬಹುದಾಗಿತ್ತು, ಈ ದೇವರ ಸ್ವಭಾವವು ಎಂದಿಗೂ ಒಂದೇ !

"ಹೀಗೆ ಒಡ್ಡರೆಲ್ಲ ಈ ದೇವರಲ್ಲಿ ಭಕ್ತಿಯುಳ್ಳವರಾಗಿದ್ದರು. ದೇವರಿಗೆ ಹೆದರಿ ಯಾವುದೋ ಒಂದು ರೀತಿಯಲ್ಲಿ ನ್ಯಾಯವಾಗಿರುತ್ತಿದ್ದರು. ಪ್ರಾಯಶಃ ಕೋರ್ಟು ಕಚೇರಿಗೆ ಎಂದೂ ಹೋದವರಲ್ಲ. ಅದರಲ್ಲೂ ಅಪರಾಧಿಗಳಾಗಿ ಕೋರ್ಟಿಗೆ ಬಂದದ್ದಿಲ್ಲ. ಇಂದು ಬಂದರು. ಫಿರ್ಯಾದು ಮಾಡಿರುವವರು ಇವರಿಗೆ ಜ್ಞಾನವನ್ನುಂಟುಮಾಡಬೇಕೆಂದು ಇಲ್ಲಿಗೆ ಬಂದಿರುವ ಆರ್ಥರ್ ಹೆನ್ರಿ ಸಾಹೇಬರು.

"ಫಿರ್ಯಾದಿನ ಸಮಾಚಾರವೇನೆಂದು ಆರ್ಥರ್ ಹೆನ್ರಿ ಸಾಹೇಬರು ಹೇಳಿದ್ದನ್ನು ಬರೆಯುತ್ತೇನೆ :—

"ಆರ್ಥರ್ ಹೆನ್ರಿಸಾಹೇಬರು ರಾಮಾಬೋಯಿ ತಿಮ್ಮಾಬೋಯಿ ಇವರನ್ನು ಬಹಳ ದಿನದಿಂದ ಬಲ್ಲರು. ಅವರು ರಾಮಪುರದಲ್ಲಿ ಆಗಾಗ ಉಪದೇಶಕ್ಕೆಂದುಹೋಗಿ ಉಪನ್ಯಾಸಗಳನ್ನು ಕೊಡುವಾಗ ಇವರೂ ಇತರರೂ ಬಂದು ಕೇಳುತ್ತಿದ್ದರು. ಮೊದಮೊದಲು ರಾಮಾಬೋಯಿ ತಿಮ್ಮಾಬೋಯಿ ಇಬ್ಬರೂ ಸ್ವಲ್ಪ ತಂಟೆಮಾಡುತ್ತಿದ್ದರು. ರಾಮದೇವರೇ ಹೆಚ್ಚು ಎಂದು ಒಂದೆರಡುಸಲ ಗಲಾಟೆಮಾಡಿದರು. ಆದರೆ ಇತರ ಒಡ್ಡರೂ ಕೆಲವರು ದೊಡ್ಡವರೂ,—ಅವರು ಹೇಳುವುದನ್ನು ಹೇಳಲಿ, ನಿಮಗೇನು ಸುಮ್ಮನೆ ಇರಿ, ಇಷ್ಟವಿದ್ದರೆ ಕೇಳಿ ಇಲ್ಲದೇ ಇದ್ದರೆ ಬಿಡಿ, —ಎಂದು ಹೇಳಿದ್ದರಮೇಲೆ ಸುಮ್ಮನೆ ಇರುತ್ತಿದ್ದರು. ಕೊಂಚದಿನದ ಮೇಲೆ ರಾಮದೇವರಲ್ಲಿ ನಂಬಿಕೆ ಇಲ್ಲವೆಂದು ಆ ದೇವಾಲಯಕ್ಕೆ ಹೋಗುವುದನ್ನು ಬಿಟ್ಟುಬಿಟ್ಟಿದ್ದರು. ಇದನ್ನು ನೋಡಿ ಹೆನ್ರಿಯವರು ಇವರಿಬ್ಬರನ್ನು ಕೊಂಚದಿನದಲ್ಲಿಯೇ ಕ್ರೀಸ್ತಮತಕ್ಕೆ ಸೇರಿಸಿಕೊಳ್ಳಲು ಸಾಧ್ಯವಾದೀತೆಂದು ತಿಳಿದುಕೊಂಡು ಬಹಳ ಸಂತೋಷದಲ್ಲಿದ್ದರು. ಆದರೆ ಅಷ್ಟರಲ್ಲೇ ಎಲ್ಲಾ ವಿಪರೀತಕ್ಕಿಟ್ಟುಕೊಂಡಿತು. ಒಂದು ದಿನ ಇವರಿಬ್ಬರೂ ಗೊಂಬಿಯ ಬಳಿ ಹೆನ್ರಿಸಾಹೇಬರ ಮನೆಗೆ ಬಂದಿದ್ದವರು ಸಾಯಂಕಾಲ ಊರಿಗೆ ಹೋಗುತ್ತೇವೆಂದು ಹೇಳಿ, ಹೋಗದೆ ಅಲ್ಲೆ ಸುಳಿದಾಡುತ್ತಿದ್ದು ರಾತ್ರಿ ಹೆನ್ರಿಸಾಹೇಬರ ಮನೆಯ ಪಕ್ಕದಲ್ಲಿರುವ ಚರ್ಚಿನಲ್ಲಿ ಇಳಿಯಬಿದ್ದು ಅಲ್ಲಿದ್ದ ದೇವರಿಗೆ ಸೇರಿದ ಕೆಲವು ಬೆಳ್ಳಿಯ ಸಾಮಾನುಗಳನ್ನೂ ಅವುಗಳ ಜತೆಗೆ ಇಟ್ಟಿದ್ದ ಸಾಹೇಬರಿಗೆ ಸೇರಿದ ಇನ್ನಷ್ಟು ಬೆಳ್ಳಿಯ ಸಾಮಾನನ್ನೂ ಕದ್ದುಕೊಂಡು ಹೊರಟುಹೋದರು. ಮಾರನೆಯ ದಿನ ಸಾಹೇಬರು ಸಾಮಾನು ಕಳವಾಗಿರುವುದನ್ನು ಕಂಡು ಪೋಲೀಸಿನವರಿಗೆ ಫಿರ್ಯಾದು ಮಾಡಿದರು. ಪೋಲೀಸಿನವರು ಅಲ್ಲಿ ಇಲ್ಲಿ ಹುಡುಕುವುದರಲ್ಲಿ ಸಾಮಾನು ರಾಮಾಬೋಯಿಯ ಮನೆಯಲ್ಲಿ ಕೊಂಚವೂ ತಿಮ್ಮಾಬೋಯಿಯ ಮನೆಯಲ್ಲಿ ಕೊಂಚವೂ ಸಿಕ್ಕಿತು. ಅವರು ಅವರಿಬ್ಬರನ್ನೂ ಹಿಡಿದು ವಿಚಾರಣೆ ಮಾಡಿ ಕೋರ್ಟಿಗೆ ತಂದಿದ್ದರು. ಹೆನ್ರಿಸಾಹೇಬರಿಗೆ ಅವರಮೇಲೆ ಫಿರ್ಯಾದು ಮಾಡಬೇಕೆಂಬ ಆತುರವೇನೂ ಇಲ್ಲ. ಆದರೆ ಈ ವಿಚಾರದಲ್ಲಿ ಪೋಲೀಸಿನವರ ಇಷ್ಟದಂತೆಯೇ ಹೊರತು ಅವರ ಇಷ್ಟದಂತೆ

ಬೋಯಿಗಳನ್ನು ಬಿಡುವುದಕ್ಕೆ ಆಗಲಿ ಹಿಡಿಯುವುದಕ್ಕೆ ಆಗಲಿ ಅವರಿಗೆ ಅಧಿಕಾರವಿಲ್ಲ. ಅಲ್ಲದೆ ಬೋಯಿಗಳು ಕೂಡ ತಾವು ಮಾಡಿದ ತಪ್ಪಿಗೆ ಪಶ್ಚಾತ್ತಾಪವೇನನ್ನೂ ತೋರಲಿಲ್ಲ. ಪಕ್ಕಾ ದುಷ್ಟರಂತೆ ನಡೆದುಕೊಳ್ಳುತ್ತಿದ್ದರು. ಹೆನ್ರಿಸಾಹೇಬರು ಅವರ ವಿಚಾರದಲ್ಲಿ ನಿರೀಕ್ಷಿಸಿದ್ದ ಆತ್ಮಸಂಸ್ಕಾರವು ಇನ್ನೂ ಹತ್ತಿರ ಬಂದಿರಲಿಲ್ಲ. ಆದ್ದರಿಂದ ಅವರು ಮಾಡಿದ ತಪ್ಪಿಗೆ ಸ್ವಲ್ಪ ಶಿಕ್ಷೆಯಾದರೆ ಪ್ರಾಯಶಃ ಅವರಿಗೆ ಬುದ್ಧಿ ಬಂದೀತೆಂದು ನಂಬಿದ್ದರು. ಅದರಿಂದಲೇ ಅವರು ಕೋರ್ಟಿಗೂ ಬಂದು ಇಷ್ಟು ಸಾಕ್ಷ್ಯವನ್ನು ಹೇಳಲು ಒಪ್ಪಿದರು.—

"ಹೆನ್ರಿಯವರು ಸಾಕ್ಷ್ಯವನ್ನು ಹೇಳುತ್ತಿದ್ದಾಗ ನಾನು ರಾಮಾಬೋಯಿ ತಿಮ್ಮಾಬೋಯಿಗಳ ಕಡೆ ನೋಡುತ್ತಿದ್ದೆನು. ಇಬ್ಬರೂ ಎರಡು ವಿಗ್ರಹಗಳಂತೆ ನಿಶ್ಚಲರಾಗಿ ನಿಂತಿದ್ದರು. ಈ ಪೂರ್ವದೇಶದ ಜನರೆಲ್ಲ ಹೀಗೆಯೇ ಎಂದು ಹೇಳಬಹುದು. ಅದು ಮೌಢ್ಯವೋ ಇಲ್ಲವೆ ಧೈರ್ಯವೋ ನಾನು ಹೇಳಲಾರೆ, ಯಾಕೆಂದರೆ ಕೇವಲ ಮೌಢ್ಯವೂ ಕೇವಲ ಧೈರ್ಯವೂ ಆಪತ್ಕಾಲದಲ್ಲಿ ಏಕರೀತಿಯಾಗಿ ನಡೆದುಕೊಳ್ಳುವುವು. ಇವರನ್ನು ನೋಡಿದರೆ ನನಗೆ ಹಿಂದೆ ಒಂದು ದಿನ ಏಥೆನ್ಸ್ ನಗರದಲ್ಲಿ ಸಾವು ಸನ್ನಿಹಿತವಾಗಿರುವುದೆಂದು ತಿಳಿದಿದ್ದರೂ ಧೈರ್ಯವಾಗಿ ನಿಂತಿದ್ದ ಸಾಕ್ರಟೀಸನ ನೆನಪು ಬಂದಿತು. ಹಾಗೆ ಹೇಳಬಾರದು—ಪೈಲೇಟನ* ಮುಂದೆ ದಂಡನೆಯನ್ನು ಎದುರುನೋಡುತ್ತ ಶಾಂತನಾಗಿ ನಿಂತಿದ್ದ ನಮ್ಮ ದೇವದೇವನ ಜ್ಞಾಪಕವೂ ಬಂದಿತು. ಇಬ್ಬರೂ ಸುಮ್ಮನೆ ನಿಂತಿದ್ದರು. ನನಗೆ ಅಯ್ಯೋ ಎನಿಸಿತು. ಆಮೇಲೆ ತಮ್ಮ ಮತವನ್ನು ಬಿಟ್ಟು ಕ್ರಿಸ್ತಮತಕ್ಕೆ ಬರಬೇಕೆನ್ನುವಷ್ಟು ತಿಳಿವು ಉಂಟಾಗಿದ್ದರೆ ಇವರು ಕಳವನ್ನು ಏಕೆಮಾಡಿದರು ಎಂದು ಯೋಚಿಸಿದೆನು. ಯೋಚಿಸುತ್ತಿದ್ದು ಹೆನ್ರಿಸಾಹೇಬರು ಹೇಳುವ ಮಾತನ್ನು ಮುಗಿಸಿದಮೇಲೆ,—

"'ಇವರು ಕ್ರಿಸ್ತಮತಕ್ಕೆ ಸೇರುವೆವೆಂದು ಹೇಳುತ್ತಿದ್ದರೇನು?' ಎಂದೆನು.

* ಯೇಸೂಕ್ರಿಸ್ತನಿಗೆ ಶಿಕ್ಷೆಯನ್ನು ವಿಧಿಸಿದ ರೋಮನ್ ನ್ಯಾಯಾಧಿಕಾರಿ.

"'ಇಲ್ಲ.'

"'ಸೇರುವರೆಂದು ಹೇಗೆ ತಿಳಿದುಕೊಂಡಿರಿ?'

"'ಆ ದೇವರಲ್ಲಿ ನಂಬಿಕೆ ತಪ್ಪಿದ್ದವರಲ್ಲಿ ಇವರೇ ಎಲ್ಲರಿಗಿಂತಲೂ ಮುಂದಾಗಿದ್ದವರು. ಇವರು ಹೆಚ್ಚಾಗಿ ನಂಬಿಕೆಯನ್ನು ಬಿಟ್ಟಿದ್ದರು. ಅದು ಇವರು ಹೇಳುತ್ತಿದ್ದ ಮಾತಿನಲ್ಲೆಲ್ಲಾ ತಿಳಿಯುತ್ತಿತ್ತು. ಮಿಕ್ಕವರು ದೇವಾಲಯಕ್ಕೆ ಸಮ್ಮನೆಯಾದರೂ ಹೋಗುವರು. ಇವರು ಹೋಗುವ ದಿಲ್ಲವೆಂದು ಒಂದೆರಡುದಿನ ಹಠಮಾಡಿದರು.'

"'ಸರಿ' ಎಂದು ನಾನು ರಾಮಾಬೋಯಿ ತಿಮ್ಮಾಬೋಯಿಗಳನ್ನು ಕುರಿತು 'ಅಯ್ಯಾ ನಿಮ್ಮಕಡೆ ಯಾರನ್ನಾದರೂ ವಕೀಲರನ್ನು ಕರೆತರುವುದಿಲ್ಲವೆ?' ಎಂದೆನು.

"ರಾಮಾಬೋಯಿ 'ಇನ್ನು ಅದೇಕೆ ಸ್ವಾಮಿ. ತಪ್ಪುಮಾಡಿದ್ದಾಗಿಹೋಯಿತು. ಇನ್ನು ವಕೀಲರೇಕೆ?' ಎಂದನು.

"ನಾನು 'ನೀನು ಏನನ್ನೂ ಒಪ್ಪಿಕೊಳ್ಳಬೇಕಾದದ್ದಿಲ್ಲ. ಅವರು ಹೇಳಿರುವುದು ಸರಿಯಲ್ಲ ಎಂದು ಬೇಕಾದರೆ ರುಜುವಾತು ಮಾಡಬಹುದು' ಎಂದೆನು.

"ರಾಮಾಬೋಯಿ 'ಅವರೇನೂ ತಪ್ಪುಮಾತು ಆಡುವವರಲ್ಲ ಸ್ವಾಮಿ: ನಾವೂ ತಪ್ಪುಮಾತು ಆಡಿ ತಪ್ಪಿಸಿಕೊಳ್ಳುವುದಿಲ್ಲ. ಎಲ್ಲಾದರೂ ಉಂಟೆ ಸ್ವಾಮಿ' ಎಂದನು.

"ನಾನು 'ನಿನ್ನ ಮಾತು ನೀನು ಹೇಳಿಕೊ. ಅವನ ಮಾತು ನಿನಗೇಕೆ?' ಎಂದು ಹೇಳಿದೆನು.

"ತಿಮ್ಮಾಬೋಯಿ 'ಅವನು ಹೇಳಿದ್ದನ್ನೇ ನಾನೂ ಹೇಳುವುದು ಸ್ವಾಮಿ. ಇನ್ನು ಬೇರೆ ಏನೂ ಇಲ್ಲ.' ಎಂದನು.

"ನಾನು 'ಹಾಗಾದರೆ ತಾಳಿ, ಇಲ್ಲಿ ಬರೆದುಕೊಳ್ಳುತ್ತೇನೆ. ಆಮೇಲೆ ನೀವು ಹೇಳುವ ಮಾತನ್ನು ಹೇಳುವಿರಂತೆ.' ಎಂದು ಛಾರ್ಜನ್ನು ಬರೆದು ಅದನ್ನು ಅವರಿಗೆ ಓದಿ ಹೇಳಿ ನೀವು ಇದನ್ನು

ಒಪ್ಪುವಿರಾ' ಎಂದು ಕೇಳಲು ಅವರು ನಮ್ಮದು ತಪ್ಪಾಯಿತು ಎಂದರು; ಅದನ್ನು ಬರೆದುಕೊಂಡೆನು. ಆಮೇಲೆ 'ನೀವು ಕ್ರಿಸ್ತಮತಕ್ಕೆ ಸೇರ ಬೇಕೆಂದಿದ್ದವರು ಈ ಕಳ್ಳತನವನ್ನೇಕಯ್ಯ ಮಾಡಿದಿರಿ?' ಎಂದು ಕೇಳಿದೆನು.

"ರಾಮಾಬೋಯಿ 'ನಾವು ಜಾತಿಗೀತಿ ಕೆಡಬೇಕೆಂದಿರಲಿಲ್ಲ ಸ್ವಾಮಿ' ಎಂದನು.

"'ನಿಮ್ಮ ದೇವರನ್ನು ಬಿಟ್ಟಿರಂತೆ.'

"ರಾಮಾಬೋಯಿ: 'ಏನೋ ಬಿಟ್ಟೆವು. ಈ ಸಾಹೇಬರು ಹೇಳಿದರು—ನಿಮ್ಮ ದೇವರಿಗೆ ದೀಪ ಹಚ್ಚದಿದ್ದರೆ ಕತ್ತಲಲ್ಲಿರುತ್ತಾನೆ, ಗುಡಿಯು ಕಸ ಗುಡಿಸದಿದ್ದರೆ ಅವನು ಕಸ ಗುಡಿಸಿಕೊಳ್ಳಲಾರ ಎಂದರು. ನಮ್ಮ ದೊಡ್ಡವರು, ಬೇಡ, ಹಾಗೆಲ್ಲಾ ಬಿಡಬಾರದು, ಎಂದರು. ನಾವು ಬಲವಂತಮಾಡಿ ಗುಡಿ ಮುಚ್ಚಿ ಬೀಗಹಾಕಿಬಿಟ್ಟೆವು. ಹತ್ತುದಿನದ ಮೇಲೆ ಹೋಗಿ ನೋಡಿದರೆ ಸಾಹೇಬರು ಹೇಳಿದಂತೆಯೇ ಆಗಿತ್ತು. ದೇವರಮೇಲೆ ಒಂದಿಷ್ಟು ಮಣ್ಣುಹೆಂಟೆ ಕಳಚಿ ಬಿದ್ದಿತ್ತು, ದೇವರು ಅದನ್ನು ಕೂಡ ತೆಗೆದುಹಾಕಿರಲಿಲ್ಲ. ಗುಡಿಯಿಂದ ಒಂದು ಪಾತ್ರೆಯನ್ನು ಕದ್ದೆವು, ಏನೂ ಆಗಲಿಲ್ಲ. ಅದರಮೇಲೆ ಈ ದೇವರಲ್ಲಿ ಸತ್ಯ ಸಾಲದು ಎಂತ ಎಂದುಕೊಂಡೆವು.'

"'ಆ ದೇವರಿಗೆ ಸತ್ಯ ಸಾಲದಿದ್ದರೆ ಈ ಗುಡಿಗೆ ಯಾಕೆ ಇಳಿಯು ಬಿದ್ದಿರಿ?'

"'ಇವರ ಗುಡಿಯಲ್ಲಿ ದೇವರೇ ಇಲ್ಲ ಸ್ವಾಮಿ. ದೇವರಿದ್ದೂ ಅಲ್ಲಿ ಹೀಗಾದರೆ ದೇವರಿಲ್ಲದ ಜಾಗದಲ್ಲಿ ಏನು ಹೆದರಿಕೆ ಎಂತ ನಾನೂ ಇವನೂ ಆ ಭಾನುವಾರ ಇಳಿಯುಬಿದ್ದು ಇವರ ಗುಡಿಯಲ್ಲಿ ಸಾಮಾನು ತೆಗೆದುಕೊಂಡೆವು.'

"'ದೇವರು ತೊಂದರೆ ತಂದನಲ್ಲ?'

"'ಏನೂ ಇಲ್ಲ ಸ್ವಾಮಿ. ಸಾಹೇಬರು ಹಿಡಿದುಕೊಂಡರು, ದೇವರು ಏನುಮಾಡಿಯಾನು? ಆ ದೇವರೂ ಸತ್ಯ ಇಲ್ಲ, ಈ ದೇವರೂ

ಪತ್ಯ ಇಲ್ಲ. ಈ ದೇವರ ಸಾಮಾನು ಸಾಹೇಬರು ನೋಡಿಕೊಳ್ಳುತ್ತಾರೆ. ಆ ದೇವರ ಸಾಮಾನು ನಮ್ಮ ಯಜಮಾನ ನೋಡಿಕೊಳ್ಳುತ್ತಾನೆ. ಈಗ ನಾವು ಇಲ್ಲಿ ಆಗುವ ಶಿಕ್ಷೆ ಅನುಭವಿಸಿ ಬಂದಮೇಲೆ ನಮ್ಮ ದೇವರಿಗೆ ಅಪರಾಧದ ಕಾಣಿಕೆ ಕೊಡಬೇಕು. ನಮ್ಮ ಯಜಮಾನ ಗೊತ್ತು ಮಾಡಿದಾನೆ.'

"ನಾನು ಹೆನ್ರಿಯವರನ್ನು 'ಇವರಿಗೆ ರಾಮದೇವರಲ್ಲಿ ನಂಬಿಕೆ ತಪ್ಪುವಂತೆ ಮಾಡುವುದಕ್ಕೆ ನೀವು ಆ ದಾರಿಯನ್ನು ತೆಗೆದಿರೇನು? ಎಂದು ಕೇಳಿದೆನು.

"'ಹೌದು. ವಿಗ್ರಹದಲ್ಲಿ ಏನೂ ಇಲ್ಲ ಎನ್ನುವುದನ್ನು ತೋರಿ ಸುವುದಕ್ಕೆ ನಾನು ಹಾಗೆ ಹೇಳಿದೆ. ಇವರು ಹುಡುಗರು, ಕೆಲವರು ಮಾಡಿ ನೋಡಿದರು. ನಾನು ಹೇಳಿದ್ದು ನಿಜವಾಯಿತು. ಆದರೆ ಆಮೇಲೆ ಪಾತ್ರೆ ಕದ್ದದ್ದು ನನಗೆ ತಿಳಿಯದು. ಮುಂದಕ್ಕೆ ಈ ಯೋಚನೆಮಾಡಿಯಾರೆಂದು ನನಗೆ ತೋರಲೇ ಇಲ್ಲ.' ಎಂದು ಹೆನ್ರಿ ಯವರು ಹೇಳಿದರು.

"ನಾನು ರಾಮಾಬೋಯಿಯನ್ನೂ ತಿಮ್ಮಾಬೋಯಿಯನ್ನೂ ಕುರಿತು 'ನಿಮಗೆ ಜುಲ್ಮಾನೆ ಹಾಕಿದರೆ ಕೊಡುವಿರಾ?' ಎಂದೆನು.

"'ನಮ್ಮಿಂದಾಗದು ಸ್ವಾಮಿ. ನಾವು ಬಡವರು. ಆಮೇಲೆ ನಮ್ಮ ದೇವರಿಗೆ ಕಾಣಿಕೆ ಕೊಡುವುದೇ ಸಾಕಾಗಿದೆ.'

"'ಹಾಗಾದರೆ ಸಾದಾ ಸಜಾ ಹಾಕುತ್ತೇನೆ.'

"'ಮಹಾಸ್ವಾಮಿ, ನಾವು ಒಂದುಕಡೆ ಸುಮ್ಮನೆ ಕೂತಿರ ಲಾರೆವು, ಕೆಲಸದ ಸಜಾ ಹಾಕಿ ಮಹಾಸ್ವಾಮಿ.'

"ಬಹಳ ಯೋಚನೆಮಾಡಿ ಬಹು ವ್ಯಸನದಿಂದ ಒಬ್ಬೊಬ್ಬನಿಗೂ ಹದಿನೈದುದಿನ ಕಠಿಣ ಸಜಾ ಹಾಕಿದೆನು.

"ಹೆನ್ರಿಯವರನ್ನು ಆಮೇಲೆ 'ಅಯ್ಯಾ ನೀವು ಇವರಿಗೆ ಆ ಬೆಳ್ಳಿ ಸಾಮಾನು ಇರುವ ಜಾಗವನ್ನು ಏಕೆ ತೋರಿಸಿದಿರಿ?' ಎಂದೆನು. ಅವರು 'ಮೊದಲು ಇವರು ಅಲ್ಲಿಗೆ ಬರುವಂತೆ ಮಾಡುವುದಕ್ಕೆ ಆ

ಸಕಾಸೆ ಕೆಲಸದ ಸಾಮಾನನ್ನು ತೋರಿಸಿದೆನು, ಆಮೇಲೆ ಅವರಿಗೆ ಅದನ್ನು ನೋಡಲು ಆಸೆಯಿರುವುದೆಂದು ತಿಳಿದು ತೋರಿಸಿದೆನು. ಯಾವ ಕಾರಣದಿಂದಲಾದರೂ ಅವರು ಚರ್ಚಿಗೆ ಬಂದು ದೇವರ ಸುವಾರ್ತೆಯನ್ನು ಕೇಳಲಿ ಎಂದು ಹೀಗೆ ಮಾಡಿದೆನು. ಅದು ಹೀಗೆ ಕೊನೆಯಾಯಿತು,' ಎಂದರು.

"ನಾನು ಬೋಯಿಗಳಿಗೆ ಶಿಕ್ಷೆಯನ್ನು ಮಾಡಿದೆನು. ನಾನು ಇಲ್ಲಿ ಇನ್ನೇನನ್ನೂ ಮಾಡುವಹಾಗಿಲ್ಲ. ಆದರೆ ಈ ಕಳ್ಳತನದ ತಪ್ಪು ಅರ್ಧವಾದರೂ ಹೆನ್ರೀಸಾಹೇಬರದೆಂದು ನನಗೆ ಈಗಲೂ ತೋರುತ್ತಿದೆ. ಅದನ್ನು ದೇವದೇವನು ವಿಚಾರಿಸಿಕೊಳ್ಳಬೇಕು.

"ಈ ದಿನವೆಲ್ಲ ನನ್ನ ಮನಸ್ಸು ಬಹಳ ಕಳವಳಗೊಂಡಿದೆ. ಒಬ್ಬನು ಅಜ್ಞಾನದಲ್ಲಿ ದಾರಿತಪ್ಪಿ ಅಲೆಯುತ್ತಿರುವನು; ಇನ್ನೊಬ್ಬನು ಅವನಿಗೆ ದಾರಿ ತೋರಿಸುವೆನೆಂದು ಅವನನ್ನು ಹಳ್ಳದಲ್ಲಿ ತಳ್ಳುವನು; ಇನ್ನೊಬ್ಬನು ಈ ಹಳ್ಳದಲ್ಲಿ ಬಿದ್ದವನನ್ನು ಆದರಲ್ಲಿ ಬಿದ್ದ ತಪ್ಪಿಗೆ ದೊಣ್ಣೆಯಿಂದ ಹೊಡೆಯುವನು.—ಎಲ್ಲವೂ ಶುದ್ಧ ಅವಿವೇಕವಲ್ಲವೆ?

"ಹೌದು, ಅವಿವೇಕವೇ ಸರಿ. ಆದರೆ ಇದನ್ನೆಲ್ಲ ಬಲ್ಲವನು ದೊಡ್ಡವನು ಬೇರೊಬ್ಬನಿದ್ದಾನೆ. ನಾನು ಇಲ್ಲಿ ಮಾಡಿರುವ ನ್ಯಾಯವು ಸರಿಯಲ್ಲವೆಂದು ನಮಗೆ ತೋರಬಹುದು. ನಾನೇನು ಮಾಡಲಿ? ಅದು ಇಲ್ಲಿಯ ತೀರ್ಪು."

# ಬಾದಷಹನ ದಂಡನೆ

---

ಮಾತಿಯು ಉಸಫ್ ಖಾನರ ವ್ಯವಹಾರದಲ್ಲಿ ಬಾದಷಹನು ತೀರ್ಪನ್ನು ಕೊಟ್ಟಮೇಲೆ ಅವನ ಹೆಸರನ್ನು ಹೊಗಳದವರೇ ಇಲ್ಲ. ಮುಸಲ್ಮಾನರು ಕ್ರೀಸ್ತರು ಯೆಹೂದ್ಯರು ಎಲ್ಲರೂ ಷಾಹ ಅಬ್ಬಾಸ್ ಬಾದಷಹನೆಂದರೆ ಪ್ರಾಣವನ್ನು ಬಿಟ್ಟುಕೊಡುವರು. ಎಲ್ಲರಿಗೂ ಒಂದು ಧೈರ್ಯ: ಯಾವುದಾದರೂ ಕಾರಣದಿಂದ ದೊರೆಯು ಬಳಿಗೆ ದೂರು ತೆಗೆದುಕೊಂಡು ಹೋದರೆ ಅವನು ಹೇಗಾದರೂ ನ್ಯಾಯವನ್ನು ಕಂಡು ಹಿಡಿಯುವನು, ನಮಗೆ ಒಳ್ಳೆಯದಾಗುವುದು, ಎಂದು. ಇದೇ ಅಲ್ಲದೆ ದುಷ್ಟರು ಬಹಳ ಭಯದಲ್ಲಿರುತ್ತಿದ್ದರು. ನೋಡುವುದಕ್ಕೆ ನಗುತ್ತ ವಿಶ್ವಾಸವಾಗಿ ಕಾಣುತ್ತಿದ್ದ ಮಾತ್ರಕ್ಕೆ ದೊರೆಯ ಮನಸ್ಸು ಹೀಗೆಯೇ ಎಂದು ಅವನ ಸೇವಕರು ಯಾರೂ ದೃಢವಾಗಿರುವುದಕ್ಕೆ ಸಾಧ್ಯವಿಲ್ಲ. ಎಲ್ಲರಿಗಿಂತಲೂ ಜಾಗ್ರತೆಯಾಗಿ ದೊಡ್ಡ ಅಧಿಕಾರಿಗಳಿಗೆ ಏರಿದ ಉಸಫ್ ಖಾನನಿಗೆ ಏನಾಯಿತು, ನಮ್ಮ ಪಾಡು ಏನೋ, ಎಂದು ತಪ್ಪುಮಾಡಿದ ಎಲ್ಲರೂ ಹೆದರಿಕೆಯಲ್ಲಿರಬೇಕಾಗಿತ್ತು. ಹೀಗೆ ಬಹಳಮಟ್ಟಿಗೆ ಮೋಸವೂ ಅನ್ಯಾಯವೂ ಕಡಮೆಯಾಗುತ್ತ ಬಂದವು. ಇದನ್ನು ಮಂತ್ರಿಗಳೂ ಸೇವಕರೂ ಬಾದಷಹನಿಗೆ ಬೇರೆ ಬೇರೆ ರೀತಿಯಾಗಿ ಹೇಳುವರು. ಬಾದಷಹನು ಇದನ್ನು ಕೇಳಿ ಸಂತೋಷಪಡುವನು. ತನ್ನ ರಾಜ್ಯವು ಧರ್ಮದ ರಾಜ್ಯವಾಯಿತೆಂದು ನೆನೆದು ಉತ್ಸಾಹವನ್ನು ಅನುಭವಿಸುವನು.

ಬಾದಷಹನು ಸೋಡಿದ್ದರಲ್ಲಿ ತನ್ನ ಬಳಿ ಬಂದ ಎಲ್ಲರೂ ರಾಜ್ಯದ ಒಳ್ಳೆಯ ಸ್ಥಿತಿಯನ್ನು ಕುರಿತು ಹೊಗಳಿದರೂ ಮಾತಿಯನು ಮಾತ್ರ ಏನೂ ಹೇಳುತ್ತಿರಲಿಲ್ಲವೆಂದು ಕಂಡಿತು. ಆ ವ್ಯವಹಾರದಲ್ಲಿ ಮೊದಲಿಂದಲೂ ಸರಿಯಾದ ಮಾತನ್ನೇ ಆಡಿ ಏನಾದರೂ ತನ್ನ ಮಾತೇ ಸರಿಯೆಂದು ಹಠಮಾಡಿದ್ದನಾದ್ದರಿಂದ ಮಾತಿಯನ ವಿಷಯದಲ್ಲಿ ಬಾದಷಹನಿಗೆ

ವಿಶೇಷ ಮರ್ಯಾದೆ. ಅಲ್ಲದೆ ಅವನು ತನ್ನ ಅಭಿಪ್ರಾಯವನ್ನು ಇದ್ದ ದ್ದನ್ನು ಇದ್ದಹಾಗೆ ಹೇಳುವನೆಂದು ಒಂದು ನಂಬಿಕೆ. ದೊರೆಯು ಆಗಾಗ ಮಾತಿಯನನ್ನು ತನ್ನ ಬಳಿಗೆ ಕರೆಯಿಸುವನು, ರಾಜ್ಯವು ಸುರಕ್ಷಿತವಾಗಿದೆಯೋ ಎಂದು ವಿಚಾರಿಸುವನು. ಇಂಥ ಸಮಯ ಗಳಲ್ಲಿ ಮಾತಿಯನು ಒಂದೇ ಮಾತಿನಲ್ಲಿ ಸ್ವಾಮಿಯ ರಾಜ್ಯವು ಸುರಕ್ಷಿ ತವೇ ಸರಿ ಎಂದು ಹೇಳಿ ಮಾತನ್ನು ನಿಲ್ಲಿಸುವನು. ದೊರೆಗೆ ಇದು ಸಾಲದು. ಆದರೂ ಇನ್ನು ಹೇಗೆ ಕೇಳುವುದು ಎಂದು ಸುಮ್ಮನೆ ಆಗುವನು. ಹೀಗೆಯೇ ನಡೆಯುತ್ತಿತ್ತು.

ಹೀಗಿರುವಲ್ಲಿ ಒಂದು ದಿನ ಬಾದಷಹನು ಅಂತಃಪುರದಲ್ಲಿ ತನ್ನ ಪಟ್ಟದರಾಣಿಯೊಂದಿಗೆ ಸ್ವಲ್ಪ ಹೊತ್ತು ಮಾತನಾಡುತ್ತಿದ್ದು, ಯಾರಾ ದರೂ ಬಂದಿದ್ದರೆ ಮಾತನಾಡುವುದಕ್ಕೆ ಹೋಗುವುದು ಇಲ್ಲದಿದ್ದರೆ ಅಲ್ಲೇ ಸ್ವಲ್ಪಹೊತ್ತು ಕುಳಿತಿರುವುದು ಎಂದು ಯೋಚಿಸಿ, "ಯಾರಾ ದರೂ ನೋಡಬೇಕಾದರೆ ಬರುವ ದಿನ, ಬೈಠಕಖಾನೆಯಲ್ಲಿ ಯಾರಾದರೂ ಕಾದಿದಾರೆಯೋ ವಿಚಾರಿಸು" ಎಂದು ಹೇಳಿಕಳುಹಿಸಿದನು. ಸೇವಕನು ಹೋಗಿ ನೋಡಿ, "ಬೈಠಕಖಾನೆಯಲ್ಲಿ ವಜೀರರು ಕುಳಿತಿದ್ದಾರೆ, ಬಾಗಿಲ ಬಳಿ ಮಾತಿಯಾ ಕಾದಿದಾನೆ," ಎಂದನು. ವಜೀರನಂತೂ ಆಗಾಗ ಬರುತ್ತಲೇ ಇರುವನು. ಮಾತಿಯನು ಸಾಮಾನ್ಯವಾಗಿ ಹೇಳಿಕಳುಹಿ ಸಿದರೆ ಮಾತ್ರ ಬರುವನು, ತಾನಾಗಿ ಬರುವುದಿಲ್ಲ. ಏಕೆ ಬಂದನೋ ಎಂದು ಬಾದಷಹನು ಎದ್ದು ಬೈಠಕಖಾನೆಯ ಬಳಿಗೆ ಹೊರಟನು. ಬೈಠಕಖಾನೆಗೆ ಬರಲು ವಜೀರನು ಎದ್ದು ಬಗ್ಗಿ ಸಲಾಮು ಮಾಡಿದನು. ಮಾತಿಯನು ದೂರ ಹೋಗಿ ನಿಂತನು.

ಬಾದಷಹನು ವಜೀರನನ್ನು "ಕೆಲಸವೇನಿತ್ತು?" ಎಂದು ಕೇಳಿದನು.

ವಜೀರನು, "ಭೇಟಿಗಾಗಿ ಬಂದೆ—ಮಹಾಸ್ವಾಮಿಯವರಿಗೆ ತೊಂದರೆಕೊಡಬೇಕಾದ ವಿಷಯವೇನೂ ಇಲ್ಲ," ಎಂದನು.

ಬಾದಷಹನು ಮಾತಿಯನನ್ನು, "ಮಾತ್ಯಾ ಬನ್ನಿ," ಎಂದು ಕರೆದನು.

ಮಾತಿಯನು ಬಾಗಿಲ ಬಳಿ ಬಂದು ನಿಂತನು.

ಬಾದಶಹನು "ಏನಾದರೂ ಹೇಳುವ ವಿಷಯವಿತ್ತೋ?" ಎಂದು ಕೇಳಿದನು.

ಮಾತಿಯ "ಮಹಾಸ್ವಾಮಿಯವರ ದರ್ಶನಕ್ಕಾಗಿ ಬಂದೆ. ವಜೀರ ಸಾಹೇಬರನ್ನು ಕಾಯಿಸಿ ಹೇಳಿಕೊಳ್ಳಬೇಕಾದ ವಿಷಯವೇನೂ ಇಲ್ಲ."

ವಜೀರನು "ನನಗೆ ಅದರಿಂದೇನೂ ತೊಂದರೆ ಇಲ್ಲ. ಮಹಾಸ್ವಾಮಿಯವರಲ್ಲಿ ಹೇಳಬೇಕಾದ ಮಾತನ್ನು ಹೇಳಿ. ನನ್ನ ಕೆಲಸವೇನೂ ಇಲ್ಲ" ಎಂದನು.

ಮಾತಿಯನ ಅಭಿಪ್ರಾಯ "ಈ ವಜೀರನಿದ್ದರೆ ಧಾರಾಳವಾಗಿ ಮಾತನಾಡುವುದಕ್ಕಿಲ್ಲ. ಇವನಿಲ್ಲದಾಗ ಬರಬೇಕು" ಎಂದು. ವಜೀರನಿಗೆ ಇವನು ಬಾದಶಹನಿಗೆ ಏನು ಹೇಳುವನೋ ಅದನ್ನು ಸಾಧ್ಯವಾದರೆ ತಾನೂ ಕೇಳಬೇಕೆಂದು ಭಾವ. ಬಾದಶಹನು ಇಂಗಿತವನ್ನು ತಿಳಿದು ವಜೀರನಿಗೆ "ಏನೂ ಕೆಲಸವಿಲ್ಲದೆ ಇದ್ದರೆ ತಾವು ಹೊರಡಬಹುದು. ಮಾತಿಯನ ಮಾತು ಒಂದೆರಡು ಇದ್ದರೆ ಕೇಳಿ ನಾನು ಕಳುಹಿಸಿಬಿಡುತ್ತೇನೆ. ನನಗೂ ಈಗ ಯಾವುದಕ್ಕೂ ಮನಸ್ಸಿಲ್ಲ" ಎಂದನು.

ವಜೀರನು "ಅಪ್ಪಣೆ" ಎಂದು ಹೊರಟುಹೋದನು.

ಆಮೇಲೆ ಬಾದಶಹನು "ಮಾತಿಯಾ, ಹೇಳುವುದಕ್ಕೆ ಬಂದ ವಿಷಯವನ್ನು ಈಗ ಹೇಳಬಹುದು" ಎಂದನು.

ಮಾತಿಯನು "ಖಾವಂದ್, ಏನೋ ಹೇಳಬೇಕೆಂದು ಬಂದೆ; ಆದರೆ ಈಗ ತಮಗೆ ತೊಂದರೆಕೊಡುವುದೇ ಬಿಡುವುದೇ ತೋರಲಿಲ್ಲ. ಪುನಃ ಬಂದು ಯಾವಾಗಲಾದರೂ ಅರಿಕೆಮಾಡಿಕೊಳ್ಳುತ್ತೇನೆ."

"ವಿಷಯವೇನು? ನಿನ್ನ ಸ್ವಂತದ ವಿಷಯವೇನೂ ಅಲ್ಲವಲ್ಲ."

"ಅಲ್ಲ, ಮಹಾಸ್ವಾಮಿ, ಸೇವಕನಿಗೆ ಈಗ ಏನೂ ಬೇಕಾಗಿಲ್ಲ. ನಮ್ಮವರೊಬ್ಬರು ಸ್ವಲ್ಪ ತೊಂದರೆಗೆ ಸಿಕ್ಕಿದ್ದಾರೆ—ಅದರ ವಿಚಾರವಾಗಿ ಹೇಳಿಕೊಳ್ಳಬೇಕೆಂದು ಬಂದೆ."

"ನನ್ನ ಹತ್ತಿರವೇ ಬರಬೇಕಾದ ವಿಷಯವೇನು?"

"ನಾನೂ ಅದನ್ನು ಕುರಿತು ಬಹಳ ಯೋಚಿಸಿದೆ, ಮಹಾಸ್ವಾಮಿ. ಕೊನೆಗೆ ತಮ್ಮಲ್ಲಿ ಹೇಳಿಕೊಳ್ಳುವುದೇ ಸರಿ ಎಂದು ತೋರಿತು. ಮಹಾಸ್ವಾಮಿಯವರು ನನ್ನನ್ನು ಕಂಡಾಗಲೆಲ್ಲಾ ರಾಜ್ಯವು ಸೌಖ್ಯವೆ ಎಂದು ಕೇಳೋಣವಾಗುತ್ತದೆ. ನಾನು ಸೌಖ್ಯವೇ ಎಂದು ಹೇಳಿದೇನೆ. ತಮ್ಮಂತಹ ಬಾದಷಹರನ್ನು ಪಡೆದಿರುವ ರಾಜ್ಯವು ಸೌಖ್ಯವಾಗಿಯೇ ಇರಬೇಕು—ನಾನೂ ಅನೇಕ ವಿಷಯಗಳನ್ನು ಅಲ್ಪವಾದುವೆಂದೆಣಿಸಿ ತಮ್ಮ ರಾಜ್ಯದಲ್ಲಿ ಒಟ್ಟಿನಲ್ಲಿ ಸುಖವೇ ಹೆಚ್ಚೆಂದು ನಂಬಿದೇನೆ. ಆದರೆ ಒಂದೊಂದು ಸಲ ಸ್ವಾಮಿಯವರಿಗೆ ತಿಳಿಯದೆ ಅನ್ಯಾಯಗಳು ನಡೆಯುತ್ತಿವೆ. ಧರ್ಮಪ್ರಭುವಿನ ರಾಜ್ಯದಲ್ಲಿ ಅಧರ್ಮವು ನಡೆದುಹೋಗುತ್ತಿದೆ."

"ನೀನು ಬಂದು ನನಗೆ ಅದನ್ನು ಹೇಳಬೇಕು. ನನ್ನ ಕೈಲಾದಷ್ಟನ್ನು ಸರಿಪಡಿಸುತ್ತೇನೆ."

"ಮಹಾಸ್ವಾಮಿ, ಇಲ್ಲಿಗೆ ಐದುಮೈಲಿ ದೂರದಲ್ಲಿ ನಮ್ಮ ಜನದ ಪಾಳೆಯ ಒಂದಿದೆ, ಮಹಾಸ್ವಾಮಿಯವರಿಗೆ ಅದು ತಿಳಿದಿರಬಹುದು."

"ಬಲ್ಲೆ."

"ಅಲ್ಲಿ ನಮ್ಮ ದೂರದ ನೆಂಟರೊಬ್ಬರ ಮನೆಯಿದೆ. ಆ ಮನೆಯ ಯಜಮಾನನಿಗೆ ಒಬ್ಬಳೇ ಮಗಳಿದ್ದಾಳೆ. ಬಹಳ ರೂಪವತಿ. ಬಾತ್ನೀಬಳ ಪ್ರತಿಮೆಯಂತಿದಾಳೆ."

"ಕರೆದುಕೊಂಡು ಬಾ, ನೋಡೋಣ."

ಮಾತಿಯನಿಗೆ ಸ್ವಲ್ಪ ನಗು ಬಂತು. ನಗುವನ್ನು ತಡೆದುಕೊಂಡು,

"ಅವಳು ಮಹಾಸ್ವಾಮಿಯವರ ಅಂತಃಪುರಕ್ಕೆ ಸೇರಲು ತಕ್ಕವಳೆಂದು ತಿಳಿಸುವುದಕ್ಕೆ ನಾನು ಬರಲಿಲ್ಲ. ಅಪ್ಪಣೆಯಾದರೆ ಅರಿಕೆಮಾಡಿಕೊಳ್ಳುತ್ತೇನೆ."

ರೂಪವತಿ ಮೊದಲಾದ ಮಾತನ್ನು ಹೇಳಿದ್ದನ್ನು ಕೇಳಿ ಅವಳನ್ನು ತನಗೆ ಒಪ್ಪಿಸಲು ಬಂದಿರುವನೇನೋ ಎಂದು ತಿಳಿದುಕೊಂಡ ಬಾದ

ಷಹನು ಈ ಮಾತನ್ನು ಕೇಳಿ ತನ್ನ ಆಸೆಯನ್ನು ವ್ಯಕ್ತಪಡಿಸುವಂತೆ ಮಾಡಿದನಲ್ಲಾ ಎಂದು ಸ್ವಲ್ಪ ಅಪ್ರಸನ್ನನಾದನು. ಮುಖವನ್ನು ಸ್ವಲ್ಪ ಗಂಟಿಕ್ಕಿ "ಹೇಳು" ಎಂದನು.

"ಅವಳ ತಂದೆ ಅಷ್ಟೇನೂ ಹಣವಂತನಲ್ಲ ಮಹಾಸ್ವಾಮಿ. ಹುಡುಗಿಗೆ ಸರಿಯಾದ ವರನು ಸಿಕ್ಕುವುದು ಕಷ್ಟ. ಹೀಗಿರುವಲ್ಲಿ ಇನ್ನೊಂದು ಪಾಳಿಯದ ಒಬ್ಬ ಪ್ರಾಯದವನು ನಮ್ಮವನು ಅವಳನ್ನು ಮದುವೆಯಾಗುವುದಾಗಿ ಕೊಂಚದಿನದ ಹಿಂದೆ ಒಪ್ಪಿಕೊಂಡ."

"ಈ ಬಾತ್ಮೀಬಳಿಗೆ ಆ ದಾವೂದ್."

"ಮಹಾಸ್ವಾಮಿ, ಸಂಪ್ರದಾಯಸ್ಥರು ಸಿಕ್ಕಿದರೆ ಸಾಕು ಎಂದಿರುವವರಿಗೆ ಹಣ ಕಾಸು ವಿದ್ಯೆ ಬುದ್ಧಿ ಎಂದರೆ ಅಷ್ಟು ಲೆಕ್ಕವಿಲ್ಲ. ಹುಡುಗಿಯೂ ಒಪ್ಪಿದಳು. ಇಷ್ಟರಲ್ಲೇ ಮದುವೆ ನಡೆಯಬೇಕೆಂದು ಏರ್ಪಾಡು ಮಾಡಿದ್ದರು."

"ಉಂ."

"ಈಗ ಒಂದು ತಿಂಗಳ ಹಿಂದೆ ಯಾರೋ ಒಬ್ಬ ದೊಡ್ಡಮನುಷ್ಯರ ಮನೆಯ ಹುಡುಗ ಆ ಊರಿಗೆ ಒಂದು ಸಾಯಂಕಾಲ ಹೋಗಿ ಅವರ ಮನೆಯ ಗುರುತನ್ನು ಕೇಳಿ ಆ ಮನೆಯವರೊಂದಿಗೆ ಬಲವಂತವಾಗಿ ಪರಿಚಯವನ್ನು ಪ್ರಾರಂಭಿಸಿದನು."

"ಸರಿ."

"ಅದು ಮೊದಲು ಎರಡು ದಿನಕ್ಕೆ ಮೂರು ದಿನಕ್ಕೆ ಒಂದು ಸಲ ಅಲ್ಲಿಗೆ ಹೋಗುತ್ತ ಬರುತ್ತ ಇದ್ದಾನೆ. ಮನೆಯವರು ತಮ್ಮ ಮನೆಗೆ ಬರಕೂಡದೆಂದು ಬೇಡಿಕೊಂಡರು. ಅವನು ಕೇಳಲಿಲ್ಲ. ಹುಡುಗಿ ತಾನು ಇನ್ನೊಬ್ಬನನ್ನು ಮದುವೆಯಾಗುವೆನೆಂದು ಮಾತುಕೊಟ್ಟಿರುವುದನ್ನು ಹೇಳಿ ಅವನು ತಮ್ಮ ಮನೆಗೆ ಬರಕೂಡದೆಂದು ಹೇಳಿದಳು. ಆದರೂ ಕೇಳಲಿಲ್ಲ. ಅಲ್ಲಿ ಹೋಗಿ ಬರುತ್ತಾ ಇದಾನೆ."

"ಕತೆ ಬಹಳ ದೊಡ್ಡದಾಗಿರುವ ಹಾಗಿದೆ."

"ಮಹಾಸ್ವಾಮಿ ಕ್ಷಮಿಸಬೇಕು, ಮುಗಿಸಿಬಿಡುತ್ತೇನೆ. ಆ ದೊಡ್ಡಮನುಷ್ಯರು ಹೀಗೆ ಬರುತ್ತ ಹೋಗುತ್ತ ಇರುವುದನ್ನು

ನೋಡಿ ಆ ಮದುವೆ ಮಾಡಿಕೊಳ್ಳುತ್ತೇನೆಂದ ಹುಡುಗ ಈಗ ಮಾಡಿಕೊಳ್ಳುವುದಿಲ್ಲವೆನ್ನುತ್ತಿದಾನೆ."

"ಒಳ್ಳೆಯದಾಯಿತು. ಈ ದೊಡ್ಡಮನುಷ್ಯನಿಗೇ ಕೊಟ್ಟು ಮದುವೆ ಮಾಡಿಬಿಡುವುದು ತಾನೇ?"

"ಮಹಾಸ್ವಾಮಿ, ಆ ಮನೆಯವರಿಗೂ ಆ ಹುಡುಗಿಗೂ ಯಾರ ಜನಾನಕ್ಕೂ ಅವಳು ಸೇರುವುದೆನ್ನುವುದು ಇಷ್ಟವಿಲ್ಲ."

"ಜನಾನಾಕ್ಕೆ?"

"ಹೌದು ಮಹಾಸ್ವಾಮಿ. ಅಲ್ಲದೆ ಈತನು ಅವಳನ್ನು ಮದುವೆಯಾಗಬೇಕು ಎನ್ನುವ ಯೋಚನೆ ಇಟ್ಟುಕೊಂಡಿರುವಂತಿಲ್ಲ. ಹುಡುಗಿಯನ್ನು ಕೆಡಿಸಿ ಹೋಗಬೇಕೆನ್ನುವಷ್ಟು ಮಾತ್ರವೇ—ಹಾಗೂ ಬಡವರು ನಮ್ಮವರಿಗೆ ಉಮರಾಗಳ ಸಂಬಂಧದ ಮಾತೇಕೆ ಮಹಾಸ್ವಾಮಿ?"

"ಈ ದೊಡ್ಡಮನುಷ್ಯ ಮುಸಲ್ಮಾನನೇನು?"

"ಕ್ರೀಸ್ತರು ದೊಡ್ಡಮನುಷ್ಯರುಂಟೆ, ಮಹಾಸ್ವಾಮಿ?"

ಮಾತಿಯನು ಭಾವೋತ್ತರವೇನನ್ನೂ ಇಟ್ಟು ಮಾತನಾಡಲಿಲ್ಲ. ಆದರೆ ಬಾದಷಹನು ನಾಚಿ ತಲೆಯನ್ನು ತಗ್ಗಿಸಿದನು.

"ಸರಿ."

"ಈಗ ಏನುಮಾಡುವುದಕ್ಕೂ ತೋಚದೆ ಸುಮ್ಮನಿದಾರೆ ಖಾವಂದ್. ತಮ್ಮ ತಮ್ಮ ಗಂಜಿ ತಾವು ಕುಡಿದುಕೊಂಡು ಸುಮ್ಮನಿದ್ದವರು ಈ ಕಷ್ಟಕ್ಕೆ ಸಿಕ್ಕಿದಾರೆ."

"ಕಷ್ಟವೇನಯ್ಯಾ? ಇಷ್ಟವಿದ್ದರೆ ಸುಮ್ಮನಿರಿ, ಇಲ್ಲದಿದ್ದರೆ ಅವನ ಕುತ್ತಿಗೆ ಹಿಡಿದು ನೂಕಿ. ನಿಮ್ಮ ಸಂಸಾರದ ಒಂದೊಂದು ವಿವರಕ್ಕೂ ಬಾದಷಹನು ಏನು ಮಾಡಲಾದೀತು?"

"ಮಹಾಸ್ವಾಮಿ, ಮುಸಲ್ಮಾನ ಉಮ್ರಾವನ್ನು ಹಿಡಿದು ನೂಕುವ ಧೈರ್ಯ ಅವರಿಗೆ ಇಲ್ಲ. ಉಮರಾವನ್ನು ಮುಟ್ಟಿದರೆಂದು ನಾಳೆ ಕಾಡೀಗೆ ಹೇಳಿದರೆ ಅವರ ಮನೆ ನಾಶವಾಗುವುದು."

" ನ್ಯಾಯ ವಿಚಾರಿಸದೆಯೆ ? "

" ಮಹಾಸ್ವಾಮಿ, ತಮ್ಮ ಕಾಡೀಗಳು ನ್ಯಾಯವನ್ನು ತಿಳಿದವರೇ ಸರಿ. ಬಹುಮಟ್ಟಿಗೆ ಒಳ್ಳೆಯವರೇ. ಆದರೆ ಖಾವಂದ್ ಅವರ ನ್ಯಾಯ ಏನಿದ್ದರೂ ಮುಸಲ್ಮಾನ ಮುಸಲ್ಮಾನರ ಜಗಳದಲ್ಲಿ, ಕ್ರೀಸ್ತ ಕ್ರೀಸ್ತರ ಜಗಳದಲ್ಲಿ. ಮುಸಲ್ಮಾನನೊಬ್ಬ ಕ್ರೀಸ್ತನೊಬ್ಬನಾದರೆ ನ್ಯಾಯ ಸಿಕ್ಕುವುದು ಬಹಳ ಕಷ್ಟ ಮಹಾಸ್ವಾಮಿ."

" ಇದು ನನ್ನ ರಾಜ್ಯವನ್ನು ಕುರಿತು ನೀನು ಹೇಳುವ ಮಾತಲ್ಲ, ಮಾತಿಯಾ ? "

" ಖಾವಂದ್ ಬಾದಷಹ, ತಮ್ಮನ್ನು ಈ ಮಾತು ಹೇಳಿದವರ ನಾಲಗೆಯನ್ನು ಸೀಳಬೇಕು. ತಮ್ಮ ವಿಷಯ ಒಂದು ತಪ್ಪುಯೋಚನೆಯನ್ನು ಮಾಡಿದವರ ತಲೆಯನ್ನು ಕಡಿಯಬೇಕು. ನಾನು ಹೇಳುವುದು ರಾಜ್ಯದಲ್ಲಿಯ ಕಾಡೀಗಳ ಮಾತು. ತಮ್ಮ ಸುಲೇಮಾನರ ಸಮಾನವಾದ ನ್ಯಾಯವಿಮರ್ಶೆಯನ್ನು ನಾನೇ ನೋಡಿ ಅದರಿಂದ ಉಪಕೃತನಾಗಿ ಈ ಮಾತನ್ನು ಹೇಳುವಷ್ಟು ಕೃತಘ್ನನಲ್ಲ ನಾನು ಖಾವಂದ್."

"ಒಳ್ಳೆಯದು, ನನ್ನನ್ನೇನು ಮಾಡಹೇಳುತ್ತೀಯೆ? ಹಿಡಿದು ನೂಕಿ ಬಿಡಿ, ಆಮೇಲೆ ತಂಟೆ ಬಂದರೆ ನನ್ನಲ್ಲಿ ಬನ್ನಿ ವಿಚಾರಿಸೋಣ."

" ಮಹಾಸ್ವಾಮಿ, ನೂಕಿದರೆ ನಾವು ಬದುಕುವ ಬಾಬಿಲ್ಲ."

" ಹಾಗಾದರೆ ಅವನು ನಿಮ್ಮ ಮನೆಗೆ ಬಂದಾಗ ಅವನ ತಲೆಯನ್ನು ಕಡಿದು ಹಾಕಿರಯ್ಯ."

" ದೇವದೇವ ! ಇದು ಆಗುವ ಕೆಲಸವೇ ಮಹಾಸ್ವಾಮಿ. ಆ ತಲೆಕಡಿದವನ ಪಾಡು ಆಮೇಲೆ ಏನು ? "

" ಆಗ್ಯೆ ವಿಚಾರಿಸೋಣ."

" ಮಹಾಸ್ವಾಮಿ, ತಾವು ಧರ್ಮಪ್ರಭುಗಳು. ತಮಗೆ ಎಲ್ಲರೂ ಒಂದೇ. ಆದರೆ ನಾವೇನಾದರೂ ಆ ಉಮರಾವನ್ನು ಮುಟ್ಟಿದ್ದು ನಿಜವಾದರೆ ಮಾರನೆಯ ಬೆಳಿಗ್ಗೆ ಒಳಗಾಗಿ ನಮ್ಮ ಪಾಳೆಯವನ್ನು ಅದರಲ್ಲಿರುವ

ಹೆಂಗಸರು ಮಕ್ಕಳು ಜನ ದನ ಕರು ಸಹಿತವಾಗಿ ಅಧಿಕಾರಿಗಳೂ ಅವನ ಕಡೆಯ ಜನರೂ ಸುಟ್ಟುಬಿಟ್ಟಾರು. ತಾವು ಅಪ್ಪಣೆಕೊಡಿಸು ವಂತೆ ನಾವು ನಡೆಯುವ ವಿಚಾರವಲ್ಲ ಇದು ಖಾವಂದ್."

"ಅವನ ಕಡೆಯುವರು ಸುಟ್ಟರೆ ಫಿರ್ಯಾದು ಮಾಡಿ."

"ಮಹಾಸ್ವಾಮಿಯವರಿಗೆ ಬೇಸರವಾಗುವುದೇನೊ. ನಾನು ಸುಮ್ಮನೆ ಮಾತನಾಡುತ್ತಿದೇನೆ."

"ಇಲ್ಲ, ಹೇಳು."

"ಹೋದವರುಷ, ಮಹಾಸ್ವಾಮಿ, ನನಗೆ ತಿಳಿದಹಾಗೆ ಬೊಖಾ ರಾದಲ್ಲಿ ಒಬ್ಬ ಉಮರಾ ಅವನ ಕ್ರೀಸ್ತ ಸೇವಕನೊಬ್ಬನನ್ನು ಕೋಪದಿಂದ ಹೊಟ್ಟೆಯಮೇಲೆ ಒದ್ದರು. ಅವನು ಆ ಏಟಿಗೆ ಸತ್ತುಹೋದನು. ಏನು ಎಂದರೆ ಒಂದು ಒತ್ತ ತಡೆಯಲಾರದ ಮುಂಡೇದು ಇದ್ದರೆ ಆಗುತ್ತಿದ್ದ ಉದ್ಧಾರವೇನು, ಹೋದರೆ ಹೋದ, ಎಂದುಬಿಟ್ಟರು. ನ್ಯಾಯಾಧಿಕಾರಿ 'ಅವನು ಖಾಯಿಲೆಯ ಮನುಷ್ಯನಾಗಿದ್ದ, ಯಜಮಾನನು ಎಷ್ಟೋ ಮೆಲ್ಲಗೆ ಒದ್ದ, ಆದರೂ ತಡೆಯಲಾರದೆ ಸತ್ತುಹೋದ' ಎಂದರು. ಎಲ್ಲರೂ ಸುಮ್ಮನಾದರು ಮಹಾಸ್ವಾಮಿ."

"ಆಗಲೇ ನನಗೆ ಏಕೆ ಹೇಳಲಿಲ್ಲ?"

"ಖಾವಂದ್, ಇಂಥದು ಹತ್ತುವಿಚಾರ, ನೂರುವಿಚಾರ; ಎಲ್ಲ ವನ್ನೂ ದೊರೆಯ ಹತ್ತಿರ ತರಲಾಗುವುದೆ?"

"ಯಾವನೋ ಒಬ್ಬ ಮಾಡಿದನೇನೊ ಮಿಕ್ಕವರೂ ಹೀಗೆಯೆ?"

"ಮಹಾಸ್ವಾಮಿ, ಆರುತಿಂಗಳ ಹಿಂದೆ ಸಾಮರ್‌ಕಂದಿನಲ್ಲಿ ಕಾಡೀಯು ಒಬ್ಬ ಕ್ರೀಸ್ತರವನು ಒಬ್ಬ ಮುಸಲ್ಮಾನನನ್ನು ಯಾವುದೋ ಜಗಳದಲ್ಲಿ ಕೆನ್ನೆಗೆ ಹೊಡೆದದ್ದಕ್ಕೆ ಅವನಿಗೆ ಹತ್ತುಸಾವಿರ ಹಣ ದಂಡಹಾಕಿ ಅವನನ್ನು ಕತ್ತೆಯಮೇಲೆ ಕೂಡಿಸಿ ಊರುಮೆರವಣಿಗೆ ಮಾಡಿಸಿ ಆಮೇಲೆ ಅವನ ತಲೆಯನ್ನು ಕಡಿಸಿದನು. ಹದಿನೈದು ದಿನಕ್ಕೆ ಮುಸಲ್ಮಾನ ನೊಬ್ಬನು ಒಬ್ಬ ಕ್ರೀಸ್ತರವನನ್ನು ಜಗಳದಲ್ಲಿ ಕೊಂದನು. ಅದೇ ಕಾಡೀಯು ಆ ಮುಸಲ್ಮಾನನಿಗೆ ಹತ್ತು ಹಣ ದಂಡವನ್ನು ವಿಧಿಸಿ ಅವರಲ್ಲಿ

ನಾಲ್ಕು ಹಣವನ್ನು ಸತ್ತವನ ಮನೆಯವರಿಗೆ ಕೊಟ್ಟು ಅಪರಾಧಿಯ ಎಡ ಗೈಯ ಕಿರುಬೆರಳನ್ನು ಸೂಜಿಯಿಂದ ಚುಚ್ಚಿಸಿ ಹತ್ತು ತೊಟ್ಟು ರಕ್ತ ವನ್ನು ತೆಗೆಸಿದನು. ಯಾವ ತಪ್ಪಿಗೆ ಯಾವ ಶಿಕ್ಷೆ ಮಹಾಸ್ವಾಮಿ? ಇಂಥಾದ್ದರಲ್ಲಿ ಉಮರಾ ಒಬ್ಬ ಬೇಡವೆಂದರೂ ಮನೆಗೆ ಬಂದನೆಂದು ಅವನನ್ನು ನೂಕಲಾಗುವುದೆ? ಅವನ ತಲೆಯನ್ನು ಕಡಿಯಲಾಗುವುದೆ?"

"ಇದೆಲ್ಲಾ ನಿಜವೇನು?"

"ಮಹಾಸ್ವಾಮಿ, ನಾನು ಸುಳ್ಳು ಹೇಳುವುದಕ್ಕೆ ಕಾರಣವೇ ಇಲ್ಲ. ಇದನ್ನೆಲ್ಲಾ ಕೇಳಿದರೆ ಮಹಾಸ್ವಾಮಿಗೆ ಮನಸ್ಸು ನೊಂದೀತೆಂದು ನಾನು ಬಲ್ಲೆ ಹುಜೂರ್. ಮಹಾಸ್ವಾಮಿಯವರು ನನ್ನಲ್ಲಿಟ್ಟಿರುವ ವಿಶ್ವಾಸವೂ ಕಡಮೆಯಾಗುವುದು. ಆದರೆ, ಧರ್ಮಪ್ರಭು, ನನಗೆ ತಮ್ಮನ್ನು ನೋಡಿದಾಗ ಧರ್ಮವೇ ಎದುರಿಗೆ ಬಂದಂತೆ ತೋರುತ್ತದೆ. ಆದ್ದರಿಂದ ವಿಶ್ವಾಸವು ಕಡಮೆಯಾಗಲಾರದು, ಆದರೂ ಆಗಲಿ, ಎಂದು ಕೊಂಡು ತಮಗೆ ಇಷ್ಟವಿಲ್ಲದುದಾದರೂ ಇರುವ ಮಾತನ್ನು ಹೇಳು ತ್ತೇನೆ. ಸುಳ್ಳಾದ ಒಳ್ಳೆಯ ಮಾತನ್ನು ಹೇಳುವುದಕ್ಕೆ ನನಗೆ ಇಷ್ಟ ವಿಲ್ಲ, ದೊರೆಯೆ. ಸುಳ್ಳಾದ ಕೆಟ್ಟ ಮಾತನ್ನು ಏಕೆ ಹೇಳಲಿ?"

"ಮಾತಿಯಾ, ಆ ಕಾಡೀಗಳನ್ನು ಕರೆಯಿಸಿ ಶಿಕ್ಷೆಮಾಡುತ್ತೇನೆ. ಈಗ ಏನು ಮಾಡಬೇಕೆಂದು ನೀನು ಕೇಳುವುದು?"

"ಮಹಾಸ್ವಾಮಿ, ನಾನು ಹೇಳಿದ ಈ ಬಡಪಾಯಿಗಳ ಮಾನ ವನ್ನು ರಕ್ಷಿಸಬೇಕು."

"ಇಗೋ, ನಾನು ಮೊದಲೇ ಹೇಳಿದೇನೆ. ಕುತ್ತಿಗೆ ಹಿಡಿದು ನೂಕಿ; ತಂಟೆಮಾಡಿದರೆ ತಲೆ ಕಡಿದುಬಿಡಿ. ನಿಮಗೆ ಅದರಿಂದ ತೊಂದರೆ ಬಾರದಂತೆ ನಾನು ನೋಡಿಕೊಳ್ಳುತ್ತೇನೆ."

"ಖಾವಂದ್ . . . . . . ."

"ನಿನಗೆ ಸಂದೇಹವಿರುವುದಾದರೆ ನನ್ನ ಮುದ್ರೆಯುಂಗುರವನ್ನು ನಿನ್ನ ಕೈಗೆ ಕೊಡುತ್ತೇನೆ. ತೆಗೆದುಕೊಂಡು ಹೋಗು. ಈ ಕೆಲಸ ಮುಗಿದಮೇಲೆ ಹಿಂದಕ್ಕೆ ತಂದುಕೊಡು. ನಡುವೆ ಯಾರಾದರೂ

ವಿಚಾರಿಸುವುದಕ್ಕೆ ಬಂದರೆ ಅದನ್ನು ತೆಗೆದು ತೋರಿಸು. ಯಾರೂ ಆಗ ನಿಮ್ಮ ತಂಟೆಗೆ ಬರುವುದಿಲ್ಲ."

"ಖಾವಂದ್, ಇದು ಬಹಳ ಯೋಚನೆಗೆ ಕಾರಣವಾದ ವಿಷಯ ವಾದ್ದರಿಂದ ಮಹಾಸ್ವಾಮಿಯ ಬಳಿಗೆ ಬಂದೆ. ಆತನಿಗೆ ತೊಂದರೆ ಮಾಡುವುದಕ್ಕೆ ನಮಗೆ ಇಷ್ಟವಿಲ್ಲ. ನ್ಯಾಯಾಧಿಕಾರಿಗಳ ಹೆದರಿಕೆ ಯಲ್ಲದೆ ಬೇರೆ ಕಾರಣ ಒಂದುಂಟು. ಅದಕ್ಕಾಗಿ ತಮ್ಮಲ್ಲಿ ಅರಿಕೆಮಾಡಿ ಕೊಳ್ಳುವುದಕ್ಕೆ ಬಂದೆ."

"ಏನು ಕಾರಣ?"

"ನನಗೆ ಆ ಮಾತನ್ನು ಹೇಳುವುದಕ್ಕೆ ಹೆದರಿಕೆಯಾಗುತ್ತದೆ. ಖಾವಂದ್ ಬಾದಷಹ, ಅಲ್ಲಿಗೆ ಬರುತ್ತಿರುವರು ಷಾಹಜಾದ ಷೇಕ್ ಉಮಾರರಂತೆ. ಅದಕ್ಕಾಗಿ ಅವರಿಗೆ ಯಾವ ತೊಂದರೆಯನ್ನು ಮಾಡು ವುದಕ್ಕೂ ಅವರಿಗೆ ಇಷ್ಟವಿಲ್ಲ, ನಮಗೂ ಇಷ್ಟವಿಲ್ಲ. ಅವರಿಗಾಗಿ ಇಲ್ಲದಿದ್ದರೆ ತಮಗಾಗಿಯಾದರೂ ಜನ ಸುಮ್ಮನಿರುತ್ತಾರೆ."

ಸುಲ್ತಾನನು ಮುಖವನ್ನು ಗಂಟಿಕ್ಕಿದನು. ಕ್ರೂರದೃಷ್ಟಿಯಿಂದ ಮಾತಿಯನನ್ನ ನೋಡುತ್ತ "ಷಾಹಜಾದನೆ? ಎಂದನು.

"ಹಾಗೆಂದು ಆ ಮನೆಯ ಮನುಷ್ಯ ಹೇಳಿದ ಸ್ವಾಮಿ."

"ಅದಕ್ಕೆ ಗುರುತೇನು?"

"ಮಹಾಸ್ವಾಮಿ, ಆ ಹುಡುಗಿ ಒಲ್ಲೆನೆಂದರೂ ಆತನು ಅವಳಿಗೆ ಒಂದು ಉಂಗುರವನ್ನು ಕೊಟ್ಟು ಹೋಗಿದಾನೆ. ಅದರಲ್ಲಿ ಷಾಹಜಾದರ ನಾಮಾಕ್ಷರಗಳಿವೆ."

"ಎಲ್ಲಿ, ಉಂಗುರವನ್ನು ತಂದಿದೀಯಾ?"

"ತಂದಿದೇನೆ ಮಹಾಸ್ವಾಮಿ," ಎಂದು ಮಾತಿಯನು ಒಂದು ಉಂಗುರವನ್ನು ತೆಗೆದು ಬಾದಷಹನ ಕೈಗೆ ಕೊಟ್ಟನು.

ಬಾದಷಹನು ಉಂಗುರವನ್ನು ನೋಡಿ—"ಸರಿ, ಷಾಹಜಾದ ನಾಗಲಿ ಯಾವನಾಗಲಿ, ನನ್ನ ರಾಜ್ಯದಲ್ಲಿ ಇಂಥ ಅತ್ಯಾಚಾರವನ್ನು

ಮಾಡುವ ಮನುಷ್ಯನು ವಧ್ಯನೇ ಸರಿ—ಅವನ ತಲೆಯನ್ನು ನೀವು ಕಡಿಯಬಹುದು."

"ಮಹಾಸ್ವಾಮಿ, ಷಾಹಜಾದರು ಮುಂದಕ್ಕೆ ಈ ಧರ್ಮರಾಜ್ಯವನ್ನು ಆಳತಕ್ಕವರು, ನಮ್ಮ ಖಾವಂದರ ಒಬ್ಬ ಮಗನನ್ನು ಯಾವ ತಪ್ಪಿಗಾಗಿ ತಾನೇ ನಾವು ಹಾಗೆ ಶಿಕ್ಷಿಸಬಹುದು? ಈ ವಿಷಯ ಆ ಮನೆಯವರಿಗೆ ಇನ್ನು ಕೆಲವರಿಗೆ ಹೊರತು ಯಾರಿಗೂ ತಿಳಿಯದು. ಮಹಾಸ್ವಾಮಿಯವರು ಷಾಹಜಾದರನ್ನು ಕರೆಯಿಸಿ ಇದು ಬೇಡವೆಂದು ಅಪ್ಪಣೆ ಮಾಡಿದರೆ ಸಾಕು. ಆಮೇಲೆ ಅವರೂ ಅಲ್ಲಿ ಹೋಗಲಾರರು. ಆ ಜನರಿಗೂ ತೊಂದರೆಯಿಲ್ಲ. ಅವರ ಪಾಡಿಗೆ ಅವರು ಇದ್ದುಕೊಳ್ಳುವರು. ಯಾರಮೇಲೆ ಯಾರೂ ಕೈ ಮಾಡದೆ ಯಾವ ಮಾತೂ ಹೊರಗೆ ತಿಳಿಯದೆ ಎಲ್ಲಾ ಸರಿಹೋಗುವುದು."

"ಮಾತಿಯಾ, ನೀನು ಒಳ್ಳೆಯ ಮನುಷ್ಯ; ಆದರೆ ನಾನು ಷಾಹಜಾದನನ್ನು ಕರೆದು ಈ ಮಾತು ಹೇಳಿದರೆ ನಿನ್ನ ನಂಟನಿಗೆ ಆಮೇಲೆ ತೊಂದರೆಯಿಲ್ಲವೊ? ನನ್ನವರೆಗೆ ದೂರುತಂದದ್ದಕ್ಕೆ ಅವನಿಗೆ ಅವನು ಏನನ್ನಾದರೂ ಮಾಡಿದರೆ?"

"ಖಾವಂದ್, ತಮ್ಮ ಅಪ್ಪಣೆಯನ್ನು ಮೀರಿ ಅವರಿಗೆ ಯಾವ ತೊಂದರೆಯನ್ನು ಮಾಡಿಯಾರು?

"ಷಾಹಜಾದರು ಬಾದಷಹರಾದಾಗ್ಯೆ?"

"ಈ ಹುಲ್ಲುಮನುಷ್ಯರನ್ನೆಲ್ಲಾ ಅದುವರೆಗೆ ಜ್ಞಾಪಕದಲ್ಲಿಡುವರೆ ಮಹಾಸ್ವಾಮಿ? ದೇವರು ಧರ್ಮಪ್ರಭುಗಳಿಗೆ ದೀರ್ಘಾಯುಷ್ಯವನ್ನಿತ್ತಿರುವನು."

"ಆಯುಸ್ಸು ಎಷ್ಟು ದೀರ್ಘವಾದರೂ ಮುಗಿಯತಕ್ಕದ್ದೇ ಮಾತಿಯಾ. ಅಲ್ಲದೆ ಇಂಥ ಆಶಾಭಂಗವು ಎಂದಿಗೂ ನೆನಪಿನಲ್ಲಿರತಕ್ಕದ್ದೇ."

"ಮಹಾಸ್ವಾಮಿ."

"ಏನು ಮಾಡುವುದು ಎಂದು ಖಂಡಿತವಾಗಿ ತೋರಲಿಲ್ಲ; ವಾಜೀರರನ್ನು ಕರೆಯಿಸುತ್ತೇನೆ."

"ಖಾವಂದ್, ಬೇಡಿ. ಇದು ಅವರಿಗೆ ತಿಳಿಯಬೇಕಾದದ್ದೇ ಇಲ್ಲ. ಷಾಹಜಾದರನ್ನು ಕರೆಯಿಸಿ ಒಂದು ಮಾತು ಹೇಳಿಬಿಡೋಣವಾಗಲಿ; ಇನ್ನಿಪ್ಪತ್ತು ವರುಷಕ್ಕೆ ಏನು ಮಾಡುವರೊ ಇನ್ನು ನಲವತ್ತು ವರುಷಕ್ಕೆ ಏನು ಮಾಡುವರೊ ಎಂದು ನಾವು ಎಂದೆಂದಿಗೂ ನ್ಯಾಯವನ್ನು ಮಾಡಿಡುವುದಕ್ಕಾಗುತ್ತದೆಯೆ ಮಹಾಸ್ವಾಮಿ?"

ಬಾದಷಹನು ಸ್ವಲ್ಪ ಕೋಪದಿಂದ ಮಾತಿಯನನ್ನು "ಸುಮ್ಮನೆ ಮಾತನಾಡಬೇಡ" ಎಂದು "ಯಾರಲ್ಲಿ" ಎಂದು ಕರೆದನು.

ಸೇವಕನೊಬ್ಬನು ಬಂದನು.

"ವಜೀರರಿಗೆ ಹೇಳಿಕಳುಹಿಸು" ಎಂದು ಬಾದಷಹನು ಮಾತಿಯನನ್ನು ಕುರಿತು—"ಆತನು ಅಲ್ಲಿಗೆ ಇಂಥ ದಿನ ಪುನಃ ಬರುತ್ತಾನೆಂದು ಬಲ್ಲೆಯಾ?"

"ಮಹಾಸ್ವಾಮಿ, ಗುರುವಾರ ಬರುವುದಾಗಿ ಹೇಳಿದರಂತೆ."

"ಇಂದೇ ಗುರುವಾರ."

ಮಾತಿಯನು ಮರೆತಿದ್ದನೆಂದು ತೋರುತ್ತದೆ. ಬಾದಷಹನು ಹೀಗೆ ಹೇಳುತ್ತಲೂ "ಹೌದು" ಎಂದನು.

ಬಾದಷಹನು ಮತ್ತೊಬ್ಬ ಸೇವಕನನ್ನು ಕರೆದು "ಷಾಹಜಾದರು ಅರಮನೆಯಲ್ಲಿದಾರೆಯೆ ವಿಚಾರಿಸು" ಎಂದು ಅಪ್ಪಣೆಮಾಡಿದನು.

ಸೇವಕನು ಹೊರಟುಹೋದನು. ವಜೀರನನ್ನು ಕರೆಯಕಳುಹಿಸಲು ಹೋಗಿದ್ದ ಸೇವಕನು ಹಿಂದಕ್ಕೆ ಬಂದು "ವಜೀರರು ಇನ್ನೂ ಮನೆಗೆ ಹೋಗಿರಲಿಲ್ಲ. ಭಕ್ಷಿಗಳ ಕಚೇರಿಯಿಂದ ಈ ಕಡೆಗೇ ಬರುತ್ತಿದ್ದರು. ಸ್ವಾಮಿಯವರ ಅಪ್ಪಣೆ ಆಯಿತೆಂದು ತಿಳಿಸಿದೆ. ದಯಮಾಡುತ್ತಿದ್ದಾರೆ" ಎಂದನು.

ಯಾವುದಾದರೂ ನೆವದಿಂದ ಪುನಃ ಬಾದಷಹನ ಬಳಿ ಬಂದು ಮಾತಿಯನು ಹೇಳುತ್ತಿದ್ದ ವಿಷಯವನ್ನು ತಿಳಿಯಬೇಕೆಂದಿದ್ದ ವಜೀರನು ಜಾಗ್ರತೆಯಾಗಿ ಹೆಜ್ಜೆಗಳನ್ನಿಡುತ್ತಾ ಬಂದು ಬಾದಷಹನಿಗೆ ಸಲಾಮು ಮಾಡಿದನು.

ಬಾದಷಹನು ಯೋಚನೆಯಲ್ಲಿ ಕಿಟಕಿಯ ಕಡೆಗೆ ನೋಡುತ್ತಾ ನಿಂತು, "ಮಾತಿಯು ಹೇಳುವ ಮಾತನ್ನು ಕೇಳಿ," ಎಂದನು.

ವಜೀರನು ಮಾತಿಯನ ಕಡೆಗೆ ತಿರುಗಿದನು; ಮಾತಿಯನು ಹತ್ತಿರಹೋಗಿ ಮೆಲ್ಲಗೆ ಹತ್ತುಮಾತಿನಲ್ಲಿ ಸಮಾಚಾರವನ್ನು ತಿಳಿಸಿ ಪುನಃ ದೂರ ನಿಂತನು.

ಬಾದಷಹ—ಕೇಳಿದಿರಾ ?

ವಜೀರ ಕೇಳಿದೆ.

ಬಾದಷಹ—ಏನುಮಾಡಬೇಕೆನ್ನುವಿರಿ ?

ವಜೀರ—ಮಾತಿಯನು ಸೂಚಿಸುವಂತೆ ಷಾಹಜಾದರಿಗೆ ಹೇಳಿಕಳುಹಿಸಿ ಒಂದು ಬುದ್ಧಿಯಮಾತನ್ನು ಹೇಳಿದರೆ ಸರಿ.

ಬಾದಷಹ—ನನ್ನ ಅನಂತರ ಅವನು ಅವರಿಗೆ ತೊಂದರೆಯನ್ನು ಕೊಟ್ಟರೆ ?

ವಜೀರ—ಮಾತಿಯನು ಹೇಳುವುದು ನಿಜವಾದ ಮಾತು. ಎಂದೆಂದಿಗೂ ಪ್ರಪಂಚದಲ್ಲಿ ಧರ್ಮ ಇರುವುದಕ್ಕೆ ದೇವರು ಜವಾಬ್ದಾರರಾಗಿದ್ದಾರೆ.

ಬಾದಷಹ—ಮಾತಿಯನ ಮಾತನ್ನೂ ನಿಮ್ಮ ಮಾತನ್ನೂ ಕೇಳಿದರೆ ದೇವರೂ ಕೂಡ ಜವಾಬ್ದಾರಿಯನ್ನು ಬಿಟ್ಟುಬಿಡಬೇಕಾಗುವುದು. ಆಗಲಿ, ಷಾಹಜಾದನಿಗೆ ಹೇಳಿಕಳುಹಿಸಿದೇನೆ ನೋಡೋಣ.

ಹೀಗೆಂದು ಹೇಳಿ ಬಾದಷಹನು ಒಳಗೆ ಹೋದನು. ವಜೀರನೂ ಮಾತೀಯನೂ ಸುಮ್ಮನೆ ನಿಂತಿದ್ದರು. ಎರಡು ನಿಮಿಷದಲ್ಲಿ ಬಾದಷಹನು ಪ್ರಯಾಣಕ್ಕೆ ಸಿದ್ಧನಾಗಿ ಹಿಂದಕ್ಕೆ ಬಂದನು.

ವಜೀರ—ಮಹಾಸ್ವಾಮಿ ಎಲ್ಲಿಗೋ ಹೊರಡುವಂತಿದೆ.

ಬಾದಷಹ—ಹೌದು, ನೀವೂ ಬರಬೇಕು. ಷಾಹಜಾದರು ಇಂತಹ ಕೆಲಸಕ್ಕೆ ಏಕೆ ಹೊರಟರು? ಹೀಗೆ ಬಲವಂತಮಾಡಬೇಕೆಂದರೆ ಮುಸಲ್ಮಾನರನ್ನು ಮಾಡಬಾರಧಾಗಿತ್ತೆ ? ರಾಜ್ಯದಲ್ಲಿ ಮುಸಲ್ಮಾನರಲ್ಲದವರಿಗೆ ಕ್ಷೇಮವಿಲ್ಲವೆಂದು ತೋರುವಂತೆ ಹೀಗೆ ಮಾಡಬಹುದೆ?

ವಜೀರ—ಖಾವಂದ್, ಇದನ್ನು ತಮಲ್ಲಿ ಹೇಳುವುದಕ್ಕೆ ಮಾತಿಯನು ಹೇಗೆ ಧೈರ್ಯಮಾಡಿದನೋ ಕಾಣೆ. ನಾನೂ ಈ ವಿಚಾರವನ್ನು ಸ್ವಾಮಿಯಲ್ಲಿ ಹೇಳೋಣವೆಂದು ಕೆಲವು ಸಲ ಯೋಚನೆಮಾಡಿ ಇನ್ನೊಂದುದಿನ ಹೇಳೋಣವೆಂದು ಸಮ್ಮನಾಗಿದೇನೆ. ಬೊಖಾರದಿಂದ ಆಬೂಸಯ್ಯದ್ ಬಂದು ಷಾಹಜಾದರೊಂದಿಗೆ ಸೇರಿದಂದಿನಿಂದ, ಇನ್ನೂ ಚಿಕ್ಕವಯಸ್ಸಾದ್ದರಿಂದ ಸ್ವಲ್ಪ ಹುಡುಗಾಟ ಹೆಚ್ಚಿದೆ. ಆಬೂ ಸ್ವಲ್ಪ ಅಶಿಕ್ಷಿತ. ಅವನಿಂದ ಷಾಹಜಾದರೂ ಸ್ವಲ್ಪ ಅಜಾಗ್ರತೆಯಲ್ಲಿದಾರೆ.

ಬಾದಷಹ—ಇದೇನಯ್ಯ, ತಿಳಿದೂ ತಿಳಿದೂ ಸುಮ್ಮನಿದ್ದೆನೆನ್ನುವಿರಿ? ನೀವೇ ನನಗೆ ಇಂಥ ಮಾತನ್ನು ಹೇಳದಿದ್ದರೆ ನನಗೆ ತಿಳಿಯುವ ಬಗೆ ಹೇಗೆ?

ವಜೀರನು ಸುಮ್ಮನಿದ್ದನು.

ಸೇವಕನು ಹಿಂದಿರುಗಿ ಬಂದು "ಖಾವಂದ್, ಷಾಹಜಾದರು ಮಜನೂನಬಾಗಿಗೆ ಈ ದಿನ ಬೆಳಿಗ್ಗೆ ದಯಮಾಡಿದರಂತೆ" ಎಂದನು.

ಮಾತಿಯನು ದೊರೆಯಕಡೆ ನೋಡಿದನು, ದೊರೆಯು ಮಾತಿಯನ ಕಡೆ ನೋಡಿದನು. ಆ ಪಾಳೆಯವು ಇದ್ದದ್ದು ಮಜನೂನಬಾಗಿನ ಹತ್ತಿರ.

ಬಾದಷಹ—"ಒಂದು ಸಾಮಾನ್ಯವಾದ ಗಾಡಿಯನ್ನು ತರಹೇಳು" ಎಂದು ಸೇವಕನಿಗೆ ಅಪ್ಪಣೆಮಾಡಿ, "ನೀವಿಬ್ಬರೂ ಬರುವುದಕ್ಕಾಗುವುದೊ?" ಎಂದು ವಜೀರನನ್ನೂ ಮಾತಿಯನನ್ನೂ ಕೇಳಿದನು.

"ಅಪ್ಪಣೆ" ಎಂದು ಇಬ್ಬರೂ ಉತ್ತರಕೊಟ್ಟರು. ಒಂದು ಸಾಮಾನ್ಯವಾದ ಗಾಡಿ ಬರಲು ಮೂವರೂ ಅದರಲ್ಲಿ ಕುಳಿತು ಹೊರಟರು. ಮಜನೂನಬಾಗಿನ ಪೂರ್ವಕ್ಕೆ ಹೊಡೆಯಬೇಕೆಂದು ಬಾದಷಹನು ಗಾಡಿಯವನಿಗೆ ಹೇಳಿಸಿದನು.

ಸ್ವಲ್ಪದೂರ ಪ್ರಯಾಣಮಾಡಲು ಮಜನೂನಬಾಗಿನ ಪೂರ್ವದ ಬಾಗಿಲ ಬಳಿಗೆ ಬಂದು ಸೇರಿದರು. ಮುಂದಕ್ಕೆ ಬಾದಷಹನು ಪಾಳೆಯಕ್ಕೆ ಹೊಡೆಯೆಂದನು.

ವಜೀರನು—“ಮಹಾಸ್ವಾಮಿಯವರು ಇಲ್ಲಿ ಒಂದು ಮಾತು ವಿಚಾರಿಸಿದರೆ ಒಳ್ಳೆಯದು” ಎಂದನು.

“ಇಂದು ಅಲ್ಲಿಗೆ ಬರುವುದಾಗಿ ಹೇಳಿದಾನಲ್ಲವೇ? ಇಲ್ಲಿ ವಿಚಾರಿಸುವುದೇಕೆ? ಅಲ್ಲಿಯೇ ಹೋಗೋಣ. ಈ ವೇಳೆಗೆ ಅಲ್ಲಿ ಇರುವನಲ್ಲವೇ ಮಾತಿಯಾ?”

“ಹೌದು ಮಹಾಸ್ವಾಮಿ. ಇಷ್ಟು ಹೊತ್ತಿನಲ್ಲಿ ಅಲ್ಲಿ ಇರುತ್ತಾರೆ. ಇಂದು ಬರುತ್ತೇನೆ ಎಂದು ಹೇಳಿದ್ದದನ್ನು ಆ ಮನೆಯಾತನು ನನಗೆ ಹೇಳಿದನು.”

“ಸರಿ. ಮಜನೂನಬಾಗಿಗೆಂದು ಬಂದು ಅಲ್ಲಿಗೆ ಹೋಗಿದಾನೆ” ಎಂದು ಬಾದಷಹನು ಹೇಳಿದನು.

ಬಾದಷಹನು ಕೋಪಗೊಂಡಾಗಲೂ ಅಸಾಮಾಧಾನಲ್ಲಿರುವಾಗಲೂ ಧ್ವನಿಯು ಒಂದು ಕಾಠಿನ್ಯವನ್ನು ತಾಳುತ್ತಿತ್ತು. ಈ ಮಾತುಗಳ ಧ್ವನಿಯಲ್ಲಿ ಆ ಕಾಠಿನ್ಯವನ್ನು ಕಂಡು ವಜೀರನು, ಇವನೇನು ಮಾಡುವನೋ ಎಂದು ಯೋಚಿಸುತ್ತಿದ್ದನು. ಮಾತಿಯನು “ಬುದ್ಧಿ ಹೇಳುವವರು ಉಪಾಯವಾಗಿ ಮನೆಯಲ್ಲಿ ಕರೆಯಿಸಿ, ಒಂದು ಮಾತನ್ನು ಹೇಳಬಾರದಾಗಿತ್ತೆ? ಇಲ್ಲಿ ಬಂದು ಒಂದು ಗಲಾಟೆಮಾಡಿ ಊರಿಗೆಲ್ಲ ತಿಳಿಯುವಂತೆ ಮಾಡಬೇಕೆ?” ಎಂದು ಯೋಚಿಸುತ್ತಿದ್ದನು. ಇಬ್ಬರಲ್ಲಿ ಒಬ್ಬರಿಗೂ ಬಾದಷಹನನ್ನು ಇನ್ನೊಂದು ಮಾತನ್ನಾಡಿಸುವುದಕ್ಕೆ ಧೈರ್ಯವಿಲ್ಲ. ಸುಮ್ಮನಿದ್ದರು.

ಪಾಳೆಯದ ಸಣ್ಣ ಸಣ್ಣ ದೀಪಗಳು ಕಾಣಲಾರಂಭಿಸಿದುವು. ಬಾದಷಹನು “ಮಾತಿಯಾ, ಯಾವ ಮನೆ ಗಾಡಿಯವನಿಗೆ ಹೇಳು” ಎಂದನು.

ಆ ಮನೆಯ ಬಳಿಯ ಚೌಕಕ್ಕೆ ಬರಲು ಗಾಡಿಯನ್ನು ನಿಲ್ಲಿಸಹೇಳಿ ಬಾದಷಹನು ಇಳಿದನು. “ಆ ಮನೆಯೇ?” ಎಂದು ಕೇಳಿ “ಹೌದು ಖಾವಂದ್,” ಎನ್ನಲು ಅಲ್ಲಿಗೆ ತಾನೇ ಮುಂದಾಗಿ ನಡೆದನು.

ಆ ಮನೆ ಸ್ವಲ್ಪ ಒಳ್ಳೆಯ ಮನೆಯೇ. ಮನೆಯವರು ನೆಮ್ಮದಿವಂತರೆಂದು ತೋರುತ್ತಿತ್ತು. ಅದರ ಮುಂಭಾಗದ ಹಜಾರದಲ್ಲಿ

ಒಂದು ದೀಪವನ್ನು ಗೂಡಿನಲ್ಲಿಟ್ಟಿದ್ದರು. ಯಾರೂ ಜನವಿದ್ದಂತೆ ತೋರ ಲಿಲ್ಲ. ಬಾದಷಹನು ಮುಂದೆಯೂ ಅವನ ಹಿಂದೆ ವಜೀರನೂ ಮಾತಿಯನೂ ಒಳಗೆ ನಡೆದರು.

ಬಾಗಿಲ ಬಳಿಯಿಂದ ಸ್ವಲ್ಪ ವಯಸ್ಸಾದ ಮನುಷ್ಯನೊಬ್ಬನು ಮುಂದಕ್ಕೆ ಬಂದು "ಯಾರು" ಎಂದನು. ಮಾತಿಯನನ್ನು ನೋಡಿ "ಇವರು" ಯಾರು ಎನ್ನುವಂತೆ ದೃಷ್ಟಿಯಿಂದ ಸೂಚಿಸಿದನು.

ಮಾತಿಯನು ಹುಬ್ಬನ್ನು ಸ್ವಲ್ಪ ಎತ್ತಿ ಬಾದಷಹನ ಕಡೆ ಕಣ್ಣುಸನ್ನೆ ಮಾಡಿ ಸುಮ್ಮನಿರೆಂದು ಬಾಯ ಬಳಿ ಕೈಯನ್ನೆತ್ತಿ ಸೂಚಿಸಿದನು.

ಬಾದಷಹನು "ಆತನು ಬಂದಿದಾನೇನಯ್ಯ?" ಎಂದನು.

ಮಾತಿಯನು "ಖಾವಂದ್ ನಾನು ವಿಚಾರಿಸುತ್ತೇನೆ" ಎಂದು ಮನೆಯವನನ್ನು ಒಂದು ಕಡೆಗೆ ಕರೆದುಕೊಂಡು ಹೋಗಿ ಅರ್ಧ ನಿಮಿಷ ದಲ್ಲಿ ಹಿಂದಕ್ಕೆ ಬಂದು "ಮಹಾಸ್ವಾಮಿ, ಬಂದಿದಾರೆ; ಯಾರೂ ಬರದಂತೆ ನೋಡಿಕೊಳ್ಳುವುದಕ್ಕೆಂದು ಇವರನ್ನು ಇಲ್ಲಿ ಕಾವಲಿರಿಸಿದಾರೆ. ಅವರು ಒಳಗೆ ಹುಡುಗಿಯ ಸಂಗಡ ಮಾತನಾಡುತ್ತಿದಾರೆ" ಎಂದನು.

"ಸರಿ, ಅದೇನಯ್ಯ ಶಾಲು ಕೈಯಲ್ಲಿ?"

"ಖಾವಂದ್, ಇದು ಅವರ ಶಾಲು. ಇದನ್ನು ಹಿಡಿದುಕೊಂಡು ಇಲ್ಲೇ ಇರು ಎಂದು ಹೇಳಿ ಒಳಗೆ ಹೋದರು."

"ಇಲ್ಲಿ ತಾ."

ಬಾದಷಹನು ಶಾಲನ್ನು ತೆಗೆದು ನೋಡಿದರು. ವಜೀರನಿಗೆ ಮುಖ ತಗ್ಗಿತು. ದೊರೆ ನೀಳವಾಗಿ ಉಸಿರನ್ನು ಬಿಟ್ಟನು. ಅವನ ಕಣ್ಣು ಅಡಗಿದ ಕೋಪದಿಂದ ಥಳಥಳಿಸುತ್ತಿತ್ತು. ವಜೀರನನ್ನು ಕುರಿತು "ಅವನೇ" ಎಂದನು.

ವಜೀರನು "ಮಹಾಸ್ವಾಮಿ" ಎಂದನು.

ಬಾದಷಹನು "ಆವನು ಹೊರಗೆ ಬರಬೇಕಾದರೆ ಎಷ್ಟು ಹೊತ್ತು ಆಗುತ್ತದೆ?" ಎಂದನು.

“ ಖಾವಂದ್, ಇನ್ನೇನು ಬಂದುಬಿಡಬಹುದು. ಹುಡುಗಿ ಅವರ ಸಂಗಡ ಸರಿಯಾಗಿ ಮಾತನಾಡುವುದಿಲ್ಲವೆಂದು ಅವರಿಗೆ ಬಹಳ ಕೋಪ. ಬಂದು ಕುಳಿತಿದ್ದು ಸ್ವಲ್ಪಹೊತ್ತಿನ ಮೇಲೆ ಹೊರಟುಹೋಗುತ್ತಾರೆ. ಈ ದಿನ ಬಹಳ ಹೊತ್ತು ನಿಲ್ಲುವುದಕ್ಕೆ ಬಂದಂತೆ ತೋರುವುದಿಲ್ಲ. ಹುಡುಗಿ ಖರಾಬ್ ಎಂದು ಇಂದು ನನ್ನಮೇಲೆ ಕೋಪಿಸಿಕೊಂಡರು. ನಾನೇನು ಮಾಡಲಿ ಮಹಾಸ್ವಾಮಿ—ಅವಳ ಇಷ್ಟ. ಬೇಡವೆಂದರೂ ಇವರು ಬರಬೇಕಾದದ್ದೇನು ಮಹಾಸ್ವಾಮಿ ?”

“ ಗಾಡಿಯಲ್ಲಿ ಬಂದರೋ ? ”

“ ಇಲ್ಲ ಮಹಾಸ್ವಾಮಿ, ನಡೆದುಕೊಂಡೇ ಬರುತ್ತಾರೆ. ಒಬ್ಬರೇ ಬರುತ್ತಾರೆ. ಇಲ್ಲಿಗೆ ಅಲ್ಲಿಗೆ ಬಹಳ ಹತ್ತಿರ.”

“ ಇಲ್ಲಿಗೆ ಎಲ್ಲಿಗೆ ? ”

ವಜೀರನು “ ಬಾಗಿಗೆ” ಎಂದನು.

“ ಉಂ. ”

ಒಂದು ಕ್ಷಣ ಬಿಟ್ಟು ಬಾದಷಹನು “ ಅವನು ಹೊರಗೆ ಬರಬೇಕಾದರೆ ಯಾವ ಬಾಗಿಲಲ್ಲಿ ಬರುತ್ತಾನೆ? ” ಎಂದನು. ಮನೆಯವನು ತೋರಿಸಿದನು. ಬಾದಷಹನು ಅದರೆದುರಿಗೆ ಇದ್ದ ದೀಪವನ್ನು ತೆಗೆಯಿಸಿ ಅದನ್ನು ಒಂದುಕಡೆಗೆ ದೂರವಾಗಿ ಇರಿಸಹೇಳಿದನು. ವಜೀರನು “ಮಹಾಸ್ವಾಮಿ ಯವರು ಒಳಗೆ ಹೋಗಿಯೇ ಅವರನ್ನು ನೋಡಬಹುದು. ಇಲ್ಲಿ ನಿಲ್ಲಬೇಕಾದ ಅವಶ್ಯಕವಿಲ್ಲ” ಎಂದನು. ಬಾದಷಹನು “ ಇರಲಿ ಇಲ್ಲೇ ನೋಡೋಣ” ಎಂದನು. “ ಹಾಗಾದರೆ ದೀಪವನ್ನು ಇಲ್ಲಿಟ್ಟರೆ ಅವರು ಹೌದೋ ಅಲ್ಲವೋ ಚೆನ್ನಾಗಿ ಕಾಣುವುದು ” ಎಂದು ವಜೀರನು ಬೇರೆ ಜಾಗವನ್ನು ತೋರಿಸಿದನು. ಬಾದಷಹನು “ಬೇಡ ದೀಪ ಅಲ್ಲೇ ಇರಲಿ” ಎಂದು ಮನೆಯವನನ್ನು “ ನೀನು ಬಾಗಿಲ ಒಳಗೆ ನಿಂತಿಕೊ. ಅತನು ಹತ್ತಿರ ಬಂದಾಗ ಒಂದೆರಡು ಮಾತನಾಡಿಸು, ನೋಡುವುದಕ್ಕೆ ಸಿದ್ಧರಾಗುತ್ತೇವೆ. ಅವರು ಬಾಗಿಲೊಳಗಿಂದ ಇಲ್ಲಿ ಹೆಜ್ಜೆ ಇಟ್ಟಾಗ ' ಸಲಾಂ' ಎಂದು ಸ್ಪಷ್ಟವಾಗಿ ಹೇಳು” ಎಂದು ಹೇಳಿದನು.

ಮನೆಯುವನು "ಅಪ್ಪಣೆ" ಎಂದನು.

ಬಾದಷಹನು ಬಾಗಿಲ ಬಳಿ ಎಡಗಡೆ ಗೋಡೆಗೆ ಸರಿಯಾಗಿ ನಿಂತು ತನ್ನ ಎಡಗಡೆಗೆ ವಜೀರನನ್ನು ನಿಲ್ಲಿಸಿಕೊಂಡು ಮನೆಯುವನನ್ನು "ಒಳಗೆ ಹೋಗಿ ನಿಂತುಕೊ" ಎಂದನು. ಅವನು ಒಳಗೆ ಹೋದನು.

ಒಂದುಕ್ಷಣ ಬಿಟ್ಟು ಬಾದಷಹನು ಅವನನ್ನು ಹಿಂದಕ್ಕೆ ಕರೆದು "ಜ್ಞಾಪಕವಿರಲಿ, ಅವನು ಇಲ್ಲಿ ಅಡಿ ಇಟ್ಟಾಗ 'ಸಲಾಂ' ಎನ್ನಬೇಕು. ಅವನನ್ನು ನಾವು ನೋಡುವುದಕ್ಕೆ ಸರಿಹೋಗುತ್ತದೆ" ಎಂದನು.

"ಅಪ್ಪಣೆ ಖಾವಂದ್."

"ನೀನು ಅಲ್ಲೇ ಇರು."

"ಅಪ್ಪಣೆ."

ಅವನು ಒಳಗೆ ನಿಂತನು. ಬಾದಷಹನೂ ವಜೀರನೂ ಬಾಗಿಲ ಬಳಿ ನಿಂತರು. ಮಾತಿಯು ಹಜಾರದಲ್ಲೇ ಇನ್ನಷ್ಟು ದೂರದಲ್ಲಿ ನಿಂತನು.

ಸ್ವಲ್ಪಹೊತ್ತು ಒಬ್ಬರೂ ಕದಲಲಿಲ್ಲ. ಬಂದಿದ್ದ ಮನುಷ್ಯನು ಷಾಹಜಾದನೇ ಎಂಬುದರಲ್ಲಿ ವಜೀರನಿಗೂ ಮಾತಿಯನಿಗೂ ಸಂದೇಹ ವಿರಲಿಲ್ಲ. ಉಂಗುರ ಷಾಹಜಾದನದು. ಶಾಲು ಷಾಹಜಾದನದು. ನಡೆದು ಬಂದಿದಾನೆ. ತೋಟ ಹತ್ತಿರವಾದ್ದರಿಂದ ಬೆಳಿಗ್ಗೆ ಮಜನೂನ ಬಾಗಿಗೆ ಹೋದದ್ದು ಈ ಉದ್ದೇಶದಿಂದಲೇ ಇರಬೇಕು. ಇವೆಲ್ಲವೂ ಬಾದಷಹನಿಗೂ ಗೊತ್ತು. ವಜೀರನು ದೊರೆಯ ಉದ್ದೇಶವೇನಿರಬಹು ದೆಂದು ಊಹಿಸಲು ಯತ್ನಿಸಿದರು. ಬಾದಷಹನು ಮಗನನ್ನು ಹಿಡಿದು ಬೈದಾನೊ? ಹೊಡೆಯುವನೊ? ಅಂತೂ ಕೋಪಗೊಂಡಿದ್ದನು. ಏನೂ ಮಾಡಲಾರ. ಮಗನು ಇಂಥ ಕೆಲಸದಲ್ಲಿ ಉದ್ಯುಕ್ತನಾಗಿದ್ದಾಗಲೇ ತಾನು ಎದುರಿಗೆ ಬಂದು ಚೆನ್ನಾಗಿ ಅವಮಾನವಾಗುವಂತೆ ಮಾಡ ಬೇಕೆಂದು ಉದ್ದೇಶಿಸಿರಬಹುದು. ತನ್ನ ಒಬ್ಬನೇ ಮಗನೆಂಬುದಕ್ಕಲ್ಲ ವಾದರೂ ಪ್ರಿಯಳಾದ ರಾಣಿಯ ಮಗನೆಂಬುದಕ್ಕಾಗಿ ದೊರೆ ಅವನಿಗೆ ಇನ್ನೇನನ್ನೂ ಮಾಡಲಾರ ಎಂದುಕೊಂಡನು. ಆಮೇಲೆ ಎಂತ ಕೆಲಸಕ್ಕೆ ಎಲ್ಲಿ ಹೋಗುವುದಾದರೂ ಹೋಗಿ ಅವಳಿಗೆ ಹೇಳಿ

ಬರುತ್ತಿದ್ದವನು ಇಂದು ಹೇಳದೆಯೇ ಬಂದನಲ್ಲ ಎಂದು ಜ್ಞಾಪಕಮಾಡಿಕೊಂಡನು. ಇಷ್ಟು ಹೊತ್ತು ಮನೆಯಲ್ಲಿ ಒಂದು ಶಬ್ದವೂ ಇಲ್ಲ ಬಾದಷಹನೂ ಸುಮ್ಮನೆ ನಿಂತು ಇದ್ದನು. ಕೊನೆಗೆ ಒಳಗಡೆಯ ಬಾಗಿಲೊಂದನ್ನು ಯಾರೋ ತೆರೆದಂತೆ ಶಬ್ದವಾಯಿತು. ಬಾದಷಹ ಸ್ಥಿರವಾಗಿ ನಿಮಿರಿದನು. ವಜೀರನು ಸ್ವಲ್ಪ ಸರಿದನು. ಒಳಗೆ ಇದ್ದ ಮನೆಯವರೊಂದಿಗೆ ಯಾರೋ ಒಂದೆರಡು ಮಾತನ್ನಾಡಿದರು. ಧ್ವನಿ ಅಷ್ಟು ಸ್ಪಷ್ಟವಾಗಿ ಕೇಳಿಸಲಿಲ್ಲ. ಒಡನೆಯೇ ಆತ ಬಾಗಿಲಕಡೆಗೆ ನಡೆದು ಬಂದ ಶಬ್ದ ಕೇಳಿಸಿತು. "ಸಲಾಂ ಖಾವಂದ್ ಸಲಾಂ" ಎಂದು ಮನೆಯವನು ಹೇಳಿದನು.

ಎರಡನೆಯ "ಸಲಾಂ" ಎಂಬ ಮಾತು ಬಂದಿದ್ದವನು ಹೊರಗೆ ಅಡಿ ಇಡುವ ವೇಳೆಗೆ ಸರಿಯಾಗಿ ಕೇಳಿಸಿತು. ವಜೀರನು ಬಾಗಿಲಕಡೆ ತಿರುಗಿದನು. ಯುವಕನ ಮುಖ ಒಂದುಕಡೆ ಇತ್ತು, ಸರಿಯಾಗಿ ಕಾಣಲಿಲ್ಲ. ಆದರೆ ಅವನು ಹಾಕಿಕೊಂಡಿದ್ದ ನಿಲುವಂಗಿ ಷಾಹಜಾದನ ಅಂಗಿಯಾಗಿತ್ತು. ವಜೀರನು ತಿರುಗಿ ನೋಡಿದಾಗ ಬಾದಷಹನೂ ಒಂದುಕ್ಷಣ ಆಕಡೆ ಹಾಗೆ ನೋಡಿದನು. ಒಡನೆ ಎಡಗೈಯನ್ನು ಎತ್ತಿ ಯುವಕನು ಕಣ್ಣಿಗೆ ಬೀಳದಂತೆ ತನ್ನ ಮುಖಕ್ಕೆ ಅಡ್ಡ ಹಿಡಿದು "ಅಲ್ಲಾ" ಎಂದು ಮೆಲ್ಲಗೆ ಹೇಳಿ ಸಿದ್ಧವಾಗಿದ್ದ ಕತ್ತಿಯನ್ನು ಸರ್ರನೆ ಸೆಳೆದು ಮಿಂಚಿನಂತೆ ಯುವಕನ ಕುತ್ತಿಗೆಗೆ ಸರಿಯಾಗಿ ಬೀಸಿದನು. ವಜೀರನು "ಹಾ" ಎಂದು ಬಾದಷಹನ ಕೈಯನ್ನು ಹಿಡಿಯಲು ಕೈ ನೀಡಿದನು.

ಮಿಂಚನ್ನು ತುಡುಕಬಲ್ಲ ಕೈಯಾವುದು ?

ಯುವಕನ ತಲೆಯೂ ಮುಂಡವೂ ಬೇರೆಯಾಗಿ ಕೆಳಗೆ ಬಿದ್ದವು.

ಬಾದಷಹನು ಆಗ್ರಹದಿಂದ ದಪ್ಪವಾದ ಧ್ವನಿಯಿಂದ "ನೀಚನ ದೇಹವನ್ನು ಗಾಡಿಯಲ್ಲಿ ಹಾಕಿ" ಎಂದನು. ದೊರೆ ಒಬ್ಬನೇ ಮಗನನ್ನು ಕೊಂದನಲ್ಲ ಎಂದು ವಜೀರನಿಗೂ ಮಾಶಿಯನಿಗೂ ಆಶ್ಚರ್ಯವೂ ಖೇದವೂ ಒಂದಕ್ಕಿಂತ ಒಂದು ಹೆಚ್ಚಾಗಿದ್ದುವು. ವಜೀರನು ಬಾಗಿಲಬಳಿ ಬಂದು ಮುಂಡವನ್ನೂ ತಲೆಯನ್ನೂ ಹತ್ತಿರ ಇರಿಸಿದನು.

ಮಾತಿಯನೂ ಮನೆಯುವನೂ ಹತ್ತಿರ ಬಂದು ನಿಂತರು-ವಜೀರನು "ಈತ ಷಾಹಜಾದನಲ್ಲ" ಎಂದನು.

ಬಾದಷಹ—"ಹಾ?"

ವಜೀರ—"ಇವನು ಆಬೂ ಸಯ್ಯದ್."

ಬಾದಷಹನು ಅತ್ತದ್ದನ್ನು ಯಾರೂ ಅದುವರೆಗೆ ನೋಡಿರಲಿಲ್ಲ-ಆಗ ಅವನ ಕಣ್ಣಿನಲ್ಲಿ ನೀರು ಬಂತು. ಮೊಣಕಾಲೂರಿ ದೇವರಿಗೆ ನಮಸ್ಕಾರಮಾಡಿ, ಯುವಕನು ತನ್ನ ಮಗನಲ್ಲದುದಕ್ಕೆ ವಂದನೆಗಳನ್ನು ಅರ್ಪಿಸಿದನು.

* * * * *

ಹೋಗುತ್ತ ಮಜನೂನಬಾಗಿನ ಮೇಲೆ ಹೋದರು. ಉದ್ಯಾನದಲ್ಲಿ ಹೊಕ್ಕು ಮಹಲಿನಬಳಿ ಬರಲು ಷಾಹಜಾದನು ಒಳಗೆ ಇರುವನೆಂದು ತಿಳಿಯಿತು. ಬಾದಷಹನೂ ಮಂತ್ರಿಯೂ ಒಳಗೆ ಹೋದರು. ಷಾಹಜಾದನು ಎದ್ದು "ದಯಮಾಡಬೇಕು, ತಾವು ದಯಮಾಡುವುದು ತಿಳಿಯಲಿಲ್ಲ" ಎಂದನು.

ಬಾದಷಹನು "ಈ ಉಂಗುರ ನಿನ್ನದೇನಯ್ಯ?" ಎಂದನು.

"ತಮ್ಮಲ್ಲಿ ಹೇಗೆ ಬಂತು? ಆಬೂ ಸಯ್ಯದ್ ಯಾರೋ ಫಕೀರನಿಗೆ ಕೊಟ್ಟೆನೆಂದನಲ್ಲ ತಾವೇ ಆ ಫಕೀರರಾಗಿದ್ದಿರೋ"

"ಅವನಿಗೆ ನೀನೇಕೆ ಕೊಟ್ಟೆ?"

"ಹುಡುಗಾಟಕ್ಕೆ ಒಂದು ದಿನ ಅವನು ಕೈಗೆ ಹಾಕಿಕೊಂಡನು.. ಆಮೇಲೆ ಕೊಡಲಿಲ್ಲ. ಎರಡುಮೂರು ದಿನದ ಮೇಲೆ ಕೇಳಿದರೆ ಯಾರೋ ಫಕೀರನು ಭಿಕ್ಷ ಕೇಳಿದನೆಂದೂ, ಆ ಸಮಯದಲ್ಲಿ ಇನ್ನೇನೂ ಹತ್ತಿರ ಇಲ್ಲದ್ದರಿಂದ ಇದನ್ನು ಕೊಟ್ಟೆನೆಂದೂ ಹೇಳಿದನು. ಅವನು ಬರಲಿ ಕೇಳೋಣ.."

"ಹುಡುಗಾಟಕ್ಕೆ, ಉಂಗುರವನ್ನು ತೆಗೆದುಕೊಂಡನೆ? ಹುಡುಗಾಟ ಸ್ವಲ್ಪ ಹೆಚ್ಚಾಗಿರುವಂತೆ ತೋರುತ್ತದೆ."

"ಹುಜೂರ್ ಕ್ಷಮಿಸಬೇಕು. ಅವನು ಸ್ವಲ್ಪ ತಮಾಷೆಯ ಮನುಷ್ಯ, ಒಂದೊಂದು ಸಲ ಹೀಗಾಗುತ್ತದೆ. ನಾನು ಬೇಡವೆಂದು ಹೇಳುತ್ತಿದೇನೆ. ಕೊಂಚ ದಿನದಲ್ಲಿ ಸರಿಹೋಗುವನು."

"ನಿನ್ನ ಬಟ್ಟಿಗಳನ್ನೂ ಹುಡುಗಾಟಕ್ಕೆ ತೆಗೆದುಕೊಂಡನೊ?"

"ಅವು ನನ್ನಬಟ್ಟಿ ಅಲ್ಲ. ಷಾಹಜಾದನ ಸ್ನೇಹಿತನು ಅವನ ಬಟ್ಟಿಗೆ ಸರಿಯಾದ ಬಟ್ಟಿಯನ್ನು ಹಾಕಬೇಕು ಎಂದು ಜೊತೆ ಬಟ್ಟಿಗಳನ್ನು ಮಾಡಿಸಿದನು. ಇದನ್ನೆಲ್ಲ ತಾವು ನೋಡಿದ್ದು ಹೇಗೆ?"

"ಅಯ್ಯಾ ಆ ಪ್ರಶ್ನೆಗಳನ್ನು ಆಮೇಲೆ ಕೇಳುವೆಯಂತೆ; ಈ ಉಂಗುರವನ್ನು ಇನ್ನುಮೇಲಾದರೂ ಭದ್ರವಾಗಿಟ್ಟುಕೊ. ಆಬೂ ಸಯ್ಯದನನ್ನು ಹಿಂದೆ ಗಾಡಿಯಲ್ಲಿ ತರುತ್ತಿದಾರೆ—ನೋಡಿಕೊ—ನಾವು ಹೊರಡುತ್ತೇವೆ," ಎಂದು ಬಾದಷಹನು ವಜೀರನೊಂದಿಗೆ ಪಟ್ಟಣಕ್ಕೆ ಹಿಂದಿರುಗಿದನು.

# ಕೃಷ್ಣಮೂರ್ತಿಯ ಹೆಂಡತಿ

ಆಶ್ವಯುಜ ಶುದ್ಧ ನವಮಿ.—

ನನಗೆ ಈ ಊರಿಗೆ ವರ್ಗವಾಗಿ ಇಲ್ಲಿಗೆ ಬಂದ ಮೊದಲು ಈವರೆಗೆ ಮನೆ ಸಿಕ್ಕದೆ ಪೇಚಾಡುವುದೇ ಉದ್ಯೋಗವಾಗಿ ಹೋಗಿತ್ತು. ಊರಿನ ಹಳೆಯ ಭಾಗಗಳಲ್ಲಿ ಮನೆ ಸಿಕ್ಕುವುದು ಕಷ್ಟವಿಲ್ಲ. ಆದರೆ ಅಲ್ಲಿ ಮನೆಗಳು ಒತ್ತು, ಜನ ಹೆಚ್ಚು. ನಮ್ಮೂರಿನ ಬಿಡುವಾದ ಪ್ರದೇಶಗಳಲ್ಲಿ ಬೆಳೆದು ನದಿಯ ಮರಳಲ್ಲಿ ಓಡಿಯಾಡಿ ವಾಡಿಕೆಯಾಗಿ ನನಗೆ ಇಕ್ಕಟ್ಟಾದ ಪ್ರದೇಶದಲ್ಲಿರಬೇಕೆಂದರೆ ಬಹಳ ಕಷ್ಟವಾಗುತ್ತದೆ. ಸ್ವಭಾವವಾಗಿ ಹೀಗಿರುವಲ್ಲಿ ಬೊಂಬಾಯಲ್ಲಿ ಅಂಗುಲಕ್ಕೆ ಒಂದು ಪ್ರಾಣ ವಾಸವಾಗಿರುವ ಅವಸ್ಥೆಯನ್ನು ಕೆಲವುಕಾಲ ಅನುಭವಿಸಿ ಈಗ ಜನದ ಗುಂಪೆಂದರೆ ಹೆದರಿಕೆಯಾಗುತ್ತದೆ. ಜನದ ಗುಂಪಿಲ್ಲದ ಎಕ್ಸ್‌ಟೆನ್‌ಷನಿನಲ್ಲಿರೋಣವೆಂದರೆ ನನಗೆ ಅನುಕೂಲವಾದ ಮನೆಗೇನೂ ಕಡಮೆ ಇಲ್ಲದಿದ್ದರೂ ಒಂದೊಂದಕ್ಕೂ ನಾನು ಕೊಡಲಾಗದ ಬಾಡಿಗೆಯನ್ನು ಕೇಳುತ್ತಾರೆ. ಹೀಗೆ ಇಲ್ಲಿ ಹುಡುಕಿ ಅಲ್ಲಿ ತಡಕಿ ಕೊನೆಗೆ ಈ ಅಗ್ರಹಾರದಲ್ಲಿ ಒಂದು ಮನೆಯನ್ನು ಸಂಪಾದಿಸಿದೇನೆ. ಈ ಅಗ್ರಹಾರವು ವಿಶ್ವೇಶ್ವರಪುರದ ಎಕ್ಸ್‌ಟೆನ್‌ಷನಿಗೂ ಹಳೆಯ ಊರಿಗೂ ನಡುವೆ ಮೂಲೆಯಲ್ಲಿದೆ. ಅಗ್ರಹಾರ ನಮ್ಮ ಹಳ್ಳಿಗಳ ಅಗ್ರಹಾರಗಳಂತಿಲ್ಲ, ಪಟ್ಟಣದ ಅಗ್ರಹಾರ. ಎರಡು ಸಾಲು ಮನೆಗಳು. ಒಂದೊಂದು ಸಾಲಿಗೆ ಆರು ಮನೆ. ಯಾರೋ ಧರ್ಮಕ್ಕಾಗಿ ಕಟ್ಟಿಸಿ ಯೋಗ್ಯರಾದ ಕೆಲವರಿಗೆ ಎಂದೋ ಕೊಟ್ಟವು. ಇವುಗಳಲ್ಲಿ ನಾನು ಬಾಡಿಗೆಗೆ ತೆಗೆದುಕೊಂಡಿರುವುದು ಬಲಗಡೆಯ ಸಾಲಿನಲ್ಲಿ ಒಂದು ಮನೆ. ಮನೆ ಅಷ್ಟು ಅನುಕೂಲವಾಗಿಲ್ಲದಿದ್ದರೂ ಸ್ಥಳ ಅನುಕೂಲವಾದದ್ದು. ಈ ಹನ್ನೆರಡು ಮನೆಗಳೇ ಒಂದು ಗುಂಪಾಗಿರುವುವು. ಮಿಕ್ಕ ಮನೆಗಳು ಎಷ್ಟು ಹತ್ತಿರವಿದ್ದರೂ ಬೇರೆ ಎಂಬಂತೆ ಕಾಣುವುವು. ಮನೆಗಳೆಲ್ಲದರ ನಡುವೆ ದೊಡ್ಡದೊಂದು ಅಂಗಳ. ಅದರ

ಸಿಹುವೆ ಒಂದು ಸೇದುವ ಬಾವಿ. ಅದರಬಳಿ ಒಂದು ಬೃಂದಾವನ. ಅಂಗಳದ ಒಂದು ಕೊನೆಗೆ ಒಂದು ಅಶ್ವತ್ಥಕಟ್ಟೆ. ಅದರಮೇಲೆ ಒಂದು ಅತಳಿಯುಮರವೂ ಒಂದು ಬೇವಿನಮರವೂ ಸೊಂಪಾಗಿ ಬೆಳೆದು ನಿಂತಿವೆ. ನಮ್ಮ ಮನೆಯ ಮುಂದೆ ಒಂದು ದೊಡ್ಡ ಕಂಭೇವಿನಮರ. ಮನೆಯಿಂದ ಹೊರಗೆ ಬಂದರೆ ಗಾಡಿ ಓಡಿಯಾಡುತ ಜನ ಹಾಡಾಡುತ ಇರುವ ಬೀದಿ ಇಲ್ಲ. ಇದೇ ನನ್ನ ಮನಸ್ಸಿಗೆ ಈ ಅಗ್ರಹಾರದಲ್ಲಿ ಒಂದು ದೊಡ್ಡ ಗುಣ. ಊರಿನ ಒಂದು ಅಂಚಿನಲ್ಲಿರುವುದರಿಂದ ಅಗ್ರಹಾರವನ್ನು ಬಿಟ್ಟು ಐದು ನಿಮಿಷ ನಡೆದರೆ ಈ ಊರಿನ ಎಲೆ ತೆಂಗಿನ ತೋಟಗಳಿಗೆ ಹೋಗುತ್ತದೆ. ತೋಟಗಳು ಬಹಳ ಚೆನ್ನಾಗಿವೆ. ಇವು ಅಲ್ಲದೆ ಈ ಮೂಲೆಯಲ್ಲಿ ಒಂದು ಸಣ್ಣ ಗುಡ್ಡ. ಅದರ ತಳದಲ್ಲಿ ಒಂದು ದೇವಾಲಯ, ಬಳಿಯಲ್ಲಿ ಒಂದು ತೋಪು, ಬಾವಿ, ದೇವಾಲಯಕ್ಕೆ ಸೇರಿದ ಒಂದು ಹೂವಿನ ತೋಟ. ಇನ್ನೊಂದು ಮೂಲೆಯಲ್ಲಿ ಇನ್ನೊಂದು ತೋಪು. ಅದರ ಲ್ಲೊಂದು ಬಾವಿ. ನಾವು ಬೆಳಗ್ಗೆ ಎದ್ದರೆ ಹಲ್ಲುತಿಕ್ಕಿಕೊಳ್ಳುವುದಕ್ಕೆ ಎಲೆ ತೋಟಗಳ ಬಾವಿಗಳಿಗಾದರೂ ಹೋಗಬಹುದು; ಈ ಬಾವಿಗಳಲ್ಲಿ ಯಾವುದಕ್ಕಾದರೂ ಹೋಗಬಹುದು. ಒಟ್ಟಿನಲ್ಲಿ ಈ ಅಗ್ರಹಾರದಲ್ಲಿ ವಾಸಮಾಡುವವರು ಹಳ್ಳಿಗಳಲ್ಲಿಯ ಶಾಂತಿಯನ್ನು ಸಂಪೂರ್ಣವಾಗಿ ಅನುಭವಿಸಬಹುದು. ಹುಡುಕಿದ್ದಕ್ಕೆ ಇದ್ದದ್ದರಲ್ಲಿ ವಸತಿಯಾದ ಸ್ಥಳವೇ ಸಿಕ್ಕಿದಂತಾಯಿತು. ಇನ್ನು ನಮ್ಮ ಮನೆಯವರನ್ನು ಕರೆದುಕೊಂಡು ಬರಹೇಳಿ ಬರೆಯಬಹುದು, ಹಬ್ಬವೂ ಮುಗಿದಿರುವುದರಿಂದ ಇನ್ನು ಅವರು ಬರುವುದಕ್ಕೆ ಏನೂ ಅಡ್ಡಿಯಿಲ್ಲ.

ಆ॥ ಶು॥ ಏಕಾದಶಿ.—

ನಮ್ಮ ಮನೆಯವರನ್ನು ಕರೆದುಕೊಂಡು ಬರುವುದೆಂದು ಬೆಳಗ್ಗೆ ಕಾಗದ ಬರೆದು ಹಾಕಿದೆನು. ಆದರೆ ಇಷ್ಟು ಅನುಕೂಲವಾಗಿರುವಸ್ಥಳ ಸಿಕ್ಕಿತಲ್ಲಾ ಎಂದು ಸಂತೋಷಪಡುವಲ್ಲಿ ಇಂದು ಇಲ್ಲಿ ಒಂದು ತೊಂದರೆ ಕಂಡುಬಂದಿದೆ. ಮಧ್ಯಾಹ್ನವೆಲ್ಲ ತಮಾಷೆಯಾಗಿ ಊರಲ್ಲಿ ಸುತ್ತಾಡು ತಿದ್ದು ಸಾಯಂಕಾಲ ದೀಪಹಚ್ಚಿದಮೇಲೆ ಮನೆಗೆ ಬಂದೆನು. ಬರುವ ವೇಳೆಗೆ ನಮ್ಮ ಎದುರುಸಾಲಿನ ಒಂದು ಮನೆಯಲ್ಲಿ ಯಾರೋ ಹಾಡು

ತ್ತಿರುವ ಶಬ್ದ ಕೇಳಿಸಿತು. ನಮ್ಮಪ್ಪ ಅದು ಏನು ಹಾಡು, ಅದು ಏನು ಧ್ವನಿ ! ರಾಗ ಸರಿಯಾಗಿಯೇ ಇರುವಂತೆ ತೋರುತ್ತದೆ. ಧ್ವನಿ ಕರ್ಣಕಠೋರ. ಒಂದುಕ್ಷಣ ಚೆನ್ನಾಗಿ ಬರುವುದು, ಒಂದುಕ್ಷಣ ಕೇಳುವುದಕ್ಕಾಗುವುದಿಲ್ಲ. ಹಾಡಿದ್ದೂ ಹಾಡಿದ್ದೇ ! ಐದು ನಿಮಿಷ ಕೇಳುವುದರಲ್ಲಿ ನನಗೆ ಮನೆಬಿಟ್ಟು ಹೊರಟುಹೋಗೋಣವೆನ್ನಿಸಿತು. ಸುಮಾರು ಯಾರೋ ಹುಚ್ಚುಹಿಡಿದಿರುವವರು ಹಾಡುವಂತೆ ಕಾಣಿ ಸುತ್ತಿದೆ. ಮೊದಲೇ ಇದು ತಿಳಿದಿದ್ದರೆ ಇಲ್ಲಿಗೆ ಬರುತ್ತಿರಲಿಲ್ಲ. ಇಷ್ಟು ಅನುಕೂಲವಾದ ಜಾಗದಲ್ಲಿ ಈ ಕೊರತೆಯೊಂದು ಇದೆಯಲ್ಲ! ಪ್ರಪಂಚ ಸೋಮನಾಥಪುರದ ದೇವಾಲಯವೇ ಸರಿ. ವಿಗ್ರಹ ಗಳೆಲ್ಲವೂ ಎಲ್ಲಾ ವಿಧದಲ್ಲೂ ಸುಲಕ್ಷಣವಾಗಿವೆ. ಒಂದೊಂದರಲ್ಲಿ ಒಂದೊಂದು ಕೊರತೆ ಮಾತ್ರ. ಒಂದಕ್ಕೆ ಒಂದು ಬೆರಳು ಹೋಗಿರುವುದು, ಒಂದಕ್ಕೆ ತುಟಿಯ ಮೇಲೆ ಒಂದು ನೊಕ್ಕು, ಒಂದಕ್ಕೆ ಮೂಗಿನ ತುದಿ ಇಲ್ಲ. ಎಲ್ಲವೂ ಚೆನ್ನಾಗಿದ್ದರೆ ಮಾನವನ ಪ್ರಪಂಚ ಸ್ವರ್ಗಕ್ಕೆ ಹಾರಿ ಹೋಗುವುದೆಂಬ ಶಂಕೆಯಿಂದ ದೇವರು ಎಲ್ಲಾ ಸ್ಥಳಗಳಲ್ಲೂ ಒಂದೊಂದು ಕುಂದನ್ನು ಇಟ್ಟಿರುವನೇನೋ ? ಇಲ್ಲಿ ಈ ಸಂಗೀತವನ್ನು ಕೇಳಿ ತಡೆ ಯುವುದು ಕಷ್ಟವಾಗಿದೆ . . .

ಆ|| ಶು|| ದ್ವಾದಶಿ.—

. . . . . ಹಾಡು ಕೇಳುವುದು ನಮ್ಮ ಮನೆಯ ಎದುರುಮನೆ ಯಿಂದ. ಹಾಡುವವರ ವಯಸ್ಸು ಇಷ್ಟೇ ಎಂದು ಹೇಳುವುದಕ್ಕಾಗು ವುದಿಲ್ಲ. ಈ ದಿನ ಆ ಮನೆಯ ಮುಂದೆ ಒಬ್ಬ ವಯಸ್ಸಾದ ಹೆಂಗಸನ್ನೂ ಒಬ್ಬ ಹುಡುಗಿಯನ್ನೂ ನೋಡಿದೆನು. ಆ ಇಬ್ಬರಲ್ಲಿ ಯಾರೂ ಆ ಹಾಡನ್ನು ಹಾಡುವವರಂತೆ ತೋರಲಿಲ್ಲ. ಹಾಗೆ ಹಾಡುವವರು ಇವರಲ್ಲಿ ಒಬ್ಬರಾಗಿ ಇರುವುದೇ ಒಂದಾದರೆ ಅವರು ಆ ವಯಸ್ಸಾದ ಹೆಂಗಸಾ ಗಿರಲಿ, ಆ ಹುಡುಗಿಯಲ್ಲದೆ ಇರಲಿ, ಎಂದು ನನಗೆ ಬಹಳ ಆಸೆಯಾಗು ತ್ತದೆ. ಹುಡುಗಿ ಬಹಳ ಚೆಲುವೆ ; ನಾನು ಬೆಳಿಗ್ಗೆ ಎದ್ದು ಬಾವಿಗೆ ಹೋಗಿಬರುವುದಕ್ಕೆಂದು ಹೊರಗೆ ಬಂದಾಗ ಅವರ ಮನೆಯ ಬಾಗಿಲಲ್ಲಿ ನಿಂತಿದ್ದಳು. ಮೊದಲು ಎಲ್ಲೋ ನೋಡಿದ್ದ ಹಾಗೆ ಕಂಡದ್ದರಿಂದ

ಪುನಃ ನೋಡಿದೆನು. ಉದ್ದವಾಗಿ ತೆಳ್ಳಗಿದಾಳೆ. ಮುಖ ಗುಂಡಾಗಿ ಮಿತವಾಗಿ ತುಂಬಿ ಇದೆ. ದೊಡ್ಡ ಕಣ್ಣುಗಳು. ಎಲ್ಲೋ ನೋಡು ತ್ತಿದ್ದು ನಾನು ಹೊರಗೆ ಬಂದಾಗ ನನ್ನ ಕಡೆ ತಿರುಗಿದಳು. ಆ ಕಣ್ಣುಗಳ ಹೊಳಪೊ! ಇನ್ನೂ ಚಿಕ್ಕಹುಡುಗಿ. ಆದರೆ ಆ ಕಣ್ಣಿನ ಮಿಂಚಿನಲ್ಲೂ ಆ ತುಟಿಗಳ ಸ್ಥೈರ್ಯದಲ್ಲೂ ಒಳ್ಳೆಯ ತಿಳಿದ ಹುಡುಗಿಯ ಸೊಗಸು ಇದೆ. ಮುಖದಲ್ಲಿ ಕುಂಕುಮವಿರಲಿಲ್ಲ. ಏಕೊ? ಆದರೆ ಕೆನ್ನೆ ಅರಿಸಿನ ಹಚ್ಚಿದ ಕೆನ್ನೆಯಂತೆ ಇತ್ತು. ಬಹುಶಃ ಹಾಸಿಗೆಯಿಂದೆದ್ದು ಆಗತಾನೆ ಹೊರಗೆ ಬಂದಿದ್ದಳೇನೊ?

ಲಕ್ಷ್ಮಿ ಇಂದೋ ನಾಳೆಯೋ ಬರುವಳು. ಈ ಡಯರಿಯನ್ನು ನೋಡಿ ಏನೆನ್ನುವಳು? ನಾನು ಬೀದಿಯಲ್ಲಿ ನಿಂತು ಬರಹೋಗುವ ಹೆಂಗಸರನ್ನು ನೋಡುತ್ತಿರುತ್ತೇನೆ ಎಂದುಕೊಳ್ಳುವಳೊ? ಎಲ್ಲಾ ಹೆಂಗಸರೂ ಈ ಹುಡುಗಿಯಂತೆ ಚೆಲುವೆಯರಾದರೆ ಇನ್ನು ಬೇರೆ ಕೆಲಸ ಯಾವುದನ್ನೂ ಮಾಡದೆ ನೋಡಿದರೂ ನೋಡಬಹುದು. ಎಲ್ಲರೂ ಹೀಗಿರುವುದಿಲ್ಲ.—

ಅ॥ ಶು॥ ತ್ರಯೋದಶಿ.—

ಭಗವಂತ! ನಾವು ಯಾವುದನ್ನು ಎಣಿಸಿ, ಛೆ ಇದು ಕೆಟ್ಟದು ಇದನ್ನೆಣಿಸಬಾರದು ಎನ್ನುವೆವೊ, ಅದು ನಿಜವಾಗಬೇಕೆ? ಅಲ್ಲದೆ ಈ ಕೇಡು ಇಷ್ಟು ಹತ್ತಿರವೆಂದು ನನಗೆ ಕನಸಿನಲ್ಲೂ ತೋರಿರಲಾರದು. ಈ ದಿನ ಸಾಯಂಕಾಲ ನಾನು ಕಚೇರಿಯಿಂದ ಬಂದಾಗ ಪಕ್ಕದ ಮನೆಯ ಶಾಸ್ತ್ರಿಗಳು "ನಮಸ್ಕಾರ, ಆಫೀಸು ಆಯಿತೋ" ಎಂದರು. ನಾನು ಇಲ್ಲಿಗೆ ಬಂದು ನಾಲ್ಕುದಿನವಾದರೂ ಯಾರ ಸಂಗಡಲೂ ಮಾತನಾಡದೆ ಮೌನವಾಗಿದ್ದುದರಿಂದ, ಇವನನ್ನು ಮಾತನಾಡಿಸಿ ನಮ್ಮ ಗುಂಪಿಗೆ ಸೇರಿಸಿಕೊಳ್ಳಬೇಕು, ಎಂದು ಉದ್ದೇಶಿಸಿದರೆಂದು ತೋರುತ್ತದೆ. ನಾನೂ "ನಮಸ್ಕಾರ ಸ್ವಾಮಿ, ಆಯಿತು' ಎಂದೆನು. ಅವರು 'ಇನ್ನೂ ನಿಮ್ಮ ಮನೆಯವರು ಯಾರೂ ಬರಲಿಲ್ಲವೆಂದು ಕಾಣುತ್ತದೆ' ಎಂದು ನನ್ನ ಜೊತೆಗೆ ನಮ್ಮ ಮನೆಯ ಒಳಗೆ ಬಂದು ಕುರ್ಚಿಯಮೇಲೆ ಕುಳಿತರು.

' ಇಲ್ಲ ಬರಲಿಲ್ಲ. ಎರಡು ಮೂರು ದಿನದಲ್ಲೇ ಬಂದಾರು ' ಎಂದೆನು. ಶಾಸ್ತ್ರಿಗಳು ' ಸಂಗೀತ ಹ್ಯಾಗಿದೆ ' ಎಂದರು. ಇದೇಕೊ ಮಾತು ಬಹಳ ಧಾರಾಳವಾಯಿತೆಂದು ನಾನು ಏನೂ ಹೇಳದೆ ಸುಮ್ಮನೆ ಹಲ್ಲು ಕಿರಿದೆನು. ಶಾಸ್ತ್ರಿಗಳು ' ನಮಗೆ ಯಾರಾದರೂ ದೊಡ್ಡಮನುಷ್ಯರು ಬಂದು ಇಲ್ಲಿ ನಿಂತಾರೆ ಎಂದು ಆಸೆ ಸ್ವಾಮಿ, ಬಂದವರು ಈ ಸಂಗೀತ ಕೇಳಿ ಮೂರು ದಿನದಲ್ಲಿ ಓಡಿಹೋಗುತ್ತಾರೆ ' ಎಂದರು. ನಾನು ಸುಮ್ಮನಿದ್ದೆ. ' ನೀವೂ ಓಡಿಹೋಗುವುದು ತಾನೆ ಎಂದು ತಾವು ಕೇಳಬಹುದು. ಸ್ವಾಮಿ, ನಮ್ಮ ತಾತಂದಿರು ಒಬ್ಬ ಪಂಡಿತರಾಗಿದ್ದರು. ಅವರಿಗೆ ಆ ಕಾಲದಲ್ಲಿ ಈ ಮನೆ ದಾನವಾಗಿ ಬಂತು. ಯಾವ ಪಾಪವೋ ಮಾಡಿ ಆ ಮನೆ ಈಗ ನನ್ನದಾಗಿದೆ. ಬಿಟ್ಟುಹೋಗುವಹಾಗಿಲ್ಲ. ತಮ್ಮಂಥವರು ಬಾಡಿಗೆ ಕೊಟ್ಟರೆ ಬೇರೆ ಮನೆಗೆ ಹೋಗಬಹುದು ' ಎಂದರು. ' ಅವರು ಯಾರು ' ಎಂದು ನಾನು ಕೇಳಿದೆನು. ' ಯಾರೋ ಸ್ವಾಮಿ, ತಾಯಿ ಮಗಳು ಇಬ್ಬರೇ ಇದ್ದಾರೆ. ನಮ್ಮ ಮನೆಗಳಿಗೆ ಬರುವುದಿಲ್ಲ, ಹೋಗುವುದಿಲ್ಲ. ರಾತ್ರಿಯಾದರೆ ಹಾಡಿನ ಗೋಳು ಪ್ರಾರಂಭವಾಗುತ್ತದೆ ' ಎಂದರು. ನಾನು ಆಫೀಸು ಬಟ್ಟೆಯನ್ನು ತೆಗೆದು ಹಾಕಿ, ಒಂದು ಪಂಚೆಯನ್ನುಟ್ಟುಕೊಂಡು ಒಂದು ಪಂಚೆಯನ್ನು ಹೊದ್ದುಕೊಂಡು ಕುರ್ಚಿಯಮೇಲೆ ಕುಳಿತೆನು. ಶಾಸ್ತ್ರಿಗಳು ' ತಾವು ಬೊಂಬಾಯಿಯಲ್ಲಿ ಪ್ಯಾಸ್‌ಮಾಡಿದಿರೊ, ಮದರಾಸಿನಲ್ಲಿ ಪ್ಯಾಸ್ ಮಾಡಿದಿರೊ ' ಎಂದರು. ' ಬೊಂಬಾಯಲ್ಲಿ ' ಎಂದೆ. ' ಹಾಗಾದರೆ ತಾವು ಆ ಹುಡುಗಿಯ ಗಂಡನನ್ನು ನೋಡಿದ್ದರೂ ನೋಡಿರಬಹುದು. ಅವನೂ ಲಾಯರ್ ಪರೀಕ್ಷೆಗೆ ಓದುತ್ತಿದ್ದನಂತೆ. ತೆಳ್ಳಗೆ ಕೆಂಪಗೆ ಹುಡುಗ. ಇಲ್ಲಿ ಒಂದು ದಿನ ಬಂದಿದ್ದ. ಈಚೆಗೆ ಏನೋ ವರ್ತಮಾನ ಕೇಳಿದೆ. ನಿಜವೋ ಸುಳ್ಳೋ. ಆದರೆ ಆ ತಾಯಿಯಾದಾಕೆ ಅಳುತ್ತಿದ್ದ ದ್ದನ್ನು ನಾನು ನೋಡಿದೆ ' ಎಂದು ಶಾಸ್ತ್ರಿಗಳು ಹೇಳಿದರು.

ಬೊಂಬಾಯಿ, ಲಾಯರ್ ಪರೀಕ್ಷೆ, ತೆಳ್ಳಗೆ ಕೆಂಪಗೆ ಹುಡುಗ, ಕೆಟ್ಟ ವರ್ತಮಾನ. ಹುಡುಗಿಯನ್ನು ಎಲ್ಲೋ ನೋಡಿದಹಾಗಿದೆ. ನಾನು " ಆತನ ಹೆಸರೇನು? ಕೃಷ್ಣಮೂರ್ತಿಯೆ ? " ಎಂದೆನು.

ಅಲ್ಲವೆಂದು ಹೇಳಿಯಾರೇನೊ ಎಂದು ಒಂದು ದೂರದ ಆಸೆ ನನ್ನ ಮನಸ್ಸಿನಲ್ಲಿ ಇನ್ನೂ ಇತ್ತು.

ಅವರು "ಹೌದು, ಕೃಷ್ಣಮೂರ್ತಿ" ಎಂದರು.

ಕೃಷ್ಣಮೂರ್ತಿಯ ಹೆಂಡತಿಯೇ ಈ ಹುಡುಗಿ! ಹಾಡು ಹಾಡಿಸ ಗೋಳೇ ಸರಿ. ಹಾಡುವಳೇಕೆ?

ನಾನು "ಅಯ್ಯೋ ಪಾಪ, ಆತನ ಹೆಂಡತಿಯೇ ಈ ಹುಡುಗಿ" ಎಂದು ಹೇಳಿ ಎದ್ದೆನು. ಶಾಸ್ತ್ರಿಗಳೂ ಎದ್ದರು. ನನಗೆ ಇನ್ನು ಮಾತನಾಡುವುದಕ್ಕೆ ಇಷ್ಟಬರಲಿಲ್ಲ. ಶಾಸ್ತ್ರಿಗಳು ಮನೆಗೆ ಹೋದಮೇಲೆ ಕೃಷ್ಣಮೂರ್ತಿಯ ಕತೆಯನ್ನೆಲ್ಲ ನೆನೆದುಕೊಂಡೆನು.

ಕೃಷ್ಣಮೂರ್ತಿ ಆವಲೂರಿನ ಅಮಲ್ದಾರರ ಮಗ. ಅವರ ತಾಯಿ ಮಾವಿನಹಳ್ಳಿಯವರು. ಆಕೆ ಆಗಾಗ ಮಾವಿನಹಳ್ಳಿಗೆ ಹೋಗಿಬರುತ್ತಿದ್ದರು. ಮಾವಿನಹಳ್ಳಿಯಲ್ಲಿ ಶೇಕದಾರರಾಗಿದ್ದ ರಾಮಸ್ವಾಮಯ್ಯನವರು ಇವರ ಜನವೇ. ರಾಮಸ್ವಾಮಯ್ಯನವರು ಅವರ ದೂರದ ಸಂಬಂಧದ ಒಬ್ಬ ದೊಡ್ಡಮನುಷ್ಯರ ಮಗಳನ್ನು ಮದುವೆಯಾಗಿದ್ದರು. ಕೃಷ್ಣಮೂರ್ತಿಯ ತಾತ ವೆಂಕಟರಾಮಯ್ಯನವರೂ ಶೇಕದಾರ ರಾಮಸ್ವಾಮಯ್ಯನವರೂ ವಿಶೇಷ ಪರಿಚಯವುಳ್ಳವರಾಗಿದ್ದರು. ಶೇಕದಾರರಿಗೆ ಒಬ್ಬಳೇ ಮಗಳು. ಯಾವಾಗಲೋ ಚಿಕ್ಕಂದಿನಲ್ಲಿ ಕೃಷ್ಣಮೂರ್ತಿಯೂ ಈ ಹುಡುಗಿ ಲಕ್ಷ್ಮಿಯೂ ಜೊತೆಯಲ್ಲಿದ್ದಾಗ ಅವರು ಅನುರೂಪವಾಗಿದ್ದಾರೆ ಎಂದು ತೋರಿ ದೊಡ್ಡವರಾದಮೇಲೆ ಅವರಿಗೆ ಮದುವೆಮಾಡಬೇಕೆಂದು ಗೊತ್ತುಮಾಡಿದ್ದಂತೆ ತೋರುತ್ತದೆ. ಹುಡುಗ ಹುಡುಗಿಯರಿಗೂ ಇದು ತಿಳಿದಿತ್ತು. ಹುಡುಗ ಬುದ್ಧಿವಂತ, ಹುಡುಗಿ ಚೆಲುವೆ. ಒಬ್ಬರಿಗೊಬ್ಬರು ಬೇಕಾದ ಜನ. ಇನ್ನು ಮದುವೆಗೆ ಏನಡ್ಡಿ? ಈ ಮಾತು ನಡೆದಾಗ ಅಡ್ಡಿ ಏನೂ ಇರಲಿಲ್ಲ. ಆಮೇಲೆ ಹುಡುಗಿಗೆ ವಯಸ್ಸಾಗಿ ಜಾಗ್ರತೆಯಲ್ಲೇ ಮದುವೆ ನಡೆಯಬೇಕೆಂದು ಮಾತು ಬಂತು. ಕೃಷ್ಣಮೂರ್ತಿ ಆ ವೇಳೆಗೆ ಎಫ್.ಎ. ಕ್ಲಾಸಿನಲ್ಲಿದ್ದನು. ಅಮಲ್ದಾರರ ಮಗ ಎಫ್.ಎ. ಕ್ಲಾಸಿನಲ್ಲಿ ಓದುವವನು ಒಬ್ಬ ಶೇಕದಾರರ ಮಗಳನ್ನು ಮದುವೆಯಾಗಬೇಕಾದದ್ದೇನು? ಆಗ ಇದೊಂದು

ಅಡ್ಡಿ ಬಂತು. ಅವರಿವರು, ಅದರಲ್ಲಿ ಕೆಲವರು ಬಹಳ ದೊಡ್ಡ ಮನುಷ್ಯರು, ತಮ್ಮ ಮಗಳನ್ನು ಕೊಡುತ್ತೇವೆ ನಮ್ಮ ಮಗಳನ್ನು ಕೊಡುತ್ತೇವೆ ಎಂದು ಬಂದರು. ಅಮಲ್ದಾರರಿಗೆ ಇವರಲ್ಲಿ ಯಾರ ಮಗಳನ್ನಾದರೂ ತೆಗೆದುಕೊಳ್ಳಬೇಕೆಂದು ಮನಸ್ಸು. ಈ ಸಮಾಚಾರ ರಾಮಸ್ವಾಮಯ್ಯನವರಿಗೆ ತಿಳಿದು ಅವರು ವೆಂಕಟರಾಮಯ್ಯನವರನ್ನು ಒತ್ತಿ ಕೇಳಿದರು. ಇವರು ಅಳಿಯ ಅಮಲ್ದಾರರನ್ನು ವಿಚಾರಿಸಿ ಅವರ ಮನಸ್ಸು ಬೇರೆಯಾಗಿರುವುದನ್ನು ಕಂಡು ಯಾವುದೋ ಒಂದು ನೆವವನ್ನು ಹೇಳುವುದಕ್ಕಾಗಿ ಶೇಕದಾರರಿಗೆ "ನಿಮ್ಮ ಮಾವನ ಮನೆಯಲ್ಲಿ ಸ್ವಲ್ಪ ಹುಚ್ಚು ಇದೆ, ಆ ಮನೆಯ ಸಂಬಂಧವಿರುವ ಮಗಳನ್ನು ತೆಗೆದುಕೊಳ್ಳುವುದಕ್ಕೆ ಹುಡುಗನ ಮನೆಯವರಿಗೆ ಇಷ್ಟವಿಲ್ಲ" ಎಂದರು. ಅದಕ್ಕೆ ಹಿಂದೆ ಕೆಲವು ತಿಂಗಳಲ್ಲಿ ಆ ಹುಡುಗಿಯ ಸೋದರಮಾವ ಸ್ವಲ್ಪ ಹುಚ್ಚುಹಿಡಿದಂತಾಗಿ ತೀರಿಹೋಗಿದ್ದನು. ಇದೇ ಅವರಿಗೆ ನೆವವಾಯಿತು. ಸಂಬಂಧ ಕೆಟ್ಟುಹೋಯಿತೆಂದು ಇವರಿವರು ಮನಸ್ಸು ಮಾಡಿಕೊಂಡು ಆ ಯೋಚನೆಯನ್ನು ಬಿಟ್ಟು ಸುಮ್ಮನಾದರು.

ಮೂರುಪಾಲು ಕತೆ ಇಲ್ಲಿಗೆ ಮುಗಿಯಬೇಕು; ಇವರಿಗೆ ಬೇರೆ ಅಳಿಯ, ಅವರಿಗೆ ಬೇರೆ ಸೊಸೆ ಆಗಬೇಕು. ಆದರೆ ಈ ಸಂದರ್ಭದಲ್ಲಿ ಹುಡುಗನ ತಾಯಿಗೂ ಇಷ್ಟವಿದ್ದುದರಿಂದಲೂ ಹುಡುಗಿ ಬುದ್ಧಿಶಾಲಿಯಾದುದರಿಂದಲೂ ಇದೇ ಒಂದು ದಾರಿಯಾಯಿತು. ಒಂದು ದಿನ ಮಾವಿನಹಳ್ಳಿಯಲ್ಲಿ ಒಂದು ಮದುವೆಯ ಮನೆಗೆ ಶೇಕದಾರರ ಮನೆಯವರು ಹೋಗಿದ್ದಾಗ ಕೃಷ್ಣಮೂರ್ತಿಯ ತಾಯಿಯೂ ಅಲ್ಲಿದ್ದವರು, ಅರಿಸಿನ ಕುಂಕುಮಕ್ಕೆ ಹೋಗಿದ್ದರು. ಲಕ್ಷ್ಮಿ ಗುಂಪಿನಲ್ಲಿದ್ದವಳು ಚೆನ್ನಾಗಿ ಹಾಡಿದಳು. ಅವರಿಗೆ ಬಾಯೂರಿತು. ಆದರೆ ಒಂದು ಸಲ ಬೇಡವೆಂದಿದ್ದಾರೆ, ಇನ್ನು ಆ ಮಾತನ್ನು ಹೇಗೆ ಎತ್ತುವುದು? ಎಲ್ಲರೂ ಹೊರಟು ಬರುವಾಗ "ಚೆನ್ನಾಗಿ ಹಾಡುತೀಯೇ ಅಮ್ಮ, ಯಾವ ಪುಣ್ಯವಂತ ಮದುವೆಯಾಗುತ್ತಾನೋ" ಎಂದರಂತೆ. ಹುಡುಗಿ "ಹಾಗಾದರೆ ಕಿಟ್ಟಾಮಿಗೆ ಯಾಕೆ ಬೇಡ ಎಂದಿರಿ" ಎಂದಳು. ಹುಡುಗಿ, ಈ ಮಾತನ್ನು ಹೇಳಬಹುದು ಈ ಮಾತನ್ನು ಹೇಳಬಾರದು, ಎಂದು ಕಾಣಳು. ಅವರಿಗೆ ಆಶ್ಚರ್ಯ

ವಾಯಿತು. "ಅಮ್ಮಯ್ಯ, ನಮ್ಮ ಹುಡುಗನನ್ನ ಮದುವೆಯಾಗು ತೀಯೇನೆ" ಎಂದು ಕೇಳಿದರಂತೆ. ಹುಡುಗಿ ಸುಮ್ಮನಿದ್ದಳು. ಕೃಷ್ಣ ಮೂರ್ತಿಯ ತಾಯಿ ಅಂದು ಮನೆಗೆ ಹೋಗಿ ತನ್ನ ಮಗನಿಗೆ ಆ ಹುಡುಗಿ ಯನ್ನೇ ತರುವುದೆಂದು ನಿರ್ಧಾರಮಾಡಿದರು. ಕೊನೆಗೆ ಅಮಲ್ದಾರರಿಗೆ ಇಷ್ಟವಿಲ್ಲದೆಯೇ ಕೃಷ್ಣಮೂರ್ತಿಗೂ ಲಕ್ಷ್ಮಿಗೂ ಮದುವೆಯಾಯಿತು. ಇದಾದ ಕೊಂಚದಿನಕ್ಕೆ ರಾಮಸ್ವಾಮಯ್ಯನವರಿಗೆ ಬೀಗ ಅಮಲ್ದಾರರ ತಾಲ್ಲೂಕಿಗೆ ವರ್ಗವಾಗಿ ಕಸಬೆಯ ಶೇಕದಾರಿಯಾಯಿತು.

ಹುಡುಗ ಹುಡುಗಿಯರಿಗೆ ಬಹಳ ವಿಶ್ವಾಸವಿತ್ತೆಂದು ಮೊದಲೇ ಹೇಳಿದೆಯಷ್ಟೆ. ಕೃಷ್ಣಮೂರ್ತಿ ರಜಾದಲ್ಲಿ ನಾಲ್ಕುದಿನ ಮುಂದಾಗಿ ಊರಿಗೆ ಹೋಗುವನು. ಬರುವಾಗ ನಾಲ್ಕು ದಿನ ಸಾವಕಾಶವಾಗಿ ಬರುವನು. ಮಯಿಳೂರು ಕಾಲೇಜಿನಲ್ಲಿ ಓದುತ್ತಿದ್ದಾಗ ನಾನೂ ಅವನೂ ಹಾಸ್ಟಲಿನಲ್ಲಿ ಒಂದೇ ರೂಮಿನಲ್ಲಿ ಇದ್ದೆವು. ಅವನಿಗೆ ಹುಡುಗಿ ಯಿಂದ ಸಾಮಾನ್ಯವಾಗಿ ಮೂರು ದಿನಕ್ಕೆ ಒಂದು ಸಾರಿ ಕಾಗದ ಬರು ತ್ತಿತ್ತು. ಹುಡುಗರಿಗೆ ಚಿಕ್ಕಂದಿನಲ್ಲಿ ಮದುವೆಮಾಡಬಾರದೆಂದು ನಮ್ಮಲ್ಲಿ ತಿಳಿದವರು ಹೇಳುತ್ತಾರೆ. ಪ್ರಾಯಶಃ ಇದು ಸರಿಯೆಂದು ಒಪ್ಪಬೇಕು. ಕಾಗದ ಬರುವುದು ಒಂದು ದಿನ ಸಾವಕಾಶವಾದರೆ ಕೃಷ್ಣಮೂರ್ತಿ ಮಂಕಾಗುವನು. ಆದಿನ ಅವನ ಓದು ಸರಿಯಾಗಿ ನಡೆಯುತ್ತಿರಲಿಲ್ಲ. ಕಾಗದ ಸರಿಯಾಗಿ ಬರುತ್ತಾ ಇದ್ದರೆ ಚೆನ್ನಾಗಿ ಓದು ವನು. ಹೆಂಡತಿಗೆ ತಾನೂ ತಪ್ಪದೆ ಕಾಗದ ಬರೆಯುತ್ತಿದ್ದನೆಂದು ತೋರುತ್ತದೆ. ಹೀಗೆ ಗಂಡಹೆಂಡಿರ ವಿಶ್ವಾಸ ಬಹಳ ಅಭಿವೃದ್ಧಿಗೆ ಬಂದಿರ ಬೇಕು. ಅವನು ನನಗಿಂತ ಒಂದು ಕ್ಲಾಸು ಚಿಕ್ಕವನಾದ್ದರಿಂದ ನಾನು ಬಿ.ಎ. ಪ್ಯಾಸುಮಾಡಿ ಬೊಂಬಾಯಿಗೆ ಹೊರಟುಹೋಗಲು ಕೃಷ್ಣ ಮೂರ್ತಿ ಒಂದುವರುಷದ ಮೇಲೆ ಬೊಂಬಾಯಿಗೆ ಬಂದ. ಆದರೆ ಮಯಿ ಳೂರಿನಲ್ಲಿ ಇದ್ದಹಾಗೆ ನಾವು ಒಂದೇ ರೂಮಿನಲ್ಲಿರಲಿಲ್ಲ. ಅವನ ವರುಷದ ಹುಡುಗರೆಲ್ಲ ಒಂದುಕಡೆ ಜಾಗಮಾಡಿಕೊಂಡರು. ಅವನು ಅವರ ಜೊತೆಗೆ ಇದ್ದ. ನಾನು ಮೊದಲೇ ಮಾಡಿಕೊಂಡಿದ್ದ ಬೇರೊಂದು ಕಡೆ ಇದ್ದೆ. ಯಾವಾಗಲಾದರೂ ಅಲ್ಲಿಗೆ ಹೋಗಿಬರುತ್ತಾ ಇದ್ದೆ. ಮೊದ

ಮೊದಲಲ್ಲಿ ಕೃಷ್ಣಮೂರ್ತಿ ಎಂದಿನಂತೆ ಹರ್ಷವಾಗಿಯೇ ಇದ್ದ. ಆಮೇಲೆ ಏನೋ ಯೋಚನೆಗಳು ಬಂದಂತೆ ಕಂಡಿತು. ಅವರ ಮಾವ ಹೋದರು. ಇವರ ಮನೆಯವರಿಗೂ ಅವರ ಮನೆಯವರಿಗೂ ಏನೋ ಮನಸ್ತಾಪ ಗಳು ಬಂದಿದ್ದಂತೆ ತೋರಿತು. ಸ್ವಲ್ಪ ದಿನ ಈ ಹುಡುಗಿಯನ್ನು ಮನೆಗೆ ಕರೆಸಿಕೊಳ್ಳುವುದೇ ಇಲ್ಲ ಎಂದು ಕೂಡ ಮಾತು ಬಂದಿತ್ತು. ಕೃಷ್ಣಮೂರ್ತಿ ಸ್ವಭಾವವಾಗಿ ಮಿತಭಾಷಿ, ಅಲ್ಲದೆ ಅವನನ್ನು ನಾನು ವಿಶೇಷವಾಗಿ ನೋಡುವುದಕ್ಕೆ ಆಗುತ್ತಿರಲಿಲ್ಲ. ಆದ್ದರಿಂದ ಇನ್ನೇನೂ ವಿವರ ತಿಳಿಯಲಿಲ್ಲ. ಇಷ್ಟು ತಿಳಿದದ್ದೂ ಹೆಚ್ಚೇ. ಕೊಂಚ ದಿನದಮೇಲೆ ನಾನು ಪರೀಕ್ಷೆಯನ್ನು ಮುಗಿಸಿಕೊಂಡು ಹಿಂದಕ್ಕೆ ಬಂದೆ. ಕೆಲವು ತಿಂಗಳ ಮೇಲೆ ಬೊಂಬಾಯಿಂದ ಇನ್ನೊಬ್ಬರು ಬರೆದ ಕಾಗದ ದಿಂದ ಕೃಷ್ಣಮೂರ್ತಿಗೆ ಏನೋ ಕಾಯಿಲೆ ಎಂದು ತಿಳಿಯಿತು. ಆಮೇಲೆ ಅದು ಕ್ರೂರವಾಗಿ ಅವನು ಬೊಂಬಾಯಲ್ಲಿ ತೀರಿಹೋದನು.

ಕೃಷ್ಣಮೂರ್ತಿಗೆ ಮದುವೆಯಾದದ್ದು ನಾನೂ ಅವನೂ ಮಯಿ ಳೂರ ಹಾಸ್ಟೆಲಿನಲ್ಲಿ ಒಂದು ರೂಮಿನಲ್ಲಿ ವಾಸಮಾಡುತ್ತಿದ್ದಾಗ. ನಾನೂ ಒಂದು ದಿನ ಮದುವೆಗೆ ಹೋಗಿದ್ದೆ. ಹುಡುಗಿಯನ್ನು ನೋಡಿದ್ದೆ. ಆಗ್ಯೆ ಈಗ್ಯೆ ಹುಡುಗಿ ಬೆಳೆದಿದ್ದಳು. ಆದರೆ ಮುಖ ಸ್ವಲ್ಪ ಜ್ಞಾಪಕ ದಲ್ಲಿತ್ತು. ಅದರಿಂದಲೇ ಅವಳನ್ನು ಮೂರು ದಿನದ ಹಿಂದೆ ಮೊದಲು ನೋಡಿದಾಗ ಎಲ್ಲೋ ನೋಡಿದಂತೆ ಮನಸ್ಸಿಗೆ ತೋರಿದ್ದು.

ಆ॥ ಶು॥ ಚತುರ್ದಶಿ.—

ಕೃಷ್ಣಮೂರ್ತಿ ಹೋದನೆಂದು ಇಪ್ಪತ್ತು ದಿನದ ಹಿಂದೆ ಕೇಳಿದಾಗ ನನಗೆ ಬಹಳ ಅಯ್ಯೋ ಎನ್ನಿಸಿತು. ಇದನ್ನೆಲ್ಲಾ ನೆನೆದುಕೊಂಡು “ಬದುಕಿದ್ದರೆ ಎಷ್ಟು ಸುಖವಾಗಿರುತ್ತಿದ್ದನೋ ಅಂಥ ಜೀವನಕ್ಕೆ ಇದು ಕೊನೆಯಾಯಿತು” ಎಂದು ಬಹಳ ದುಃಪಟ್ಟಿನು. ಆದರೆ ನಿನ್ನೆ ಶಾಸ್ತ್ರಿಗಳು ಈ ಹುಡುಗಿ ಅವನ ಹೆಂಡತಿಯೆಂದು ಹೇಳಿದಾಗಿನಿಂದ ಈ ವಿಷಯವನ್ನು ಯೋಚನೆ ಮಾಡುವುದಕ್ಕೆ ಮನಸ್ಸು ತಾಳದು. ಹೊಟ್ಟೆಯಲ್ಲಿ ಬೆಂಕಿಹಾಕಿದ ಹಾಗಾಗಿದೆ. ಪ್ರತ್ಯಕ್ಷವಾದ ವಸ್ತುವನ್ನು ನೋಡುವಾಗ ತಿಳಿಯುವಂತೆ ಕಷ್ಟ ಊಹೆಯಿಂದ ತಿಳಿಯುವುದಿಲ್ಲ.

ಖಿನ್ನೆಯಿಂದ ಮನಸ್ಸಿನಲ್ಲಿ, ಹೋದವನು ಹೋಗಲಿ ಇವಳ ಗತಿಯೋ, ಎಂದು ಎಲ್ಲೂ ನಿಲ್ಲದ ಕಳವಳ ಉಂಟಾಗಿದೆ.

ಈ ದಿನ ಬೆಳಿಗ್ಗೆ ವಿಶ್ವೇಶ್ವರಪುರದಲ್ಲಿ ನೆಂಟರ ಮನೆಯಲ್ಲಿ ಊಟ ಮಾಡಿ ಕಚೇರಿಗೆ ಹೋಗುವುದಕ್ಕೆಂದು ಮನೆಯಿಂದ ಹೊರಟೆ. ಹೊರಟಾಗ ಹುಡುಗಿ ಅವರ ಮನೆಯ ಬಾಗಿಲಿನಲ್ಲಿ ನಿಂತಿದ್ದಳು. ನನ್ನ ಬೈಸಿಕಲ್ಲನ್ನು ಜವಾನ ನಮ್ಮ ಮನೆಯ ಗೋಡೆಗೆ ಒರಗಿಸಿಟ್ಟಿದ್ದನು. ಎಲ್ಲಿ ಇಟ್ಟಿದ್ದಾನೋ ಎಂದು ನೋಡಿ ಪುನಃ ಆ ಮನೆಯ ಕಡೆ ತಿರುಗಿದೆನು. ಹುಡುಗಿ ನನ್ನನ್ನು ದಿಟ್ಟಿಸಿನೋಡುತ್ತಿದ್ದಳು. ಕೃಷ್ಣಮೂರ್ತಿ ಅಲ್ಲಿ ತೀರಿಹೋಗಿರುವಾಗ ಇಲ್ಲಿ ಇವಳು ಹಾಡುವುದನ್ನೂ ಹಾಡಿನ ಧ್ವನಿಯನ್ನೂ ಇಂದು ಹೀಗೆ ನಿಂತು ನನ್ನನ್ನು ನೋಡುತ್ತಿರುವುದನ್ನೂ ಯೋಚಿಸಿದರೆ ಇವಳಿಗೆ ಬುದ್ಧಿ ಸರಿಯಾಗಿದೆಯೋ ಇಲ್ಲವೋ ಎಂದು ತೋರಿತು. ಇಷ್ಟು ಸುಷ್ಮವಾದ ಶರೀರದಲ್ಲಿ ಬುದ್ಧಿ ಭ್ರಮಿಸಿರಬಹುದೇ ? ಎಂದುಕೊಂಡು ನಾನು ಬೈಸಿಕಲ್ಲನ್ನು ತೆಗೆದುಕೊಳ್ಳುವುದಕ್ಕೆ ಹೋದೆನು. ಹುಡುಗಿ ಆಗ ಸರ್ರನೆ ನಾಲ್ಕುಅಡಿ ಇಟ್ಟು ನನ್ನ ಕಡೆಗೆ ಬಂದಳು. ಅವಳ ಹಣೆಯಲ್ಲಿ ಕುಂಕುಮವಿದ್ದಂತೆ ಇತ್ತು. ಇದೇನು ಬಂತು ಎಂದುಕೊಂಡು ನಾನು ಜಾಗ್ರತೆಯಾಗಿ ಬೈಸಿಕಲ್ಲನ್ನು ಏರಿ ಹೊರಟುಹೋದೆನು. ಹಣೆಯಲ್ಲಿ ಕುಂಕುಮವಿದ್ದಿರಲಾರದು ಎಂದುಕೊಂಡೆನು. ಆಮೇಲೆ ನನ್ನನ್ನು ನೋಡಿ ನನ್ನ ಕಡೆಗೆ ಬರುವುದು ಬುದ್ಧಿಭ್ರಮೆಯೇ ಆಗಬೇಕೆ? ನನ್ನ ಸಂಗಡ ಏನನ್ನಾದರೂ ಹೇಳುವುದಕ್ಕೆ ಬಂದಳೋ ಎಂದು ತೋರಿತು. ಆದರೆ ಅವಳು ನನ್ನ ಸಂಗಡ ಹೇಳಬೇಕಾದ ಮಾತೇನು ಇರುವುದು? ಅಯ್ಯೋ ಪಾಪ! ಇನ್ನೂ ಮಗುವಾಗಿದ್ದಾಗ ಮದುವೆಯ ಹಸೆಯಮೇಲೆ ಕುಳಿತು ಹಾಸ್ಯದ ಹಾಡುಗಳನ್ನು ಹೇಳಿ ಹುಡುಗಾಟವಾಡುವಾಗ ಇದ್ದ ಆ ಮುಖದ ಭಾವಕ್ಕೂ, ಏನೋ ಒಂದು ಯೋಚನೆಯಿಂದ ಮುಚ್ಚಿ, ಎಲ್ಲೋ ಇರುವ ದೃಷ್ಟಿಯಿಂದ ಕೂಡಿ, ಆಟವನ್ನು ಮರೆತಂತಿರುವ ಈ ಮುಖದ ಭಾವಕ್ಕೂ, ಎಷ್ಟು ವ್ಯತ್ಯಾಸ! ಕಂದ,) ಸೃಷ್ಟಿಯಲ್ಲಿ ಬ್ರಹ್ಮ ಅನೇಕ ವಿಧವಾದ ಕಷ್ಟವನ್ನು ನಿರ್ಮಾಣಿಸಿ ಹರಡಿದ್ದಾನಲ್ಲ! ಈ ಒಂದು ಕಷ್ಟವನ್ನು

ಅವನು ಇಲ್ಲದಂತೆ ಮಾಡಿದರೆ ಅದರ ದುಃಖದ ಮೊತ್ತವು ಕಡಿಮೆಯಾಗು ವುದೇನು? ಇದನ್ನವನು ನಿಲ್ಲಿಸಬಾರದೇಕೆ? . . . .

ಪೂರ್ಣಿಮಾ.—

ನನಗೆ ಸರ್ವದಾ ಆ ಹುಡುಗಿಯ ಪಾಡನ್ನು ಕುರಿತ ಯೋಚನೆಯೇ ಯೋಚನೆಯಾಗಿದೆ. ಅವಳಿರುವ ಸ್ಥಳಕ್ಕೆ ಬರುವುದಕ್ಕೇ ಮನಸ್ಸು ಬಾರದು. ನಿನ್ನೆ ರಾತ್ರಿ ಬಹಳ ಹೊತ್ತುಮಾಡಿಕೊಂಡು ಮನೆಗೆ ಬಂದೆ. ಈ ದಿನ ಬೆಳಿಗ್ಯೆ ಉದಯಕ್ಕೆ ಎದ್ದು ವಿಶ್ವೇಶ್ವರಪುರಕ್ಕೆ ಹೊರಟುಹೋದೆ. ಆದರೆ ಹೀಗೆ ಎಷ್ಟುದಿನ ಮಾಡಬಹುದು? ನಾನು ಕೇವಲ ಹೇಡಿಯೆಂದು ನನಗೀಗ ತೋರುತ್ತದೆ. ಕಷ್ಟವನ್ನು ಹರಿಸ ಲಾರೆನು, ಅದರಿಂದ ಪಲಾಯನಮಾಡುತ್ತಿದೇನೆ. ಯಾವ ಕೆಲಸಕ್ಕೂ ಮನಸ್ಸಿಲ್ಲ. ನಿನ್ನೆ ಹೊತ್ತುಮಾಡಿಕೊಂಡು ಬಂದವನು ನಾಲ್ಕು ಪಂಕ್ತಿ ಡಯರಿ ಬರೆಯುವ ವೇಳೆಗೆ ಬೇಜಾರು ಹುಟ್ಟಿ ಮಲಗಿಕೊಂಡೆನು. ಇಂದು ಬಂದು ಒಂದು ಪುಸ್ತಕವನ್ನು ಎತ್ತಿಕೊಂಡೆನು, ಓದುವುದಕ್ಕೆ ಮನಸ್ಸಿಲ್ಲ. ಡಯರಿಯನ್ನು ಎತ್ತಿಕೊಂಡೆನು, ಬರೆಯುವುದಕ್ಕೆ ಮನಸ್ಸಿಲ್ಲ. ಸುಮ್ಮನೆ ಹಾಗೆಯೇ ಕುಳಿತು, ನಿನ್ನೆ ಬರೆದದ್ದನ್ನು ಓದಿನೋಡಿದೆನು. ನನ್ನ ಹುಚ್ಚನ್ನು ನೋಡಿ ನನಗೇ ಆಶ್ಚರ್ಯವಾಯಿತು. "ಇದು ಬ್ರಹ್ಮನು ನಿರ್ಮಿಸಿರುವ ಕಷ್ಟದಲ್ಲಿ ಒಂದು ಎಂದು ಬುದ್ಧಿವಂತನಾದ ನಾನು ಬರೆದೆನೇ? ಸಮಾಜ ಯಾವುದೋ ಒಂದು ಕಾರಣದಿಂದ ಬಾಲ ವೈಧವ್ಯ ಅವಶ್ಯಕವೆಂದು ನಿಯಮಮಾಡಿದ್ದರೆ ಬ್ರಹ್ಮ ಏನು ಮಾಡಿಯಾನು? ಇಂಥ ದುಃಖವನ್ನು ತಪ್ಪಿಸುವುದಕ್ಕೆ ಉಪಾಯ ಸಮಾಜದ ಕೈಯಲ್ಲಿ ಇದೆ. ಈಶ್ವರಚಂದ್ರವಿದ್ಯಾಸಾಗರನು ಧೈರ್ಯ ಮಾಡಿ ವಿಧವಾವಿವಾಹವನ್ನು ಮೊದಲುಮಾಡಿದಂದಿನಿಂದ ಇದುವರೆಗೆ ಅನೇಕರಿಲ್ಲದಿದ್ದರೆ ಇರಲಿ, ಈ ಕಷ್ಟಕ್ಕೆ ಸಿಕ್ಕಿದ ಕೊಂಚ ಜನರಾದರೂ ಅದರಿಂದ ನಿವೃತ್ತರಾಗಿರುವರು. ಈ ವಾಡಿಕೆ ಹೆಚ್ಚಿದ ಹಾಗೆ ಇಂಥ ದುಃಖವೂ ಕಡಿಮೆಯಾಗುವುದು" ಎಂದುಕೊಂಡೆನು. ಒಡನೆಯೇ "ಇದೂ ಒಂದು ಹುಚ್ಚು. ಎಷ್ಟು ಮದುವೆಮಾಡಿಕೊಂಡರೆ ತಾನೇ ಹೋದವನ ಪ್ರಾಣ ಹಿಂದಕ್ಕೆ ಬರುವುದೇ; ಅವನ ಮೇಲಣ

ಪ್ರೇಮದ ನೆನವು ಮರೆಯುವುದೇ ? ಈ ಹುಡುಗಿ ಇನ್ನು ಯಾರನ್ನೂ ಕೃಷ್ಣಮೂರ್ತಿಯನ್ನು ಕಾಣುತ್ತಿದ್ದ ಹಾಗೆ ಕಾಣಲಾರಳು. ಒಂದು ಕಟ್ಟೆಯಮೇಲೆ ಒಂದೇಸಲ ನೆಟ್ಟ ಸಣ್ಣ ಅಶ್ವತ್ಥದ ಗಿಡವೂ ಸಣ್ಣ ಬೇವಿನ ಸೊಸಿಯೂ ಜೊತೆಯಲ್ಲಿ ಬೆಳೆದು, ಒಂದು ಗಾಳಿಯಲ್ಲಿ ಆಡಿ, ಒಂದು ಬಿಸಿಲಲ್ಲಿ ಕಾದು, ಚಿಕ್ಕಂದಿನಿಂದಲೂ ಬಾಹುಳಿಂದ ಒಂದ ನ್ನೊಂದು ಹಿಡಿದುಕೊಂಡು, ಒಂದರ ಕೊಂಬೆಗೊಂದು ಸ್ಥಳವನ್ನು ಬಿಡುತ್ತ ಪ್ರೇಮದಿಂದ ಹೆಚ್ಚಿ, ದೇಹ ಬೇರೆ ಎಂಬುದನ್ನೂ ಮರೆತಂತೆ ತೋರುವ ರೀತಿಯಲ್ಲಿ, ಬೆಳೆದ ಎರಡು ಗಿಡಗಳನ್ನು ಹತ್ತಿರ ಹತ್ತಿರ ನೆಟ್ಟು ಹೊಂದದ ಕೊಂಬೆಗಳನ್ನು ಬಾಚಿಯಿಂದ ಕಡಿದುಹಾಕಿ ಎಷ್ಟು ಕೌಶಲ್ಯದಿಂದ ಜೊತೆಯಾಗಿ ನಿಲ್ಲಿಸಿದರೆ ಆದೀತು ? ಈ ಕಷ್ಟಕ್ಕೆ ನಿವಾರಣೆಯಿಲ್ಲ. . . . ."

ಆ|| ಬಹುಳ ಪಾಡ್ಯಮಿ—

ನಾನು ನಿನ್ನೆ ರಾತ್ರಿ ಸ್ವಲ್ಪ ಹೊತ್ತು ಯೋಚನೆ ಮಾಡುತ್ತಿದ್ದು ನಿದ್ದೆ ಬಾರದ್ದರಿಂದ ಹೊತ್ತುಹೋಗುವುದಕ್ಕಾಗಿ ಹತ್ತು ಪಂಕ್ತಿ ಬರೆ ಯೋಣವೆಂದು ಕುಳಿತುಕೊಂಡು "ನಿವಾರಣೆ ಇಲ್ಲ ಎಂದುಕೊಂಡೆನು." ಎಂದು ಬರೆಯುವುದರೊಳಗಾಗಿ ನಿಲ್ಲಿಸಬೇಕಾಯಿತು. ಇದನ್ನು ಈ ಬಹುಳ ಪಾಡ್ಯಮಿಯ ದಿನ ಬರೆಯುತ್ತಿದೇನೆ. ಆದರೆ ಬರೆಯುವ ವಿಷಯ ಪೂರ್ಣಿಮೆಗೆ ಸಂಬಂಧಪಟ್ಟದ್ದು. 'ನಿವಾರಣೆಯಿಲ್ಲ' ಎಂದು ಬರೆಯುವವೇಳೆಗೆ ಯಾರೋ ಬಂದು ಬಾಗಿಲನ್ನು ತಟ್ಟಿದರು. ಬಾಗಿಲು ತಟ್ಟಿದ ಶಬ್ದವನ್ನು ಕೇಳಿದೊಡನೆ ನನಗೆ ಆ ಹುಡುಗಿ ಬಂದಳೇನೋ ಎಂದು ಸ್ವಲ್ಪ ಶಂಕೆ ಉಂಟಾಯಿತು. ತಿಳಿಯದ ಹುಡುಗಿ, ಯಾರಾ ದರೂ ನೋಡಿದರೆ ಅವಳ ಹೆಸರಿಗೂ ಒಳ್ಳೆಯದಲ್ಲ, ನನ್ನ ಹೆಸರಿಗೂ ಒಳ್ಳೆಯದಲ್ಲ. ಜವಾನನನ್ನು ಕರೆದು ಯಾರೋ ನೋಡು ಎಂದು ಹೇಳೋಣವೆಂದು ಕೂಗಿದೆನು. ಅವನು ನಿದ್ದೆಹೋಗುತ್ತಿದ್ದನೆಂದು ಕಾಣುತ್ತದೆ, ಉತ್ತರ ಕೊಡಲಿಲ್ಲ. ಇಷ್ಟು ಹೊತ್ತಿಗೆ ನನಗೆ ಯಾವ ಕಾರಣದಿಂದಲೋ "ಬಂದಿರುವುದು ಆ ಹುಡುಗಿಯೇ ಇರಬೇಕು" ಎಂದು ತೋರಿಬಂತು. ಯಾಕೆ ಬಂದಿರಬಹುದು ? ಯಾತಕ್ಕಾಗಿ ಬಂದಿ

ಧ್ದರೂ ನಾನೇ ಹೋಗಿ ಬಾಗಿಲನ್ನು ತೆರೆದು, ಮನೆಗೆ ಹೋಗಮ್ಮ ಹೀಗೆಲ್ಲ ಬರಬಾರದು, ಎಂದು ಹೇಳುವುದೇ ಸರಿ; ಅವಳು ಬಂದ ವಿಷಯ ಯಾತಕ್ಕೆ ಇನ್ನೊಬ್ಬರಿಗೆ ತಿಳಿಯಬೇಕು? ಎಂದು ನಾನೇ ಹೋಗಿ ಬಾಗಿಲನ್ನು ತೆರೆದೆನು. ಕೊಟಡಿಯಿಂದ ಬೆಳಕು ಸ್ವಲ್ಪ ಮಾತ್ರ ಹೊರಗೆ ಬೀಳುತ್ತಿತ್ತು. ಆ ಬೆಳಕಿನಲ್ಲಿ ಆ ಹುಡುಗಿಯ ತಾಯಿ.

ಹುಡುಗಿ ಬಂದಿದ್ದರೆ ಏನು ಹೇಳುವುದೆಂದು ಸಿದ್ಧನಾಗಿದ್ದೆನೇ ಹೊರತು ಈಕೆ ಬಂದಿದ್ದರೆ ಏನು ಹೇಳುವುದೆಂದು ನಾನು ಸಿದ್ಧನಾಗಿರಲಿಲ್ಲ. ಏನೂ ಹೇಳದೆ ಸುಮ್ಮನೆ ನಿಂತೆನು. ಆಕೆ ಸುತ್ತಲೂ ಒಂದು ಸಲ ನೋಡಿ ಕತ್ತಲೆಗೆ ಸರಿದು 'ನಾನು ತಮ್ಮ ಸಂಗಡ ಒಂದು ಮಾತು ಹೇಳಬೇಕಾದದ್ದಿತ್ತು. ಒಳಗೆ ಬರಲೇ' ಎಂದು ಮೆಲ್ಲಗೆ ಹೇಳಿದರು.

ನಾನು "ಮನೆಯಲ್ಲಿ ಹೆಂಗಸರು ಮಕ್ಕಳು ಯಾರೂ ಇಲ್ಲವಮ್ಮ" ಎಂದೆನು.

ಆಕೆ "ನಾನು ಇನ್ನು ಯಾವಾಗಲೂ ಬರುವುದು ಸರಿಹೋಗುವುದಿಲ್ಲ. ಒಂದು ಮಾತಿದೆ, ಅದನ್ನು ಹೇಳಿ ಹೊರಟುಹೋಗುತ್ತೇನೆ" ಎಂದರು.

ನಾನು "ಅವಶ್ಯವಾಗಿ ಹೇಳಿ ತಾಯಿ, ಬನ್ನಿ" ಎಂದು ಒಳಗೆ ಬಂದು ಅವರಿಗೆ ಒಂದು ನಾಗಾಲಿಯನ್ನು ಹಾಕಿದೆನು. ಅವರು ಒಳಗೆ ಬಂದರು, ಆದರೆ ಕುಳಿತುಕೊಳ್ಳಲಿಲ್ಲ. ಅವರು ನಿಂತಿರುವಾಗ ನಾನು ಮಾತ್ರ ಕೂಡುವುದು ಹೇಗೆಂದು ನಾನೂ ಒಂದು ಕಡೆ ನಿಂತುಕೊಂಡೆನು.

ಆಕೆ "ನಿಮಗೆ ನಮ್ಮ ಜ್ಞಾಪಕ ಇದೆಯೋ ಇಲ್ಲವೊ. ನಮಗೆ ನಿಮ್ಮ ಜ್ಞಾಪಕ ಚೆನ್ನಾಗಿ ಇದೆ" ಎಂದರು.

ನಾನು "ನನಗೂ ಜ್ಞಾಪಕವಿದೆ."

ಆಕೆ "ಜ್ಞಾಪಕ ಇಲ್ಲದೆ ಹೋದರೂ ಆಶ್ಚರ್ಯವಿಲ್ಲ. ಆಗ್ಯೆ ಈಗ್ಯೆ ನಮ್ಮ ಪಾಡು ಬಹಳ ವ್ಯತ್ಯಾಸವಾಗಿದೆ. ನಾವು ಗುರುತು ಸಿಕ್ಕುವುದು ಕಷ್ಟ" ಎಂದು ಕಣ್ಣೀರು ಸುರಿಸಿದರು.

ನಾನು "ನನಗೆ ಎಲ್ಲವೂ ಚೆನ್ನಾಗಿ ತಿಳಿಯದು. ತಮ್ಮ ಯಜಮಾನರು ತೀರಿಹೋದ ಸಮಾಚಾರ ಮಾತ್ರ ತಿಳಿಯಿತು" ಎಂದೆನು.

" ಈ ಸಮಾಚಾರವೋ ? "

" ಇದೂ ಕೊಂಚ ದಿನಗಳ ಹಿಂದೆ ತಿಳಿಯಿತು."

ಆಕೆ—" ಅಪ್ಪಾ ಐದುವರ್ಷದ ಹಿಂದೆ ನನಗೆ ಒಂದೂ ಚಿಂತೆ ಇರಲಿಲ್ಲ, ಸುಖವಾಗಿದ್ದೆವು. ಅವರು ಕಷ್ಟವೋ ನಿಷ್ಠುರವೋ ಪಟ್ಟು ಅನ್ನ ತಂದುಹಾಕುತ್ತಿದ್ದರು. ನಾನೂ ತಿಂದು ಬಂದವರಿಗೆ ಒಂದಷ್ಟನ್ನು ಹಾಕುತ್ತಿದ್ದೆ. ಒಬ್ಬ ಮಗಳು, ಒಳ್ಳೆಯ ವರನಿಗೆ ಕೊಟ್ಟು ಮದುವೆ ಮಾಡಿದ್ದೆ, ಸುಖವಾಗಿದ್ದೆ. ಎರಡು ವರುಷವಾಯಿತು, ಒಂದು ದಿನ ಎಲ್ಲೋ ಹೋಗಿದ್ದು ಊರಿಗೆ ಹಿಂದಿರುಗಿ ಬರುವಾಗ ಮಳೆಗೆ ಸಿಕ್ಕಿ ಒಂದು ಮರದ ಕೆಳಗೆ ನಿಂತು ಸಿಡಿಲು ಬಡಿದು ಯಜಮಾನರು ತೀರಿ ಹೋದರು. ನಮ್ಮ ತಂದೆಯವರ ಮನೆಗೆ ಹೋಗುವುದಕ್ಕೆ ಹತ್ತು ಅಸ್ತಿ. ಏನೋ, ಅಳಿಯನಿಗೆ ಪರೀಕ್ಷೆ ಪ್ಯಾಸಾಗಿ ಅವರು ಒಂದು ಕಡೆ ನಿಲ್ಲುವವರೆಗಲ್ಲವೆ ನನಗೆ ಯೋಚನೆ ಎಂದು ಧೈರ್ಯಮಾಡಿಕೊಂಡು ಈ ಹುಡುಗಿಯನ್ನು ಕರೆದುಕೊಂಡು ತಂದೆಯ ಮನೆಯಲ್ಲಿ ಕೊಂಚದಿನ ಇದ್ದು ಆಮೇಲೆ ನಾನೇ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಸಂಸಾರಮಾಡಿಕೊಂಡು ಬಂದೆ. ಈ ಮನೆಗೆ ಬಂದು ಎಂಟು ತಿಂಗಳಾಗುತ್ತ ಬಂತು. ನಡುವೆ ಅವರಿರುವಾಗಲೇ ಬೀಗರಿಗೆ ಪೆನ್ಷನ್ ಆಗಿ ಅಳಿಯಂದಿರಿಗೆ ದುಡ್ಡು ಕಳುಹಿಸುವ ವಿಚಾರದಲ್ಲಿ ಮನಸ್ತಾಪ ಬೇರೆ ಬಂದಿತ್ತು. ಅವರ ಮನೆಯವರು ನಮ್ಮ ಮನೆಗೆ ಬರುವುದನ್ನೂ ಬಿಟ್ಟಿದ್ದರು. ಯಜಮಾನರು ಸಿಡಿಲು ಪೆಟ್ಟಿನಿಂದ ತೀರಿಹೋದಾಗ ಯಾರೂ ಬಂದು ಒಂದು ಮಾತನ್ನೂ ಕೇಳಲಿಲ್ಲ. ಎಲ್ಲಕ್ಕೂ ನಾನೇ ನಿಂತು ಮಾಡಬೇಕಾಯಿತು. ಆಮೇಲೆ ಅಳಿಯಂದಿರಿಗೆ ಇನ್ನೊಂದು ಮದುವೆಮಾಡಬೇಕೆಂದೂ ಪ್ರಯತ್ನ ನಡೆಯಿತು. ಅವರು ಅದಕ್ಕೆ ಒಪ್ಪದೆ ಅದು ಹಾಗೇ ನಿಂತುಹೋಯಿತು. ಇದರಿಂದ ಅಪ್ಪನಿಗೂ ಮಗನಿಗೂ ಮನಸ್ತಾಪ. ಈ ಸಂದರ್ಭದಲ್ಲಿ ಅಳಿಯಂದಿರೂ ಕೂಡ ಕೊಂಚ ದಿನ ನಮ್ಮ ಮನೆಗೆ ಬರುತ್ತಿರಲಿಲ್ಲ. ಆದರೆ ಲಕ್ಷ್ಮಿ ಅವರಿಗೆ ಕಾಗದ ಬರೆಯುತ್ತಿದ್ದಳು. ಅವರೂ ಜವಾಬು ಬರೆಯುತ್ತಿದ್ದರು. ಅಪ್ಪಾ, ಅವರ ಗುಣ ಇಷ್ಟು ಎಂದು ಹೇಳುವುದಕ್ಕಿಲ್ಲ. ಅಂಥ

ಗಂಡನ ಕೂಡ ಸಂಸಾರಮಾಡುವ ಪುಣ್ಯ ನನ್ನ ಮಗುವಿಗೆ ಇಲ್ಲದೆ ಹೋಯಿತಲ್ಲ."

ಹೀಗೆಂದು ಆಕೆ ಅಳುವುದಕ್ಕೆ ಆರಂಭಿಸಿದರು. ಈ ದುಃಖದ ಪ್ರವಾಹಕ್ಕೆ ಅಡ್ಡಿಯಾಗಿ ನಾನು ಯಾವ ಮಾತನ್ನೂ ಹೇಳುವಂತಿಲ್ಲ. "ಅಮ್ಮ, ನಮ್ಮ ಪ್ರಾಪ್ತಿಗೆ ಏನುಮಾಡುವುದಕ್ಕಾಗುತ್ತದೆ ತಾಯಿ? ಇರುವ ದುಃಖ ಅತ್ತಷ್ಟೂ ಹೆಚ್ಚೇ" ಎಂದೆನು.

"ಅವರು ಸಮಾಧಾನವಾಗಿದಾರೆ ಎಂಬ ಧೈರ್ಯದಲ್ಲಿ ನಾನು ಯಾವ ಚಿಂತೆಯನ್ನೂ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ನಾವು ಇಲ್ಲಿಗೆ ಬಂದ ಹೊಸದರಲ್ಲಿ ಅಳಿಯಂದಿರು ಬೊಂಬಾಯಿಗೆ ಹೋಗುವುದಕ್ಕೆ ಮೊದಲು ಇಲ್ಲಿಗೆ ಬಂದುಹೋದರು. ಅವರಿಗೆ ಮೊದಲಿಂದಲೂ ಹೆಂಡತಿಯೆಂದರೆ ಅಚ್ಚು ಮೆಚ್ಚು. ರತಿಯಹಾಗಿದಾಳೆ ಹುಡುಗಿ, ಬಹಳ ಚೆನ್ನಾಗಿ ಹಾಡುತ್ತಿದ್ದಳು. ನೀವು ಮೊದಲು ಕೇಳಿದ್ದಿರಲ್ಲವೆ? ಮದುವೆಯಲ್ಲಿ ಬಹಳ ಚೆನ್ನಾಗಿ ಹಾಡಿದಳು, ಜ್ಞಾಪಕವಿರಬಹುದು."

"ಹೌದು ಬಹಳ ಚೆನ್ನಾಗಿ ಹಾಡಿದಳು, ಜ್ಞಾಪಕವಿದೆ."

"ಅಳಿಯಂದಿರಿಗೆ ಇವಳ ಹಾಡು ಎಂದರೆ ಬಹಳ ಸಂತೋಷ. ನಮ್ಮ ಗ್ರಹಚಾರಕ್ಕೆ ತಕ್ಕಹಾಗೆ, ನೋಡಿ, ಹುಡುಗಿ ದೊಡ್ಡವಳಾದಾಗ ಕಂಠ ಕೆಟ್ಟುಹೋಯಿತು. ನನಗೂ ಆ ವಯಸ್ಸಿನಲ್ಲಿ ಹಾಗೆಯೇ ಆಗಿತ್ತು. ಆಮೇಲೆ ಕೆಲವು ವರ್ಷಗಳಲ್ಲಿ ಬಹಳ ಮಟ್ಟಿಗೆ ಸರಿಹೋಯಿತು. ಇವಳಿಗೆ ಈ ಕಂಠ ಕೆಟ್ಟುಹೋದದ್ದಕ್ಕೂ, ಮೊದಲೇ ಅವರು ಇನ್ನೊಂದು ಮದುವೆಯ ಮಾತನ್ನಾಡುತಿದ್ದದ್ದಕ್ಕೂ, ನನಗೆ ಬಹಳ ಭಯವಾಗುತ್ತಿತ್ತು. ಅಳಿಯಂದಿರಿಗೆ ಇದು ತಿಳಿಯದು. ಅವರು ಇಲ್ಲಿಗೆ ಬರುತ್ತಿರಲಿಲ್ಲ, ನೋಡಿ; ನಾನು ಒಳ್ಳೆಯದೇ ಆಯಿತು ಎಂತ ಇದ್ದೆ. ಬೊಂಬಾಯಿಗೆ ಹೋಗುವುದಕ್ಕೆ ಮೊದಲು ಅವರು ಇಲ್ಲಿಗೆ ಬಂದರಲ್ಲ, ಹಾಡು ಹೇಳಬೇಕು ಎನ್ನುವ ಉತ್ಸಾಹ ಯಾರಿಗೂ ಇರಲಿಲ್ಲ. ಆದರೆ ಅವರು ಕೇಳಿದರೆ ಹೇಗೆ ಬೇಡವೆನ್ನುವುದು. ಅವರೂ ಕೂಡ ಎಷ್ಟಾದರೆ ಅಷ್ಟು ಸಮಾಧಾನ ಮಾಡಿ ಹೋಗೋಣವೆಂದು ನೋಡಿದರೇನೋ? ಹೆಂಡತಿಯನ್ನು ಒಂದು ಹಾಡು ಹೇಳೆಂದರು. ಇವಳ ಕಂಠ ಕೆಟ್ಟುಹೋಗಿರುವುದು ನನಗೆ

ತಿಳಿಯುವ ಹಾಗೆ ಅವಳಿಗೆ ತಿಳಿಯುವುದಿಲ್ಲ. ಒಂದು ಹಾಡನ್ನು ಹಾಡಿದಳು. ಅಳಿಯಂದಿರು ಸುಮ್ಮನೆ ಕುಳಿತು ಕೇಳುತ್ತಿದ್ದರು. ಇನ್ನೊಂದು ಹಾಡನ್ನು ಹೇಳುವುದಕ್ಕೆ ಹೋಗಲು 'ನಾನು ಪೇಟೆ ಯೊಳಗೆ ಹೋಗಿಬರಬೇಕು; ಸಾಕು' ಎಂತ ಹೇಳಿ ಎದ್ದರು. ಆ ರಾತ್ರಿಯೇ ರೈಲಿಗೆ ಹೊರಟುಹೋದರು. ಅವರು ಅಲ್ಲಿಂದ ಒಂದು ಕಾಗದ ಬರೆಯುವವರೆಗೂ ನನಗೆ ಮನಸ್ಸಿನಲ್ಲಿ ಬಹಳ ಹೆದರಿಕೆ. ಲಕ್ಷ್ಮಿಯೂ ಅಸ್ವಸ್ಥಳಾಗಿದ್ದಳು. ಒಂದು ಕಾಗದ ಬಂತು. 'ಸುಖವಾಗಿ ದ್ದಾರೆಯೇನೇ? ಸಮಾಧಾನವಾಗಿದ್ದಾರೆಯೇ?' ಎಂದು ಕೇಳಿದೆ. 'ಉಂ' ಎಂದಳು. ಆಮೇಲೆ ಅದುವರೆಗೆ ಹಾಡುತ್ತಿದ್ದದ್ದಕ್ಕಿಂತ ಹೆಚ್ಚಾಗಿ ಅಭ್ಯಾಸಮಾಡುವುದಕ್ಕೆ ಮೊದಲುಮಾಡಿದಳು. ಎರಡು ಮೂರು ದಿನದ ಮೇಲೆ ಯಾವುದೋ ಮಾತಿಗೆ ಬಂದಾಗ 'ಅಮ್ಮ, ನನಗೆ ನಿನಗೆ ಬರುವ ಹಾಡನ್ನೆಲ್ಲ ಹೇಳಿಕೊಡಮ್ಮ, ಅವರು ಧ್ವನಿ ಸರಿಮಾಡಿ ಕೊಳ್ಳಬೇಕು, ಒಳ್ಳೆಯ ಹಾಡು ಕಲಿಯಬೇಕು, ಇಲ್ಲದೆ ಇದ್ದರೆ ಅಷ್ಟು ಚೆನ್ನಾಗಿದ್ದ ಧ್ವನಿ ವ್ಯರ್ಥವಾಗುತ್ತೆ ಎಂತ ಬರೆದಿದ್ದಾರೆ' ಎಂದಳು. ಆ ಕಾಗದದಲ್ಲಿ ಬರೆದಿದ್ದರೆಂದು ಕಾಣುತ್ತದೆ. ಎರಡು ದಿನಕ್ಕೆ ಮೂರು ದಿನಕ್ಕೆ ಒಂದು ಸಲ ತಪ್ಪದೆ ಕಾಗದ ಬರುತ್ತಿತ್ತು. ಅವಳೂ ಸಂತೋಷ ವಾಗಿದ್ದಳು. ನಾನೂ ಸಮಾಧಾನವಾಗಿದ್ದೆ. ಈಗ ಹೀಗಾಗಿ ಹೋಯಿ ತಲ್ಲಪ್ಪ! ಸದ್ಯ ಆ ಕಾಗದ ಅಷ್ಟು ಸರಿಯಾಗಿ ಬರದೇ ಇದ್ದಿದ್ದರೆ ಚೆನ್ನಾಗಿ ತ್ತಲ್ಲ ಎಂತ ನನಗೆ ತೋರುತ್ತದೆ. ಈಗ ಒಂದು ತಿಂಗಳಿಂದ ಕಾಗದ ಬರಲಿಲ್ಲವಲ್ಲ; 'ಯಾಕೆ ಬರಲಿಲ್ಲವೋ, ಏನು ಕಾಯಿಲೆಯೋ, ಏನು ಕತೆಯೋ' ಎಂದು ಕ್ಷಣಕ್ಷಣವೂ ಯೋಚನೆಮಾಡುತ್ತಿದ್ದಾಳೆ. ಬೊಂಬಾ ಯಿಗೆ ಹೋಗಿ ವಿಚಾರಿಸೋಣ ಎಂದು ಪ್ರಾಣ ಹಿಂಡುತ್ತಿದ್ದಾಳೆ."

ನನಗೆ ಇದು ಅರ್ಥವಾಗಲಿಲ್ಲ. "ಸಮಾಚಾರ ಹುಡುಗಿಗೆ ತಿಳಿಯದೇನು" ಎಂದೆನು.

"ಇಲ್ಲ. ಕಾಯಿಲೆಯ ವಿಷಯ ನನಗೆ ಅವರ ಸ್ನೇಹಿತರೊಬ್ಬರ ಕೈಯಲ್ಲಿ ಕಾಗದ ಬರೆಸಿದರು. ಇವಳಿಗೆ ಹೇಳಿದರೆ ಹೆದರಿಯಾಳು ಎಂದು ಬರೆಸಿದ್ದರು. ನಾನು ಸುಮ್ಮನೆ ಹೇಳದೆಯೇ ಇದ್ದೆ. ಆಮೇಲೆ

ಎಂಟು ದಿನಕ್ಕೆ ಆ ಸ್ನೇಹಿತರೇ ಹೀಗಾಗಿ ಹೋಯಿತೆಂದು ಬರೆದರು. ಇವಳಿಗೆ ಹೇಳುವುದಕ್ಕೆ ನನಗೆ ಧೈರ್ಯ ಬರಲಿಲ್ಲ. ತಿಳಿದರೆ ಎಲ್ಲಿ ಹೋಗಿ ಬಾವಿಯಲ್ಲಿ ಬಿದ್ದುಬಿಡುವಳೋ ಉರುಳುಹಾಕಿಕೊಳ್ಳುವಳೋ ಎಂತ ಸುಮ್ಮನೆ ಇದ್ದೇನೆ. ಕಾಗದ ಬರಲಿಲ್ಲವಲ್ಲ ಎಂತ ಅವಳು ತಪಿಸಿ ಹೋಗುತ್ತಿದ್ದಾಳೆ."

"ಅಮ್ಮಾ ಸಮಾಚಾರ ಹುಡುಗಿಗೆ ತಿಳಿದಿರಬೇಕೆಂತ ಕಾಣುತ್ತದೆ. ಮೊನ್ನೆ ಬೆಳಿಗ್ಗೆ ಮುಖದಲ್ಲಿ—" ಎಂದು ಮಾತನ್ನು ಮುಂದಕ್ಕೆ ಹೇಗೆ ಹೇಳುವುದಕ್ಕೂ ತೋರದೆ ನಾನು ಸುಮ್ಮನಾದೆನು.

"ಅಪ್ಪಾ, ಅದು ಅವಳ ಆಗಾತ್ಯ. ಹುಡುಗಿ ಹಟವಾದಿ. ಎಲ್ಲೋ ಓದಿದಳಂತೆ, ಕುಂಕುಮ ಗಂಡನಿಗೆ ತನ್ನಲ್ಲಿರುವ ಪ್ರೀತಿಗೆ ಗುರುತು ಎಂತ. ಗಂಡ ಕಾಗದ ಬರೆಯಲಿಲ್ಲವಲ್ಲ! 'ಯಾವಾಗಲೂ ಕಾಗದ ನಿಲ್ಲಿಸದೆ ಇದ್ದವರು ಈಗ ಏಕೆ ನಿಲ್ಲಿಸಿದರು, ಅವರಿಗೆ ನನ್ನಲ್ಲಿ ಏನೋ ಬೇಜಾರಿರಬೇಕು, ನಾನು ಏಕೆ ಕುಂಕುಮ ಹಚ್ಚಿಕೊಳ್ಳಲಿ' ಎಂದು ಹಟಹಿಡಿದಳು. ಅವಳು ಹಚ್ಚಿಕೊಳ್ಳುವುದಿಲ್ಲವೆಂದಾಗ ಹಚ್ಚಿಕೊ ಎಂದು ಹೇಳುವುದಕ್ಕೆ ನನಗೆ ಬಾಯಿಬರಲಿಲ್ಲ. ಸುಮ್ಮನಿದ್ದೆ. ಈ ಹೊತ್ತು ನೋಡಿ, ಏನು ತೋರಿತೊ ತಾನೇ ಹಚ್ಚಿಕೊಂಡಳು, ತಲೆ ಬಾಚಿಕೊಂಡಳು, ಹೆರಳುಹಾಕಿಕೊಂಡಳು. ನಾನು ಸುಮ್ಮನಿದ್ದೆ. ಹೀಗೆ ಕೊಂಚದಿನ ಸುಮ್ಮನಿದ್ದರೆ ಸಮಾಧಾನಕ್ಕೆ ಬರುತಾಳೆ, ಆಮೇಲೆ ಹೇಳಬಹುದು."

"ಏನೋ ತಾಯಿ, ನಿಮ್ಮ ಮಾತು ನಡೆಯುವ ಮಾತಿನಂತೆ ತೋರಲಿಲ್ಲ. ಒಳ್ಳೆಯದೂ ಅಲ್ಲವೆಂತ ತೋರುತ್ತದೆ. ಇದನ್ನು ಎಷ್ಟು ದಿನ ಮುಚ್ಚಿಡುವುದಕ್ಕಾಗುತ್ತದೆಯಮ್ಮ. ಎಂದು ತಿಳಿದರೂ ಅವಳ ದುಃಖವನ್ನು ಹಿಡಿಯುವುದು ಕಷ್ಟ. ಇರುವ ಮಾತನ್ನು ಹೇಳಿ ಈಗಲೇ ಸಮಾಧಾನಪಡಿಸುವುದು ಸರಿ" ಎಂದು ನಾನು ಹೇಳಿದೆನು.

ಆಕೆ "ಅಪ್ಪಾ, ಇನ್ನು ಹದಿನೈದು ದಿನ ಹೋಗಲಿ. ಏನುಮಾಡುವುದು ಹ್ಯಾಗೆ ಹೇಳುವುದು ಎಂತ ತೋಚದೆ ಇದ್ದೆ. ದೇವರು ನಿಮ್ಮನ್ನು

ಇಲ್ಲಿಗೆ ಕರೆತಂದಿದ್ದಾನೆ. ನಿಮ್ಮ ಮನೆಯವರೂ ಬರಲಿ. ನಿಮ್ಮ ಮನೆಗೆ ಬಂದುಹೋಗಿ ಬಳಕೆಯಾಗಲಿ. ಆಗ ಹೇಳಿದರೆ ನೀವು ಇರುತ್ತೀರಿ, ನಿಮ್ಮ ಹೆಂಡತಿ ಇರುತ್ತಾರೆ; ಬೇಕಾದವರು, ತಿಳಿದವರು; ಅವಳು ಹಟಮಾಡಿದರೆ ಹಿಡಿಯುವವರು ಇರುತ್ತೀರಿ. ಈಗ ಹೇಳಿದರೆ ನೀವು ಬಂದು ಸಮಾಧಾನಮಾಡುವಂತಿಲ್ಲ; ನಾನು ಒಬ್ಬಳು; ಹುಡುಗಿ ಏನುಮಾಡಿದರೂ ಮಾಡಿಬಿಟ್ಟಾಳು. ಅವಳು ಏನಾದರೂ ಆಗಿಹೋದರೆ, ಅಪ್ಪ, ನನಗೆ ಯಾರು ಗತಿ? ನಾನು ಕೇಳುವರಿಲ್ಲದೆ ಹೋಗುತ್ತೇನೆ. ಹ್ಯಾಗಾದರೂ ಅವಳು ಉಸಿರೊಂದಿಗಿದ್ದರೆ ಸಾಕು. ಗಂಡೂ ಅದೆ ಹೆಣ್ಣೂ ಅದೆ. ಇಷ್ಟುಮಟ್ಟಿಗೆ ನಡೆಸಿಕೊಡಿ. ಅವರು ತೀರಿಹೋದರೆಂದು ತಿಳಿದರೆ ಹುಡುಗಿ ಏನನ್ನಾದರೂ ಮಾಡಿಕೊಳ್ಳುವುದೇ ನಿಜ" ಎಂದು ಬೇಡಿದರು.

ನಾನು "ಅಮ್ಮ ನಾನು ಹೋಗಿ ಏಕೆ ಆ ಮಗುವಿನ ಸಂಗಡ ಈ ಮಾತನ್ನು ಹೇಳುತ್ತೇನೆ? ನಿಮ್ಮ ಇಷ್ಟ" ಎಂದೆನು.

"ಅದಕ್ಕೇ ನಾನು ಬಂದೆ. ನೀವು ಇಲ್ಲಿ ಬಂದ ದಿನವೇ ನಿಮ್ಮ ಗುರುತು ಹಿಡಿದು ನಿಮ್ಮನ್ನು ಬಂದು ಕೇಳಬೇಕೆಂದು ಅವಳು ಏರ್ಪಾಟು ಹೇಳಿದಳು. ಅದು ಮೊದಲು ನನ್ನನ್ನು, ಹೋಗಿ ಕೇಳು ಹೋಗಿ ಕೇಳು ಎಂತ ವೇಧಿಸಿದಳು. ನಿಮ್ಮ ಹತ್ತರ ಹೋಗಿ ಮಾತನಾಡುವುದು ಹೇಗೆಂದು ನೆವಹೇಳಿ ಎರಡು ದಿನ ತಳ್ಳಿದೆ. ಹೋಗೋಣ ಎಂತ ಹೇಳಿ ಎರಡು ದಿನ ತಳ್ಳಿದೆ. ನಿನಗೆ ಸಂಕೋಚವಾದರೆ ನಾನೇ ಹೋಗುತ್ತೇನೆ ಎಂದಳು. ಬೇಡವಮ್ಮ ತಡೆ ನಾನು ಕೇಳುತ್ತೇನೆ ಎಂದೆ. ನಿನ್ನೆ ಬೆಳಿಗ್ಯೆ ಅವಳೇ ಬರಬೇಕೆಂದು ಪ್ರಯತ್ನಪಟ್ಟಳು. ದೈವಾಧೀನ ನೀವು ಬೈಸಿಕಲ್ಲನ್ನು ತೆಗೆದುಕೊಂಡು ಹೊರಟುಹೋದಿರಿ. ಸಾಯಂಕಾಲ ಬರುತ್ತಲೂ ನಾನು ಕೇಳುತ್ತೇನೆಂತ ಹೇಳಿದೆ. ನೀವು ಬರುವುದು ಬಹಳ ಹೊತ್ತಾಗಿರಬೇಕು. ನಿನ್ನೆ ನೋಡುವುದಕ್ಕಾಗಲಿಲ್ಲ. ಈ ದಿನ ಬೆಳಿಗ್ಯೆಯೂ ನೀವು ಸಿಕ್ಕಲಿಲ್ಲ. ಒಳ್ಳೆಯದೇ ಆಯಿತು. ಸಿಕ್ಕಿದ್ದರೆ ಅವಳೂ ನನ್ನ ಜೊತೆಗೆ ಬರುತ್ತೇನೆಂದಿದ್ದರೆ ಏನುಮಾಡುವುದು? ನಾನು ನಿಮ್ಮನ್ನು ಈ ಮಾತು ಕೇಳಿಕೊಳ್ಳುವುದಕ್ಕೆ ಮೊದಲು ಅವಳು ಎಲ್ಲಿ ಬಂದು ನಿಮ್ಮನ್ನು ಕೇಳುತಾಳೋ ಎಂತ

ನನಗೆ ಪ್ರಾಣದಲ್ಲಿ ಪ್ರಾಣವಿರಲಿಲ್ಲ. ಈಗಲೂ ನೀವು ಬರುವುದು ಹೊತ್ತಾಯಿತು. ಊಟವಾಗಿ ಮಲಗಿದೆವು. ಅವಳಿಗೆ ನಿದ್ದೆ ಹಿಡಿಯಿತೆಂದು ತಿಳಿದೊಡನೆಯೇ ಎದ್ದು ಇಲ್ಲಿ ಬಂದೆ. ದೇವರ ದಯದಿಂದ ನೀವೂ ಸಿಕ್ಕಿದಿರಿ. ಇಗೋ ಇಷ್ಟು ಮಾಡಿಕೊಡಿ. ಅವಳಿಗೆ ಒಂದು ಹತ್ತು ದಿನ ಏನಾದರೂ ಒಂದು ಸುಳ್ಳನ್ನು ಹೇಳಬೇಕಾಗುತ್ತದೆ. ಅವರು ಪರೀಕ್ಷೆಯ ಗಲಾಟೆಯಲ್ಲಿದ್ದಾರೆ ಎಂತಲೋ ಇನ್ನೇನೆಂದಾದರೋ ಹೇಳಬೇಕು; ಗಂಡಸರ ನೆವವನ್ನು ನಾನು ಹೇಗೆ ಹೇಳಲಿ. ಏನಾದರೂ ಹೇಳಿಕೊಡಿ, ಅದನ್ನು ಅವಳಿಗೆ ಹೇಳಿಬಿಡುತ್ತೇನೆ. ಹದಿನೈದು ದಿನ ತಡೆಯಲಿ. ನನ್ನ ಮಾತು ನಂಬದೆ ನಿಮ್ಮ ಹತ್ತಿರ ಬಂದರೂ ಬರಬಹುದು. ನೀವೂ ಅದೇ ಮಾತನ್ನೇ ಹೇಳಿ. ನನ್ನ ಮಗುವಿನ ಜೀವವನ್ನು ಉಳಿಸಿಕೊಟ್ಟ ಹಾಗಾಗುತ್ತದೆ" ಎಂದರು.

ನಾವು ಈ ಮಾತನ್ನೆಲ್ಲ ಆಡುತ್ತಿರುವಾಗ್ಯೆ ನನಗೆ ಯಾರೋ ಹೊರಗೆ ನಿಂತುಕೊಂಡು ಎಲ್ಲವನ್ನೂ ಕೇಳುತ್ತಿದ್ದಾರೆಯೆಂದು ಭಾವನೆ ಇತ್ತು. ಅದು ಏಕೆ ಹಾಗೆ ತೋರುತ್ತಿತ್ತೋ ಹೇಳಲಾರೆ. ನನಗೆ ತಿಳಿಯದು. ಅಂತೂ ಯಾರೋ ಕೇಳುತ್ತಿರುವರೆಂದು ತೋರುತ್ತಿತ್ತು. ಈಕೆ ಒಬ್ಬರನ್ನೇ ರೂಮಿನಲ್ಲಿ ನಿಲ್ಲಿಸಿಕೊಂಡು ಕದವನ್ನು ಹೇಗೆ ಹಾಕುವುದೆಂದು ಒಂದು ಕದವನ್ನು ತೆಗೆದೇ ಇದ್ದೆನು. ಇವರು ಈ ಮಾತನ್ನು ಹೇಳಲು ನಾನು "ಪರೀಕ್ಷೆಯ ಗಲಾಟೆಯೆಂದೇ ಹೇಳಬಹುದು" ಎಂದು ಮೆಲ್ಲಗೆ ಹೇಳಿದೆನು.

ಹೊರಗೆ ಅದೇನೋ ಕೆಳಗೆ ಬಿದ್ದಂತಾಯಿತು. ತಲೆಯೆತ್ತಿ ನೋಡಿದೆನು. ಕೊಟಡಿಯಿಂದ ಹೊರಗೆ ಬೀಳುತ್ತಿದ್ದ ದೀಪದ ಬೆಳಕಿನಲ್ಲಿ ಲಕ್ಷಣವಾದ ತೆಯ್ದು ಕುಂಕುಮದ ಬೊಟ್ಟನ್ನು ಇಟ್ಟುಕೊಂಡಿದ್ದ ಆ ಗುಂಡಾದ ಸುಂದರವಾದ ಆ ಬಾಲವಿಧವೆಯ ಮುಖ ಬೆಳ್ಳಗೆ ಕಂಡಂತಾಯಿತು. ನಾನು ಸ್ವಲ್ಪ ಬೆಚ್ಚಿದೆನು. ಒಡನೆಯೇ ಆ ಮುಖ ಕಾಣದೆಹೋಯಿತು. ಎದ್ದು ಹೊರಗೆ ಹೋಗಿ ನೋಡಿದೆನು. ಯಾರೂ ಇರಲಿಲ್ಲ. ಮೋಡದಿಂದ ಸ್ವಲ್ಪ ಮಸಕಾಗಿದ್ದ ಬೆಳದಿಂಗಳು ನೆಲದಮೇಲೆ ಹರಡಿಕೊಂಡಿತ್ತು. ಕರಿಯಬೇವಿನಮರದ ಒತ್ತಾದ ಎಲೆಗಳ ನೆರಳಿನ ನಡುವೆ ಮಚ್ಚೆಮಚ್ಚೆಯಾಗಿ ಕಾಣುತ್ತಿತ್ತು.

ಯಾರೂ ಇಲ್ಲದ್ದನ್ನು ನೋಡಿ ನಾನು ಒಳಗೆ ಬಂದೆನು.

ಅವರು "ಏನು ಹೋಗಿ ನೋಡಿದಿರಿ?" ಎಂದರು.

ನಾನು "ಏನೂ ಇಲ್ಲ, ಏನೋ ಕೆಳಗೆ ಬಿದ್ದ ಹಾಗಾಯಿತು. ಹೋಗಿ ನೋಡಿದೆ" ಎಂದೆನು. ಏನೋ ಹುಚ್ಚಿನಿಂದ ನಾನು ಆ ಹುಡುಗಿಯ ಮುಖವನ್ನು ಕಂಡೆನೆಂದುಕೊಂಡ ಮಾತ್ರಕ್ಕೆ ಇವರಿಗೆ ಏಕೆ ಹೇಳಬೇಕು; ಮನೆಯಲ್ಲಿ ಮಲಗಿದ್ದಳೆಂದು ಹೇಳಿದಾರಲ್ಲ—ಎಂದು ಅವರಿಗೆ ಇದನ್ನು ಹೇಳಲಿಲ್ಲ.

ಅವರು "ಪರೀಕ್ಷೆಯ ಗಲಾಟೆಯಲ್ಲಿದಾರೆಯೆಂದು ಹೇಳಬಹುದು. ಆದರೆ ಹುಡುಗಿಗೆ ಇಂತಹ ಸಮಯದಲ್ಲಿ ಪರೀಕ್ಷೆ ಎಂದು ತಿಳಿಯದೆ ಇರುತ್ತದೆಯೆ? ಬಹಳ ದಿನಗಳ ಹಿಂದೆಯೇ ಪರೀಕ್ಷೆಯಂತೆ ಎಂದು ಹೇಳುತ್ತಿದ್ದಳು." ಎಂದರು.

"ಹೌದು. ಕೊಂಚ ದಿನಗಳ ಹಿಂದೆ ಪರೀಕ್ಷೆ ಮುಗಿದದ್ದೇನೋ ನಿಜ. ಆದರೂ ಒಂದೊಂದು ಸಲ ಯಾವುದಾದರೂ ಕಾರಣದಿಂದ ಸ್ಕೂಲನ್ನು ಕೊಂಚದಿನ ಹೆಚ್ಚಾಗಿ ಮುಚ್ಚಿದರೆ ಅದನ್ನು ಇನ್ನಷ್ಟು ದಿನ ನಡೆಯಿಸಿ, ಪರೀಕ್ಷೆಯನ್ನು ಮುಂದಕ್ಕೆ ಹಾಕುವುದು ಉಂಟು. ಪರೀಕ್ಷೆಯ ಗಲಾಟೆಯೆಂದು ಹೇಳಿ. ಅವಳು ಸಂದೇಹಪಟ್ಟರೆ ಪುನಃ ಬಂದು ಕೇಳುವೆನೆನ್ನಿ. ಆಮೇಲೆ ಪರೀಕ್ಷೆಯನ್ನು ಮುಂದಕ್ಕೆ ಹಾಕಿದರು ಎನ್ನಬಹುದು."

"ನಮ್ಮಪ್ಪ, ನಿಮ್ಮ ಹೊಟ್ಟೆ ತಣ್ಣಗಿರಲಿ—ಇದಕ್ಕೇ ಗಂಡಸು ದಿಕ್ಕು ಇರಬೇಕೆನ್ನುವುದು. ನೀವು ಇಲ್ಲದೇ ಇದ್ದಿದ್ದರೆ ನಾನೇನು ಮಾಡುವುದು? ನಿಮ್ಮ ಮನೆಯವರು ಎಂದು ಬರುತ್ತಾರೆ?"

"ನಾಳೆ ಬಂದಾರು."

"ಸರಿ, ಅವರೂ ಬಂದರೆ ನನಗಿನ್ನು ಯೋಚನೆಯೇ ಇಲ್ಲ. ಹುಡುಗಿಯನ್ನು ಇಲ್ಲಿಗೆ ಕರೆದುಕೊಂಡು ಬಂದು ಹೋಗಿ ನಿಮ್ಮ ಹೆಂಡತಿಯೊಂದಿಗೆ ಬಳಕೆಯಾಗುವ ಹಾಗೆ ಮಾಡುತ್ತೇನೆ. ಹದಿನೈದು ಇಪ್ಪತ್ತು ದಿನವಾದ ಮೇಲೆ ಉಪಾಯವಾಗಿ ಸಮಾಚಾರ ಅವಳಿಗೆ ತಿಳಿಯುವಂತೆ ಮಾಡಿದರೆ

ಹ್ಯಾಗೋ ನೀವೂ ಅವರೂ ನಾನೂ ಅವಳನ್ನು ಹಿಡಿಯಬಹುದು. ನನಗೆ ಒಂದು ದಿಕ್ಕು ಇದ್ದ ಹಾಗಾಗುತ್ತದೆ. ನಿಮ್ಮನ್ನು ಇಲ್ಲಿ ಸಮಯಕ್ಕೆ ಕರೆ ತಂದ ದೇವರು ಕೊಂಚದಿನ ವರ್ಗವಾಗದ ಹಾಗೆ ಇಲ್ಲೇ ನಿಲ್ಲಿಸಿದರೆ ಅವಳು ಇಲ್ಲಿಗೆ ಬರುತ್ತ ಹೋಗುತ್ತ ನಿಮ್ಮ ಮಕ್ಕಳು ಮರಿಗಳನ್ನು ಆಡಿಸುತ್ತ ನೋಡುತ್ತ ಮಾಡುತ್ತ ಇದ್ದು ಮಗುವಿಗೆ ಈ ಪಾಡು ವಾಡಿಕೆಯಾಗಿಹೋಗುತ್ತೆ. ಅಷ್ಟು ಇನ್ನು ನಾನು ಬರಲೆ. ಏನು ಹೇಳಬೇಕು ಜ್ಞಾಪಕವಿರಲಿ."

ಕಾಡಿನಲ್ಲಿ ದಾರಿಕಂಡವರ ಮುಖದಂತೆ ಅವರ ಮುಖದಲ್ಲಿ ಒಂದು ಸಂತೋಷವೂ ಕಾಣುತ್ತಿತ್ತು. ಅವರು ಹೊರಟಾಗ ನಾನು "ಹುಚ್ಚು ಹೆಂಗಸು, ತಾನೂ ಅವಳೂ ಜೊತೆಯಾಗಿರುವತನಕ ಹೇಗೋ ಆಯಿತು. ತಾನು ಕಣ್ಣುಮುಚ್ಚಿಕೊಂಡರೆ ಹುಡುಗಿಯ ಗತಿಯೇನು ಎಂದು ಈಕೆ ಯೋಚನೆಮಾಡುವುದಿಲ್ಲವಲ್ಲ" ಎಂದು ಯೋಚಿಸುತ್ತ ಈ ವಿಷಮ ಸಮಸ್ಯೆ ಬಗೆಹರಿಯದೆ ಹಾಗೆಯೇ ಸುಮ್ಮನೆ ಕುಳಿತಿದ್ದೆನು.

ಸ್ವಲ್ಪಹೊತ್ತು ಈ ವಿಷಯವನ್ನೇ ಕುರಿತು ಯೋಚಿಸುತ್ತಿದ್ದು ದೀಪವನ್ನಾರಿಸಿ ಹೋಗಿ ಮಲಗಿಕೊಂಡೆನು. ರಾತ್ರಿ ಬಹಳ ಹೊತ್ತಾಗಿತ್ತು. ಆದರೂ ಒಡನೆ ನಿದ್ರೆ ಬರಲಿಲ್ಲ. ಮೆಲ್ಲಗೆ ಅರ್ಧನಿದ್ರೆ ಹತ್ತಿತು. ಆ ಅರ್ಧನಿದ್ರೆಯಲ್ಲಿ ಪುನಃ ಆಕೆಯ ಸಂಗಡ ಮಾತನಾಡುತ್ತಿದ್ದ ಹಾಗೆ ಸ್ವಪ್ನ. ಮಾತನಾಡುತ್ತಾ ಇದ್ದಾಗ ಅವರು ಅಪ್ಪಾ ಅಪ್ಪಾ ಎಂದುಕೂಗಿದ ಹಾಗೆ ತೋರಿತು. ಸ್ವಲ್ಪಹೊತ್ತು ಇದು ಸ್ವಪ್ನದಂತೆಯೇ ತೋರಿ ಆಮೇಲೆ ಯಾರೋ ಬಂದು ಬಾಗಿಲನ್ನು ತಟ್ಟುತ್ತಿರುವರೆಂದೂ ಅಪ್ಪಾ ಅಪ್ಪಾ ಎಂದು ಕೂಗುತ್ತಿರುವರೆಂದೂ ತಿಳಿಯಿತು. ಧ್ವನಿ ಆಕೆಯ ಧ್ವನಿಯು ಹಾಗಿರಲು ಈಗತಾನೆ ಮನೆಗೆ ಹೋದವರು ಯಾಕೆ ಹಿಂದಕ್ಕೆ ಬಂದರೋ ಎಂದು ತೋರದೆ ಎದ್ದು ಬಂದು ಬಾಗಿಲನ್ನು ತೆಗೆದೆನು. ಆಕೆಯ ಧ್ವನಿ ನಡುಕದಿಂದ ವಿಕಾರವಾಗಿತ್ತು. ಬಾಗಿಲನ್ನು ತೆರೆದು 'ಏನಮ್ಮ' ಎಂದೆನು. ಇವರು ಬಾಗಿಲನ್ನು ತಟ್ಟಿದ ಶಬ್ದವನ್ನು ಕೇಳಿಯೇ ಇರಬೇಕು ಪಕ್ಕದ ಮನೆಯ ಶಾಸ್ತ್ರಿಗಳೂ ಬಾಗಿಲನ್ನು ತೆರೆದು, ಯಾರು ಎಂದು ಕೂಗಿದರು.

ಆಕೆ ನನ್ನನ್ನು ಕುರಿತು "ಅಪ್ಪಾ, ನನಗೆ ಕೈಕಾಲು ನಡುಗುತ್ತಿದೆ, ಹುಡುಗಿ ಮನೆಯಲ್ಲಿಲ್ಲ" ಎಂದರು.

ನನಗೆ ಮೈಜುಮ್ಮೆಂದಿತು. "ಮನೆಯಲ್ಲಿಲ್ಲವೆ? ಮಲಗಿದ್ದಳೆಂದಿರಿ" ಎಂದೆನು.

"ನಾನು ನಿಮ್ಮೊಂದಿಗೆ ಮಾತನಾಡುವುದಕ್ಕೆಂದು ಬಂದಾಗ ಹಾಸಿಗೆಯಲ್ಲಿದ್ದಳು. ಇಲ್ಲಿ ಮಾತು ಮುಗಿದಮೇಲೆ ಮನೆಗೆ ಹೋಗಿ ಮಲಗಿಕೊಂಡೆ, ಪಕ್ಕದ ಹಾಸಿಗೆಯಲ್ಲಿ ಅವಳು ಇದ್ದಾಳೆಯೆಂದೇ ತಿಳಿದುಕೊಂಡಿದ್ದೆ. ಸ್ವಲ್ಪಹೊತ್ತು ನಿದ್ದೆಬರಲಿಲ್ಲ. ಒಂದುಗಳಿಗೆ ಬಿಟ್ಟು ಯಾಕೋ ಉಸಿರು ಬಿಡುವ ಶಬ್ದ ಕೇಳಲಿಲ್ಲವಲ್ಲಾ ಎಂದು ತೋರಿತು. ಕೈಹಾಕಿ ನೋಡಿದೆ, ಬರಿಯ ಹೊದಿಕೆ ಇತ್ತು. ಎದ್ದು ದೀಪವನ್ನು ದೊಡ್ಡದುಮಾಡಿತಂದು ಹಾಸಿಗೆಯೆಲ್ಲ ಹುಡುಕಿದೆ, ಹುಡುಗಿ ಇಲ್ಲ. ಕೂಗಿದೆ, ಮಾತಿಲ್ಲ. ಹಿತ್ತಲಿಗೆ ಏತಕ್ಕಾದರೂ ಹೋದಳೋ ಎಂತ ದೀಪವನ್ನು ತೆಗೆದುಕೊಂಡು ಹೋಗಿ ನೋಡಿದೆ, ಅಲ್ಲಿಯೂ ಇಲ್ಲ. ನನಗೆ ಉಸಿರಾಡದಲ್ಲಪ್ಪ. ಅಯ್ಯೋ ನನ್ನಮ್ಮ ಏನಾದಳೋ ಕಾಣೆನಲ್ಲಾ" ಎಂದು ಆಕೆ ಅಳುತ್ತಾ ಕೆಳಗೆ ಕುಳಿತರು.

ಮಾತು ನಡುಗುತ್ತಾ ಇವರು ಇಷ್ಟನ್ನು ಹೇಳುವ ವೇಳೆಗೆ ಶಾಸ್ತ್ರಿಗಳು ನಾವಿದ್ದೆಡೆಗೆ ಬಂದು ನಮ್ಮ ಜೊತೆಗೆ ನಿಂತರು. ಇವರ ಮಾತನ್ನು ಕೇಳಿ "ಛೆ, ಛೆ ಏತರ ಮಾತಮ್ಮಾ ಇದು, ಹೋಗಿ ಚೆನ್ನಾಗಿ ನೋಡಿ" ಎಂದರು.

"ಅಪ್ಪಾ ನಾನು ನೋಡಿ ಆಯಿತು. ನೀವೇ ನೋಡಿ."

ಶಾಸ್ತ್ರಿಗಳು ಹಜಾರದಲ್ಲಿದ್ದ ಲಾಂದ್ರವೊಂದನ್ನು ತೆಗೆದುಕೊಂಡು ಅಂಗಳದ ಬಾವಿಯ ಬಳಿಗೆ ನಡೆದರು. ಅವರ ಮನಸ್ಸಿನ ಭಯವನ್ನು ತಿಳಿದು ನಾನೂ ಅವರ ಜೊತೆಗೆ ಹೊರಟೆನು. ಆಕೆ ಅಳುತ್ತಾ ನಡುಗುತ್ತಾ ಅಯ್ಯೋ ಎಂದು ಗೋಳಾಡುತ್ತಾ ನಮ್ಮ ಹಿಂದೆ ಬಂದರು.

ಶಾಸ್ತ್ರಿಗಳು ಬಾವಿಯೊಳಗೆ ದೀಪವನ್ನು ಹಿಡಿದರು. ಬೆಳಕು ಅಲ್ಲಿಯ ವರೆಗೆ ಹೋಗದು. ನಾನು ಹೋಗಿ ಒಂದು ಹಗ್ಗವನ್ನು ತಂದೆನು.

ಲಾಂದ್ರವನ್ನು ಅದಕ್ಕೆ ಕಟ್ಟಿ ಬಾವಿಯೊಳಗೆ ನೀರಿನ ಮಟ್ಟದವರೆಗೆ ಬಿಟ್ಟು ನೋಡಿದೆವು. ನೀರು ನಿದ್ರಿಸುತ್ತಿತ್ತು. ಅಲ್ಲಿ ಏನೂ ಇಲ್ಲ.

ನಾನು ಸ್ವಲ್ಪ ಸಮಾಧಾನವಾಗಿ ನಿಟ್ಟುಸಿರನ್ನು ಬಿಟ್ಟೆನು. ಶಾಸ್ತ್ರಿಗಳು ನನ್ನ ಕಿವಿಯಲ್ಲಿ "ಎಲ್ಲಾ ಬಾವಿಯಲ್ಲೂ ಹೀಗೆಯೇ ಆದರೆ ನಿಟ್ಟುಸಿರುಬಿಡಬಹುದು. ಜವಾನರಿದ್ದರೆ ಕರೆಯಿರಿ, ಹೋಗಿ ನೋಡೋಣ" ಎಂದರು.

ನಡುಗುತ್ತ ನೊನಗುತ್ತ ಅಳುತ್ತ ಇದ್ದ ಆಕೆ "ಅಪ್ಪಾ, ನೀವು ಕಿವಿಯಲ್ಲಿ ಮಾತನಾಡಿಕೊಳ್ಳಬೇಡಿ, ನನಗೂ ಹೇಳಿ. ಎಲ್ಲಿ ಬೇಕಾದರೂ ಹೋಗೋಣ, ಹುಡುಕೋಣ" ಎಂದರು.

ಶಾಸ್ತ್ರಿಗಳು ಆಕೆಯ ಮನೆಯ ಮುಂದೆ ಹೋಗಿ ಲಕ್ಷ್ಮಮ್ಮ ಎಂದು ನಾಲ್ಕೈದು ಸಲ ಕೂಗಿದರು.

ಉತ್ತರವಿಲ್ಲ.

ಇವರ ಕೂಗಿನಿಂದ ಎಚ್ಚತ್ತು ನೆರೆಹೊರೆಯವರು ಕೆಲವರು ಬಂದರು. ನಮ್ಮ ಆಳು ನೆರೆಯವರ ಮನೆಯ ಒಬ್ಬ ಆಳು ಇಬ್ಬರನ್ನೂ ಕರೆದುಕೊಂಡು ಹತ್ತು ಜನ ಕೆಲವು ಹಗ್ಗಗಳನ್ನೂ ಕೆಲವು ಗಳುಗಳನ್ನೂ ತೆಗೆದುಕೊಂಡು ಕೆಲವರು ತೋಪಿನಕಡೆ ಬಾವಿಗೂ ಕೆಲವರು ದೇವಾಲಯದ ಕಡೆ ಬಾವಿಗೂ ಹೊರಟೆವು.

ನನಗೆ ಇಷ್ಟುಹೊತ್ತಿಗೆ ಹುಡುಗಿ ಏನಾಗಿದ್ದಳೆಂಬ ವಿಷಯದಲ್ಲಿ ಸ್ವಲ್ಪವಾದರೂ ಸಂದೇಹವಿರಲಿಲ್ಲ. ನಾನೂ ಆಕೆಯೂ ಮಾತನಾಡುತ್ತಿದ್ದಾಗ ನಾನು ಏನನ್ನೋ ಕಂಡೆನೆಂದುಕೊಂಡದ್ದು ನಿಜವಾಗಿಯೂ ಆ ಹುಡುಗಿಯ ಮುಖವೇ. ಅವರು ನನ್ನ ಸಂಗಡ ಮಾತನಾಡುವುದಕ್ಕೆ ಬಂದದ್ದನ್ನು ನೋಡಿ ತಾನೂ ಎದ್ದುಬಂದಳೋ, ಇಲ್ಲ ಆಮೇಲೆ ಎಚ್ಚತ್ತು ತಾಯಿ ಇಲ್ಲದ್ದನ್ನೂ ನಮ್ಮ ಮನೆಯಲ್ಲಿ ದೀಪವಿರುವುದನ್ನೂ ನೋಡಿ ತಾಯಿ ಅಲ್ಲಿರಬಹುದೆಂದು ಊಹಿಸಿ ಬಂದಳೋ, ಇಲ್ಲ ಪ್ರೇಮಕ್ಕೆ ಸಹಜವಾದ ಪರೋಕ್ಷದೃಷ್ಟಿಯಿಂದ ಕೆಟ್ಟುದು ಆಗಿರುವುದನ್ನೂ ಅದನ್ನು ತಾಯಿ ಮರೆಮಾಚುತ್ತಿರುವುದನ್ನೂ ಅನುಮಾನಿಸಿ ಅವರಿಗೆ ನಾನು

ಹೇಳುವ ಮಾತನ್ನು ನಿಜವಾಗಿ ತಿಳಿಯುವುದಕ್ಕೆಂದು ಮೆಲ್ಲಗೆ ಬಂದು ಹೊಂಚುಕೇಳಿದಳೋ, ಅಂತೂ ಅವಳು ಬಂದು ಅಲ್ಲಿ ನಿಂತು ನಾವು ಆಡಿಕೊಂಡ ಮಾತನ್ನು ಕೇಳಿರಬೇಕು. ನಾವು ಅವಳಿಗೆ ಏನು ಸಬಬನ್ನು ಹೇಳುವುದೆಂದು ಯೋಚನೆಮಾಡುವುದಕ್ಕೆ ಆರಂಭಿಸಿದಾಗ ಯಾತಕ್ಕೋ ಇಣಿಕಿ ನೋಡಿರಬೇಕು. ಆಗಲೇ ನಾನು ಅವಳನ್ನು ನೋಡಿರಬೇಕು. ನಾನು ಹೊರಗೆ ಬಂದು ನೋಡಿದಾಗ ಹುಡುಕಿದ್ದರೆ ಸಿಕ್ಕಿರಬಹುದಾಗಿತ್ತು. ಮರದ ನೆರಳಿನಲ್ಲಿ ಕಾಣಲಿಲ್ಲವೋ ಮರದ ಹಿಂದೆ ನಿಂತಳೋ ಯಾರೂ ಇಲ್ಲವೆಂದು ನಾನು ಒಳಗೆ ಬಂದುಬಿಟ್ಟೆನಲ್ಲ. ನಾವು ತೋಪಿನಕಡೆ ಹೊರಟಾಗ ನನಗೆ ಹೊಟ್ಟೆಯಲ್ಲಿ ಏನೋ ಒಂದು ಸಂಕಟ ಹತ್ತಿತ್ತು. ಹುಡುಕಿ ನೋಡಿದ್ದರೆ ಚೆನ್ನಾಗಿತ್ತಲ್ಲ ಎಂದೂ, ಹುಡುಕದೆ ಇದ್ದರೂ ಹಿಂದಕ್ಕೆ ಬಂದವನು ಆಕೆ ಕೇಳಿದಾಗ ಹುಡುಗಿಯ ಮುಖವನ್ನು ಕಂಡೆನೆಂದಿದ್ದರೆ ಅವರು ಒಡನೆ ಹೋಗಿ ಮನೆಯಲ್ಲಿ ನೋಡಬಹುದಾಗಿತ್ತಲ್ಲ ಎಂದೂ, ನನಗೆ ಆ ಹುಡುಗಿಯನ್ನು ನಾನೇ ಬಾವಿಯಲ್ಲಿ ತಳ್ಳಿದಂತೆ ದುಃಖ ಉಂಟಾಯಿತು. ನಿನ್ನೆ ರಾತ್ರಿ ನಡೆದದ್ದಿದು, ಎಂದೋ ನಡೆದಂತಿದೆ. ನಮ್ಮ ಮನೆಯಿಂದ ದೇವಾಲಯದ ಬಾವಿಯಬಳಿ ಹೋದದ್ದು ನನಗೆ ನೆನವೇ ಇಲ್ಲ. ಹತ್ತುಸಲ ಹೋಗಿ ಬಂದಿರುವ ಆ ದಾರಿಯ ಬಳಕೆಯಾದ ಅಡಿಅಡಿಯ ಜಾಗ ಯಾವುದೂ ನನಗೆ ಆಗ ತೋರಲಿಲ್ಲ. ಕೆಲವರು ತೋಪಿನ ಬಳಿಗೆ ಹೋಗಲು ನಾವು ದೇವಾಲಯದ ಬಾವಿಯ ಬಳಿ ಹೋದೆವು.

ಅಲ್ಲಿಯೂ ನೀರು ಕದಲದೆ ನಿದ್ದೆಹೋಗುವಂತಿತ್ತು. ಸ್ವಲ್ಪವಾದ ಅಲೆ ನಿದಾನವಾಗಿ ತಿಳಿಯದಂತೆ ಚಲಿಸುತ್ತಿತ್ತು. ಚಂದ್ರನು ಶುಭ್ರವಾದ ಆಕಾಶದಲ್ಲಿ ಮೂರುಮಾರೆತ್ತರದಲ್ಲಿ ನಿಂತಂತೆ ಕಾಣುತ್ತಿದ್ದನು. ಇಬ್ಬರು ನೀರಿನಲ್ಲಿ ಗಳುವನ್ನು ಹಾಕಿ ಆಡಿಸಲು ಆರಂಭ ಮಾಡಿದರು. ಜನರು ಬಂದು ಓಡಿಯಾಡಿದ್ದರಿಂದ ಅಲ್ಲಿ ಒಂದು ಮರದ ಮೇಲಿಂದ ಒಂದು ಗೂಗೆ ಇನ್ನೊಂದು ಕಡೆಗೆ ಹಾರಿಹೋಯಿತು. ಚಿಟ್ಟೆಗಳು ಚಿರಚಿರ ಶಬ್ದ ಮಾಡುತ್ತಿದ್ದವು.

ಗಳುಗಳನ್ನು ಹಾಕಿ ಆಡಿಸಲು ನೀರು ಅಲ್ಲಕಲ್ಲೋಲವಾಗಿ ಒಂದು ಬಿಂಬವಾಗಿದ್ದ ಚಂದ್ರ ನೂರುಪಾಲಾದನು. ಸ್ವಲ್ಪ ಹೊತ್ತು ನೋಡಿ ಆಳು "ಇನ್ನು ಇಲ್ಲಿ ನೋಡಬೇಕಾದದ್ದಿಲ್ಲ, ಸ್ವಾಮಿ" ಎಂದನು.

ಶಾಸ್ತ್ರಿಗಳು "ತಾವು ಆ ಬಾವಿಯ ಹತ್ತರ ಹೋಗಿ ನೋಡೋಣ ವಾಗಲಿ! ನಾನು ಇಲ್ಲಿ ಇನ್ನೂ ಸ್ವಲ್ಪ ಹೊತ್ತು ನೋಡಿಬರುತ್ತೇನೆ" ಎಂದರು.

ನಾನು ಆ ಬಾವಿಯ ಕಡೆ ಹೊರಟೆನು. ನನ್ನ ಜೊತೆಗೆ ಆಕೆಯೂ ಬಂದರು. "ಅಪ್ಪಾ ಈ ತೋಟಗಳ ಬಾವಿಗಳಲ್ಲಿ ಹೋಗಿ ನೋಡ ಬಾರದೆ" ಎಂದರು.

ನಾನು ಉತ್ತರ ಹೇಳಲಿಲ್ಲ. ಅವರೂ ಬರಲಿ ಎಂದು ಮೆಲ್ಲಗೆ ನಡೆಯುತ್ತಾ ಇನ್ನೊಂದು ಬಾವಿಯ ಬಳಿಗೆ ಬಂದು ಸೇರಿದೆನು.

ಇಲ್ಲಿಯೂ ಏನೂ ಆಗಿರಲಿಲ್ಲ. "ಇಲ್ಲಿ ಒಂದು ಕಲ್ಲು ಸಂದಿ ಇದೆ. ಅಲ್ಲಿ ಗಳ ಸರಿಯಾಗಿ ಹೋಗುವುದಿಲ್ಲ. ಬೆಳಗಾದರೆ ನಾನು ಮುಳುಗಿ ನೋಡುತ್ತೇನೆ ಸ್ವಾಮಿ!" ಎಂದು ಆಳು ಹೇಳಿದನು.

ಆಕೆ "ಅಯ್ಯೋ, ಬೆಳಗಿನತನಕ ಆದರೆ ಜೀವ ಇರುವುದು ಉಂಟೆ. ಈಗಲೇ ನೋಡಿ ನಮ್ಮಪ್ಪ" ಎಂದು ಗೋಳಾಡಿದರು.

ಆಳು ನನ್ನ ಮುಖವನ್ನು ನೋಡಿದನು. ಹುಡುಗಿ ಆಗ ಬಾವಿಯಲ್ಲಿ ಬಿದ್ದಳಾದರೆ ಇನ್ನೂ ಜೀವ ಇರುವುದುಂಟೆ? ನಾನು "ಇನ್ನೊಂದು ಸಲ ಗಳ ಹಾಕಿ ನೋಡು" ಎಂದೆನು.

ಪುನಃ ಹುಡುಕುವುದಕ್ಕಾರಂಭಿಸಿದರು.

ಯಾರೋ "ತೋಟಗಳಲ್ಲಿ ಹೋಗಿ ನೋಡೋಣವೆ" ಎಂದರು. ಇನ್ನೊಬ್ಬರು ಮೆಲ್ಲಗೆ "ತೋಟದತನಕ ಹುಡುಕಬೇಕಾದದ್ದಿಲ್ಲ" ಎಂದರು.

"ತೋಟದ ಬಾವಿಗೇನಾದರೂ ಹೋದಳೊ" "ಅಲ್ಲಿ ಬಿದ್ದಿರ ಲಾರಳು" ಎಂದು ಅವಳು ಎಂದು ಹೆಸರನ್ನೆತ್ತುವುದಕ್ಕೆ ಯಾರಿಗೂ ಇಷ್ಟವಿಲ್ಲ.

ಸ್ವಲ್ಪಹೊತ್ತಿಗೆ ಇನ್ನೊಬ್ಬರು "ಈ ಹೂವಿನ ತೋಟದ ಕುಂಟೆಯಲ್ಲಿ ಬೇಕಾದರೆ ನೋಡಬಹುದು" ಎಂದರು.

ಮತ್ತೊಬ್ಬರು "ಅಲ್ಲಿ ಇರುವ ನೀರೇನು ಎರಡಾಳು ನೀರಿಲ್ಲ" ಎಂದರು.

ಇಷ್ಟುಹೊತ್ತಿಗೆ ಮೂರುವರೆ ಜಾಮುವಾಗಿತ್ತು. ಚಂದ್ರ ಒಂದು ಮೂರಿನಲ್ಲಿ ನಿಂತಿದ್ದನು. ದೂರದಲ್ಲಿ ಬರುತ್ತಿದ್ದ ಉದಯದ ಬೆಳಕಿಂದ ಆಗಲೇ ಮಲಿನನಾಗಿದ್ದನು. ಚಿಟ್ಟೆಗಳು ಚಿರಚಿರ ಶಬ್ದವನ್ನು ನಿಲ್ಲಿಸಿಬಿಟ್ಟಿದ್ದವು.

ನನಗೆ ಈ ಎರಡು ಬಾವಿಯಲ್ಲೂ ಏನೂ ಇಲ್ಲದ್ದರಿಂದ ಹೂವಿನ ತೋಟದ ಬಾವಿಯಲ್ಲಿ ಹೋಗಿ ನೋಡೋಣವೆಂದು ತೋರಿತು. ಅದು ದೇವಾಲಯದ ಹತ್ತಿರ, ಶಾಸ್ತ್ರಿಗಳಿದ್ದ ಬಾವಿಯ ಕಡೆಗೆ ಹೋಗಬೇಕು. ಆಕೆಯನ್ನು ಕರೆದುಕೊಂಡು ಅಲ್ಲಿಗೆ ಹೊರಟೆನು. ಹೋಗುತ್ತಾ ಶಾಸ್ತ್ರಿಗಳು ಎದುರಿಗೆ ಬಂದರು. "ಏನು" ಎಂದರು.

"ಏನೂ ಇಲ್ಲ, ಹೂವಿನ ತೋಟದ ಬಾವಿಯಲ್ಲಿ ನೋಡೋಣವೆಂದು ಬಂದೆ" ಎಂದೆನು.

"ಅದು ಮೊದಲು ತೋಚಲಿಲ್ಲವಲ್ಲಾ. ಅಲ್ಲಿಗೂ ಆಗಲೇ ಇಬ್ಬರು ಹೋಗಿದ್ದರೆ ಚೆನ್ನಾಗಿತ್ತು" ಎಂದು ಅವರು ಹೇಳಿದರು.

ಇವರ ಮಾತನ್ನು ಕೇಳಿ ನನಗೆ ಈ ಕೆಲಸದಲ್ಲಿ ಉದ್ದಕ್ಕೂ ನಮ್ಮನ್ನು ಮೀರಿದ ಯಾವುದೋ ಶಕ್ತಿ ನಮ್ಮನ್ನೆಲ್ಲ ಹೆಜ್ಜೆ ಹೆಜ್ಜೆಗೂ ತಪ್ಪು ದಾರಿಗೆ ಸೆಳೆದಿತ್ತೆಂದು ತೋರಿಬಂದಿತು. ಜಾಗ್ರತೆಯಾಗಿ ನಡೆದು ಬಾವಿಯ ಬಳಿಗೆ ಬಂದೆವು.

ಪಾರಿಜಾತದ ಗಿಡದಿಂದ ಸುಖವಾದ ವಾಸನೆ ತಂಪಾಗಿ ಹಾಯ್ದು ಬಂತು. ಹೂಗಳು ಕೆಲವು ಕೆಳಗೆ ಉದುರಿಬಿದ್ದಿದ್ದುವು. ಮಲ್ಲಿಗೆಯ ಪೊದೆಯಲ್ಲಿ ತುಂಬ ಎಲೆ; ಹೂವಿಲ್ಲ. ಸೇವಂತಿಗೆಯ ಪಾತಿಯಲ್ಲಿ ಅಲ್ಲಲ್ಲಿ ಚೆನ್ನಾಗಿ ಅರಳಿದ ಒಂದೆರಡು ದೊಡ್ಡ ಹೂ. ಕಟ್ಟೆಗಳಲ್ಲಿ ಗುಂಪು ಗುಂಪಾಗಿ ತುಳಸಿ. ಒಂದು ಮೂಲೆಯಲ್ಲಿ ಬಾವಿ. ನಾವಿಬ್ಬರೂ ಹೋಗಿ ಬಾವಿಯ ತಡಿಯಲ್ಲಿ ನಿಂತೆವು. ಆಕೆಯೂ ಒಂದು ಪಕ್ಕದಲ್ಲಿ ನಿಂತಳು.

ಅದು ನನಗೆ ತಿಳಿಯಲಿಲ್ಲ. ಆಕೆಗೆ ತಿಳಿಯಿತು. "ಅಯ್ಯೋ ನನ್ನಮ್ಮ" ಎಂದು ಆಕೆ ನೀರಿನೊಳಕ್ಕೆ ನುಗ್ಗಿದರು. ಶಾಸ್ತ್ರಿಗಳು ಅವರ ಕೈಯನ್ನು ಹಿಡಿದು ಬಲವಾಗಿ ಹಿಂದಕ್ಕೆಳೆದುಕೊಂಡು "ಒಬ್ಬರು ಸಾಕಮ್ಮ, ಇರಿ ಹಾಗೆ" ಎಂದರು.

ನಾನು ನೀರಿನಕಡೆ ಚೆನ್ನಾಗಿ ನೋಡಿದೆನು. ಮುಖ ಮೂರು ಪಾಲು ಮೇಲುಗಡೆಗೆ ಕಾಣುತ್ತಿತ್ತು. ಬೆಳ್ಳಗಿದ್ದ ಹಣೆ, ಒದ್ದೆಯಾದ ಕೂದಲು, ಉಬ್ಬಿ ಆ ದೇಹವನ್ನು ತೇಲಿಸುತ್ತಿದ್ದ ಸೀರೆ ಇವು ಕಂಡವು. ಆ ಹುಡುಗಿ ಅಲ್ಲಿ ಪ್ರಾಣವನ್ನು ನೀಗಿದ್ದಳು.

ಆಕೆ "ಅಯ್ಯೋ ನನ್ನನ್ನು ಬಿಟ್ಟುಹೋದೆಯಲ್ಲೇ" ಎಂದು ಕಠೋರವಾಗಿ ಕೂಗಿ ಕೆಳಗೆ ಬಿದ್ದರು.

ತೋಪಿನ ಹಕ್ಕಿಗಳು ಕೆಲವು ಈ ಕೂಗಿನಿಂದ ಎಚ್ಚತ್ತು ತಾವೂ ಸ್ವಲ್ಪ ಕೂಗಿಕೊಂಡವು. ಹೆಚ್ಚಾಗಿ ಹನಿಬೀಳುವುದಕ್ಕೆ ಆರಂಭವಾಯಿತು. ಶಾಸ್ತ್ರಿಗಳು "ಈಕೆಯನ್ನು ನೋಡಿಕೊಳ್ಳಿ" ಎಂದು ಹೇಳಿ ನೀರೊಳಕ್ಕಿಳಿದು ಆ ದೇಹವನ್ನು ತಂದು ಹೊರಗೆಹಾಕಿದರು.

ಆಕೆಗೆ ಇದೊಂದರಮೇಲೂ ಜ್ಞಾನವಿರಲಿಲ್ಲ.

ಇಷ್ಟುಹೊತ್ತಿಗೆ ಕೂಗನ್ನು ಕೇಳಿ ಎರಡು ಬಾವಿಗಳಿಂದಲೂ ಹುಡುಕುತ್ತಿದ್ದವರೆಲ್ಲ ಓಡಿಬಂದರು.

ಏನೇನೋ ಮಾಡಿದೆವು, ಹುಡುಗಿಗೆ ಜೀವ ಬರಲಿಲ್ಲ. ನಾವು ಅವಳನ್ನು ನೋಡುವುದಕ್ಕೆ ಮೊದಲೇ ಎಲ್ಲವೂ ಆಗಿಹೋಗಿತ್ತು.

ತೀರಾ ಆಸೆಯನ್ನೆಲ್ಲ ಬಿಟ್ಟು ಮುಂದಣ ಕೆಲಸವನ್ನು ಯೋಚಿಸುವ ವೇಳೆಗೆ ಬೆಳಗಾಯಿತು. ಚಂದ್ರನು ಮರೆಯಾದನು. ಹಿಮ ಮತ್ತಷ್ಟು ಹೆಚ್ಚಿತು. ನಾನು ಒಬ್ಬೊಬ್ಬರಿಗೆ ಒಂದೊಂದು ಕೆಲಸವನ್ನು ಹಚ್ಚಿ ಮಿಕ್ಕ ಏರ್ಪಾಡುಮಾಡುವುದಕ್ಕೆ ಮನೆಯಕಡೆ ಹೊರಟೆನು.

ದೂರದ ಸಮುದ್ರದ ತೆರೆಗಳ ಶಬ್ದದಂತೆ ಎಚ್ಚತ್ತ ಊರಿನ ಜನದ ಎಂದಿನ ಕೆಲಸದ ಶಬ್ದ ಕೇಳುತ್ತಬಂತು. ದಿನದಂತೆ ಬಾವಿಗೆ ಹೋಗುವ ಕೆಲವರು ನನ್ನ ಎದುರಿಗೆ ಬಂದರು.

ಬಲವಾಗಿ ಬೀಳುತ್ತಿದ್ದ ಹಿಮವನ್ನು ಚೆದರಿಸುತ್ತ ಈ ಕಡೆ ಮುಳುಗಿದ ಚಂದ್ರನೇ ಈ ಕಡೆ ಹೊಸ ತೇಜಸ್ಸಿನೊಡನೆ ಎದ್ದನೆಂಬಂತೆ ಸೂರ್ಯನು ಉದಯಿಸುತ್ತಿದ್ದನು. ಕಣ್ಣೀರಹನಿಯಂತೆ, ಸಣ್ಣ ಮುತ್ತಿನಂತೆ, ಹುಲ್ಲಿನ ಕೊನೆಯಲ್ಲಿ ಹಿಮಜಲ ಒಟ್ಟುಗೂಡಿ ನಿಂತಿತ್ತು. ಅಮಲವಾಗಿ ಕೋಮಲವಾಗಿ ಅಚ್ಚವಾಗಿ ನಿಂತು, ಅಬಲವಾದರೂ ಹೃದಯವನ್ನು ಸ್ಥಿರವಾಗಿ ಒಟ್ಟುಗೂಡಿಸಿಕೊಂಡು, ಬೆಳಕನ್ನು ಕಂಡೊಡನೆ ತನ್ನನ್ನು ನೀಗಿಕೊಳ್ಳಲು ಕಾದಿದ್ದ ಆ ಒಂದೊಂದು ಹನಿಯೂ ನನ್ನ ಕಣ್ಣಿಗೆ ಆ ಬಾಲ ವಿತಂತುವಿನ ಆತ್ಮದ ಪ್ರತಿಬಿಂಬದಂತೆ ಕಂಡಿತು.

*   *   *   *

ನಮ್ಮ ಮನೆಯವರು ಇಂದು ಬಂದರು. ನನ್ನ ಲಕ್ಷ್ಮಿ ಆಕೆಯನ್ನು ನಮ್ಮ ಮನೆಗೆ ಕರೆದುಕೊಂಡು ಬರಬೇಕೆಂದಳು. ಆಕೆ ನಿನ್ನೆ ಸಾಯಂಕಾಲಕ್ಕೆ ಈಗ್ಯೆ ಇಪ್ಪತ್ತುವರ್ಷದಷ್ಟು ಮುದುಕಿಯಾಗಿ ಹೋಗಿದ್ದಾರೆ. ನನ್ನ ಲಕ್ಷ್ಮಿಯನ್ನು "ಅಮ್ಮ ನೀನೇ ನನಗೆ ಗತಿ. ನಿನ್ನ ಗಂಡ, ಮಕ್ಕಳು, ನೀನು ಎಲ್ಲರೂ ಸುಖವಾಗಿರಿ, ತಾಯಿ. ನನಗಿನ್ಯಾರೂ ಇಲ್ಲವಮ್ಮ, ನೀನೇ ನನ್ನ ಲಕ್ಷ್ಮಿ" ಎಂದರು.

# ಮನುಮತ್ತಿ
## (ಪರಕಾಯ ಪ್ರವೇಶ)

---

ಇದು ಕೊರ್ಟ್ನೀಸಾಹೇಬನ ಡಯರಿಯ ಇನ್ನೊಂದು ಭಾಗ.

"ಶ್ರೀರಾಮನು ರಾವಣನನ್ನು ಕೊಂದು ವಿಭೀಷಣನಿಗೆ ಪಟ್ಟ ಕಟ್ಟುವುದಕ್ಕಾಗಿ ಲಂಕೆಯೊಳಗೆ ಪ್ರವೇಶಿಸುವಾಗ, ಊರಬಾಗಲಲ್ಲಿ ಒಂದು ನೀಲವನ್ನು ಕಂಡು ಅದನ್ನು ಮೋಹಿಸಿ, ಇಲ್ಲೇ ಇಷ್ಟು ಮನಸ್ಸು ಸೋತರೆ ಇನ್ನು ಒಳಗಿರುವ ವಿಭವವನ್ನು ನೋಡಿ ಇನ್ನು ಯಾವ ಯಾವ ಆಸೆ ತಲೆದೋರುವುದೋ ಎಂದು ಶಂಕಿಸಿ ಹಿಂದಿರುಗಿ ಬಂದನಂತೆ. ಲಕ್ಷ್ಮಣನು ಊರನ್ನು ಹೊಕ್ಕು ವಿಭೀಷಣನಿಗೆ ಪಟ್ಟವನ್ನು ಕಟ್ಟಿದನಂತೆ. ಹೀಗೆಂದು ಹಿಂದೂಗಳಲ್ಲಿ ಒಂದು ಸುಂದರವಾದ ಕಥೆಯುಂಟು.

"ಈ ಸೀಮೆ ನಮಗೆ ಲಂಕೆಯ ರೀತಿಯಾಗಿದೆ. ನಾವು ರಾಮನಂತೆ ಇಲ್ಲ. 'ಎಲ್ಲವನ್ನೂ ತೊರೆದು ನನ್ನನ್ನು ಹಿಂಬಾಲಿಸಿ ಬಾ' ಎಂದು ಧನ ಹೇಳಿತೋ ಎಂಬಂತೆ ಕೇಳಿದ ಪೂರ್ವದೇಶದ ಆಹ್ವಾನ ಪಾಶ್ಚಾತ್ಯರಿಗೆ ಸೋಕಿ ನಮ್ಮ ಜನ ಇಲ್ಲಿಗೆ ಬರುವುದಕ್ಕೆ ಪ್ರಾರಂಭಿಸಿದಾಗಿನಿಂದ ಈ ಸೀಮೆಯ ಧನ ಕೊಂಚಕೊಂಚವಾಗಿ ನಮ್ಮ ಸೀಮೆಯನ್ನು ಸೇರುತ್ತಲಿದೆ. ನಾವು ಅಂದವಾದ ಯಾವುದನ್ನು ಕಂಡರೂ ಹೊತ್ತುಕೊಂಡು ಹೋಗಬೇಕೆನ್ನುತ್ತೇವೆ. ಷಾಹಜಹಾನನ ಸಿಂಹಾಸನ ನಾದರಷಹನೊಂದಿಗೆ ಪರ್ಷಿಯಾಕ್ಕೆ ಹೋಯಿತು. ನಾದರಷಹನು ಹೋದವನು ಪುನಃ ಬರಲಿಲ್ಲ. ನಾವು ಇಲ್ಲಿಯೇ ನೆಲಸಿ ನಿಂತ ನೂರಾರು ನಾದರಷಹರಂತೆ ಒಬ್ಬೊಬ್ಬರು ಒಂದೊಂದನ್ನು ಮೆಲ್ಲಗೆ ಒಂದೊಂದಾಗಿ ಸಾಗಿಸುತ್ತಿದೇವೆ. ರಾಜ್ಯದಲ್ಲಿ ಹಿಂದೆ ಇದ್ದ ಪ್ರಸಿದ್ಧವಾದ ಒಳ್ಳೆಯವಾದ ಶ್ರೇಷ್ಠವಾದ ವಸ್ತುಗಳು ಹೋಗುತ್ತಾ ಇವೆ. ಸೀಮೆ ಬರಿಯ ಸೀಮೆಯಾಗುತ್ತಾ ಇದೆ.

"ನಾನು ಈ ವಿಷಯವನ್ನು ಕುರಿತು ಯೋಚನೆಮಾಡುವಂತೆ ಈಚೆಗೆ ಒಂದು ಸಂಗತಿ ನಡೆಯಿತು. ಕೆಲವು ದಿನಗಳ ಹಿಂದೆ ನನ್ನ ತಂಗಿ ಎಮಿಲಿಯೂ ಅವಳ ಗಂಡನೂ ನನ್ನ ಮನೆಗೆ ಬಂದರು. ಜಾನ್ ಫರ್ಗ್ಯು ವರನು ಈ ಸೀಮೆಯನ್ನು ಕುರಿತು ಬಹಳ ಪ್ರೀತಿಯುಳ್ಳವನು; ಪ್ರಾಯಶಃ ನಮ್ಮ ಜನರಲ್ಲಿ ನಾನು ಕಂಡಹಾಗೆ ಇನ್ನು ಯಾರಿಗೂ ಅಷ್ಟು ಪ್ರೀತಿಯಿಲ್ಲ. ಅವನು ಇಲ್ಲಿಯ ಜನರನ್ನು ಬಲ್ಲನು; ಅವರ ನಡೆನುಡಿಗಳನ್ನು ಬಲ್ಲನು. ಇಲ್ಲಿನ ನಾಗರಿಕತೆಯಲ್ಲಿ ಉತ್ತಮವಾದ ಅಂಶಗಳು ಯಾವುವು ಎಂಬು ದನ್ನು ಬಲ್ಲನು; ಇಲ್ಲಿಯ ದೇವಾಲಯಗಳ ಶಿಲ್ಪದ ಕೌಶಲ್ಯವನ್ನು ಬಲ್ಲನು. ಈ ಸೀಮೆಯಲ್ಲಿ ಪೂರ್ವಕಾಲದಲ್ಲಿ ಅಮೋಘವಾದ ಒಂದು ನಾಗರಿಕತೆ ಇತ್ತೆಂದೂ ಈಗ ನಮ್ಮ ಕಣ್ಣಿಗೆ ಬೀಳುವ ದಿನ ದಿನದ ಜೀವನದಲ್ಲೂ ಆ ನಾಗರಿಕತೆಯ ಶ್ರೇಷ್ಠವಾದ ಭಾಗಗಳು ಕಾಣಬರುವುವೆಂದೂ ಸ್ಥಿರಪಡಿಸಿ ನಮ್ಮವರಿಗೆ ತಿಳಿಸುವುದಕ್ಕೆ ಅವನು ಮಾಡಿರುವ ಪ್ರಯತ್ನ ಎಷ್ಟು ಮಹತ್ತಾದುದೆಂದು ಅವನ ಹೆಸರನ್ನು ಹೇಳಿದಮಾತ್ರಕ್ಕೆ ಎಲ್ಲರಿಗೂ ವ್ಯಕ್ತ ವಾಗುವುದು. ಹಾಗೆ ಮಾಡುವುದಕ್ಕಾಗಿ ಅವನು ಈ ಸೀಮೆಯನ್ನೆಲ್ಲಾ ಸುತ್ತಿದಾನೆ. ಎಲ್ಲೆಲ್ಲಿ ದೇವಾಲಯಗಳಿವೆ, ಎಲ್ಲೆಲ್ಲಿ ಮಠಗಳಿವೆ, ಎಲ್ಲೆಲ್ಲಿ ಪೂರ್ವದ ಅರಮನೆಗಳು ಮನೆತನದವರು ಇದ್ದಾರೆ, ಅಲ್ಲಿಗೆಲ್ಲಾ ಪ್ರಯಾಣ ಮಾಡಿ ಅಲ್ಲಿ ಇರುವ ಶಿಲ್ಪದ ಕೆಲಸವನ್ನೂ ಚಿತ್ರದ ಕೆಲಸಗಳನ್ನೂ ಪಟ ಗಳನ್ನೂ ನೋಡಿದಾನೆ. ಹಾಗೆ ನೋಡಿ ಅವುಗಳನ್ನು ವರ್ಣಿಸಿ ಇಲ್ಲಿಯ ವಿಷಯ ಎಲ್ಲರಿಗೂ ತಿಳಿಯುವಂತೆ ಎತ್ತಿ ಕೊಂಡಾಡಿದಾನೆ. ಈ ಸೀಮೆಯ ಜನರು ಇದಕ್ಕಾಗಿ ಅವನಿಗೆ ಬಹಳ ಕೃತಜ್ಞರಾಗಿರಬೇಕು. ಇದೆಲ್ಲದರ ಲ್ಲಿಯೂ ಎಮಿಲಿಯು ಅವನಿಗೆ ಸಹಾಯವಾಗಿ ನಿಂತು ಈ ಸೀಮೆ ಎಂದರೆ ನಿಜವಾದ ಒಂದು ವಿಶ್ವಾಸವನ್ನು ಪಡೆದಿದಾಳೆ.

"ಫರ್ಗ್ಯುವರನು ಅಲ್ಲಲ್ಲಿ ಸಾಧ್ಯವಾದ ಪಟಗಳು ಶಿಲ್ಪಗಳು ಮುಂತಾ ದುವನ್ನು ಬೇಡಿಯೋ ಕೊಂಡುಕೊಂಡೋ ಒಟ್ಟುಗೂಡಿಸಿದಾನೆ. ಎಲ್ಲ ವನ್ನೂ ಒಂದುಕಡೆ ಸೇರಿಸಿ ತನ್ನದೊಂದು ಮ್ಯೂಸಿಯಂ ಮಾಡಬೇಕೆಂದು ಅವನ ಅಭಿಪ್ರಾಯ. ಇಲ್ಲಿಗೆ ಬರುತ್ತಾ ಇವರು ಅಜಂತದ ಗುಹೆಗಳನ್ನು ನೋಡಿಕೊಂಡು ಬಂದರು. ಅವರ ಉತ್ಸಾಹವನ್ನು ಹೇಳುವಂತಿಲ್ಲ.

ಫರ್ಕ್ವರನು ಬಂದ ಮೊದಲು ಅದೇ ಮಾತನ್ನೇ ಆಡುತ್ತಿದಾನೆ. ತಂಗಿ ಎಮಿಲಿ ಸುಮ್ಮನಿರುವುದನ್ನು ನೋಡಿ ನಾನು ನಿನಗೆ ಹೇಗೆ ತೋರಿತು ಎಂದೆ. ಅವಳು ಅದನ್ನು ನೋಡಿ ನನಗೆ ಬಹಳ ಆನಂದವಾಯಿತು, ಒಂದು ವಿಷಯಕ್ಕೆ ಮಾತ್ರ ವ್ಯಸನಪಟ್ಟೆ, ಎಂದಳು. ಯಾವ ವಿಷಯ?—ಎಂದೆ. 'ಅದರಲ್ಲಿಯ ಚಿತ್ರವೊಂದನ್ನು ನೋಡಿದಾಗ, ಬರೆದ ಮಹಾರಾಯರು ಬರೆದರು, ಕಾಗದಗಳ ಮೇಲೆಯೋ ಬಟ್ಟೆಗಳ ಮೇಲೆಯೋ ಬರೆಯಬಾರದಾಗಿತ್ತೇ, ಎಂದುಕೊಂಡೆ; ಹಾಗೆ ಬರೆದಿದ್ದರೆ ನಾವು ಯಾವ ಬೆಲೆಯನ್ನಾದರೂ ಕೊಟ್ಟು ತೆಗೆದುಕೊಂಡು ಹೋಗಬಹುದಾಗಿತ್ತು. ಈಗ ಆ ಕಲ್ಲು ಬಂಡೆಗಳ ಮೇಲೆ ಬರೆದುಬಿಟ್ಟಿದಾರೆ, ನಾವು ಯಾರೂ ತೆಗೆದುಕೊಂಡು ಹೋಗುವ ಹಾಗಿಲ್ಲ' ಎಂದಳು. ಈ ಆಸೆ ತಪ್ಪು ಎಂದು ಆಗ ನನಗೆ ಅಷ್ಟು ತೋರಲಿಲ್ಲ. ಈ ಉತ್ಸಾಹ ಸರಿಯಾದದ್ದೆಂಬುದರಲ್ಲಿ ಸಂದೇಹವಿಲ್ಲ. ಯಾರು ನೋಡಿದರೂ ಈ ಆಸೆ ಹುಟ್ಟುವಂತೆ ಮಾಡಬಲ್ಲ ಸೊಗಸು ಆ ಚಿತ್ರಗಳಲ್ಲಿದೆ.

"ಹಾಗೆಯೇ ಮಾತನಾಡುತ್ತಿರುವಲ್ಲಿ ನನ್ನ ಡಿವಿಜನಿನಲ್ಲಿರುವ ದೇವಲಾಯಗಳ ಮಾತೂ ಪ್ರಸಿದ್ಧವಾದ ಸ್ಥಳಗಳ ಮಾತೂ ಬಂತು. ಫರ್ಕ್ವರನು 'ನಿನ್ನ ಡಿವಿಜನಿನಲ್ಲಿ ಮುಸುಮತ್ತಿ ಎನ್ನುವ ಊರಿದೆಯಂತಲ್ಲ, ಅಲ್ಲಿ ಒಬ್ಬರ ಮನೆಯಲ್ಲಿ ಬಹಳ ಒಳ್ಳೆಯ ಚಿತ್ರಗಳಿವೆಯಂತೆ' ಎಂದನು. ವಿಚಾರಿಸುವಲ್ಲಿ ಹೆಸರು ಮೊದಲಾದದ್ದನ್ನೆಲ್ಲಾ ಹೇಳಿದನು, ಕೊನೆಗೆ 'ಅವನಲ್ಲಿರುವ ಒಂದೆರಡು ಚಿತ್ರಗಳನ್ನಾದರೂ ತೆಗೆದುಕೊಂಡು ಹೋಗಬೇಕು. ನೀನು ಸಹಾಯಮಾಡುವೆಯಾ' ಎಂದನು. ಈ ದೇಶದ ಔನ್ನತ್ಯವನ್ನು ಇತರರಿಗೆ ಪ್ರಕಾಶಪಡಿಸುವವನಿಗೆ ಯಾವ ಸಹಾಯವನ್ನಾದರೂ ಮಾಡಬಹುದೆಂದು ನಾನು ಆಗಲಿ ಎಂದೆನು. ನಿನ್ನೆ ಮುಸುಮತ್ತಿಗೆ ಹೋಗಿದ್ದೆವು."

"ಮುಸುಮತ್ತಿ ಒಂದು ಸಣ್ಣ ಊರು; ಬೇಚಿರಾಕಾಗದೆ ಊರು ಎಷ್ಟು ಹಾಳಾಗುವುದು ಸಾಧ್ಯವೋ ಅಷ್ಟು ಹಾಳಾಗಿದೆ. ಊರ ಹೊರಗೆ ಅಲ್ಲಿ ಅಲ್ಲಿ ಮನೆಗಳನ್ನ ಕಟ್ಟಿಕೊಂಡು ಇರುವವರನ್ನ ಬಿಟ್ಟರೆ ಊರಲ್ಲಿ ನಾಲ್ಕು ಐದು ಮನೆಗಳು ಇರಬಹುದು ಅಷ್ಟೇ. ಅವರೆಲ್ಲಾ ರೈತರು.

ನಾನು ಕೆಲವು ದಿನಗಳ ಹಿಂದೆ ಅಲ್ಲಿ ಹೋಗಿದ್ದಾಗ ಒಂದು ಮನೆಯ ಜಗಲಿಯ ಮೇಲೆ ಒಬ್ಬ ಮುದುಕ ಕುಳಿತಿದ್ದನು. ನಾನು ಊರು ಏಕೆ ಹೀಗಾಯಿತು ಎಂದೆನು. ಈ ಸೀಮೆಯ ಜನರಲ್ಲಿ ಹೇಗೋ ಕಾಣೆ ಬಹಳ ನಿಜವಾದ ತಿಳಿವು ಒಂದು ಪ್ರಚಾರವಾಗಿದೆ; ಅವರು ಆಡುವ ಸಾಮಾನ್ಯವಾದ ಮಾತಿನಲ್ಲಿ ತತ್ತ್ವ ಅಡಗಿರುವುದು. ಅವರ ಬೇಸಾಯಗಾರರು ದೊರೆತನದ ನಯವನ್ನು ಬಲ್ಲರು. ಇವರಲ್ಲಿ ಸಾಮಾನ್ಯನ ಜೀವನದಲ್ಲೂ ಶಾಂತಭಾವ ಪ್ರಬಲವಾಗಿರುವುದು. ಊರು ಏಕೆ ಹೀಗಾಯಿತೆಂದರೆ ಮುದುಕನು ‘ಎಲ್ಲಾ ಊರೂ ಹೀಗಾಗುವುದೇ!’ ಎಂದನು. ನಾನು ‘ಏಕೆ, ಕೆಲವು ಊರು ಬೆಳೆಯುತ್ತಾ ಬರುತ್ತದಲ್ಲಾ’ ಎಂದೆನು. ಮುದುಕನು ‘ಬೆಳೆಯುವಾಗ ಬೆಳೆಯುತ್ತದೆ ಇಳಿಯುವಾಗ ಇಳಿಯುತ್ತದೆ’ ಎಂದನು. ‘ನಿಮ್ಮ ಊರು ಬೆಳೆದಿತ್ತೆ?’ ಎಂದು ನಾನು ಕೇಳಿದೆನು. ಮುದುಕನು ‘ಪ್ರಾಯಬರದ ಹಾಗೆ ಮುದಿತನ ಬಂದೀತೆ?’ ಎಂದನು. ಆಮೇಲೆ ಹಾಗೆಯೇ ಕೇಳಿದ್ದರಲ್ಲಿ ಈ ಊರು ಪುರಾಣಗಳಲ್ಲಿ ಪ್ರಸಿದ್ಧವಾಗಿದ್ದ ಮಾಹಿಷ್ಮತೀನಗರವೆಂದೂ ಇಲ್ಲಿ ಕಾರ್ತವೀರ್ಯಾರ್ಜುನನು ದೊರೆಯಾಗಿದ್ದನೆಂದೂ ಈಚೆಗೆ ನೂರಾರು ಮನೆಗಳವರು ದೊರೆಗಳಾಗಿದ್ದು ಖಿಲರಾಗಿ ಕೊನೆಗೆ ಮುಸಲ್ಮಾನರ ದಂಡು ಒಂದು ಬಂದಾಗ ಊರಿನವರೆಲ್ಲ ಎದ್ದು ಯುದ್ಧಮಾಡಿದರೆಂದೂ ಆದರ ಈಚೆಗೆ ಊರು ಹಳ್ಳಿಯಾಗುತ್ತ ಬಂದು ಕೊನೆಗೆ ಈ ನಾಲ್ಕು ಮನೆ ಉಳಿದುವೆಂದೂ ಅವನು ಹೇಳಿದನು. ಮಾಹಿಷ್ಮತೀನಗರವೆಲ್ಲೋ ಈ ಊರೆಲ್ಲೋ! ಅಂತೂ ಮುದುಕನಿಗೆ ಆ ವಿಷಯದಲ್ಲಿ ಏನೂ ಸಂದೇಹವಿರಲಿಲ್ಲ. ಅರ್ಜುನನು ತನ್ನ ಸಾವಿರ ಕೈಗಳಿಂದ ಸಾಮುಮಾಡುವುದಕ್ಕಾಗಿ ಕಲ್ಪಿಸಿದ್ದ ಗರಡಿ ಎಂದು ಈತ ಒಂದು ಕಲ್ಲಿನಮಂಟಪವನ್ನು ತೋರಿಸಿದನು. ಅವನು ದಿನವೂ ಸ್ನಾನಕ್ಕೆ ಹೋಗುತ್ತಿದ್ದನೆಂದು ಒಂದು ಪುಷ್ಕರಣಿಯನ್ನು ತೋರಿಸಿದನು. ದಿನವೂ ಪೂಜೆಮಾಡುವುದಕ್ಕೆ ಹೋಗುತ್ತಿದ್ದ ದೇವಾಲಯವನ್ನು ತೋರಿಸಿದನು. ಅವನು ರಾವಣನನ್ನು ಹಿಡಿದುತಂದು ಕಟ್ಟಿಹಾಕಿದ್ದನೆಂದೂ ರಾವಣನನ್ನು ಜನರಿಗೆ ತೋರಿಸಿ ಹತ್ತು ತಲೆಯ ಹುಳು, ಆದರ ಕೈಲಿ ಆಟವಾಡಿಸುತ್ತೇನೆ ನೋಡಿ, ಎಂದು ಅವನನ್ನು ಕುಣಿ ಎಂದಾಗ ಅವನು ಕುಣಿಯುತ್ತೇ

ಇರಲು ಹಿಡಿದು ಅವನಿಗೆ ಒಂದು ಏಟನ್ನು ಕೊಟ್ಟನೆಂದೂ, ಅದಕ್ಕೆ ರಾವಣನು ಹಾರಿ ನಿಲ್ಲಲು ರಂಗಮಂಟಪದ ಕಲ್ಲುಭಾವಣಿಗೆ ತಲೆಗಳು ತಗಲಿ ಅದರಲ್ಲಿ ಹತ್ತು ಗುಣಿಗಳು ಬಿದ್ದುವೆಂತಲೂ, ಆ ಗುಣಿಗಳು ಇನ್ನೂ ಆ ಮಂಟಪದಲ್ಲಿ ಕಾಣುವುವೆಂದೂ ಹೇಳಿದನು. ಇದು ಈ ಸೀಮೆಯ ಜನರಲ್ಲಿ ವಾಡಿಕೆ. ಇವರಲ್ಲಿ ಯಾವ ಹಳ್ಳಿ ಕಾಡೂ ತಾನು ಮಹಾಪುರುಷರಿಗೆ ಅನರ್ಹವೆಂದು ಎಣಿಸಿಕೊಳ್ಳುವುದಿಲ್ಲ. ಅಲ್ಲದೆ ದೇವತಾಂಶಪುರುಷರು ನೆಲವನ್ನು ಮೆಟ್ಟುವ ದಿನ ಈ ಜನರ ಮನಸ್ಸಿನಲ್ಲಿ ಇನ್ನೂ ಕಳೆದುಹೋಗಿಲ್ಲ. ನಾನು ಮುದುಕನ ಈ ಮಾತನ್ನೆಲ್ಲ ಕೇಳಿ ಎಂದಿನಂತೆ ಹೇಳುವ ಮಾತು ಎಂದುಕೊಂಡೆನು. ಆದರೆ ಊರು ಕೊಂಚಕಾಲದ ಹಿಂದೆ ಬಹಳ ದೊಡ್ಡದಾಗಿತ್ತೆಂದು ತೋರುವ ಚಿಹ್ನೆಗಳು ಬೇಕಾದಷ್ಟು ಈ ಹಳ್ಳಿಯಲ್ಲಿ ಇವೆ. ಮೇಲೆ ಹೇಳಿದ ಮಂಟಪ ಒಂದು ; ಸಾಲಿಗೆ ಹತ್ತು ಕಂಬದಂತೆ ಹತ್ತು ಸಾಲು ಕಂಬಗಳಿರುವ ದೊಡ್ಡ ಕಟ್ಟಡವಿದು. ಅಷ್ಟು ಎತ್ತರವಾಗಿಲ್ಲ. ಆದರೂ ಎಷ್ಟು ಅಗಲದ ಕಲ್ಲುಗಳು ! ಏನು ಭಾರವಿದ್ದಿರಬೇಕು ! ಇದು ಬಹಳ ಗಟ್ಟಿಗರಾದ ಜನರ ಕೆಲಸವೆಂದು ತೋರುತ್ತದೆ. ಪುಷ್ಕರಣಿ ದೊಡ್ಡದು. ಸುಮಾರು ನೂರೈವತ್ತುಗಜದ ಚದರವಿದೆ. ಕಲ್ಲುಗಳನ್ನೆಲ್ಲ ಒಂದೇ ನಯವಾಗಿ ಕೆತ್ತಿ ಅಂಚುಗಳನ್ನು ಸಮವಾಗಿ ಉಳಿಯಿಂದ ಕಡಿದು ಜೋಡಿಸಿ ಸೋಪಾನವನ್ನು ಕಟ್ಟಿದಾರೆ. ಇದು ಕೆಲಸಮಾಡುವುದರಲ್ಲಿ ಶ್ರದ್ಧೆ ಇದ್ದವರಿಂದ ಆದ ಕೆಲಸವಾಗಿ ತೋರುತ್ತದೆ. ಅಂದವಾದ ಕಟ್ಟಡದಲ್ಲಿಯ ಆನಂದವೇನೆಂಬುದನ್ನು ಬಲ್ಲವರ ಕೆಲಸ. ಈಗ ಈಗ ಮೇಲ್ಗಡೆಯ ಸೋಪಾನಗಳಲ್ಲಿ ಸೊಪ್ಪು ಸೆದೆ ಬೆಳೆದು ಕಲ್ಲುಗಳು ಸಡಲುತ್ತಿವೆ. ಆದರೂ ಕೆಳಗಡೆಗೆ ಇರುವ ಕಲ್ಲುಗಳು ಭದ್ರವಾಗಿ ನಿಂತಿವೆ. ಈಗಲೂ ತಳದಲ್ಲಿ ನೀರು ನಿಂತಿರುವುದನ್ನು ನೋಡಿದರೆ ನಾಲ್ಕು ಕಡೆಯೂ ಒಂದೇ ಸೋಪಾನದ ತುದಿಗೆ ನಿಂತಿದೆ. ಸೋಪಾನ ಒಂದೇ ಸಮನಾಗಿ ಬರುವುದಕ್ಕೆ ಅವರು ಎಷ್ಟುಪ್ರಯತ್ನ ಮಾಡಿರಬೇಕು ! ಆಮೇಲೆ ಈ ದೇವಾಲಯ. ಗ್ರೀಕರ ವಿಗ್ರಹಗಳ ಸರಳತೆಯನ್ನೂ ನಮ್ಮ ಸೀಮೆಯ ಕಟ್ಟಡಗಳ ಧೀರಭಾವವನ್ನೂ ನೋಡಿದ ಕಣ್ಣಿಗೆ ಇಲ್ಲಿಯ ವಿಗ್ರಹಗಳ ವೈರೂಪ್ಯವೂ ಈ ಕಟ್ಟಡಗಳ ಲಘುಭಾವವೂ ಅಷ್ಟು ಶ್ರೇಷ್ಠವಾಗಿ ಕಾಣವು. ಆದರೂ

ಕಟ್ಟಡಗಳ ಒಟ್ಟಿನ ಭಾವ ಸರಿಯಾಗಿರುವಂತೆ ಕಾಣುತ್ತದೆ. ಈ ದೇವಾಲಯದಲ್ಲಿ ಎಲ್ಲಾ ಕೆಲಸವೂ ನಯವಾಗಿದೆ. ಚಪ್ಪಡಿಗಳನ್ನು ಜೋಡಿಸಿ ಗೋಡೆಗಳನ್ನು ಕಟ್ಟಿದೆ. ಜೋಡಿಸಿರುವ ಪಂಕ್ತಿಗಳು ನಾಲ್ಕು ಕಡೆಯೂ ಒಂದೇ ಮಟ್ಟಕ್ಕೆ ಇವೆ. ಇದರಲ್ಲೂ ಕೆಲವು ಭಾಗಗಳು ಶಿಥಿಲವಾಗುತ್ತಾ ಬರುತ್ತಿವೆ. ದೇವಾಲಯದಲ್ಲಿ ಒಂದು ವಿಗ್ರಹ ಇದೆ. ಆದರೆ ಬಹಳ ದಿವಸಗಳಿಂದ ಪೂಜೆ ಇಲ್ಲ. ಇಷ್ಟಲ್ಲದೆ ದೊಡ್ಡ ಊರಾಗಿದ್ದಿರಬೇಕೆನ್ನುವುದಕ್ಕೆ ಉದ್ದಕ್ಕೆ ಹಾಳುಮನೆಗಳ ಸಾಲುಗಳಿವೆ. ಮುದುಕನು ಒಂದನ್ನು ಅಕ್ಕಸಾಲೆಗಳ ಕೇರಿ ಎಂದೂ, ಒಂದನ್ನು ವೈಶ್ಯರ ಕೇರಿ ಎಂದೂ, ಒಂದನ್ನು ಅಂಬಿಗರಕೇರಿ ಎಂದೂ, ಒಂದನ್ನು ಬ್ರಾಹ್ಮಣರ ಕೇರಿ ಎಂದೂ, ಏಳೆಂಟು ಕಡೆ ಏಳೆಂಟು ಬೀದಿಗಳ ಗುರುತುಗಳನ್ನು ತೋರಿಸಿದನು. ಎಲ್ಲವೂ ಶೂನ್ಯ. ಅಲ್ಲಲ್ಲಿ ಮಾತ್ರ ಹಾಳುಗೋಡೆ. ಎಲ್ಲವನ್ನೂ ನೋಡಿ ಹಿಂದಕ್ಕೆ ಬಂದಿದ್ದೆನು.

"ನಿನ್ನೆ ಮುಸುಮತ್ತಿಗೆ ಹೋಗಿ ವಿಚಾರಿಸಿದ್ದರಲ್ಲಿ ಆ ಚಿತ್ರಗಳಿರುವವರ ಮನೆ ಯಾವುದೆಂದರೆ ಈ ಮುದುಕನದೇ. ನಾವು ಹೋಗಿ ಮುದುಕನಿಗೆ ಹೇಳಿಕಳುಹಿಸಿದೆವು. ಮುದುಕ ಹೊರಗೆ ಬಂದು ನಮಸ್ಕಾರಮಾಡಿ ದಯಮಾಡಿಸಬೇಕು ಎಂದನು. ಈ ಜನರ ನಯ ಇವರದೇ. ಮುದುಕನ ನಡೆನುಡಿಗಳು ಸ್ವಭಾವಜನ್ಯವಾದ ದೊಡ್ಡತನವನ್ನು ತೋರತಕ್ಕವು. ಘರ್ಸ್ಕುವರನು,

'ಕೃಷ್ಣಯ್ಯ ಎನ್ನುವರು ನೀವೇಯೋ?' ಎಂದನು.

'ಹೌದು, ಸಾಹೇಬರೆ.'

'ತಮ್ಮಲ್ಲಿ ಸ್ವಲ್ಪ ಕೆಲಸವಿದೆ. ಅದಕ್ಕಾಗಿ ಬಂದೆವು.'

'ಅಪ್ಪಣೆಯಾಗಬೇಕು.'

'ನಿಮ್ಮಲ್ಲಿ ಹಿಂದಣಕಾಲದ ಚಿತ್ರಗಳು ಅನೇಕ ಇವೆಯಂತೆ. ಅವುಗಳನ್ನು ನೋಡಬೇಕೆಂದು ಬಂದಿದೇವೆ.'

'ಅಲ್ಲಿ ಇರುವವೇನು ಬಹಳ ಇಲ್ಲ.'

'ಇರುವಷ್ಟನ್ನು ತೋರಿಸಿದರೆ ಸಾಕು.'

'ಆಗಲಿ. ದಯಮಾಡಿಸಿ.'

" ನಾವು ಹೋಗಿ ಹಜಾರದಲ್ಲಿ ಕುಳಿತೆವು.

" ಮುದುಕನು ಒಳಗೆ ಹೋಗಿ ಕೆಲವು ಪಟಗಳನ್ನು ತಂದು ನಮ್ಮ ಹತ್ತಿರ ಇರಿಸಿದನು. ಎರಡು ಸಾಮಾನ್ಯವಾದದ್ದು. ಒಂದು ಬಟ್ಟೆಯ ಮೇಲೆ ಒಂದು ಮಾದರಿಯ ಮೇಣವನ್ನು ಹಚ್ಚಿ ಪಟ ಮಾಡಿತ್ತು. ಅದರ ಮೇಲೆ ಸಾಮಾನ್ಯವಾದ ಬಣ್ಣಗಳಿಂದ ಚಿತ್ರವನ್ನು ಬರೆದಿತ್ತು. ಬರವಣಿಗೆ ಬಹಳ ಸುಲಭವಾಗಿ ಬಂದಿತ್ತೆಂಬಂತೆ ತೋರುತ್ತಿತ್ತು. ಕೆಲವದರಲ್ಲಿ ಒಂದುಸಲ ಬರೆದು ಅಳಿಸಿದ ಗುರುತು ಕಾಣುತ್ತಿತ್ತು. ಇನ್ನು ಕೆಲವದರಲ್ಲಿ ಮೊದಲನೇ ಸಲ ಎಳೆದ ಗೆರೆಯೇ ನಿಂತಿತ್ತು. ಅಂತು ಚಿತ್ರಗಾರನ ಕೈ ಎಷ್ಟು ಸುಲಭವಾಗಿ ಓಡುತ್ತಿದ್ದಿರಬೇಕು ಎಂದು ಆಶ್ಚರ್ಯತೋರುವಂತಹ ಚಿತ್ರಗಳು. ಒಂದು ಗೋಪಾಲಕೃಷ್ಣನ ಚಿತ್ರ. ಬರೆದವನಿಗೆ ಗೋಪಾಲ ಕೃಷ್ಣನು ಎಷ್ಟು ನಿಜವಾದ ವ್ಯಕ್ತಿಯಾಗಿದ್ದಿರಬೇಕೆಂದು ಆ ಪಟವನ್ನು ನೋಡಿದವರಿಗೆ ಮಾತ್ರ ಊಹಿಸಲು ಸಾಧ್ಯ. ಆ ನಿಲುವಿನ ಸೊಗಸೋ, ಆ ಅಡಿಯನ್ನಿಟ್ಟಿರುವ ನ್ಯಾಸವೊ, ಆ ಕೈಗಳು ಕೊಳಲನ್ನು ಹಿಡಿದಿರುವ ಬೆಡಗೋ, ಕೊಳಲಿಗಿಟ್ಟಿರುವ ಆ ತುಟಿಯ ಸೊಂಕೊ, ಆ ಕಣ್ಣಿನ ನೋಟದ ಒಯ್ಯಾರವೋ, ಒಂದುಕಡೆ ಬಾಗಿರುವ ನಿಲುವಿನಿಂದ ಎದೆಯ ಒಂದುಕಡೆಗೆ ಸರಿದಿರುವ ಹಾರದ ಲಕ್ಷಣವೊ, ಇದೆಲ್ಲಾ ಹಾಗಿರಲಿ, ಆ ಗಾನವು ಸುತ್ತಣ ಗಾಳಿಯಲ್ಲಿ ಹರಡುತ್ತಿರುವುದರಲ್ಲಿ ಅದರಲ್ಲಿ ಮಿಕ್ಕ ಶಬ್ದವೆಲ್ಲಾ ನಿಂತುಹೋಯಿತೆಂದು ತೋರಿಸುವುದಕ್ಕೆ ಎಂಬಂತಿರುವ ಹಿಂದಣ ಒಂದು ಮರದ ನಿಶ್ಚಲವಾದ ಎಲೆಗಳ ಚಿತ್ರವೋ, ಆನಂದದಿಂದ ಕೇಳುತ್ತ ಹತ್ತಿರ ನಿಂತಿರುವ ಹಸುವೋ, ಹತ್ತಿರದ ದೇವತೆಗಳ ಋಷಿಗಳ, ಗೋಪಿಕಾಸ್ತ್ರೀಯರ ಇದೆಲ್ಲದರ ಸೊಗಸೊ ! ನೋಡಿದಾಗ ನನಗೆ ಈ ದೇವರು ಇವನಿಗೆ ಪ್ರತ್ಯಕ್ಷನಾಗಿದ್ದಿರಬೇಕು ಎನ್ನಿಸಿತು. ಎಮಿಲಿ ಘರ್ರ್ಕುವರ ಇವರ ಸಂತೋಷಕ್ಕಂತೂ ಪಾರವೇ ಇಲ್ಲ. ಇದನ್ನು ಬರೆದವರು ಯಾರು ?—ಎಂದು ಕೇಳಿದರು.

' ನಮ್ಮ ತಾತಂದರು.'

' ಬಹಳ ಗಟ್ಟಿಗರೆಂದು ಕಾಣುತ್ತದೆ.'

' ಅವರಷ್ಟು ಗಟ್ಟಿಗರು ನಮ್ಮ ಮನೆತನದಲ್ಲೇ ಹುಟ್ಟಲಿಲ್ಲ.'

'ಅವರು ಇನ್ನೂ ಏನನ್ನಾದರೂ ಬರೆದರೋ?'

'ಅವರು ಬಹಳ ಚಿತ್ರಗಳನ್ನು ಬರೆದರು. ಆದರೆ ಮೂರು ಪಾಲೆಲ್ಲಾ ಗೋಪಾಲಕೃಷ್ಣನ ಚಿತ್ರವನ್ನೇ ಬರೆದದ್ದು. ಅವರಿಗೆ ಈ ಸ್ವಾಮಿಯ ಚಿತ್ರವನ್ನು ಬರೆಯುವುದರಲ್ಲಿ ಬಹಳ ಉತ್ಸಾಹ. ಇಗೋ ನೋಡಿ ಇವುಗಳನ್ನೆಲ್ಲಾ ಬರೆದು ಬರೆದು ಕೊನೆಗೆ ಬಂದದ್ದು ಇದು, ಎಂದು ಒಳಗೆ ಹೋಗಿ ಮುದುಕ ಒಂದು ದಪ್ತರನ್ನು ತಂದು ಎದುರಿಗಿಟ್ಟನು. ನಾವು ತೆಗೆದು ನೋಡಲಾಗಿ ಮೂರು ಪಾಲೆಲ್ಲಾ ಗೋಪಾಲ ಕೃಷ್ಣನ ಚಿತ್ರಗಳು; ಒಂದಕ್ಕೊಂದಕ್ಕೆ ಸ್ವಲ್ಪ ವ್ಯತ್ಯಾಸ. ಒಂದೊಂದು ಸಲ ಯಾವ ಭಾಗದಲ್ಲಿ ವ್ಯತ್ಯಾಸ ಎಂದು ಹೇಳುವಂತಿರಲಿಲ್ಲ. ಆದರೆ ಒಟ್ಟನಲ್ಲಿ ವ್ಯತ್ಯಾಸ ಕಾಣುವುದು. ಹೀಗೆ ಇದ್ದುವನ್ನು ನಾವು ಸಾಲು ಸಾಲಾಗಿ ನೋಡುತ್ತಾ ಬಂದೆವು. ಹದಿನಾರು ಪಟ ಸಿಕ್ಕಿದುವು. 'ಇದು ಒಂದೊಂದನ್ನೂ ಬರೆಯುವುದು. ಬರೆದ ಮೇಲೆ ಸ್ವಾಮಿ ನನಗೆ ದರ್ಶನಕೊಡುವುದು ಹಾಗಲ್ಲ ಎಂದು ಹೇಳಿ ಮತ್ತೊಂದನ್ನು ಪ್ರಾರಂಭಿಸುವುದು.' ಹೀಗೆ ಮಾಡಿ ಕೊನೆಗೆ ಬಂದದ್ದು ಆಗೋ ಆಗ ನೋಡಿದಿರಲ್ಲ ಆ ಪಟ' ಎಂದನು.

"ಧರ್ಮವರನು ಆಶ್ಚರ್ಯಪಟ್ಟನು. 'ಹಾಗಾದರೆ ಆ ಪಟ ಬರೆದಾಗ ಅದು ಸರಿಯಾಗಿ ಬಂತು ಎಂದು ಒಪ್ಪಿದರೊ?'

'ಇಲ್ಲ, ಆಮೇಲೆ ಕೊಂಚ ದಿನ ಬಿಟ್ಟುಕೊಂಡು ಇನ್ನೊಂದು ಪಟ ಆರಂಭಮಾಡಿದರು. ಅದಕ್ಕೆ ಕೈ ಹಾಕುವುದಕ್ಕೆ ಮೊದಲು ಹತ್ತು ಹನ್ನೆರಡು ದಿನ ಒಂದೇ ಸಮನಾಗಿ ದೇವರ ಪೂಜೆಮಾಡುತ್ತಾ ಬೆಳಗಾಗ ಸಂಜೆಯಾಗ ಧ್ಯಾನಮಾಡುತ್ತಾ ಕುಳಿತಿದ್ದರಂತೆ. ಏನೋ ವಿಚಿತ್ರವಾದ ಬದುಕು ಸ್ವಾಮಿ, ಅವರದು. ಧ್ಯಾನಮಾಡಿ ಕುಳಿತಿದ್ದವರು ಆ ಹೊತ್ತು ಬಾವಿಯಿಂದ ಬಂದು, ಸ್ವಾಮಿ ದಯೆಮಾಡಿರುವ ಹಾಗಿದೆ, ಎಂದು ಹೆಂಡತಿಯನ್ನು ಕರೆದು ದೇವರಿಗೆ ಕಾಯಿ ಒಡೆಯಹೇಳಿ ತಾವು ಬರೆಯುವುದಕ್ಕೆ ಕುಳಿತರಂತೆ. ಮಧ್ಯಾಹ್ನ ಎರಡು ಮೂರು ಇಳಿದಿದ್ದರೂ ಬರೆಯುತಾಲೇ ಕುಳಿತಿದ್ದರು. ಆ ಹೊತ್ತಿಗೆ ನಮ್ಮ ದೊಡ್ಡ ತಾತ ಪೂಜೆ ಮುಗಿಸಿಕೊಂಡು ಬಂದು ತಮ್ಮನ ಹತ್ತಿರ ಕುಳಿತರು.

ಮನೇ ಮಕ್ಕಳು ಮರಿ ಎಲ್ಲಾ ಊಟಮಾಡಿ ಆಯಿತು. ನಮ್ಮ ಅವ್ವ ಆಗ್ಯೆ ನಮ್ಮ ತಂದೆಯನ್ನು ಗರ್ಭಿಣಿಯಾಗಿದ್ದರು. ಯಾರೂ ಕಾಯಬೇಡಿ ಎಂತ ಹೇಳಿ ಎಲ್ಲರಿಗೂ ಊಟಮಾಡಿಸಿದರು. ನಮ್ಮ ದೊಡ್ಡ ತಾತ ನಮ್ಮ ಚಿಕ್ಕತಾತ ಇಬ್ಬರೇ ಹಸಿದು ಕೂತುಕೊಂಡಿದ್ದರು. ಇನ್ನೇನು ಮುಗಿಯುತ್ತದೆ, ಎಂತಲೇ ಹತ್ತಿರ ಹತ್ತಿರ ಸಂಜೆಯವರೆಗೆ ಕೂತರಂತೆ; ಪಟ ನೋಡಿದರೂ ಹಾಗೆಯೆ ಕಾಣುತ್ತದೆ. ಕುಳಿತೇ ಇರುವ ವೇಳೆಗೆ ದಂಡು ಬಂತು ಅಂತ ಕೂಗಾಯಿತು. ಊರ ಬಾಗಿಲುಗಳೆಲ್ಲ ಹಾಕಿದರು, ಊರವರೆಲ್ಲ ಕೋಟೇಕಡೆ ಹೊರಟರು. ನಮ್ಮ ತಾತನವರದು ಬಹಳ ಹುಮ್ಮಸ್ಸು; ದೇವರ ಮನಸ್ಸು ಇಲ್ಲವೇನೋ ಈ ಹೊತ್ತು ಈ ಪಟ ಮುಗಿಯುವುದು, ಎಂದುಕೊಂಡು ಎದ್ದು ಅಂಬುತೆಕ್ಕೊಂಡು ಕೋಟೆಗೆ ಹೊರಟರು. ಮನೆಯಲ್ಲಿ ಹೆಂಗಸರು, ಊಟಮಾಡಿಕೊಂಡು ಹೋಗಬಾರದೇ, ಎಂದರು. ನಮ್ಮ ತಾತ, ಊಟ ಕೋಟೆಗೆ ಕಾಯಬಹುದು, ಕೋಟೆ ಊಟಕ್ಕೆ ಕಾಯುತ್ತದೆಯೇ, ಎಂದರಂತೆ. ದೊಡ್ಡ ತಾತನವರು—ಬಂದುಬಿಡುತ್ತಾನೆ ಎಂದರಂತೆ. ಹೆಂಗಸರು ಬಲವಂತ ಮಾಡಿದರು. ನಮ್ಮ ತಾತನವರು ಪೂಜೆಗೆ ಇಟ್ಟಿದ್ದ ಒಂದು ಬಾಳೆಯ ಹಣ್ಣನ್ನು ತಿಂದು ಇದೋ ಬಂದುಬಿಟ್ಟೆ ಎಂದು ಹೊರಟರು. ಆ ದಿನ ಬಂದ ಗುಂಪು ಸ್ವಲ್ಪದ ಗುಂಪಲ್ಲ. ಊರಿನಲ್ಲಿ ಇದ್ದ ಜನವೂ ಕಡಿಮೆ; ಸುಮ್ಮನೆ ಏನನ್ನಾದರೂ ತೆತ್ತಿದ್ದರೆ ಹೊರಟುಹೋಗುತ್ತಿದ್ದರು. ನಮ್ಮ ತಾತ ಹುಮ್ಮಸ್ಸಿನವರು. ಯಾರೋ ಹಾಗೆ ಹೇಳಿದರೆ ಒಪ್ಪಲಿಲ್ಲ. ಕೋಟೆಯಮೇಲೆ ನಿಂತು ಓಡಾಡುತ್ತಾ ಇರುವಾಗ ದಂಡಿನವನು ಯಾವನೋ ಒಂದು ಕೋವಿಯಿಂದ ಅವರನ್ನು ಸುಟ್ಟುಬಿಟ್ಟ; ಅವರು ಹಾಗೆಯೇ ಬಿದ್ದುಹೋದರು. ಆ ಹೊತ್ತಿಗೆ ಹೊಲಗದ್ದೆಗೆ ಹೋಗಿದ್ದ ಜನರೂ ಬಂದರು. ದಂಡನ್ನ ಹ್ಯಾಗೋ ತಡದರು. ಮುಗಿಯಿತು. ನಮ್ಮ ತಾತನನ್ನ ಎತ್ತಿಕೊಂಡು ಬಂದು ಮನೆಯಲ್ಲಿ ಹಾಕಿದರು. ಎದೆ ಹತ್ತಿರ ಸುಟ್ಟುಬಿಟ್ಟಿದ್ದರು. ಜೀವ ಸಲ್ಪ ಕುಟುಕುಜೀವ ಇದ್ದದ್ದು, ಇನ್ನೇನು ಎನ್ನುವ ಹಂಗದೆ; ಒಂದುಸಲ ಕಣ್ಣು ತೆಗೆದು ನೋಡಿದರಂತೆ. ಅಣ್ಣ ನೋಡುತ್ತಾ ಇದ್ದರು. ಕೋಟೆಗೆ ಹೋಗೋಕೆ ಮೊದಲು ಇದ್ದ

ಜ್ಞಾನ ಇದ್ದಿರಬೇಕು. 'ಇಗೋ ಬಂದು ಬಿಟ್ಟೆ ಪಟ ಮುಗಿಸಬೇಕು.' ಎಂದರಂತೆ; ಎಂದರೋ ಇಲ್ಲವೋ ಪ್ರಾಣಹೋಯಿತು. ನಮ್ಮ ದೊಡ್ಡ ತಾತಂದರು ತಮ್ಮನನ್ನು ಮಗನಂತೆ ನೋಡುತಾ ಸಾಕಿಕೊಂಡಿದ್ದರು. ಅವನು ಬರಲಿ ಊಟಮಾಡೋಣ ಎಂತ ಕೂತಿದ್ದರು. ಹೀಗಾಗಿ ಹೋಗುತ್ತಲೂ—'ಅಯ್ಯೋ ನನ್ನಪ್ಪಾ ಎರಡು ತುತ್ತು ಅನ್ನಹಾಕಿ ಕಳುಹಿಸದೆ ಹೋದೆನಲ್ಲೋ, ಹಸಿವಿನಲ್ಲಿ ಕೊಲೆಗೆ ಕಳುಹಿಸಿದೆನಲ್ಲೋ—ಎಂದು ಬಿದ್ದು ಹೊರಳಾಡಿದರಂತೆ; ಗೋಳು ಬೇಡ. ಆಮೇಲೆ ಕರ್ಮಾಂತರಗಳೆಲ್ಲಾ ಆದವು. ನಮ್ಮ ದೊಡ್ಡ ತಾತನವರು ಅಂದಿನಿಂದ ಒಂದು ತರಹಾ ಆದರು. ಕೊಂಚದಿನ ಬಾಗಿಲಿನಲ್ಲಿ ಕುಳಿತು ತಮ್ಮ ಬೀದಿಯಿಂದ ಬರುತ್ತಾನೆ ಎಂದು ಕಾದುಕೊಂಡು ಇರುವ ಹಾಗೆ ಕಾಣುತ್ತಿದ್ದರಂತೆ. ಆಮೇಲೆ, ಅವನು ಹಾಗೆ ಬರುವುದಿಲ್ಲ, ಅವನ ಮನಸ್ಸು ಹೇಗೆ ಇತ್ತೋ ಬಲ್ಲವರಾರು, ಅಂತೂ ಬರುತ್ತಾನೆ, ಎಂದು ಹೇಳುತ್ತಿದ್ದರಂತೆ. ಇನ್ನು ಅಂತವರು ಬರುವುದು ಎಂದರೆ ಏನು! ಆದರೆ ಕೊನೆಗೂ ಹಾಗೆಯೇ ಹೇಳುತ್ತಿದ್ದರು.

'ಆ ದಿನ ಬರೆಯುತ್ತಿದ್ದ ಚಿತ್ರವೆಲ್ಲಿ?'

'ಒಳಗೆ ಇದೆ.'

'ಅದನ್ನು ತಂದು ತೋರಿಸಿ.'

'ಆ ಚಿತ್ರವನ್ನ ತೋರಿಸಬಾರದು ಎಂತ ನಮ್ಮ ದೊಡ್ಡವರು ಹೇಳಿದಾರೆ.'

'ಅದೇನು?'

'ಅರ್ಧ ಆಗಿರುವ ಕೆಲಸ. ಅದರಲ್ಲಿ ಸೊಟ್ಟು ತಪ್ಪು ಕಾಣಬಹುದು. ನೋಡಿದವರು ಚೆನ್ನಾಗಿಲ್ಲ ಅಂದುಕೊಳ್ಳಬಹುದು. ಕಸಬುದಾರರಿಗೆ ಅವಮರ್ಯಾದೆ. ನೋಡೋನ ಭಕ್ತಿ ಕೆಡುತ್ತದೆ. ಅದಕ್ಕಾಗಿ ಹಿರಿಯರು ಬೇಡ ಎನ್ನುತ್ತಾರೆ.'

'ಅಯ್ಯಾ, ನೀವು ಹೇಳುವ ಕಥೆಯನ್ನು ಕೇಳಿದರೆ ಆ ಕಸಬುದಾರನ ಮಾತು ಯಾರೂ ಏನೂ ಎನ್ನುವಹಾಗಿಲ್ಲ. ನಾವು ಈ ದೇವರನ್ನು ಪೂಜೆ

ಮಾಡುವವರಲ್ಲ. ನಮಗೆ ಭಕ್ತಿ ಕೆಡುವುದಿಲ್ಲ. ತನ್ನಿ, ಒಂದುಸಲ ನೋಡೋಣ.'

'ಆಗಲಿ. ಸಾಹೇಬರು ಮಾತ್ರ ಬಂದಿದ್ದರೆ ತರುತ್ತಿದ್ದೆನೋ ಇಲ್ಲವೋ. ಅಮ್ಮಾ ಅವರು ಬಂದಿದಾರೆ. ನೋಡಿಕೊಂಡು ಹೋಗಲಿ. ನಮ್ಮ ದೊಡ್ಡತಾತಾ ಅವರು ಅದನ್ನು ಯಾರಿಗೂ ತೋರಿಸಕೂಡದು ಎಂದದ್ದಕ್ಕೆ ಇನ್ನೊಂದು ಕಾರಣ ಇತ್ತು. ಅವರು, ನಮ್ಮ ತಾತಾ ಬರುತ್ತೇನೆ ಎಂತ ಹೇಳಿದರಲ್ಲ, ಅದರಮೇಲೆ ಅವರು ಬರುತ್ತಾರೆ, ಬಂದು ಮುಗಿಸುತ್ತಾರೆ, ಎಂತ ನಂಬಿಯೇ ಇದ್ದರು ನೋಡಿ.'

'ಬರುತ್ತಾರೆ ಎಂದರೆ.'

'ಏನೋ ಅವರು ಹಾಗೆ ಹೇಳುತ್ತಿದ್ದರು. ಕೊನೆಕೊನೆಗೆ ಅವರು ಎಂದುಕೊಂಡಿದ್ದದ್ದು ನಮ್ಮ ಮನೇಲಿ ಅವರು ಮತ್ತೆ ಹುಟ್ಟುತ್ತಾರೆ; ಹುಟ್ಟಿಬೆಳೆದು ಪಟ ಮುಗಿಯಿಸುತ್ತಾರೆ ಎಂತ. ಅವರು ಬರುತ್ತಾರೆ ಎನ್ನುವುದರಮೇಲೆ, ಬಂದು ಮುಗಿಸುವತನಕ ಯಾರಿಗೂ ತೋರಿಸ ಬಾರದು ಎಂದು ಹೇಳುತ್ತಿದ್ದರು. ಅವರು ಇರುವವರಿಗೆ ಯಾರಿಗೂ ತೋರಿಸಲಿಲ್ಲ. ನಮ್ಮ ತಂದೆಯವರು ಹುಟ್ಟಿಬೆಳೆದು ನಾನು ಹುಟ್ಟಿ ಇಪ್ಪತ್ತುವರುಷದ ಹುಡುಗನಾಗುವವರೆಗೆ ನಮ್ಮ ದೊಡ್ಡ ತಾತನವರು ಇದ್ದರು. ನಮ್ಮ ತಂದೆಯವರಿಗೆ ಆ ಕಳೆ ಇರುತ್ತದೆಯೇನೋ ಎಂತ ನೋಡಿದರಂತೆ. ಇರಲಿಲ್ಲ. ನಾನು ಹುಡುಗನಾದಾಗ ನನ್ನ ತಿದ್ದಿ ನೋಡಿದರು; ನನಗೂ ಇರಲಿಲ್ಲ. ಯಾವಾಗ ಬರುತ್ತಾನೋ ಭದ್ರವಾಗಿ ಇರಿಸಿರಿ ಎಂತ ಹೇಳಿ ಪ್ರಾಣಬಿಟ್ಟರು. ನಮ್ಮ ತಂದೆಯವರು ನಮ್ಮ ಗುರುಗಳವರಿಗೆ ಒಂದುಸಲ ಅದನ್ನು ತೋರಿಸಿದರು. ಇಗೋ ಇಂದು ಈ ಅಮ್ಮಾ ಅವರ ಮುಖ ನೋಡಿದರೆ ಅದನ್ನ ಅವರು ನೋಡಬಹುದು ಎಂತ ನನ್ನ ಮನಸ್ಸಿಗೆ ಕಾಣುತ್ತದೆ. ತಂದು ತೋರಿಸುತ್ತೇನೆ.' ಎಂದು ಮುದುಕನು ಒಳಗೆ ಹೋಗಿ ಎರಡು ಪಟಗಳನ್ನು ತಂದು ಒಂದು ಪಟವನ್ನು ಮುಂದಿಟ್ಟನು.

"ನೋಡಿ ನನಗೆ ನಿಜವಾಗಿಯೂ ವಿಭ್ರಾಂತಿ ಉಂಟಾಯಿತು. ಅದರಲ್ಲಿ ಚಿತ್ರಗಾರನು ಏನು ಮಾಯೆಮಾಡಿದ್ದನೋ ಕಾಣೆ. ಮಾತಿನಲ್ಲಿ

ವರ್ಣಿಸುವುದಕ್ಕೆ ಸಾಧ್ಯವೇ ಎಂದು ಸಂದೇಹಬರುತ್ತದೆ. ಪಟದಲ್ಲಿ ಗೋಳಿ ಕಣ್ಣಿಗೆ ಬೀಳುತ್ತಿರುವಂತೆ ಚಿತ್ರವಾಗಿತ್ತು. ಅದರಲ್ಲಿ ದೇವರ ಕೊಳಲ ಗಾನವು ಅಲೆ ಅಲೆಯಾಗಿ ಪ್ರಸರಿಸುವುದು ಕಾಣಿಸುವಂತಿತ್ತು. ಕೃಷ್ಣನ ಆಕಾರವೂ ಅಷ್ಟೆ. ಪಟದಿಂದ ಹೊರಗೆ ನಡೆದು ಬರುವುದೋ ಎಂಬಂತೆ ತೋರುತ್ತಿತ್ತು. ಎಲ್ಲಾ ವಿವರವೂ ಮೊದಲ ಪಟದಂತೆಯೇ ಇದ್ದರೂ, ನಮಗೆ ತಿಳಿಯದ ಯಾವುದೋ ಭಾಗದಲ್ಲಿ ಸ್ವಲ್ಪಸ್ವಲ್ಪ ವ್ಯತ್ಯಾಸವನ್ನು ಮಾಡಿದ್ದದ್ದರಿಂದ ಎಂತ ಕಾಣುತ್ತದೆ, ಪಟದಲ್ಲಿ ಒಂದು ವಿಜಾತೀಯವಾದ ಹೊಸ ಹೊಳಪು ಸೇರಿತ್ತು. ಪಟಗಳು ಎಲ್ಲಾದರೂ ಎಂಬತ್ತು ವರುಷದ ಹಿಂದೆ ಬರೆದ ಹಾಗಿದ್ದರೂ ಬಣ್ಣ ಥಳಥಳ ಕಾಣುವುದು. ಇದರಲ್ಲಿ ಅಂತೂ ಬಣ್ಣ ಸ್ವಲ್ಪವೂ ಕಂದಿರಲಿಲ್ಲ. ನಮ್ಮ ಇಬ್ಬರಿಗಿಂತಲೂ ಎಮಿಲಿಯ ಮುಖದಲ್ಲಿ ತೋರಿದ ಉತ್ಸಾಹವೇ ಉತ್ಸಾಹ; ಅವಳು ಉಸಿರೆತ್ತದೆ ಸುಮ್ಮನೆ ಪಟವನ್ನೇ ದುರುಗುಟ್ಟಿ ನೋಡುತ್ತಿದ್ದಳು.

'ಇದೋ ಆ ಅರ್ಥದಲ್ಲಿ ನಿಂತ ಪಟ?'

'ಅಲ್ಲ ಇದು.'

"ಮುದುಕನು ಪಟದ ಮೇಲೆ ಇನ್ನೊಂದು ಪಟವನ್ನು ಇಟ್ಟನು.

"ಎಮಿಲಿಯು 'ಆಶ್ಚರ್ಯ ಆಶ್ಚರ್ಯ' ಎಂದಳು.

"ಅದೇ ಪಟ; ಮತ್ತಷ್ಟು ಮಾಯೆ: ಸ್ವಲ್ಪಹೊತ್ತು ಸುಮ್ಮನೆ ನೋಡಿದೆವು.

"ಫರ್ಕ್ಯುವರನು 'ಅದೇನು ತಳಗೆ ಹಸುವಿನ ಹತ್ತಿರ ಆರಂಭಿಸಿದ್ದು ನಿಂತುಹೋಗಿರುವುದು?.' ಎಂದು ಕೇಳಿದನು. ಮುದುಕ 'ಅವರು ಅದನ್ನು ಬರೆಯುತ್ತಿದ್ದಾಗಲೇ ದಂಡು ಬಂತು ಎಂತ ಹೊರಟು ಹೋದರು. ಇನ್ನು ಎರಡು ಗಳಿಗೆಯಲ್ಲಿ ಪಟ ಮುಗಿಯುತ್ತಿತ್ತು. ಅದು ಏನನ್ನು ಬರೆಯುತ್ತಿದ್ದರೋ ಹೇಗೆ ಹೇಳುವುದು? ನಮಗೆ ತಿಳಿಯದು,' ಎಂದನು.

"ಪಟವನ್ನು ಚೆನ್ನಾಗಿ ನೋಡುವಲ್ಲಿ ಅದು ಇನ್ನೊಂದು ಹಸುವಿನ ಚಿತ್ರವೋ ಎಂಬಂತೆ ಕಾಣುತ್ತಿತ್ತು, ಇಂತದೇ ಎಂದು ಹೇಳುತ

ಹಾಗಿರಲಿಲ್ಲ. ಎಮಿಲಿ ಅದನ್ನೇ ನೋಡುತ್ತಿದ್ದಳು. ನಾನು ಮುದುಕ ನನ್ನು 'ಅದೇನು ಇರಬಹುದು ಎಂತ ಯಾರೂ ಹೇಳಿಯೇ ಇಲ್ಲವೇ' ಎಂದೆನು.

"ಮುದುಕ—ನನ್ನ ಮಗಳ ಮಗ ಒಬ್ಬ ಹುಡುಗ ಇದ್ದಾನೆ. ಅವನು ಏನೋ ಹೇಳಿದ. ಇನ್ನು ಯಾರಿಗೂ ಅದು ಬಗೆಹರಿದಿಲ್ಲ.

"ಫರ್ಬ್ಕವರನು 'ಅಯ್ಯಾ ನೀವು ಈ ಪಟವನ್ನು ನನಗೆ ಬೆಲೆಗೆ ಕೊಡುವುದಾದರೆ, ತೆಗೆದುಕೊಂಡು ಹೋಗಿ ನಮ್ಮ ಸೀಮೆಯಲ್ಲಿ ನಿಮ್ಮ ತಾತನವರ ಹೆಸರನ್ನು ಪ್ರಸಿದ್ಧವಾಗುವ ಹಾಗೆ ಮಾಡುತ್ತೇನೆ. ಕೊಡು ವಿರಾ ?' ಎಂದು ಮುದುಕನನ್ನು ಕೇಳಿದನು.

"ಮುದುಕ—ಸ್ವಾಮಿ ನಮ್ಮ ದೊಡ್ಡ ತಾತನವರು ಈ ಪಟವನ್ನ ಯಾರಿಗೂ ತೋರಿಸಬೇಡವೆಂತ ಅಪ್ಪಣೆ ಮಾಡಿದರಂತೆ; ನಾವು ಹೇಗೆ ಮಾರುವುದು ?

"ಫರ್ಬ್ಕವರ—ನಾನು ನನ್ನ ಉಪಯೋಗಕ್ಕಾಗಿ ಕೇಳುವುದಿಲ್ಲ. ನಿಮ್ಮ ತಾತನವರ ಹೆಸರು ಪ್ರಸಿದ್ಧಿಗೆ ಬರುತ್ತದೆ. ನಿಮ್ಮ ಊರು ದೇಶದ ಹೆಸರು ಪ್ರಸಿದ್ಧಿಗೆ ಬರುತ್ತದೆ.

"ಮುದುಕ—ಬರುತ್ತೇನೆ ಎಂದವರು ಮತ್ತೆ ಬಂದರೆ?

"ಫರ್ಬ್ಕವರ—ಬರುವುದುಂಟೆ ಯಜಮಾನರೆ? ಸ್ವಲ್ಪ ಯೋಚನೆ ಮಾಡಬೇಕೋ ಇಲ್ಲವೋ ?

"ಮುದುಕ—ಸ್ವಾಮಿ ನಮ್ಮ ಯೋಚನೆಯ ಮಾತೆಲ್ಲ ಎಷ್ಟು ? ಅವರು ಹೇಳಿದ್ದು ಅವರಿಗೆ ಗೊತ್ತು. ನಾವು ಅದಕ್ಕೆ ಅರ್ಥ ಏನಮಾಡ ಬಹುದು ? ಪಟ ಇಲ್ಲಿ ಇದ್ದರೆ ಹೇಗಾದರೂ ಆಗಲಿ. ದೊಡ್ಡವರ ಮಾತು ನಡೆಸಿದ ಹಾಗಾಯಿತು. ಅದರಮೇಲೆ ದೇವರ ಇಷ್ಟ.

"ಫರ್ಬ್ಕವರ—ಆಗಲಿ. ಯೋಚನೆಮಾಡಿ, ನಾವು ನಾಲ್ಕು ಐದು ದಿನದಲ್ಲಿ ಮತ್ತೆ ಬರುತ್ತೇವೆ. ಆಗ್ಯೆ ಕಡೆಯ ಮಾತು ಹೇಳಿ.

"ಇದೊಂದನ್ನೂ ಎಮಿಲಿ ಕೇಳುತ್ತಿದ್ದ ಹಾಗೆ ತೋರಲಿಲ್ಲ. ಇಷ್ಟು ಹೊತ್ತಿಗೆ ನನ್ನನ್ನು ನೋಡಿ ಇಲ್ಲಿ ಏನನ್ನು ಬರೆಯುಬೇಕೆಂದು ಹೋಗಿದ್ದರು ಹೇಳಲೆ ?—ಎಂದಳು.

" ನಾನು ' ಹೇಳು ' ಎಂದೆನು.

" ಎಮಿಲಿ—ಇಲ್ಲಿ ಒಂದು ಕರು ಓಡಿಬಂದು ಮೊಲೆ ಕುಡಿಯ ಬೇಕೆಂದಿರುವಾಗ ದೇವರು ಕೊಳಲನ್ನು ಬಾಯಿಗಿಟ್ಟುಕೊಂಡು ಒಂದು ಸ್ವರವನ್ನು ನುಡಿಸಲು ಆ ಆಸೆ ತೃಪ್ತಿಯಾಗಿ ಗಾನವನ್ನು ಕೇಳುತ್ತಾ ಅದು ನಿಂತಂತೆ ಬರೆಯಬೇಕೆಂದು ಆತ ನೋಡಿದ್ದನು. ತಾಯ ಹಾಲನ್ನು ಕುಡಿದರೆ ಮತ್ತೆ ಹಸಿವು ಉಂಟು. ಈ ಗಾನದ ಅಮೃತವನ್ನು ಕುಡಿದರೆ ಇನ್ನು ಹಸಿವಿಲ್ಲ. ಇದರಲ್ಲಿ ಇರುವುದೆಲ್ಲವನ್ನೂ ಆ ಕ್ಷಣದಲ್ಲಿ ಗಾನ ಆರಂಭವಾಗಿದೆಯೆಂಬ ಭಾವವನ್ನು ಸೂಚಿಸುವುದಕ್ಕೆ ಎಂದು ಬರೆದಿದೆ. ಅದು ಸಾಮಾನ್ಯವಾದ ನಿಯಮಗಳನ್ನು ಅನುಸರಿಸಿ ಬರೆದಿರುವುದು. ಇದು ಆಗತಾನೆ ಗಾನ ಆರಂಭವಾದದ್ದು ಹೀಗಿತ್ತೆಂದು ಬರೆದಿರುವುದು.

" ಮುದುಕ—ಹಾಗಾದರೆ ನಮ್ಮ ಹುಡುಗ ಹೇಳಿದ್ದು ನಿಜ.

" ನಾವು—ಏನು ಹೇಳಿದ ?

" ಮುದುಕ—ಅದೇ ದೇವರು ಆಗತಾನೆ ಏನನ್ನೋ ನೆನೆದು ಕೊಂಡು ನುಡಿಸೋಣ ಎಂತ ಕೊಳಲನ್ನು ಇಟ್ಟುಕೊಂಡಿದಾರೆ. ಗಾಳಿ ಯೆಲ್ಲ ಮೊದಲ ಸ್ವರಕ್ಕೆ ಜುಮ್ಮೆಂದಿದೆ. ಹಾಲು ಕುಡಿಯುವುದಕ್ಕೆ ಬಂದ ಕರು ನೋಡು ಕುಡಿಯದೆ ಹಾಗೇ ನಿಂತಿದೆ ಎಂದ. ಅಮ್ಮಾವರು ಹೇಳುವುದೂ ಅದೇ ಮಾತಾಯಿತು.

" ಹುಡುಗನ ಪ್ರತಿಭೆ ಎಷ್ಟಿರಬಹುದೆಂದು ನಮಗೆ ಆಶ್ಚರ್ಯ ವಾಯಿತು. ನಿಜವಾಗಿಯೂ ಪಟದಲ್ಲಿ ಗಾಳಿ ಜುಮ್ಮೆಂದು ರೋಮಾಂಚಿತವಾದ ಹಾಗೆ ಕಾಣುತ್ತಿತ್ತು. ದೇವರ ಮುಖದಲ್ಲಿ ಹೊಸದಾಗಿ ತುಂಬಿದ ಭಾವ ಕಾಣುತ್ತಿತ್ತು.

" ಫರ್ಕ್ಯುವರ—ಆ ಹುಡುಗನನ್ನು ಈ ಕಸಬಿಗೆ ತಯಾರುಮಾಡಿ ಯಜಮಾನರೇ. ಮುಂದಕ್ಕೆ ಬರುತ್ತಾನೆ. ಈ ಪಟವನ್ನು ನಮಗೆ ಕೊಡುವ ವಿಷಯ ಯೋಚನೆಮಾಡಿ ನಾಲ್ಕು ದಿವಸಕ್ಕೆ ಮತ್ತೆ ನಾವು ಇಲ್ಲಿ ಬಂದಾಗ ನಮಗೆ ಹೇಳಿ.

" ಎಮಿಲಿ ಏನನ್ನೋ ಹೇಳಹೋಗಿ ಹೇಳದೆ ಸುಮ್ಮನಾದಳು.

"ಮುದುಕನು—'ದಯಮಾಡಿ ಸ್ವಾಮಿ' ಎಂದು ತಾಂಬೂಲ ವನ್ನು ತಂದು ಕೊಟ್ಟನು. ನಾವು ಎಲ್ಲಾ ಹೊರಟುಬಂದೆವು."

* * * * *

"ನಾವು ಮತ್ತೆ ಅಲ್ಲಿಗೆ ಹೋಗುವ ಯೋಚನೆಯನ್ನು ಬಿಟ್ಟಿದ್ದೇವೆ. ಹಣದ ಆಸೆಯಿಂದ ಮುದುಕ ಪಟವನ್ನು ಕೊಟ್ಟರೂ ಕೊಡಬಹುದು. ನಮಗೂ ಪಟವೆಂದರೆ ಬಾಯೂರುವುದು ನಿಜ. ಆದರೂ ಹೋಗುವುದಿಲ್ಲ. ಏಕೆ ಎಂದು ಹೇಳುವೆನು.

"ನಾವು ಹಿಂದಕ್ಕೆ ಬರುವಾಗ ಎಮಿಲಿಯು ಪುಷ್ಕರಣಿಯಲ್ಲಿ ಸ್ವಲ್ಪ ಹೊತ್ತು ಕುಳಿತುಕೊಂಡಳು. ಘರ್ಮ್ಯವರನು ತಾನು ತಂದಿದ್ದ ತಿಂಡಿ ಯನ್ನು ಹೊರಗೆ ತೆಗೆದನು. ಮೂವರೂ ತಿಂದು ಟೀ ತೆಗೆದುಕೊಳ್ಳು ತ್ತಿದ್ದೆವು. ಆಗ ಎಮಿಲಿ 'ಅಣ್ಣಾ ಈ ಕೊಳಾ ನೋಡಿದೆಯಾ. ಎಷ್ಟು ಚೆನ್ನಾಗಿದೆ' ಎಂದಳು.

"ನಾನು—ಚೆನ್ನಾಗಿದೆ ಆದರೆ ನೀರಿಲ್ಲ; ಅಲ್ಲದೆ ಕಲ್ಲೂ ಅಲ್ಲಲ್ಲಿ ಕಳಚಿಕೊಳ್ಳುತ್ತಾ ಇದೆ. ಇಗೋ ನೋಡು ಯಾರೋ, ಮನೆ ಕಟ್ಟು ವುದಕ್ಕೋ ಏನೋ, ಇಲ್ಲಿದ್ದ ಚಪ್ಪಡಿಯನ್ನು ತೆಗೆದುಕೊಂಡು ಹೋಗಿದಾರೆ.

"ಅಣ್ಣಾ, ಅವರು ಮಾಡುವ ಕೆಲಸವನ್ನೇ ನಾವು ಮಾಡಬೇಕೆಂ ದಿದೇವಲ್ಲಾ. ನೋಡು ಈಗ ಇದರಲ್ಲಿ ನೀರಿಲ್ಲ. ಹೋಗಲಿ ಕಟ್ಟಡ ಚೆನ್ನಾಗಿದೆ. ಸೊಪ್ಪು ಸೆದೆ ತೆಗೆದುಹಾಕಿ ಸರಿಯಾಗಿ ನೋಡಿಕೊಂಡರೆ ನೀರು ಇಂದಿಲ್ಲದಿದ್ದರೆ ನಾಲ್ಕು ವರುಷದ ಮೇಲೆ ಬಂದಾಗ್ಯೆ ಇದು ಒಳ್ಳೆಯ ಕೊಳ. ನನಗೆ ಈಗ ಮನಸ್ಸಿನಲ್ಲಿ ಹಿಂದೆ ನೀರಿಗೆ ಸೋಪಾನ ದಿಂದ ಇಳಿದುಹೋದ ಈ ಊರ ಹುಡುಗಿಯರ ಕಾಲಂದಿಗೆಯ ಶಬ್ದ ಕೇಳಿಸುತ್ತಿದೆ. ಅವರು ಇಳಿದೂ ಹತ್ತಿ ಇನ್ನೂ ನಡೆಯುತ್ತಿರುವರೋ ಎನ್ನುವಂತಿದೆ. ಕೊಳವಿದ್ದರೆ ನೀರು ಬರಬಹುದು, ಸುಂದರಿಯರು ಬರ ಬಹುದು, ಎಲ್ಲವೂ ಬರಬಹುದು. ಕಲ್ಲನ್ನು ಕಳಚಿಕೊಂಡು ಹೋಗು ವವರು ಹೋಗಿ ಕೆಟ್ಟುಹೋದ ಬಾವಿ ಎಂದು ಬಾವಿಯನ್ನು ಎಲ್ಲರೂ ಅಷ್ಟಷ್ಟು ಕೆಡಿಸಿದರೆ ನೀರು ಬಂದಾಗ್ಯೆ ಕೊಳವಿಲ್ಲ ಅಣ್ಣಾ.'

"'ಹೌದು ಎಮಿಲಿ; ಆದರೆ ನೀನು ಹೇಳುವುದೇನು?'

"'ನಾವು ಪಟ ಚೆನ್ನಾಗಿದೆ ಎಂತ ಪಟವನ್ನು ವಿಗ್ರಹ ಚೆನ್ನಾಗಿದೆ ಎಂತ ವಿಗ್ರಹವನ್ನು, ಇದು ಅದು ಚೆನ್ನಾಗಿದೆ ಎಂತ ಇದು ಅದು ಎಲ್ಲವನ್ನೂ, ಇಲ್ಲಿಂದ ಹೊತ್ತುಕೊಂಡು ಹೋದರೆ ಈ ಸೀಮೆ ಮತ್ತೆ ಮುಂದಕ್ಕೆ ಬರುವಾಗ್ಯೆ ಇದೆಲ್ಲಾ ಅರೋಡಾಗಿ ಹೋಗಿರುತ್ತೆ. ನಾವು ಏನು ಉದ್ಧಾರಮಾಡಿದ ಹಾಗಾಯಿತು?'

"'ಸೀಮೆಗೆ ಹೆಸರು ಬರಲಿ ಎಂತ ಅಲ್ಲವೆ ಪಟ ತಕ್ಕೊಂಡು ಹೋಗುವುದು?'

"'ಅಲ್ಲಿ ಹೆಸರು ಬಂದು ಇಲ್ಲಿ ಆದದ್ದೇನು? ಹುಡುಗನನ್ನ ತಯಾರುಮಾಡಿ ಎಂತ ಹೇಳಿ ಪಟವನ್ನು ತಕ್ಕೊಂಡು ಹೊರಟುಹೋದರೆ ಏನು ಸಹಾಯಮಾಡಿದ ಹಾಗಾಯಿತು?'

"ಆಮೇಲೆ ನಾವು ಮೂವರೂ ಕುದುರೆಗಳನ್ನೇರಿ ಊರಕಡೆಗೆ ಹೊರಟೆವು. ಸ್ವಲ್ಪ ದೂರ ಬಂದಮೇಲೆ 'ಅಣ್ಣಾ ಇವರಲ್ಲಿ ದೇಹವನ್ನು ಜೀವ ಬಿಟ್ಟುಹೋಗುವುದು, ಆ ದೇಹದಲ್ಲಿ ಇನ್ನೊಂದು ಜೀವ ಬಂದು ಸೇರಿಕೊಳ್ಳುವುದು ಎಂತ ಹೇಳುವುದನ್ನು ಕೇಳಿದ್ದೀಯಾ?' ಎಂದಳು.

"'ಕೇಳಿದ್ದೇನೆ.'

"'ಅದನ್ನು ಪರಕಾಯಪ್ರವೇಶವೆನ್ನುತ್ತಾರೆ. ಜೀವ ಎಲ್ಲೋ ಹೋಗಿರುವಾಗ ಆ ದೇಹವನ್ನು ಬಚ್ಚಿಟ್ಟುಬಿಟ್ಟರೆ ಅಥವಾ ಅದರ ಗುರುತು ಸಿಕ್ಕದಂತೆ ಮಾಡಿಬಿಟ್ಟರೆ ಜೀವ ಬಂದಾಗ್ಯೆ ಅದು ಸಿಕ್ಕದೆ ಪೇಚಾಡಿ ಅಲೆಯುವುದಂತೆ.'

"'ಹೌದು.'

"ಅಣ್ಣಾ, ಈ ಜನ ಭಾರತಮಾತೆ ಎನ್ನುತ್ತಾರಲ್ಲಾ ಆ ಸುಂದರಿ ಸನ್ನಿಯಿಂದ ಈಗ ಮಲಗಿದಾಳೆ. ಮಕ್ಕಳು ಹತ್ತಿರ ಕುಳಿತು ಅಮ್ಮಾ ಎಂದು ಅಳುತ್ತಿವೆ. ದೇಹವನ್ನು ನೋಡಿದರೆ ಜೀವ ಇನ್ನು ಈಗಲೋ ಆಗಲೋ ಬರುತ್ತೆ ಎನ್ನುವ ಹಾಗೆ ಕಳೆ ಇದೆ. ಇಂಥಾ ಸಮಯದಲ್ಲಿ

ನಾವು ಈ ವ್ಯೈಯಮೇಲಿರುವ ಬಳೆ ಉಂಗುರ ಮೂಗುತಿಯನ್ನು ತೆಗೆದುಕೊಂಡು ಹೋಗಿ ಅದನ್ನು ವಿರೂಪ ಮಾಡಿದರೆ, ಜೀವ ಬಂದಾಗ್ಯೆ ಅದಕ್ಕೆ ದೇಹ ಗುರುತು ಸಿಕ್ಕದೆ ಹೋಗುವುದು. ದೇಹವನ್ನು ತೆಗೆದು ಕೊಂಡು ಹೋದರೂ ಹಾಗೆಯೆ. ಅಮ್ಮಾ ಎಂತ ಮಕ್ಕಳು ಮೊರೆ ಯುತ್ತಾ ಇವೆ. ಅಳವುವಲ್ಲಾ ಎಂದು ಎಲ್ಲೋ ಹೋಗಿರುವ ತಾಯಿಜೀವ ಅಲೆದು ಅಲೆದು ಹಿಂದಿರುಗಿ ಬರಬಹುದು. ಬಂದಾಗ್ಯೆ ಸೇರುವುದಕ್ಕೆ ದೇಹವಿಲ್ಲದೆ ಹೋಗಿ ಅದು ಎಲ್ಲಾದರೂ ಕ್ಷೋಭೆಗೆ ಸಿಕ್ಕೀತು ಅಣ್ಣಾ. ನಾವಿದನ್ನು ಮಾಡಬಾರದು' ಹೀಗೆಂದು ಹೇಳುವ ವೇಳೆಗೆ ಎಮಿಲಿಯ ಕಣ್ಣಲ್ಲಿ ನೀರು ಬಂದಿತ್ತು. ಫರ್ಗ್ಯುವರನು ಇನ್ನೊಂದು ಕಡೆಗೆ ಮುಖವನ್ನು ತಿರುಗಿಸಿಕೊಂಡಿದ್ದನು. ತನ್ನ ಕೂಸು ಮಗ ಜಾರ್ಜನ್ನು ನೆನೆಯುತ್ತಿದ್ದನೆಂದು ತೋರುತ್ತದೆ.

"ಅಲ್ಲಿಂದ ಒಂದು ಮಾತನ್ನೂ ಆಡದೆ ನಾವೆಲ್ಲಾ ಹಿಂದಕ್ಕೆ ಬಂದೆವು. ಅದರಿಂದಲೇ ಪಟವನ್ನು ಕೇಳುವುದಕ್ಕೆ ಮತ್ತೆ ಹೋಗಲಿಲ್ಲ.

"ಇವರ ನಾಗರಿಕತೆ ಖಿಲವಾಗಿದೆ ಎಂದು ನಮ್ಮ ನಾಗರಿಕತೆ ಯನ್ನು ನಾವು ಇಲ್ಲಿ ಪ್ರಚಾರಕ್ಕೆ ತರುವುದೂ ಪರಕಾಯ ಪ್ರವೇಶದಂತೆ ದುಃಖಕ್ಕೆ ಕಾರಣವಾದೀತೋ ಎಂದು ನನಗೆ ಸಂದೇಹ ಉಂಟಾಗಿದೆ."



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮—೧೯೫೯

# ಮೊದಲನೆಯ ಮುದ್ರಣದ ಮುನ್ನುಡಿ

ಈ ಪುಸ್ತಕದಲ್ಲಿ ಸೇರಿರುವ ನಾಲ್ಕು ಕತೆಗಳಲ್ಲಿ ಮೊದಲ ಎರಡು ಪ್ರಬುದ್ಧ ಕರ್ಣಾಟಕದಲ್ಲಿಯೂ, ಮೂರನೆಯದು ಕರ್ಣಾಟಕ ಕೇಸರಿಯಲ್ಲಿಯೂ, ನಾಲ್ಕನೆಯದು ಜಯಕರ್ನಾಟಕದಲ್ಲಿಯೂ ಹಿಂದೆ ಪ್ರಕಟವಾದುವು. ಇವಕ್ಕೆ ತಮ್ಮ ಪತ್ರಿಕೆಗಳಲ್ಲಿ ಅವಕಾಶಕೊಟ್ಟದ್ದಕ್ಕಾಗಿ ನಾನು ಆ ಪತ್ರಿಕೆಗಳ ಕರ್ತರಿಗೆ ವಂದನೆಗಳನ್ನು ಅರ್ಪಿಸುತ್ತೇನೆ.

ಬೆಂಗಳೂರು, ಶುಕ್ಲ ಸಂವತ್ಸರ<br>ಫಾಲ್ಗುಣ ಶುದ್ಧ ತ್ರಯೋದಶಿ.

ಶ್ರೀನಿವಾಸ.

# ವಿಷಯಸೂಚಿ

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ಸುಬ್ಬಣ್ಣ (ಕತೆ)
ವಿಮರ್ಶೆ ೧, ೨, ೩, ೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)

ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೪, ೫, ೬
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮುಡಿ (ಭಾಷಣ)
ನವರಾತ್ರಿ ೧, ೨, ೩, ೪, ೫ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ (ಕಾದಂಬರಿ)
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)
ಚಿಂತನ (ವಿಚಾರ)

ಮಾಸತಿ (ದೃಶ್ಯ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಕಾಮನಹಬ್ಬದ ಒಂದು ಕತೆ

೧

ಕಾಮನಹಬ್ಬದ ದಿನ ಬಂದರೆ ನನಗೆ ನಮ್ಮೂರ ಸಾವಿತ್ರಮ್ಮನವರ ಕತೆ ಜ್ಞಾಪಕಕ್ಕೆ ಬರುತ್ತದೆ. ಈ ಹಬ್ಬ ಎಂದರೆ ಹಿಂದೆ ನಮ್ಮೂರಲ್ಲಿ ಮಹಾ ವಿಜೃಂಭಣೆ. ಕಾಮನಹಬ್ಬದ ವಿಜೃಂಭಣೆ ಯಾವುದರಲ್ಲಿ ಎಂದು. ಹೇಳಬೇಕಾದದ್ದಿಲ್ಲ. ಎಂದರೆ, ಮಲೆನಾಡಿನಲ್ಲಿ ಈ ಹಬ್ಬವನ್ನು ಏನೋ ಕೊಚ್ಚೆ ಕೊಚ್ಚೆಯಾಗಿ ಮಾಡುತ್ತಾರಂತೆ, ಅದರಂತೆ ಎಂದು ತಿಳಿಯ ಬಾರದು. ನಮ್ಮ ಕಡೆ ಅದೆಲ್ಲಾ ಇಲ್ಲ. ನಮ್ಮ ವಿಜೃಂಭಣೆ ಯಾವುದರಲ್ಲಿ ಎಂದರೆ ಎಲ್ಲರ ಮನೆಯ ಮುಂದೆಯೂ ತಪ್ಪದೆ ಬಾಯಿ ಬಡಿದುಕೊಳ್ಳು ವುದು, ಎಲ್ಲರಿಂದಲೂ ಸೌದೆ ವಸೂಲು ಮಾಡಿಕೊಂಡು ಬರುವುದು, ಹಳೇ ಪರಕೆ, ಮೊರ, ಮಕ್ಕರಿ, ಚಾಪೆ, ಎಲ್ಲವನ್ನೂ ಸೇರಿಸಿ ಎರಡಾಳೆತ್ತರ ರಾಶಿ ಒಟ್ಟುವುದು, ರಾತ್ರಿ ಚೆನ್ನಾಗಿ ಬಾಯಿ ಬಡಿದುಕೊಂಡು ಅದಕ್ಕೆ ಬೆಂಕಿ ಹಚ್ಚುವುಪು, ಇದರಲ್ಲಿ. ಈಚೆಗೆ ಇದೆಲ್ಲಾ ಸ್ವಲ್ಪ ಕಡಿಮೆಯಾಗಿದೆ. ಚೆನ್ನಾಗಿ ಗಂಟಲೆತ್ತಿ ಕೂಗಿ ರಪರಪರಪನೆ ಬಾಯಿಗೆ ಕೈಗೆ ಜಗಳ ಮಾಡು ವುದಕ್ಕೆ ಹಿಂದೆಗೆದರೆ ಕಾಮನಹಬ್ಬ ಮಾಡುವುದು ಹೇಗೆ? ಸೌದೆಯ ಬೆಲೆ ಏರಿಹೋಯಿತು ಎಂತ ಯಾರೂ ಸೌದೆ ಕೊಡದೆ ಬಿಟ್ಟರೆ, ಕಾಮನನ್ನು ಸುಡುವುದು ಹೇಗೆ? ಹಿಂದೆ ನಮಗೆ ಇಂಥ ಸಂಕೋಚ ಕಾರ್ಪಣ್ಯಗಳು ಇರಲಿಲ್ಲ. ಸಾಲದ್ದಕ್ಕೆ ನಾವು ಹಬ್ಬ ಮಾಡುತ್ತಿದ್ದಾಗ ಸಾವಿತ್ರಮ್ಮನವರು ಅವರ ವ್ರತವನ್ನು ನಡೆಸುತ್ತ ಇದ್ದರು. ಆಗ್ಗೆ ಅದು ಒಂದು ವಿಶೇಷ. ಹಬ್ಬದ ಮಾರನೆಯ ದಿನ ನಾವು ಸಾವಿತ್ರಮ್ಮನವರ ಮೇಲೆ ಕಾಮನ ಬೂದಿ ಸುರಿಸಿ ಅವರ ಸುತ್ತ ಸುತ್ತಿ ಬಾಯಿ ಬಡಿದುಕೊಂಡು ಕೂಗಾಡು ತ್ತಿದ್ದೆವು. ಚರುಪು ಹಂಚಿಕೊಂಡು ವಸಂತ ಹುಯಿದುಕೊಂಡು ಸ್ನಾನಕ್ಕೆ ಹೊರಡುವುದು ಆಮೇಲೆ. ನಾನು ಕೊನೆಯ ಸಲ ಕಾಮನ ಹಬ್ಬದ ಗಲಭೆ ಯಲ್ಲಿ ಸೇರಿದ್ದಾಗ ಸಾವಿತ್ರಮ್ಮನವರ ವ್ರತವೂ ಕೊನೆಯಾಯಿತು. ಅವರ ಆ ವ್ರತದ ವಿಚಾರವನ್ನೇ ನಾನು ಈಗ ನಿಮಗೆ ಹೇಳಬೇಕೆಂದಿರುವುದು.

ಕಾಮನಹಬ್ಬದ ವಿಷಯದಲ್ಲಿ ನಮ್ಮ ಕಡೆಯ ಜನಕ್ಕೆ ಒಂದು ಕುರುಡು ನಂಬಿಕೆ. ಬೂದೀ ಕಲೆಸುವ ದಿನ ವಿಧವೆ ಯಾರಾದರೂ ಬಂದು ಮೇಲೆ ಬೂದೀ ಸುರಿಸಿಕೊಂಡು ಹುಡುಗರು ತನ್ನ ಸುತ್ತ ಬಾಯಿ ಬಡಿದುಕೊಳ್ಳುವುದಕ್ಕೆ ಸಮ್ಮತಿಸಿದರೆ ಅಂಥಾ ಆಕೆಗೆ ಮುಂದಿನ ಜನ್ಮದಲ್ಲಿ ಹೋದ ಗಂಡನೊಂದಿಗೆ ಸಂಸಾರ ಸುಖ ಲಭಿಸುವುದಂತೆ ; ಆ ಜನ್ಮದಲ್ಲಿ ಸುಮಂಗಲಿಯು ಸಾವಂತೆ. ಜನರಿಗೆ ಈ ನಂಬಿಕೆ ಇರುವುದಾದರೂ ಯಾವ ವಿಧವೆಯೂ ಹೀಗೆ ಮಾಡಿಸಿಕೊಂಡದ್ದನ್ನು ನಾನು ನೋಡಿರಲಿಲ್ಲ. ನನಗೆ ತಿಳಿದ ಹಾಗೆ ಈ ವ್ರತಕ್ಕೆ ಒಪ್ಪಿದವರು ಸಾವಿತ್ರಮ್ಮನವರು ಒಬ್ಬರೇ. ಅವರು ಈ ವ್ರತವನ್ನು ಆರಂಭಿಸಿದಾಗ ನಾನು ಸುಮಾರು ಐದು ವರುಷದ ಹುಡುಗ. ಆಮೇಲೆ ಬೂದಿ ಕಲೆಸುವ ದಿನ ವರ್ಷ ವರ್ಷವೂ ಬಂದು ಅವರು ಈ ವ್ರತವನ್ನು ನಡೆಸುವರು. ಅವರು ವ್ರತ ಹಿಡಿದ ಮೊದಲ ವರ್ಷ ಬೂದೀಹಾಕಿ ಎಂದಾಗ ಹುಡುಗರು ಒಂದು ಮೊರ ಬೂದಿಯನ್ನು ಅವರ ಮೇಲೆ ಸುರಿದರಂತೆ. ಎಷ್ಟಾದರೂ ಹುಡುಗು ಹುಡುಗೇ. ಆಟದ ಮೇಲೆ ಕಣ್ಣಿರುವಂತೆ ಸರಿ ತಪ್ಪು ಎನ್ನುವುದರ ಮೇಲೆ ಇರುವುದಿಲ್ಲ. ಅಲ್ಲದೆ ಸಾವಿತ್ರಮ್ಮನವರು ಏಕೆ ಹಾಗೆ ಮಾಡಿಸಿಕೊಂಡರೆಂದು ಹುಡುಗರಿಗೆ ಆಗ ತಿಳಿಯದು. ಎರಡನೆಯ ವರ್ಷದ ವೇಳೆಗೆ ತಿಳಿದಿತ್ತು ; ಆಗ ಅವರು ಅಷ್ಟು ಚೇಷ್ಟೆ ಮಾಡಲಿಲ್ಲ. ಮೇಲೆ ಒಂದು ಚಿಟಿಕೆ ಬೂದಿ ಹಾಕಿ ಒಂದು ಸಲ ಬಾಯಿಬಡಿದುಕೊಂಡು, ನಡೀರಿ, ಎಂದರು. ಸಾವಿತ್ರಮ್ಮನವರು ಅದು ಸಾಲದು ಎಂದರಂತೆ. ಲಂಗಡಾ ಭೀಮನ ಅಣ್ಣ ಶ್ಯಾಮು "ಇದೇನಮ್ಮ ನಿಮಗೆ ಇಷ್ಟು ಆಶೆ? ನಾವೇನು ಸಂಗೀತಗಾರರೇ ಹಾಡು ತೇವೆಯೇ? ಬಾಯಿ ಬಡುಕೊಳ್ಳುವುದನ್ನು ಕೇಳುವುದಕ್ಕೆ ಇಷ್ಟು ಆಶೆಯೆ? ನಡೀರಿ" ಎಂದ. ಸಾವಿತ್ರಮ್ಮನವರು "ಅಪ್ಪಾ ಒಳ್ಳೇ ಮಾತನಾಡು ಎಂದರೆ ಹ್ಯಾಗೆ ಎನ್ನಬೇಕು. ಕೆಟ್ಟದ್ದು ಮಾಡುವುದಕ್ಕೂ ಕಾರ್ಪಣ್ಯವೇ?" ಎಂದರಂತೆ. ಶ್ಯಾಮು "ಯಾವುದಕ್ಕೂ ಅಧಿಕಾರ ಬೇಡವೆ? ಪಕ್ಕಾ ಹೆಣ ಬಂದರೆ ಬೇಕಾದಷ್ಟು ಬಾಯಿ ಬಡಿದುಕೊಂಡೇವು. ಹೆಣಕ್ಕೆ ಮಾಡುವ ಮರ್ಯಾದೆ ಬದುಕಿದವರಿಗೆ ಎಷ್ಟು ಎಂತ ಮಾಡೋಕೆ ಆಗುತ್ತೆ" ಎಂದ. ಸಾವಿತ್ರಮ್ಮನವರು "ಅಪ್ಪಾ ಸತ್ತ ಹೆಣಕ್ಕಿಂತ ಬದುಕಿದ ಹೆಣಕ್ಕೆ

ಈ ಮರ್ಯಾದೆ ಹೆಚ್ಚಾಗಿ ಮಾಡಬೇಕು. ನಾನು ಬದುಕಿದ ಹೆಣ; ಜೀವಶವಾ ಅಪ್ಪಾ" ಎಂದರಂತೆ. ಹುಡುಗರು ಕೊನೆಗೆ ಮೂರು ಹಿಡಿ ಬೂದಿಹಾಕಿ ಮೂರುಸಾರಿ ಸುತ್ತಿ ಬಾಯಿ ಬಡಿದುಕೊಂಡರು. ಹೀಗೆ ಎರಡು ಮೂರು ವರುಷದಲ್ಲಿ ವ್ರತದ ಹೆಜ್ಜೆ ಹೆಜ್ಜೆಯೂ ಮಾಮೂಲಿನಂತೆ ನಿರ್ಧರವಾಯಿತು. ಸಾವಿತ್ರಮ್ಮನವರು ಬಂದು ಕುಳಿತ ಒಡನೆ ನಮ್ಮಲ್ಲಿ ಮೂವರು ಕೈಯಲ್ಲಿ ಒಂದೊಂದು ಹಿಡಿ ಬೂದಿಯನ್ನು ಹಿಡಿದುಕೊಂಡು ಬಂದು ಬಾಯಿ ಬಡಿದುಕೊಂಡು ಅವರ ಮೇಲೆ ಹಾಕಿ ಎಲ್ಲರೂ ಒಂದುಸಲ ಅವರ ಸುತ್ತ ಸುತ್ತುವುದು; ಇದಿಷ್ಟಕ್ಕೆ ಹೆಚ್ಚಾಗಿ ಒಂದಿಷ್ಟನ್ನೂ ಮಾಡುತ್ತಿರಲಿಲ್ಲ. ಹುಡುಗರಾದರೇನು ಹೆಣ್ಣು ಹೆತ್ತ ಮಕ್ಕಳಲ್ಲವೆ? ಹೀಗೆ ಮಾಡಬೇಕಾದರೆ ಕೆಲವರ ಕಣ್ಣಿನಲ್ಲಿ ನೀರೂ ಬರುವುದು. ಎಲ್ಲ ಆದಮೇಲೆ ಸಾವಿತ್ರಮ್ಮ ನವರು ಹೋಗಿ ಕೆರೆಯಲ್ಲಿ ಸ್ನಾನಮಾಡಿ ಹಿಂದಕ್ಕೆ ಬರುವರು. ಇದು ಇನ್ನೆಲ್ಲಿಯೂ ನಡೆಯದೆ ಇದ್ದದ್ದರಿಂದ ನಮ್ಮೂರಿನ ಕಾಮನ ಹಬ್ಬಕ್ಕೆ ನಮ್ಮ ಕಡೆ ಆಗ್ಯೆ ಹೆಚ್ಚು ಗೌರವ ಉಂಟಾಗಿತ್ತು.

೨

ಸಾವಿತ್ರಮ್ಮನವರು ಈ ವ್ರತವನ್ನು ಏಕೆ ಕೈಗೊಂಡರೆಂದು ತಿಳಿಯುವುದಕ್ಕೆ ಅವರ ಪೂರ್ವದ ಚರಿತ್ರೆಯನ್ನು ನಿಮಗೆ ಹೇಳಬೇಕು. ಸಾವಿತ್ರಮ್ಮ ಅವರ ತಂದೆತಾಯಿಗಳಿಗೆ ಒಬ್ಬಳೇ ಮಗಳಂತೆ. ಅವರು ಬಹಳ ಬಡವರಾಗಿದ್ದರು. ಮಗಳನ್ನು ನಮ್ಮೂರಿನಲ್ಲಿಯೇ ಸಂಬಂಧದಲ್ಲಿ ಒಬ್ಬರ ಮನೆಗೆ ಕೊಟ್ಟರು. ಸಾವಿತ್ರಮ್ಮನ ಮಾವ ನರಸಿಂಹಶಾಸ್ತ್ರಿಗಳು. ಗಂಡನ ಹೆಸರು ಶೀನೀ. ಮದುವೆ ಆದಾಗ ಹುಡುಗ ಹುಡುಗಿಯರಿಗೆ ಕೇವಲ ಚಿಕ್ಕ ವಯಸ್ಸು. ಸಾವಿತ್ರಮ್ಮನೂ ಶೀನಿಯೂ ಮಕ್ಕಳಂದಿನಿಂದ ಜೊತೆಯಾಗಿ ಇದ್ದವರು. ಶೀನಿಯ ಶಾಸ್ತ್ರೀಯವಾದ ಹೆಸರು ಶ್ರೀನಿವಾಸ ಶಾಸ್ತ್ರಿ. ಆದರೆ ಅವನನ್ನು ಊರೆಲ್ಲ ಶೀನೀ ಎಂದೇ ಕರೆಯುವುದು. ಸಾವಿತ್ರಮ್ಮನೂ ಶೀನೀ ಎಂದೇ ಕರೆಯುತ್ತಿದ್ದಳಂತೆ. ಮದುವೆಯಾದ ಮೇಲೂ ಅವಳು ಅವನನ್ನು ಶೀನೀ ಎಂದೇ ಕರೆಯುವಳು. ಅವನು ಅವಳನ್ನು ಸಾತೀ ಎಂದು ಕರೆಯುವನು. ಆಗ ಊರಿನವರಿಗೆಲ್ಲ ಇದು

ಒಂದು ಪರಿಹಾಸ್ಯ. ಶೀನೀಗೆ ನಾಲ್ಕು ಜನ ಅಣ್ಣಂದಿರು. ಅವರ ತಂದೆ ನರಸಿಂಹಶಾಸ್ತ್ರಿಗಳು ಆಗ್ಯೆ ತಕ್ಕಮಟ್ಟಿಗೆ ಮುದುಕರಾಗಿದ್ದರು. ಶೀನೀ ಹಳ್ಳಿಯಲ್ಲೇ ಬೆಳೆದ ಹುಡುಗ. ಓದು ಬರಹ ಕಡಿಮೆ; ಮಾಡುವುದಕ್ಕೆ ಕೆಲಸವಿಲ್ಲ; ಬಾಲ್ಯದಲ್ಲಿ ಸ್ವಭಾವವಾಗಿಯೂ ಸ್ವಲ್ಪ ತುಂಟನಾಗಿದ್ದನು. ತುಂಟ ಎಂದರೆ ಮತ್ತೇನೂ ಇಲ್ಲ, ಯಾರ ಮನೆಯ ದಾಳಿಂಬೆ ಮರದಲ್ಲಿ ಹಣ್ಣು ಬಿಟ್ಟರೂ ಅವರಿಗೆ ತಿಳಿದೋ ತಿಳಿಯದೆಯೋ ಮೊದಲ ಹಣ್ಣನ್ನು ಈತನು ಸಂಗ್ರಹಿಸುತ್ತಿದ್ದನು. ಊರಲ್ಲಿ ವರ್ಷ ವರ್ಷವೂ ಮೊದಲ ಮಾವಿನ ಹಣ್ಣು ತಿನ್ನುವವನು ಶೀನೀ. ಅವನು ದೊಡ್ಡ ಹುಡುಗನಾದ ಮೇಲೆ ಊರಿನಲ್ಲಿ ಮೊದಲು ಮಾವಿನಕಾಯಿ ಉಪ್ಪಿನಕಾಯಿ ಹಾಕುವುದು ನರಸಿಂಹಶಾಸ್ತ್ರಿಗಳ ಮನೆಯಲ್ಲಿ. ಅದು ಶೀನೀ ತಂದ ಕಾಯಿ. ನೆಲ್ಲೀಕಾಯಿ, ಅಮಟೇಕಾಯಿ, ಮಾಗಳದಬೇರು ಎಲ್ಲಾ ಅಷ್ಟೇ. ಶೀನೀ ಇಂಥ ಕೆಲಸಕ್ಕೆ ಹೊರಟಾಗ ಉಪ್ಪಿನಕಾಯಿ ಹಾಕುವ ದಿನ ಬಂತೆಂದು ಎಲ್ಲರಿಗೂ ಜ್ಞಾಪಕ. ಬೇಕಾದವರು ಅವನ ಜೊತೆಗೂ ಹೋಗುವರು. ಅವನು ಅವರಿಗೂ ಅಷ್ಟು ಕಾಯಿ ಸರಿಮಾಡಿ ಕೊಡುವನು. ದೇವಸ್ಥಾನದಲ್ಲಿ ಉತ್ಸವದ ದಿನಗಳಲ್ಲಿ ಗಂಟೆ ಬಾರಿಸುವುದು, ಕೂಗಾಡುವುದು, ಈ ಕೆಲಸ ಶೀನೀದು. ಅದಕ್ಕೆ ಇವನನ್ನು ಯಾರೂ ನೇಮಿಸಿರಲಿಲ್ಲ. ಅವನೇ ಅದನ್ನು ಕೈಗೊಂಡು ದಿನವೂ ಅರ್ಚಕನಿಂದ ಇದಕ್ಕಾಗಿ ಎರಡು ಕಾಯಿ ಹೋಳು ವಸೂಲುಮಾಡುವನು. ಊರಿನಲ್ಲಿ ಯಾವ ಜಗಳ ನಡೆದರೂ ಅದರಲ್ಲಿ ಶೀನೀ ಇರಲೇ ಬೇಕು. ಇಲ್ಲ ಜಗಳ ಮಾಡುತ್ತಿರಬೇಕು. ಇಲ್ಲ ಜಗಳ ಬಿಡಿಸುತ್ತಿರಬೇಕು. ಮದುವೆಯಾದ ಮೇಲೆ ಹುಡುಗುತನ ಬಿಡುವನೆಂದು ಮನೆಯವರು ತಿಳಿದುಕೊಂಡಿದ್ದರು. ಆಗಲೂ ಅದು ಬಿಡಲಿಲ್ಲ. ಇಷ್ಟಬಂದಂತೆ ಬೆಳೆದು ಹಡುಗ ಒಳ್ಳೆ ಪುಷ್ಟಿಯಾಗಿ ತುಂಬಿ ಗಟ್ಟಿಯಾಗಿದ್ದನು. ಒಂದು ಸಲ ಇವನು ಜಗಳ ಬಿಡಿಸುವುದಕ್ಕೆ ಹೋಗಿ ಯಾರೋ ಕುಡುಗೋಲಿನಿಂದ ಹೊಡೆದು ಇವನ ಮುಖದಮೇಲೆ ಹುಬ್ಬುಗಳ ನಡುವೆ ಒಂದು ಗಾಯವಾಗಿತ್ತು.

ಸಾವಿತ್ರಮ್ಮನಿಗೆ ಶೀನೀಗೆ ಮದುವೆಯಾದ ಎರಡು ವರ್ಷದ ಮೇಲೆ ಅವಳ ತಂದೆತಾಯಿ ಇಬ್ಬರೂ ಯಾವುದೋ ಒಂದು ರೀತಿಯ

ಜ್ವರ ಬಂದು ತೀರಿಹೋದರು. ಸಾವಿತ್ರಮ್ಮ ಬಂದು ಮಾವನ ಮನೆಯಲ್ಲಿ ನಿಂತಳು. ತಂದೆಯ ಕಡೆಯಿಂದ ಅವಳಿಗಿದ್ದದ್ದು ಅವರಿದ್ದ ಒಂದು ಹಳೆಯ ಮನೆ ಮಾತ್ರ. ಹುಡುಗಿ ಮಾವನ ಮನೆಯಲ್ಲೇ ದೊಡ್ಡವಳಾದಳು. ಆಮೇಲೆ ಎರಡು ವರ್ಷವಾದರೂ ನಿಷೇಕಪ್ರಸ್ತ ನಡೆಯಲಿಲ್ಲ. ಮಾವನ ಮನೆಯವರು ಅಷ್ಟೇನೂ ಐಶ್ವರ್ಯವಂತರಲ್ಲ. ಒಂದು ಮದುವೆ, ಒಂದು ಪ್ರಸ್ತ, ಒಂದು ಚೌಲ, ಒಂದು ಉಪನಯನ, ಹೀಗೆ ನಾಲ್ಕಾರು ಸಂದರ್ಭ ಸೇರುವಂತೆ ಕಾಲ ನೋಡಿಕೊಂಡು ಇಂಥ ಪ್ರಸ್ತ ನಡೆಯಿಸಬೇಕು. ಇದರಿಂದ ಅದು ಸಾವಕಾಶವಾಯಿತು. ಹೀಗಿರುತ್ತಿರುವಲ್ಲಿ ಶಿವಗಂಗೆಯ ಸ್ವಾಮಿಗಳು ದೇಶಾಟನಕ್ಕಾಗಿ ಹೊರಟು ಹೊಳೇನರಸೀಪುರಕ್ಕೆ ದಯಮಾಡಿಸಿದರು. ನಮ್ಮೂರಿಂದ ಜನ ಸ್ವಾಮಿಗಳ ದರ್ಶನಕ್ಕೆಂದು ಹೊಳೇನರಸೀಪುರಕ್ಕೆ ಹೋದರು. ನರಸಿಂಹಶಾಸ್ತ್ರಿಗಳೂ ಅವರ ಸಂಸಾರವೂ ಒಂದು ದಿನ ಹೋದರು. ಶೀನೀ ಹೋಗಿ ಮಠದ ಗುಂಪಿನಲ್ಲಿ ಸೇರಿದ; ಸ್ವಾಮಿಗಳ ಶುಶ್ರೂಷೆಮಾಡಿದ; ಮೂರು ದಿನದ ಮೇಲೆ ಗುರುಗಳು ಮುಂದಕ್ಕೆ ಹೊರಟಾಗ ಅವರೊಂದಿಗೆ ಹೊರಟ. ತಂದೆತಾಯಿಗಳು ಎಷ್ಟು ದೂರ ಹೋಗುತ್ತೀಯಪ್ಪಾ ಎಂದು ಕೇಳಿದರು. ಏಳೆಂಟು ದಿನ ಸ್ವಾಮಿಗಳ ಜೊತೆಯಲ್ಲಿದ್ದು ಬರುತ್ತೇನೆ ಎಂದು ಶೀನೀ ಉತ್ತರ ಹೇಳಿದ.

ಸಾತಮ್ಮನಿಗೆ ಗಂಡನೆಂದರೆ ಪಂಚಪ್ರಾಣ. ಅವಳಿಗೆ ತನ್ನದೆನ್ನುವುದು ಇನ್ನು ಯಾವುದೂ ಇಲ್ಲದೆ ಹೋಗಿತ್ತು. ಗಂಡನೊಬ್ಬನೇ ತನ್ನ ವಸ್ತು. ಮಾವ ಅತ್ತೆ ಎಲ್ಲ ಗಂಡನಿಂದ ನೆಂಟರು. ಹತ್ತು ವರ್ಷದ ಹುಡುಗಿ ಮಾವನ ಮನೆಗೆ ಬಂದು ಐದು ವರ್ಷ ಸದಾ ಅವನನ್ನೇ ನೋಡುತ್ತ ಅವನು ಮನೆಯಲ್ಲಿಲ್ಲದಾಗಲೆಲ್ಲ ಅವನನ್ನು ನೆನೆಯುವುದೇ ಅವಳಿಗೆ ವಾಡಿಕೆಯಾಗಿ ಹೋಗಿತ್ತು. ಹೊಳೇನರಸೀಪುರದಲ್ಲಿ ಅಂದು ಗಂಡನು ಗುರುಗಳೊಂದಿಗೆ ಹೋಗುತ್ತೇನೆಂದಾಗ ಅವಳ ಮನಸ್ಸಿಗೆ ಏನೋ ಭಯ ತಟ್ಟಿತು. ಆದರೆ ಅವರು ಆಗ ಇದ್ದ ಸ್ಥಿತಿಯಲ್ಲಿ ಅವಳು ಅವನನ್ನು ಯಾವ ಮಾತನ್ನೂ ಕೇಳುವಂತಿಲ್ಲ. ಅವನು ಏನನ್ನೂ ಹೇಳುವಂತಿಲ್ಲ. ಅವನು ಹಾಗೆ ಗುರುಗಳ ಜೊತೆಯಲ್ಲಿ ಹೋಗಲು ಸಾವಿತ್ರಮ್ಮ ಹೀಗೆ ಎಲ್ಲರೊಂದಿಗೆ ಊರಿಗೆ ಬಂದಳು.

ಗುರುಗಳೊಂದಿಗೆ ಹೋದ ಶೀನೀ ಹಿಂದಕ್ಕೆ ಬರಲಿಲ್ಲ. ಎಂಟು ದಿನವಾಯಿತು. ಒಂದು ತಿಂಗಳಾಯಿತು. ನಾಲ್ಕು ತಿಂಗಳಾಯಿತು. ಅವನ ಸುಳಿವಿಲ್ಲ. ಆದರೆ ಮನೆಯಲ್ಲಿ ಯಾರೂ ವಿಶೇಷ ಯೋಚನೆಮಾಡಲಿಲ್ಲ. ಹುಡುಗ ಊರಲ್ಲಿದ್ದರೆ ಪೋಲೀ ತಿರುಗುತ್ತಿದ್ದ, ಗುರುಗಳೊಂದಿಗಿದಾನೆ, ಬರುತ್ತಾನೆ, ಎಂದು ತಂದೆತಾಯಿಗಳು ಹೇಳಿಕೊಳ್ಳುತ್ತಿದ್ದರು. ಸಾವಿತ್ರಮ್ಮನಿಗಾದರೋ ಈ ಮಾತುಗಳಿಂದ ಸಮಾಧಾನ ಬರಲಿಲ್ಲ. ತಾನು ಗಂಡಸಾಗಿದ್ದರೆ ಹೋಗಿ ಅವನನ್ನು ಹುಡುಕಿಕೊಂಡು ಬರಬಹುದಾಗಿತ್ತು ಎಂದು ಒಂದೆರಡು ಸಲ ಎಂದುಕೊಂಡಳು. ಅದು ತನ್ನ ಕೈಯಲ್ಲಾಗುವ ಕೆಲಸವಲ್ಲ. ಕೈಯಲ್ಲಾದದ್ದು ಗೌರೀಪೂಜೆ. ಗಂಡ ಎಂದು ಬರುವನೋ ಎಂದು ನಿರೀಕ್ಷಿಸುತ್ತ ಅವಳು ದಿನವೂ ಪೂಜೆ ಮಾಡುವಳು. ಒಂದು ವರ್ಷ ಕಳೆದರೂ ಶೀನೀ ಹಿಂದಕ್ಕೆ ಬಾರದಿರಲು ಮನೆಯವರಿಗೂ ಸ್ವಲ್ಪ ಕಳವಳವುಂಟಾಯಿತು. ಹಿರಿಯಣ್ಣ ಅಲ್ಲಿ ಇಲ್ಲಿ ವಿಚಾರಿಸಿ, ಸ್ವಾಮಿಗಳು ದೇಶಾಟನ ಮುಗಿಸಿಕೊಂಡು ಮಠಕ್ಕೆ ಬಂದರಂತೆ, ಎಂದನು. ಹಾಗಾದರೆ ಇನ್ನು ಕೊಂಚದಿನಕ್ಕೆ ಶೀನೀ ಬರಬಹುದೆಂದು ನಿರೀಕ್ಷಿಸಿದ್ದಾಯಿತು; ಅವನು ಬರಲಿಲ್ಲ. ಹೋಗಿ ವಿಚಾರಿಸಿಕೊಂಡು ಬರೋಣ ಎಂದು ಹಿರಿಯಣ್ಣನಾದವನು ಹೋಗಿ ಬಂದನು. ಸ್ವಾಮಿಗಳ ಜೊತೆಯಲ್ಲಿ ಹಿಂದಿರುಗಿ ಬಂದವರು ಶೀನಿಯನ್ನು ಬಲ್ಲರು. ಸ್ವಾಮಿಗಳು ಕಾಶೀ ನಗರ ವನ್ನು ಸೇರಿ ಅಲ್ಲೇ ಇರುವವರೆಗೆ ಅವನು ಜೊತೆಯಲ್ಲಿಯೇ ಇದ್ದನಂತೆ. ಸ್ವಾಮಿಗಳು ಅಲ್ಲಿಂದ ಹಿಂದಿರುಗಲು ಅವನೂ ಅವನ ಜೊತೆಗೆ ಇನ್ನೊಬ್ಬನೂ ಬದರಿಕಾಶ್ರಮಕ್ಕೆ ಹೋಗಿ ಬರುತ್ತೇವೆಂದು ಹೊರಟರಂತೆ. ಎಲ್ಲರೂ "ಎಲಾ ಬದರಿಕಾಶ್ರಮವೆಲ್ಲಿ? ನೀನೆಲ್ಲಿ?" ಎಂದರೆ ಕೇಳಲಿಲ್ಲ. ಹೀಗೆಂದು ಇವನಿಗೆ ಸಮಾಚಾರ ತಿಳಿಯಿತು. ಹಿರಿಯಣ್ಣ ಬಂದು ತಂದೆಗೆ ಹೇಳಿದನು.

ಎಲ್ಲರೂ ಹುಡುಗನ ಆಸೆಯನ್ನು ಬಿಟ್ಟರು. ಸಾವಿತ್ರಮ್ಮ ಚಿಂತೆಗೆ ಸಿಕ್ಕಿ ದಿನಗಳನ್ನು ಎಣಿಸತೊಡಗಿದಳು.

ನಾಲ್ಕು ವರ್ಷವಾಯಿತು. ಶೀನೀ ಹಿಂದಿರುಗಿ ಬರಲಿಲ್ಲ. ಇಷ್ಟರಲ್ಲಿ ಮನೆಯಲ್ಲಿ ಅತ್ತೆಗೂ ಇತರ ಸೊಸೆಯರಿಗೂ ಸರಿಹೋಗದೆ ಭಾಗವಾಗುವ ಮಾತು ಬಂದಿತು. ಆಗ ಶೀನಿಗಾಗಿ ಒಂದು ಭಾಗ ಇಡುವುದೇ ಬಿಡು

ವುದೇ ಎಂದು ಸಮಸ್ಯೆ ಹುಟ್ಟಿತು. ಆಸ್ತಿ ಇದ್ದದ್ದು ಕೊಂಚ. ಹಂಚಿಕೊಳ್ಳುವವರು ಕಡಮೆಯಾದಷ್ಟೂ ಒಳ್ಳೆಯದು. ಅಣ್ಣತಮ್ಮಂದಿರು, "ಏನಾದನೋ, ಬದರಿಕಾಶ್ರಮಕ್ಕೆ ಹೋದರೆ ತಾನೇ ಇಷ್ಟು ದಿನ ಬರದೆ ಇರುತ್ತಾರೆಯೆ? ಕಳ್ಳರು, ಕಾಕರು, ರೋಗ, ರುಜಿನ" ಎಂದರು. ಸಾವಿತ್ರಮ್ಮನಿಗೆ ಹೊಟ್ಟೆಯಲ್ಲಿ ಬೆಂಕಿಹಾಕಿದ ಹಾಗಾಯಿತು. ಹೀಗೆಯೇ ಇರುತ್ತಿರುವಲ್ಲಿ ಮನೆಯ ಯಜಮಾನ ತೀರಿಹೋಗಿ ಭಾಗಗಳಾಗಲೇ ಬೇಕಾಯಿತು. ಭಾವ ಮೈದ ಮೊದಲಾದವರು ಜಗಳಮಾಡಿ ಶೀನಿ ತೀರಿಹೋಗಿರಬೇಕೆಂದು ನಿಶ್ಚಯಿಸಿ ಪಂಚಾಯಿತರನ್ನು ಹೇಗೋ ಒಪ್ಪಿಸಿ ಸಾವಿತ್ರಮ್ಮನಿಗೆ ಮತ್ತು ತಮ್ಮ ತಾಯಿಗೆ ಜೀವನಾಂಶವೆಂದು ಏರ್ಪಾಡು ಮಾಡಿ ತಾವು ಬೇರೆ ಬೇರೆಯಾದರು. ಸಾವಿತ್ರಮ್ಮ ಅತ್ತೆಯೊಂದಿಗೆ ತನಗೆ ತಂದೆತಾಯಿಗಳಿಂದ ಬಂದಿದ್ದ ಮನೆಯಲ್ಲಿ ನಿಂತಳು. ಆಗ್ಗೆ ಸಾವಿತ್ರಮ್ಮನಿಗೆ ಸುಮಾರು ಇಪ್ಪತ್ತೆರಡು ವರ್ಷ.

ಇದಾದ ಕೊಂಚ ದಿನದಮೇಲೆ ಮನೆಯ ಹಿರಿಯಣ್ಣ ಎಲ್ಲಿಗೋ ಹೋಗಿದ್ದವನು, ಶೀನಿಯ ಜೊತೆಗೆ ಬದರಿಕಾಶ್ರಮಕ್ಕೆ ಹೋಗಿದ್ದಾತ ಹಿಂದಕ್ಕೆ ಬಂದನೆಂದೂ ಶೀನಿ ಕಲಿಕತ್ತೆಯ ಬಳಿ ತೀರಿಹೋದನೆಂದು ಹೇಳಿದನೆಂದೂ ತಾಯಿಗೆ ಹೇಳಿಕಳುಹಿಸಿದನು. ಆದೀತೆಂದು ಹೆದರಿದ್ದದ್ದು ಆಗಿಯೇಹೋಯಿತು ಎಂದು ಸಾವಿತ್ರಮ್ಮ ವಿಧವೆಯ ವೇಷವನ್ನು ಅಂಗೀಕರಿಸಿದಳು. ಅತ್ತೆ ಭಾವ ಊರಿನ ಜನ ಎಲ್ಲರೂ ಬೇಡಬೇಡ ಎಂದರು; ಗಂಡ ದೇಶಾಂತರ ಹೋದರೆ ಈ ವೇಷ ಯಾಕೆ ಎಂದರು. ಸಾವಿತ್ರಮ್ಮ ಕೇಳಲಿಲ್ಲ. "ಏನಾಯಿತು ಎಂತ ತಿಳಿಯದೆ ಇದ್ದಾಗ ಎಲ್ಲಾದರೂ ಸುಖವಾಗಿರಲಿ ಎಂತ ನಾನು ಅರಿಸಿನ ಕುಂಕುಮ ಹಚ್ಚಿಕೊಳ್ಳುತ್ತಾ ಇದ್ದೆ. ನನಗೇನು ಆಸೆಯಿಲ್ಲವೆ? ಆದರೆ ನನಗೆ ಪ್ರಾಪ್ತಿಯಿಲ್ಲ. ಅವರು ಹೋದರು ಎಂದಮೇಲೆ ನಾನು ಹೋದ ಹಾಗೆಯೇ. ನನಗೇಕೆ ಸೊಗಸು? ನಾನು ಕೂದಲಿಟ್ಟುಕೊಂಡು ಅವರು ನರಕದೊಳಗೆ ಯಾಕೆ ಇರಬೇಕು" ಎಂದರು. ಈ ಜನ್ಮದಲ್ಲಿ ಸೇವೆ ಮಾಡುವುದಕ್ಕೆ ಸಿಕ್ಕದೆ ಹೋದ ಅವಕಾಶ ಮುಂದಿನ ಜನ್ಮಕ್ಕೆ ಸಿಕ್ಕಲಿ ದೇವರೇ ಎಂದು ತಮಗೆ ತಿಳಿದ ವ್ರತಗಳನ್ನೆಲ್ಲಾ ಮಾಡುವುದಕ್ಕೆ ಮೊದಲುಮಾಡಿದರು. ಕಾಮನಹಬ್ಬದ ಬೂದಿಯನ್ನು ಚೆಲ್ಲಿಸಿ

ಕೊಂಡು ಹುಡುಗರಿಂದ ಅಶುಭ ಕಾರ್ಯವನ್ನು ನಡೆಯಿಸಿಕೊಂಡರು; ಅದೂ ಈ ವ್ರತಗಳಲ್ಲಿ ಒಂದು. ಏನಾದರೂ ಮಾಡು, ಈ ಒಂದು ಅವಲಕ್ಷಣದ ವ್ರತ ಬೇಡ, ಎಂದು ಅತ್ತೆ ಬೇಡಿದರು. ಸಾವಿತ್ರಮ್ಮ ಕೇಳಲಿಲ್ಲ. "ನನಗೆ ಅವಮಾನ, ನನ್ನನ್ನು ಕಂಡರೆ ನಗುತ್ತಾರೆ, ನಾನು, ನಾನು, ಎಂತ ಮಾಡದೆ ಬಿಟ್ಟರೆ ಪತಿಭಕ್ತಿ ಏನು ತೋರಿಸಿದ ಹಾಗಾಯಿತು? ಅವರು ಇದ್ದಿದ್ದರೆ ಹೊಡೆದರೆ ಬೇಡಾ ಎಂದಿತ್ತೆ? ಬೈದರೆ ಬೇಡಾ ಎಂದಿತ್ತೆ? ಅದಕ್ಕೆಲ್ಲಾ ಅವಮಾನ ಎನ್ನುತ್ತಿದ್ದೆನೆ? ಯಾರು ನಕ್ಕರೆ ನನಗೇನು" ಎಂದು ಹೇಳಿದರು.

೩

ನಾನು ಈ ಹಬ್ಬದಲ್ಲಿ ಸೇರಿದ್ದ ಕಡೆಯ ಸಲ ಅದು ನಡೆದಷ್ಟು ಸೊಗಸಾಗಿ ನಮ್ಮೂರಲ್ಲಿ ಕೂಡ ಇನ್ನು ಯಾವಾಗಲೂ ನಡೆದಂತೆ ನನಗೆ ಜ್ಞಾಪಕವಿಲ್ಲ. ನಾವೆಲ್ಲ ಹುಡುಗರು ಒಟ್ಟಿಗೆ ಸೇರಿ ಮನೆಮನೆಗೂ ಹೋಗಿ ಮನೆಯ ಮುಂದೆ ಬಾಯಿ ಬಡಿದುಕೊಂಡು ಸೌದೆಯ ಭಿಕ್ಷೆ ಕೇಳುವುದು ವಾಡಿಕೆ. ಈ ಹಬ್ಬದ ದಿನ ಮನೆಯ ಮುಂದೆ ಬಾಯಿ ಬಡಿದುಕೊಂಡರೆ ವರ್ಷವೂ ನಗುತ್ತ ಇರಬಹುದು ಎಂದು ನಮ್ಮ ಜನರಲ್ಲಿ ನಂಬಿಕೆ ಇದೆಯಷ್ಟೆ. ನನ್ನ ಜೊತೆಗೆ ಇದ್ದ ಒಂದೈದಾರು ಜನ ಈಗ ಅಲ್ಲಲ್ಲಿ ಬಹು ದೊಡ್ಡ ಮನುಷ್ಯರಾಗಿ ಗೌರವಸ್ಥರೆನಿಸಿಕೊಂಡಿದಾರೆ. ಇವರು ಕಾಮನಹಬ್ಬದ ಈ ಜಂಟಿ ಗೌರವದ ಹುದ್ದೆಯಲ್ಲಿದ್ದಾಗ ಬಹಳ ದಕ್ಷರೆನಿಸಿಕೊಂಡರು. ನಾನೂ ತಕ್ಕಮಟ್ಟಿಗೆ ಗದ್ದಲಕ್ಕೆ ಸಹಾಯಮಾಡುತ್ತಿದ್ದೆನು. ಅಶುಭದ ಶಬ್ದ ಮಾಡುವುದರಲ್ಲಿಯೂ ಒಂದು ಕೌಶಲವಿದೆ. ಅದಕ್ಕೂ ಒಂದು ಪರಿಶ್ರಮ ಬೇಕು. ನಮಗೆ ಹಿರಿಯರಾಗಿದ್ದವರಿಂದ ನಾವು ಆ ವಿದ್ಯೆಯನ್ನು ಕಲಿತು ವರ್ಷಾಂತರ ಅಭ್ಯಾಸಮಾಡಿದ್ದರಿಂದ ನಾವೆಲ್ಲ ಸೇರಿ ಲಬೋ ಲಬೋ ಎಂದು ಕೂಗಿದಾಗ ಉಂಟಾದ ಶಬ್ದವು ಭೀಕರವಾಗಿದ್ದರೂ ಕೇಳುವುದಕ್ಕೆ ಅಸಹ್ಯವಾಗಿರುತ್ತಿರಲಿಲ್ಲ. ನಾವು ತಿಳಿದುಕೊಂಡಿದ್ದದಂತೂ ಹಾಗೆ. ಅಲ್ಲದೆ ಕಾಮನಹಬ್ಬದ ಸಂಭ್ರಮದಲ್ಲಿ ನಮ್ಮ ಭೀಮನಂತಹವರ ಕವಿತೆಯ ಒನಕೆ ಚಿಗುರಿ ಒಂದು ರೀತಿಯ ಪದ್ಯ ಉಂಟಾಗಿತ್ತು.

'ಬೋಲಬೋಲ ಬಸಪ್ಪ ನಿಮ್ಮಪ್ಪ ಸತ್ತರೆ ಲಬೋಲಬೋ' ಎನ್ನುವುದು ಅದರ ಮುಖ್ಯ ಭಾಗ. ಇದು ಈಚೆಗೆ ನಮ್ಮೂರಿಂದ ಬೇರೆ ಊರುಗಳಿಗೂ ಹರಡಿದೆ ಎನ್ನಿ. ನಾವೆಲ್ಲ ಸೇರಿ ಇದನ್ನು ಒಟ್ಟಿಗೆ ಕೂಗಿದಾಗ ಅದರ ಸೊಗಸನ್ನು ನೋಡಿ ನಮಗೇ ಆನಂದ. ಆ ವರ್ಷ ನಾನೂ ಇನ್ನು ಕೆಲವರೂ ಲೋವರ್ ಸೆಕಂಡರೀ ಪರೀಕ್ಷೆಗೆ ಕಟ್ಟಿದ್ದೆವು. ಪ್ಯಾಸಾದಮೇಲೆ ಒಬ್ಬೊಬ್ಬರದು ಒಂದೊಂದು ದಾರಿ. ಈ ಕಾಮನಹಬ್ಬ ನಮಗೆ ಕೊನೆಯ ಹಬ್ಬ ಎಂದು ಬಹಳ ಮೆಹನತ್ತು ಮಾಡಿದೆವು. ಅಲ್ಲದೆ ಸೌದೆಯ ಸಂಪಾದನೆಯಲ್ಲಿ ಆ ಸಲ ಅಡಚಣೆ ಸ್ವಲ್ಪ ಹೆಚ್ಚಾದದ್ದರಿಂದ ಮೆಹನತ್ತೂ ಹೆಚ್ಚಾಯಿತು. ಕಲ್ಲುಬಂಡೆಗಳು ಅಡ್ಡಬಂದಾಗ ಘೋಷವನ್ನು ಹೆಚ್ಚಿಸುವ ಪ್ರವಾಹದಂತೆ ನಮ್ಮ ಲಬೋಲಬೋ ಶಬ್ದವು ಉಬ್ಬಿ ಮೊರೆಯಿತು. ನಾರಾಯಣ ಶಾಸ್ತ್ರಿಗಳು ಮನೆಯ ಒಂದಂಕಣವನ್ನು ಕೀಳಿಸಿ ಹೊಸದಾಗಿ ಕಟ್ಟಬೇಕೆಂದು ಒಂದಷ್ಟು ತೊಲೆ ದೂಲ ತರಿಸಿ ಹಾಕಿಕೊಂಡಿದ್ದರು. ಸಾಮಾನ್ಯವಾಗಿ ಅವರು ಕೊಡುತ್ತಿದ್ದದ್ದು ಒಂದು ಕೊರಡು. ಆ ವರ್ಷ, ಮನೆ ಕೀಳಿಸಿದ ಮಹಾರಾಯ ಕೊರಡಿನ ಜೊತೆಗೆ ಹಳೇ ಗಳ ಕೆಲವು ಕೊಡಿ, ಎಂದು ನಾವು ಕೇಳಿದೆವು. ಅವರು ಕೊರಡನ್ನೂ ಕೊಡುವುದಿಲ್ಲ ಎಂದರು. ತಂಟೆಗೆ ಬಂದಿತು. ಎಷ್ಟು ಮಾತನಾಡಿದರೂ ಅವರು ನ್ಯಾಯಕ್ಕೆ ಒಪ್ಪಲಿಲ್ಲ. ಅಷ್ಟರಲ್ಲಿ ಲಂಗಡಾ ಭೀಮ—ಅವನೇ ನಮ್ಮ ಒನಕೇ ಚಿಗುರಿನ ಕವಿ— ನಾವು ಇತ್ತಲಾಗಿ ಮಾತನಾಡುತ್ತಿದ್ದರೆ ಅತ್ತಲಾಗಿ ಶಾಸ್ತ್ರಿಗಳ ಮನೆಯ ಹಿತ್ತಲ ಕಡೆಯಿಂದ ಒಳಕ್ಕೆ ಹೊಕ್ಕು, ತಾನು ಹೊರುವಷ್ಟು ಗಳ ಒಂದು ಸಣ್ಣ ಕಂಬ, ಇಷ್ಟನ್ನು ಕಂಕುಳಲ್ಲಿರಿಸಿಕೊಂಡು ಕಾಮನನ್ನ ಸುಡುವ ಕಡೆಗೆ ನಡೆದುಬಿಟ್ಟನು. ಮೊದಲು ನಾವು ಮೋಸಮಾಡಬೇಕೆಂದು ಉದ್ದೇಶಿಸದೇ ಇದ್ದರೂ ಮೋಸ ನಡೆದಮೇಲೆ ನಮ್ಮವರನ್ನು ಬಿಟ್ಟುಕೊಡುವುದೇ? ನಾವು ಕಂಡೂ ಕಾಣದಂತಿದ್ದು ಶಾಸ್ತ್ರಿಗಳೊಡನೆ ಇನ್ನೆರಡು ಮಾತನಾಡಿ "ಒಳ್ಳೆಯದು ಶಾಸ್ತ್ರಿಗಳೇ ನಿಮಗೇಕೆ ಅಸಮಾಧಾನ, ನೀವು ಮನೆಕಟ್ಟು ವವರು, ಆ ಸೌದೆ ತುಂಡು ತೊಲೆಯೋ ಜಂತೆಯೋ ಆಗಬಹುದು, ಇಟ್ಟು ಕೊಳ್ಳಿ" ಎಂದು ಹೇಳಿ ಹೊರಟುಹೋದೆವು. ನಮ್ಮ ಮಾತಿನ ವೈಖರಿ ಯಿಂದ ಶಾಸ್ತ್ರಿಗಳು ಸ್ವಲ್ಪ ಬೆರಗಾದರೆಂದು ಕಾಣುತ್ತದೆ. ಸಾಯಂಕಾಲ

ಹಿತ್ತಲ ಕಡೆ ಹೋದಾಗ ಗಳ ಕಂಬ ಮಾಯವಾಗಿರುವುದನ್ನು ನೋಡಿದರು; ಖರದೂಷಣರಂತೆ ಭೋಯೆನ್ನುತ್ತ ಕಾಮನ್ನ ಸುಡುವ ಕಡೆಗೆ ನುಗ್ಗಿ ಬಂದರು. ನಮ್ಮ ಕಾವಲವರು ಕೂಗು ಹಾಕಲು ಕಾಷ್ಠ ಸಂಪಾದನೆಗೆ ಹೋಗಿದ್ದ ನಾವೆಲ್ಲ, ಪರಕೆ ಒಬ್ಬರ ಕೈಯಲ್ಲಿ ಹಳೀಮೊರ ಒಬ್ಬರ ಕೈಯಲ್ಲಿ ಎರಡು ಬೆರಣಿ ಒಬ್ಬರ ಕೈಯಲ್ಲಿ ಹಿಡಿದುಕೊಂಡು, ಓಡಿಬಂದೆವು. ದೊಡ್ಡ ವಾಗ್ಯುದ್ಧವಾಯಿತು. ಶಾಸ್ತ್ರಿಗಳು, ನನ್ನ ಗಳ ಕಂಬ ಈ ಹೊತ್ತು ಸುಟ್ಟರೆ ನಿಮ್ಮ ಬುರುಡೆ ಒಡೆಯುತ್ತೀನೆ, ಎಂದರು. ಲಂಗಡಾ ಭೀಮ ಮತ್ತೆ ಕವಿಯಾದ. "ಬುರುಡೆ ಒಡೆಯುವುದು ಸುಳ್ಳು, ಬುರುಡೆ ಹೊಡೆಯುತ್ತೀರಿ" ಎಂದ. ತಿರುಮಳ "ಬುರುಡೆ ಒಡೆಯಬೇಡಿ, ಬುರುಡೆ ತೆಗೆಯಿರಿ, ಒಂದು ಚಿಟಿಕೆ ನಸ್ಯ ಕೊಡಿ," ಎಂದು ಹೇಳಿ ನಸ್ಯಹಾಕಿಕೊಳ್ಳುವಂತೆ ಶಿರ್ ಎಂದು ಉಸಿರೆಳೆದು ಶಾಸ್ತ್ರಿಗಳು ನಸ್ಯವನ್ನು ಸೇವಿಸಿದಾಗ ಆಗುತ್ತಿದ್ದ ಗದ್ದಲವನ್ನು ಅಣಕಿಸಿ ತೋರಿಸಿದನು. ಏನಾದರೂ ಶಾಸ್ತ್ರಿಗಳು ಬಿಡಲಿಲ್ಲ. ಕೊನೆಗೆ ಲಂಗಡಾ ಭೀಮ, ಎಲಾ ನೀವು ಶಾಸ್ತ್ರಿಗಳನ್ನ ಇಲ್ಲೇ ಹಿಡಿದುಕೊಂಡಿರಿ, ಇನ್ನೂ ಇರೋ ಗಳ ಕಂಬ ಎಲ್ಲಾ ತಂದುಬಿಡುತ್ತೀನೆ, ಎಂತ ಶಾಸ್ತ್ರಿಗಳ ಮನೆಯಕಡೆ ಹೊರಟ. ಶಾಸ್ತ್ರಿಗಳಿಗೆ ಬುದ್ಧಿಬಂತು. ಈಗ ಹೋದದ್ದಲ್ಲದೆ ಇನ್ನು ಬೇರೆ ಹೋಗುವುದೇನೋ ಎಂದು ಅವರು ಭೀಮನನ್ನು ಬಹು ವಿಧವಾಗಿ ಆಶೀರ್ವದಿಸುತ್ತ ಅವನ ಹಿಂದೆ ಹೊರಟರು. ಭೀಮ ಆ ಪ್ರಯತ್ನ ಮಾಡಿದ್ದೂ ಶತ್ರುವನ್ನು ಬೇರೇಕಡೆ ತಿರುಗಿಸುವುದಕ್ಕಾಗಿಯೇ. ಇಂಥ ಪ್ರತ್ಯುತ್ಪನ್ನಮತಿಯಿಂದಲಲ್ಲವೇ ಶಿವಾಜಿ, ಪೃಥ್ವೀರಾಜ, ಸೀಜರ್ ಮುಂತಾದ ಸೇನಾನಾಯಕರು ಯುದ್ಧಗಳನ್ನು ಗೆದ್ದು ಚರಿತ್ರೆಯಲ್ಲಿ ಪ್ರಸಿದ್ಧರಾದದ್ದು. ಭೀಮನ ಅದೃಷ್ಟ ಕೆಟ್ಟದು. ಅವನು ಈ ಕಾಲದಲ್ಲಿ ಹುಟ್ಟಿ ಅವನ ಬುದ್ಧಿಯೆಲ್ಲಾ ಒಂದಿಷ್ಟು ಕಾಮನ ಕಟ್ಟಿಗೆ ಸಂಪಾದಿಸುವುದರಲ್ಲಿ ವೆಚ್ಚವಾಯಿತು. ಶಾಸ್ತ್ರಿಗಳು ಗಳಕ್ಕೆ ತಂಟೆ ಮಾಡಿದಂತೆ ಕಸದ ಹೆಂಗಸು ಬೋರಿ ಹಳೀಪರಕೆಗೆ ತಂಟೆಮಾಡಿದಳು. ಹೀಗೆಯೇ ಇನ್ನೂ ಬೇರೆ ಕೆಲವು ಕಡೆಯೂ ತಂಟೆಯಾಯಿತು. ನಾವು ಅಲ್ಲೆಲ್ಲ ಸಾಫ್ ಯುದ್ಧಮಾಡಿ ಕಸ್ಸ ತೆಗೆದುಕೊಂಡೇ ಬಂದೆವು. ಹಾಗೂ ಹೀಗೂ ರಾಶಿ ದೊಡ್ಡದಾಯಿತು.

ರಾತ್ರಿ ರಾಶಿಗೆ ಬೆಂಕಿಹಚ್ಚಿದ್ದನ್ನೂ ರಾಶಿ ಉರಿದದ್ದನ್ನೂ ಹೀಗೆಂದು ನಾನು ವರ್ಣಿಸಬೇಕಾದದ್ದಿಲ್ಲ. ಅದರ ಅಂದವನ್ನು ಹೇಳುವುದಕ್ಕೆ ನನಗೆ ಮಾತು ತಿಳಿಯದು. ನಾವು ಕಾಮನನ್ನು ಸುಡುತ್ತಿದ್ದದ್ದು ಊರಿನ ಪಕ್ಕದ ಒಂದು ಬಯಲಿನಲ್ಲಿ. ನಮ್ಮೂರಿಗೆ ಹೋಗಿಬರುವ ದಾರಿ, ಬಾವಿ ತೋಟಕ್ಕೆ ಹೋಗುವ ದಾರಿ, ಆ ಬಯಲಿನಲ್ಲಿ ಹಾದು ಹೋಗುವುದು. ಅಲ್ಲಿ ನಾಲ್ಕೈದು ಅಶ್ವತ್ಥಮರಗಳಿವೆ. ಒಂದು ಕಡೆ ಒಂದು ಆಂಜನೇಯ ದೇವಾಲಯ. ದೂರದಲ್ಲಿ ದಾರಿ ಹಾದು ಹೋಗುವ ಕೆರೆಯಕಟ್ಟೆ ಕಾಣಿಸುತ್ತದೆ. ಕಾಮನನ್ನು ಸುಡುವುದಕ್ಕೆ ಅದು ಪ್ರಶಸ್ತವಾದ ಸ್ಥಳ. ಬೆಳದಿಂಗಳಲ್ಲಿ ಮಂಕಾಗಿದ್ದ ಮನೆ ಮರ ಎಲ್ಲದರ ಮೇಲೆ ಉರಿಯಬೆಳಕು ಬಿದ್ದಾಗ ನಮಗೆ ಇದೇನು ಭೂಲೋಕವೋ ಇನ್ನೆಲ್ಲಾದರೂ ಇದೇವೋ ಎನ್ನುವಂತೆ ತೋರುತ್ತಿತ್ತು. ನಾವು ಹಾಕಿದ್ದ ರಾಶಿಯೂ ದೊಡ್ಡದಾಗಿತ್ತು. ಯಜ್ಞೇಶ್ವರನು ಆ ರಾತ್ರಿ ಊರ ಕಸವನ್ನೆಲ್ಲಾ ಸುಟ್ಟುಬಿಟ್ಟನು. ಜ್ಞಾನದಿಂದ ನಿರ್ಮಲವಾದ ಮನಸ್ಸಿನಲ್ಲಿ ಮೋಹಜಾಲ ಉರಿಯುವಂತೆ ಊರ ಹಳೆಯ ಮೊರ ಪರಕೆ ಹಳೆಯ ಮಕ್ಕರಿ ಹಳೆಯ ಕಸವೆಲ್ಲ ಆ ಬೆಳದಿಂಗಳ ರಾತ್ರಿಯಲ್ಲಿ ಉರಿದುಹೋಯಿತು. ಮಾರನೆಯ ದಿನ ಊರಲ್ಲೆಲ್ಲ ಹೊಸ ಮೊರ, ಹೊಸ ಪರಕೆ, ಹೊಸ ಮಕ್ಕರಿ; ಅಥವಾ ಹಳೆಯದು ಇದ್ದರೆ ತಿಳಿದೂ ತಿಳಿದು ಕಸವನ್ನು ಬಿಡಲಾರದೆ ಕಟ್ಟಿಕೊಂಡವರ ಮನೆಗಳಲ್ಲಿ. ಊರಿನ ಕಸವನ್ನು ಸುಡುವುದಕ್ಕೆ ಎಲ್ಲರೂ ಸೇರಿದಂತೆ ಅವರವರ ಮನಸ್ಸಿನ ಕಸವನ್ನು ಸುಡುವುದಕ್ಕೆ ಯತ್ನಮಾಡಿದ್ದಲ್ಲಿ ಊರಿನ ಬದುಕು ಅಂದು ಆ ರಾತ್ರಿಯಂತೆ ನಿರ್ಮಲವಾಗಿದ್ದಿರಬೇಕು. ಫಾಲ್ಗುಣದ ಪೂರ್ಣಚಂದ್ರನ ಸೊಗಸನ್ನು ಹೇಳಬಲ್ಲ ಕವಿ ಯಾರು? ದೇವರ ಕೃಪೆಯಿಂದ ಇಂತ ಸೊಗಸನ್ನು ವರ್ಣನೆಯಿಂದ ಕೇಳಿ ತಿಳಿಯಬೇಕಾದದ್ದಿಲ್ಲ. ಮನಸ್ಸು ಮಾಡಿದರೆ ಯಾರಾದರೂ ಅದನ್ನು ಅನುಭವಿಸಿ ಸುಖಪಡಬಹುದು. ಕಾಮನನ್ನು ಸುಡುವಾಗ ಊರಿನ ಜನವೆಲ್ಲ ಬಂದು ಸೇರಿತು. ನಾರಾಯಣ ಶಾಸ್ತ್ರಿಗಳು ಕೂಡ "ಹೋದ ಗಳ ಹೋಯಿತು; ನನ್ನ ಗಳ ಸುಡುವುದನ್ನು ಎಲ್ಲರೂ ನೋಡಿ ಸಂತೋಷಪಟ್ಟರೆ ನಾನು ಯಾಕೆ ಬಿಡಬೇಕು" ಎಂದು ತಾವೂ ಬಂದು ನಿಂತು ಸೊಗಸನ್ನು ನೋಡಿದರು. ನಾವೆಲ್ಲ ಸೊಗಸು

ಇದೆಂದು ತಿಳಿಯದೆ ಅದರಲ್ಲಿ ಮುಳುಗಿ ತೇಲಿ ನಿಜವಾದ ಆನಂದವನ್ನು ಅನುಭವಿಸಿದೆವು. ರಾತ್ರಿ ಹನ್ನೆರಡು ಗಂಟೆ ಮುಗಿದಮೇಲೆ ನಮ್ಮ ನಮ್ಮ ಮನೆಗಳಿಗೆ ಹೋದೆವು.

ಮಾರನೆಯ ದಿನ ಬೂದೀ ಕಲೆಸುವುದು ಮತ್ತು ಸಾವಿತ್ರಮ್ಮನವರ ವ್ರತ. ನಾವೆಲ್ಲ ಕಾಮನನ್ನು ಸುಟ್ಟ ಸ್ಥಳದಲ್ಲಿ ಸೇರಿದೆವು. ನಮ್ಮ ಕಿಟ್ಟು ಸಾವಿತ್ರಮ್ಮನವರನ್ನು ಕರೆಯುವುದಕ್ಕೆ ಹೋದ. ಅದಕ್ಕೆ ಮೊದಲೇ ಅವರು ಸ್ನಾನಮಾಡಿ ಸಿದ್ಧವಾಗಿದ್ದು ಹೇಳಿದೊಡನೆ ಬಂದರು; ಕುಳಿತು ಕೊಳ್ಳುವುದಕ್ಕೆ ವಾಡಿಕೆಯಾದ ಸ್ಥಳದಲ್ಲಿ ಕುಳಿತರು. ಆ ಸಲ ಸಾವಿತ್ರಮ್ಮ ನವರ ವ್ರತಕ್ಕೆ ಒಂಬತ್ತನೆಯ ವರ್ಷವೋ ಹತ್ತನೆಯ ವರ್ಷವೋ. ಸಾವಿತ್ರಮ್ಮನವರು ಬೂದಿಹಾಕಿಸಿಕೊಳ್ಳುವುದಕ್ಕೆ ಬಂದಾಗ ದಾರಿಯಲ್ಲಿ ಜನ ಬರುತ್ತಾ ಹೋಗುತ್ತಾ ಇದ್ದರು. ಎಂದಿನಂತೆ ಹೊತ್ತು ಹೋಗದ ಹತ್ತುಜನ ಅಲ್ಲಿ ನಿಂತು ನೋಡುತ್ತಿದ್ದರು. ನಾವು ಮೂರು ಜನ ವಾಡಿಕೆ ಯಂತೆ ಒಂದು ಹಿಡಿ ಬೂದಿ ತೆಗೆದುಕೊಂಡು ಸಾವಿತ್ರಮ್ಮನವರ ಬಳಿ ಬಂದೆವು. ಇನ್ನೇನು ಅವರ ಮೇಲೆ ಹಾಕಬೇಕು. ಆ ವೇಳೆಗೆ ಅವರು ಒಮ್ಮೆಗೆ ಜನದ ಕಡೆ ನೋಡಿದರು. ಒಂದು ಕ್ಷಣದಲ್ಲಿ ಎದ್ದು ನಿಂತರು. ಗುಂಪಿನ ಕಡೆಗೆ ದುರದುರನೆ ನೋಡಿ ಶೀನೀ ಎಂದು ಕೂಗುಹಾಕಿ ಕೆಳಗೆ ಬಿದ್ದುಬಿಟ್ಟರು.

ನಮಗೆ ಹಿಂದು ಮುಂದು ತೋರಲಿಲ್ಲ. ಬೂದಿಯನ್ನು ಹಿಡಿದಂತೆಯೇ ನಾವು ಸುಮ್ಮನೆ ನಿಂತಿದ್ದೆವು. ಗುಂಪಿನಿಂದ ಯಾವನೋ ಒಬ್ಬ ನಮ್ಮ ಕಡೆಗೆ ಬಂದನು. ಸಾವಿತ್ರಮ್ಮನವರ ಹತ್ತಿರಕ್ಕೆ ಬಂದು, ಇದೇನು ವೇಷ ಏನು ಅವಸ್ಥೆ ಎಂದು, ಸ್ವಲ್ಪ ನೀರು ತನ್ನಿ ಅಪ್ಪಾ ಎಂದನು. ಹುಡುಗರು ಇವನು ಯಾರು ಏನು ಎನ್ನದೆ ಅವನು ಹೇಳಿದಂತೆ ಮಾಡಿದರು. ನಾನೂ ಏನೂ ತೋರದೆ ಅವನ ಮುಖವನ್ನೇ ನೋಡುತ್ತಿದ್ದೆನು. ಅವನ ಅಂಥ ನಾದ ಆ ಹಣೆಯ ಮೇಲೆ ಇದ್ದ ಒಂದು ಗಾಯದ ಗುರುತು ಹೊರತು ನನಗೆ ಇನ್ನೇನೂ ಕಾಣಲಿಲ್ಲ.

ಬಂದವನು ಶ್ರೀನಿವಾಸಶಾಸ್ತ್ರಿ ಅಥವಾ ಶೀನೀ. ನಾವು ಬೂದಿಯನ್ನು ಹಿಡಿದುಕೊಂಡು ಸಾವಿತ್ರಮ್ಮನವರ ಬಳಿ ಬಂದಾಗ್ಯೆ ಅವನು ದಾರಿಯಿಂದ

ಬಂದು ಅಲ್ಲಿ ನಿಂತಿದ್ದ ಗುಂಪನ್ನು ಸೇರಿದನಂತೆ. ಇದೇನೋ ನಡೆಯುತ್ತಿದೆ ಯೆಂದು ನಿಂತು ಅಲ್ಲಿ ಒಬ್ಬನನ್ನು ಇದೇನೆಂದು ಕೇಳಿದನಂತೆ. ಆಗ ನಾವು ಅವನನ್ನು ನೋಡಲೂ ಇಲ್ಲ, ಏನು ನಡೆಯಿತೆಂಬುದನ್ನು ಕೇಳಲೂ ಇಲ್ಲ. ಅವನ ಮಾತಿಗೆ ಗುಂಪಿನಲ್ಲಿ ಒಬ್ಬರು, ಗಂಡ ದೇಶಾಂತರದಲ್ಲಿ ತೀರಿಹೋದ ಎಂತ ಆಕೆ ಕಾಮನ ಬೂದಿ ಚೆಲ್ಲಿಸಿಕೊಳ್ಳುತ್ತಿದಾಳೆ, ಎಂದ ರಂತೆ. "ಇವರು ಯಾರು?" "ನರಸಿಂಹಶಾಸ್ತ್ರಿಗಳ ಸೊಸೆ." "ಇವರ ಹೆಸರೇನು?" "ಸಾವಿತ್ರಮ್ಮ." "ಸಾವಿತ್ರಮ್ಮನೇ" ಎಂದು ಶ್ರೀನಿವಾಸ ಶಾಸ್ತ್ರಿ ಆಕೆಯ ಕಡೆ ನೋಡಿದನಂತೆ. ಈ ಮಾತು ನಡೆಯುತ್ತಿದ್ದಾಗಲೇ ಸಾವಿತ್ರಮ್ಮನವರು ಎದ್ದುನಿಂತು ಗುಂಪಿನ ಕಡೆ ನೋಡಿ ಕೂಗಿಕೊಂಡು ಬಿದ್ದದ್ದು. ಶ್ರೀನಿವಾಸಶಾಸ್ತ್ರಿ ಹುಡುಗರು ತಂದ ನೀರಿನಿಂದ ಹೆಂಡತಿಗೆ ಶೈತ್ಯೋಪಚಾರವನ್ನು ಮಾಡಿದನು. ಇವನು ಸಾವಿತ್ರಮ್ಮನವರ ಗಂಡ ನೆಂದು ತಿಳಿದ ಒಂದು ಕ್ಷಣ ನಾವು ಹಬ್ಬ ಅರ್ಧಕ್ಕೆ ನಿಂತುಹೋಯಿತಲ್ಲಾ ಎಂದು ಕ್ಷಣ್ಣರಾದೆವು. ಉತ್ತರ ಕ್ಷಣದಲ್ಲಿ ಆ ಸಲದ ಹಬ್ಬ ಎಂದಿಗಿಂತ ಹೆಚ್ಚಾಗಿ ಸಾಂಗವಾಯಿತೆಂದು ಉತ್ಸಾಹದಿಂದ ಜಯಘೋಷವನ್ನು ಹಾಕಿದೆವು.

ಗಂಡಂದಿರು ಹೆಂಡತಿಯರ ವಿಷಯದಲ್ಲಿ ಬಹಳ ಪ್ರೀತಿ ತೋರಿಸುವ ರೆಂದು ಜನರಲ್ಲಿ ಒಂದು ಭಾವನೆ ಇದೆ. ಪ್ರಾಯಶಃ ಇದು ನಿಜವಾದದ್ದೇ. ಆದರೆ ಅಂದು ಆ ಗಂಡನು ಆ ಹೆಂಡತಿಯಲ್ಲಿ ತೋರಿದ ಮಮತೆ ಕನಿಕರ ದಾಕ್ಷಿಣ್ಯ ಭ್ರಮೆ ಇದನ್ನೆಲ್ಲ ಒಳಗೊಂಡ ಆ ಪ್ರೇಮರಸಕ್ಕೆ ಸಮನಾದ ಪ್ರೇಮವನ್ನು ಬೇರೆ ಯಾವಾಗಲೂ ನಾನು ಕಣ್ಣಿನಲ್ಲಿ ನೋಡಿಲ್ಲ. ಸಂದರ್ಭವೂ ಅಂಥದೇ ಸರಿ.

೪

ಬಂದವನು ಶೀನೀ ಹೌದೇ ಅಲ್ಲವೇ ಎಂದು ಊರಿನಲ್ಲಿ ಒಬ್ಬಿಬ್ಬರು ಮಾತನ್ನೆತ್ತಿದರು. ಹೆತ್ತವಳೂ ಕೈಹಿಡಿದವಳೂ ಒಪ್ಪಿದಮೇಲೆ ಪಂಚಾಯಿತಿ ಏಕೆ ಎನ್ನಬಹುದು. ಆದರೆ ಆಸ್ತಿಯ ಹಂಚಿಕೆ ಮಾತು ಇದ್ದದರಿಂದ ಈ ಸಂದೇಹಕ್ಕೆ ಕಾರಣ ಉಂಟಾಯಿತು. ಶೀನೀ ಈ ಸಂದೇಹಪಟ್ಟವರ

ವಿಷಯದಲ್ಲೆಲ್ಲಾ ಅವರ ಅಪ್ಪ ತಾತ ಮುತ್ತಾತನ ಕತೆ ಎಂತೆಂತ ಅವಮಾನಕರವಾದದ್ದನ್ನೋ ಹೇಳಿದನು. ಎಲ್ಲರೂ ಬಾಯಿ ಮುಚ್ಚಿ ಕೊಂಡರು. ಆಸ್ತಿ ಮತ್ತೆ ಹಂಚಿಕೆಯಾಯಿತು.

ಶ್ರೀನಿವಾಸಶಾಸ್ತ್ರಿ ಊರಿನಲ್ಲಿ ಒಬ್ಬ ಸಂಸಾರಿಯಾಗಿ ನಿಂತನು. ಈಗ ಅವನಿಗೆ ಇಬ್ಬರು ಗಂಡುಮಕ್ಕಳಾಗಿದಾರೆ. ಈ ಸಲ ನಾನು ನಮ್ಮ ಊರಿಗೆ ಹೋಗಿದ್ದಾಗ ಶ್ರೀನಿವಾಸಶಾಸ್ತ್ರಿಯ ಪ್ರಯಾಣದ ಕತೆಯನ್ನೆಲ್ಲಾ ಕೇಳಿದೆನು. ಅವನ ಜೊತೆಯಲ್ಲಿದ್ದವನು ಅವನನ್ನು ಕಲ್‌ಕತೆಯಲ್ಲಿ ಬಿಟ್ಟುಬಂದಾಗ ಶಾಸ್ತ್ರಿ ಕಲ್‌ಕತೆಯ ಒಂದು ಛತ್ರದಲ್ಲಿ ಪ್ಲೇಗಿನಿಂದ ಸಾಯುವಂತೆ ಬಿದ್ದಿದ್ದನು. ಜೊತೆಯವನು ಅವನು ಸತ್ತನೆಂದೇ ಎಣಿಸಿಯೋ ಹೆದರಿಯೋ ಅವನನ್ನು ಮ್ಯುನಿಸಿಪಾಲಿಟಿಯವರಿಗೆ ಒಪ್ಪಿಸಿ ತಾನು ಊರಿಗೆ ಬಂದುಬಿಟ್ಟನಂತೆ. ಶಾಸ್ತ್ರಿ ಬಂದಮೇಲೆ ಅವನೂ ಅದನ್ನು ಒಪ್ಪಿಕೊಂಡನಂತೆ. ಶಾಸ್ತ್ರಿ ಕಾಯಿಲೆಯಿಂದ ಉಳಿದುಕೊಂಡು ಉತ್ತರದೇಶದಲ್ಲೆಲ್ಲಾ ಓಡಿಯಾಡಿ ಯೋಗಾಭ್ಯಾಸದ ಒಳಮರ್ಮ ವನ್ನು ತಿಳಿಯುವುದಕ್ಕಾಗಿ ಅಷ್ಟು ವರ್ಷ ಯಾರುಯಾರನ್ನೋ ಸೇವಿಸಿದ ನಂತೆ. ಅವನು ಹೇಳಿದ್ದನ್ನೆಲ್ಲಾ ಬರೆಯುವುದಕ್ಕೆ ಇಲ್ಲಿ ಅವಕಾಶವಿಲ್ಲ. ಬರೆದರೆ ಅದೇ ಒಂದು ಕತೆಯಾಗುವುದು. ಹಾಗೆಯೇ ನಾನು ಸಾವಿತ್ರಮ್ಮ ನವರನ್ನೂ ಮಾತನಾಡಿಸಿದೆನು. ವಿಧವೆಯ ವೇಷದಲ್ಲಿ ಹೇಗೋ ಇದ್ದ ಅವರ ಆಕಾರವೂ ಈಗ ಮಂಗಳಗೌರಿಯ ಪ್ರತಿಬಿಂಬದಂತಾಗಿದೆ. ವೃಥ ವ್ರತದಿಂದ ಅವರು ಯಾವ ಫಲವನ್ನು ಮುಂದಿನ ಜನ್ಮಕ್ಕೆಂದು ಬೇಡಿದರೋ ಅದನ್ನು ಈ ಜನ್ಮದಲ್ಲಿಯೇ ಪಡೆದರು. ಅವರಿಗೆ ನಮ್ಮೂರಿನಲ್ಲಿ ಈಗ ಮದುವೆ ಮುಂತಾದ ಸಂದರ್ಭದಲ್ಲಿ ಎಲ್ಲರಿಗಿಂತ ಮೊದಲು ಅರಿಸಿನ ಕುಂಕುಮ ಕೊಡುತ್ತಾರೆ; ಹೆಣ್ಣು ಮಕ್ಕಳ ಕೈಯಲ್ಲಿ ಗೌರೀಹಬ್ಬದ ಬಾಗಿನ ಗಳನ್ನು ಕೊಡಿಸುವಾಗ ಮೊದಲು ಇವರ ಹತ್ತಿರ ಕರೆತಂದು ಕೊಡಿಸಿ "ಸಾವಿತ್ರಮ್ಮ, ನಿಮ್ಮ ವ್ರತ ಧೃಢವಾದ ವ್ರತ, ನಿಮ್ಮ ಆಶೀರ್ವಾದ ಚೆನ್ನಾಗಿ ಫಲಿಸುತ್ತೆ, ಹುಡುಗಿಗೆ ಚೆನ್ನಾಗಿ ಹರಸಿ" ಎನ್ನುತ್ತಾರೆ.

# ಇನ್ನೊಂದು ಹಳೆಯ ಕತೆ

ಪರಾಶರಭಟ್ಟರ ತಂದೆಯುವರು ಕಾಂಚೀಪುರದ ಭಾಗವತ ಮಂಡಲಿ ಯಲ್ಲಿ ಪ್ರಸಿದ್ಧರಾಗಿದ್ದರು; ಕೆಲವು ಕಾಲದ ಮೇಲೆ ಶ್ರೀರಂಗಕ್ಕೆ ಬಂದು ನಿಂತರು. ತಂದೆಯುವರು ಶ್ರೀರಂಗಕ್ಕೆ ಬಂದ ಸ್ವಲ್ಪಕಾಲದ ಮೇಲೆ ಭಟ್ಟರು ಜನಿಸಿದರು. ತಂದೆ ಯಾವಾಗಲೂ ಆಚಾರ್ಯರ ಸೇವೆಯಲ್ಲಿ ದ್ದುದರಿಂದ ಮನೆಯಲ್ಲಿ ದೇವರ ಸೇವೆಯನ್ನು ನಡೆಸುವುದು, ಭಾಗವತ ಸೇವೆಯನ್ನು ಮಾಡುವುದು, ಮಗನನ್ನು ಸಾಕುವುದು, ಮೊದಲಾದ ಕೆಲಸವೆಲ್ಲ ಭಟ್ಟರ ತಾಯಮೇಲೆ ಇತ್ತು. "ಈ ತಾಯ ಶಿಕ್ಷೆಯಲ್ಲಿ ಬೆಳೆ ಯುತ್ತ ಭಟ್ಟರು ಶ್ರೇಷ್ಠರಾದ ಗುರುಗಳ ಸಾನ್ನಿಧ್ಯದಲ್ಲಿ ವಯಸ್ಸಿಗೆ ತಕ್ಕ ವ್ಯಾಸಂಗವನ್ನು ಮಾಡಿ ಗುಣದಲ್ಲಿಯೂ ಆಚಾರದಲ್ಲಿಯೂ ದೈವಭಕ್ತಿ ಯಲ್ಲಿಯೂ ತಂದೆಗೆ ಸರಿಮಿಗಿಲು ಎನ್ನುವಂತೆ ದೊಡ್ಡವರಾದರು." ಅವರ ತಾಯಿ ಅವರಿಗೆ ದಿನದಿನವೂ ಸಂಸಾರದ ಒಂದೊಂದು ವಿಷಯದಲ್ಲೂ ತೋರಿಸಿಕೊಡುತ್ತಿದ್ದ ಸನ್ಮಾರ್ಗವೇ ಇದಕ್ಕೆ ಸಾಧನವಾಗಿತ್ತು. 'ಯಾವು ದೊಂದು ಮಾತು ಬಂದರೂ ಆಕೆ, ದೇವರನ್ನು ನಂಬಿರಬೇಕು, ಎಂಬ ಮುಖ್ಯ ವಿಷಯವನ್ನು ಹೇಳುತ್ತಲೇ ಇರುವರು. ನೋಡಹೋದರೆ ಇದಕ್ಕಿಂತ ಹೆಚ್ಚಾದ ತತ್ವವಿಲ್ಲ. ಆದರೆ ಇದು ಬಾಯಲ್ಲಿ ಬರುವುದೇ ನೂರರಲ್ಲಿ ಒಬ್ಬರಿಗೆ; ಮನಸ್ಸಿನಲ್ಲಿ ನೆಟ್ಟಿರುವುದು ಎಷ್ಟರಲ್ಲಿ ಒಬ್ಬರಿಗೆ? ಸೇವೆಗೆ ಹೂವು ಹೆಚ್ಚಾಗಿ ಸಿಕ್ಕಲಿಲ್ಲ ಎಂದರೆ ಆಕೆ, "ಭಗವಂತನಿಗೆ ಎಷ್ಟು ಬೇಕು? ಏನು ಬೇಕು? 'ಹೂವು ತುಂಬ ಇದ್ದರೆ ತುಂಬ ಕೊಡು, ಕೊಂಚ ಇದ್ದರೆ ಕೊಂಚ ಕೊಡು, ಹೂವು ಇಲ್ಲದಿದ್ದರೆ ಎಲೆಯನ್ನು ಸಮರ್ಪಿಸು,'" ಎನ್ನು ವರು. ಯಾರಾದರೂ, ಈ ದಿನ ದೇವಸ್ಥಾನಕ್ಕೆ ಹೋಗಲಾಗಲಿಲ್ಲ, ಅನ್ಯಾಯ ವಾಯಿತು, ಎಂದರೆ ಆಕೆ, ಮನಸ್ಸಿನಲ್ಲಿ ಬೇನೆಯಿರಲಿ, ನೀನು ದೇವಸ್ಥಾನಕ್ಕೆ ಹೋಗದಿದ್ದರೆ ದೇವರು ನೀನಿರುವಲ್ಲಿಗೆ ಬರುವರು, ಎನ್ನುವರು. ಮನೆಗೆ ಬಂದ ಭಾಗವತರ ವಿಷಯದಲ್ಲಿ ಆಕೆಯ ಆದರ ಅಷ್ಟಿಷ್ಟಲ್ಲ. ದೇವರ ಪೂಜೆಯಲ್ಲಿ ಅವರ ಶ್ರದ್ಧೆಗೆ ಮಿತಿಯೇ ಇಲ್ಲ. 'ಇಂಥ ತಾಯ ಪೋಷಣೆ

ಯಲ್ಲಿ ಭಟ್ಟರವರು ಚಿಕ್ಕಂದಿನಲ್ಲೇ ಭಕ್ತಶಿರೋಮಣಿಗಳಾದರು. ಗುರುಗಳು ಯಾವುದನ್ನಾದರೂ ಹೇಳಿದಾಗ ಭಟ್ಟರು, ನಮ್ಮ ತಾಯಿ ಹೀಗೆಯೇ ಹೇಳಿದರು, ಎನ್ನುವರು. ಈ ಮಾತನ್ನು ಬಹಳ ಸಲ ಕೇಳಿ ಗುರುಗಳು ಸ್ವಲ್ಪ ಆಶ್ಚರ್ಯಪಟ್ಟರು. "ಒಂದು ಸಲ ಭಟ್ಟರ ತಾಯನ್ನು ಕಂಡಾಗ "ನಿಮ್ಮ ಹುಡುಗ ಬಹಳ ಸುಟಿ. ಅವನಿಗೆ ನಾನು ಅಷ್ಟೇನನ್ನೂ ಹೇಳಿ ಕೊಡಬೇಕಾದದ್ದಿಲ್ಲ. ಅನೇಕ ವಿಷಯಗಳನ್ನು ನಿಮ್ಮಿಂದ ತಿಳಿದುಕೊಂಡಿ ಹಾನೆ ಎಂಬಂತೆ ಕಾಣುತ್ತದೆ" ಎಂದರು. ಆಕೆ "ಹಿರಿಯರನ್ನು ಕಂಡರೆ ಭಕ್ತಿಯಿಂದ ನಡೆದುಕೊ ಎನ್ನುವಷ್ಟನ್ನು ನಾನು ಹೇಳಿಕೊಟ್ಟಿದೇನೆ. ಮಿಕ್ಕ ಎಲ್ಲವನ್ನೂ ಅವನು ನಿಮ್ಮಂಥವರಿಂದ ಕಲಿಯುವನು" ಎಂದರು. ಗುರುಗಳು "ನಾನು ಗೀತೆಯನ್ನು ಹೇಳುವಾಗ ಅದರ ಮಾತುಗಳನ್ನು ತಮ್ಮಿಂದ ಹಿಂದೆ ಕೇಳಿದ್ದಾಗಿ ಹೇಳಿದನು.' ತಮಗೆ ಗೀತೆ ಅಷ್ಟು ಚೆನ್ನಾಗಿ ತಿಳಿದದ್ದು ಹೇಗೆ?" ಎಂದರು. ಆಕೆ "ನಮ್ಮ ತಂದೆಯವರು ಶಾಸ್ತ್ರವನ್ನು ವಿಶೇಷವಾಗಿ ನೋಡಿದ್ದರು; ಅವರು ಅವರ ಶಿಷ್ಯರಿಗೆ ಪಾಠ ಹೇಳುವಾಗ ನಾನು ಹುಡುಗಿ, ಹತ್ತಿರ ಕುಳಿತು ಸುಮ್ಮನೆ ಕೇಳುತ್ತಿರುತ್ತಿದ್ದೆನು. ಆಗ ಕೇಳಿದ್ದು ನನಗೆ ಸ್ವಲ್ಪ ಸ್ವಲ್ಪ ಜ್ಞಾಪಕವಿದೆ" ಎಂದರು. ವಿಷಯವೂ ಅಷ್ಟೇ. ಆಕೆಗೆ ಓದುಬರಹ ಬಾರದು. ಆದರೇನು, 'ಓದು ಜ್ಞಾನ ಸಂಪಾದನೆಗೆ ಒಂದು ಸಾಧನವಲ್ಲದೆ ತಾನೇ ಜ್ಞಾನವಲ್ಲ.' ಓದಿ ಕಲಿಯು ಲಾಗದ ಜ್ಞಾನವೊಂದು ಸತ್ಸಂಗದಿಂದ ಪ್ರಯತ್ನವಿಲ್ಲದೆ ಬಂದುಬಿಡುವುದು.

' ತನ್ನ ಯಜಮಾನರ ವಿಷಯವಾದ ಕತೆಗಳನ್ನು ಹೇಳಹೇಳುತ್ತಲೂ ಈಕೆ ಮಗನ ಬುದ್ಧಿಯನ್ನು ತಿದ್ದಿದರು. ಶ್ರೀರಂಗಕ್ಕೆ ಬರುವಾಗ ಭಟ್ಟರ ತಂದೆಯವರು ಅಲ್ಲಿ ಇದ್ದ ಆಸ್ತಿಯನ್ನೆಲ್ಲಾ ತ್ಯಾಗಮಾಡಿ ಬರಿಯ ಕೈಯಲ್ಲಿ ಹೊರಟುಬಿಟ್ಟರು. ಅವರ ಪತ್ನಿ ಎಲ್ಲವನ್ನೂ ಬಿಟ್ಟು ಹೋಗಬೇಕಲ್ಲಾ ಎಂದು ಸ್ವಲ್ಪ ವ್ಯಥೆಪಟ್ಟರಾದರೂ ವಿಶೇಷ ಅದಕ್ಕಾಗಿ ಚಿಂತೆಮಾಡಲಿಲ್ಲ. ಆದರೆ ದಾರಿಯಲ್ಲಿ ಯಜಮಾನರಿಗೆ ದಾಹವಾದರೆ ಅಥವಾ ಶ್ರೀರಂಗಕ್ಕೆ ಹೋದಮೇಲೆ ಅವರಿಗೆ ದಿನದ ಉಪಯೋಗಕ್ಕಾಗಿ ಇರಲೆಂದು ಮಡಲಲ್ಲಿ ಒಂದು ಬೆಳ್ಳಿಯ ಬಟ್ಟಲನ್ನು ಇರಿಸಿಕೊಂಡರಂತೆ. ಅರ್ಧ ದಾರಿಯಲ್ಲಿ ಒಂದು ಕಾಡು; ಯಜಮಾನರು ಮುಂದೆ, ಹಿಂದೆ ಈಕೆ, ನಡೆದು ಹೋಗು

ತ್ತಿದಾರೆ. ಕಾಡಿನಲ್ಲಿ ಒಂದು ಕಡೆ ಈಕೆ ಯಜಮಾನರನ್ನು ಕುರಿತು, ನನಗೆ ಸ್ವಲ್ಪ ಹೆದರಿಕೆಯಾಗುತ್ತದೆ, ಎಂದರಂತೆ. ಅದಕ್ಕೆ ಅವರು, ನಮಗೇನು ಹೆದರಿಕೆ ಬಾ, ಎಂದರು. ಸ್ವಲ್ಪದೂರ ಹೋದಮೇಲೆ ಇವರು ಮತ್ತೆ, ಭಯವಾಗುತ್ತದೆ, ಎಂದರಂತೆ. ಯಜಮಾನರು "ಭಯಕ್ಕೇನು ಕಾರಣ? ಏನನ್ನಾದರೂ ತಂದಿದೀಯಾ?" ಎಂದು ಕೇಳಿದರು. ಈಕೆ ಬಟ್ಟಲನ್ನು ತಂದಿರುವ ವಿಷಯವನ್ನು ಬಹಳ ಸಂಕೋಚದಿಂದ ಹೇಳಿದರು. ಅದನ್ನು ಕೇಳಿ ಅವರು "ಕಾಂಚೀಪುರದಲ್ಲಿ ಕೊಟ್ಟ ದೇವರು ಶ್ರೀರಂಗದಲ್ಲಿ ಕೊಡುವುದಿಲ್ಲವೆ? ನಿನಗೆ ಈ ಭ್ರಾಂತಿಯುಂಟೆ? ಅದನ್ನು ಎಸೆ" ಎಂದರಂತೆ. ಯಜಮಾನಿ ಒಂದು ಮಾತನ್ನೂ ಆಡದೆ ಕಾಂಚೀಪುರದಿಂದ ತಂದಿದ್ದ ಬಟ್ಟಲನ್ನು ಕಾಡಿನಲ್ಲಿ ಎಸೆದರು. ಸ್ವಲ್ಪ ದೂರ ನಡೆದಮೇಲೆ ಕಾಡು ಇನ್ನೂ ದಟ್ಟವಾಯಿತು. ಯಜಮಾನರು ಪತ್ನಿಯನ್ನು "ಈಗ ಭಯವಿಲ್ಲವಲ್ಲವೆ?" ಎಂದು ಕೇಳಿದರಂತೆ. ಆಕೆ "ಇಲ್ಲ" ಎಂದರು. ಯಜಮಾನರು "ಮಡಿಲಲ್ಲಿದ್ದರೆ ಗಿಡದಲ್ಲಿ ಭಯ. ನೋಡಿದೆಯಾ?" ಎಂದರು. ಹೀಗೆ ಇವರು ಬಂದು ಶ್ರೀರಂಗದಲ್ಲಿ ನಿಂತರು. ಯಜಮಾನರು ಹೇಳಿದ್ದಂತೆ ಅಲ್ಲಿಯೂ ಅವರಿಗೆ ಸನ್ಮಾನ ದೊರೆಯಿತು; ಭಾಗವತರ ಸೇವೆಗೆ ಬೇಕಾದ ಉಪಪತ್ತಿ ಒದಗಿತು; ಕೊಂಚಕಾಲದಲ್ಲಿ ಶ್ರೀರಂಗದಲ್ಲಿ ಇವರ ಗೃಹವು ಭಾಗವತ ಗೋಷ್ಠಿಯ ಮುಖ್ಯವಾದ ಆಶ್ರಯಗಳಲ್ಲಿ ಒಂದಾಗಿ ಪರಿಣಮಿಸಿತು. ಈ ಕತೆಯನ್ನು ಈಕೆ ಮಗನಿಗೆ ಹತ್ತಾರುಸಲ ಹೇಳಿದ್ದರು. ಮಗ ಅದನ್ನು ಬಹು ಆತುರದಿಂದ ಕೇಳುವನು. ಹೀಗೆ ತಾಯ ಶಿಕ್ಷೆಯಿಂದಲೂ ಗುರುಗಳ ಆಶ್ರಯದಿಂದಲೂ ಭಟ್ಟರು ಉದಾತ್ತ ನೀತಿಯನ್ನು ಕಲಿತು ಹಿರಿಯರು ನಡೆದ ಉತ್ತಮ ಪಥದಲ್ಲಿ ಬಹುದೂರವನ್ನು ಚಿಕ್ಕಂದಿನಲ್ಲಿಯೇ ನಡೆದು ಮುಗಿಸಿದರು.

ಭಟ್ಟರಿಗೆ ಸುಮಾರು ಇಪ್ಪತ್ತನಾಲ್ಕುವರುಷ ವಯಸ್ಸು ಇರಬಹುದು. ಆ ವೇಳೆಗೆ ಅವರಿಗೆ ದೇವಾಲಯದ ಭಾಗವತ ಗೋಷ್ಠಿಯಲ್ಲಿ ಗಣ್ಯವಾದ ಸ್ಥಾನ ದೊರೆತಿತ್ತು. ಮನೆಯಲ್ಲಿ ಆಗಾಗ ಭಾಗವತರ ಸಮಾರಾಧನೆಗಳು ನಡೆಯುತ್ತಿದ್ದುವು. ಮನೆಯಲ್ಲಿ ಅಡಿಗೆಗೆ ಮತ್ತು ದೇವರ ಸೇವೆಗೆ ಸಹಾಯವಾಗಿ ಬ್ರಾಹ್ಮಣನು ಒಬ್ಬನಿದ್ದನು. ಭಟ್ಟರು ಒಂದೊಂದು ದಿನ ದೇವರ

ಪೂಜೆಯನ್ನು ತಾವು ಮಾಡುವರು, ಒಂದೊಂದು ದಿನ ಪರಿಚಾರಕನಿಗೆ, ನೀವೇ ಮಾಡಿ, ಎಂದು ಹೇಳುವರು. ಭಟ್ಟರು ಮಾಡುತ್ತಿದ್ದ ಪೂಜೆ ಒಂದೊಂದು ಸಮಯದಲ್ಲಿ ಬಹಳ ಹೊತ್ತು ತೆಗೆದುಕೊಳ್ಳುವುದು; ಒಂದೊಂದು ಸಮಯದಲ್ಲಿ ಜಾಗ್ರತೆಯಲ್ಲಿಯೇ ಮುಗಿದುಹೋಗುವುದು. ಪರಿಚಾರಕನ ಪೂಜೆ ಒಂದು ಮೇಲುಪಂಕ್ತಿಯನ್ನು ಅನುಸರಿಸಿ ಮಾಡುತ್ತಿದ್ದದ್ದು. ಇಷ್ಟು ಸ್ತೋತ್ರ, ಇಷ್ಟು ಉಪಚಾರ, ಇಷ್ಟು ವಿನ್ಯಾಸ, ಇಷ್ಟು ವೇದ, ಇಷ್ಟು ಪುರಾಣ, ಇಷ್ಟು ಪ್ರಬಂಧ, ಎಂದು ಅದರಲ್ಲಿ ನಿಯಮವಿತ್ತು. ಅವಸರವಾದ ದಿನ ಕೆಲವು ಭಾಗವನ್ನು ಬಿಡುವುದಕ್ಕೂ, ಹೊತ್ತು ಇದ್ದಲ್ಲಿ ಇನ್ನಷ್ಟು ಭಾಗವನ್ನು ಸೇರಿಸಿಕೊಳ್ಳುವುದಕ್ಕೂ ಅದರಲ್ಲಿ ಅವಕಾಶವುಂಟು. ಪರಿಚಾರಕನು ಪೂಜೆಮಾಡಿದಾಗ ಯಾವಾಗಲಾದರೂ ಭಟ್ಟರು, ಪೂಜೆ ಇಷ್ಟುಬೇಗ ಮುಗಿಯಿತೆ, ಎನ್ನುವರು. ಪರಿಚಾರಕನು ಈ ಮಾತನ್ನು ಕೇಳಿದಾಗ, ಯಾಕೆ ಹೀಗೆ ಕೇಳುವರು, ಎಂದುಕೊಳ್ಳುತ್ತಿದ್ದನು. ಆಮೇಲೆ "ಇದೇನು ಇವರು ಪೂಜೆಮಾಡಿದರೆ ಅರ್ಧಗಳಿಗೆಯಲ್ಲಿ ಮುಗಿಸುತ್ತಾರೆ. ನನ್ನ ಪೂಜೆ ಎರಡುಗಳಿಗೆ ಹೊತ್ತಾದರೂ ಇಷ್ಟುಬೇಗ ಮುಗಿಯಿತೆ ಎನ್ನುತ್ತಾರೆ" ಎಂದು ಯೋಚಿಸಿದನು. ಅನೇಕ ಸಲ ಭಟ್ಟರು ಎಲ್ಲಿಯಾದರೂ ಹೋಗಿದ್ದು ಮನೆಗೆ ಬರುವುದು ಸಾವಕಾಶವಾದರೆ ತಾಯಿ ಬಂದು, ಬಹಳ ಹೊತ್ತಾಯಿತಲ್ಲಾ, ಎಂದು ಹೇಳುವರು. "ದೇವರ ಪೂಜೆ ಆಯಿತೆ." "ಇಲ್ಲ, ಬ್ರಾಹ್ಮಣ ಇನ್ನೂ ಒಳಗೆ ಕೆಲಸದಲ್ಲೇ ಇದ್ದಾರೆ. ಅವರು ಆ ಕೆಲಸ ಮುಗಿಸಿ ದೇವರ ಪೂಜೆ ಮಾಡುವುದೆಂದರೆ ಹೊತ್ತಾಗುತ್ತೆ." ತಾಯಿ ಹೀಗೆಂದಾಗ ಭಟ್ಟರು "ಪೂಜೆ ನಾನೇ ಮಾಡಿಬಿಡುತ್ತೇನೆ, ಅವರು ಅಡಿಗೆ ಮುಗಿಸಿ ಎಲೆ ಹಾಕಲಿ, ಭಾಗವತರನ್ನು ಕಾಯಿಸಬಾರದು" ಎನ್ನುವರು. ಪರಿಚಾರಕನು ಇಂಥ ಸಂದರ್ಭಗಳಲ್ಲಿ ಭಟ್ಟರು ಮಾಡುವ ಪೂಜೆ ಎಷ್ಟು ಸೂಕ್ಷ್ಮವಾಗುತಿತ್ತೆಂಬುದನ್ನು ಬಲ್ಲನು. ತನ್ನ ಪೂಜೆ ಜಾಗ್ರತೆ ಮುಗಿಯಿತೆಂದು ಅವರು ಹೇಳಿದಾಗ ಇವನು, ನಾನು ಮಾಡುವ ಪೂಜೆ ಇದಕ್ಕಿಂತ ಕಡಿಮೆ ಆಯಿತೆ, ಇವರು ಏಕೆ ಹೀಗೆ ಆಕ್ಷೇಪಣೆ ಮಾಡುವರು, ಎಂದುಕೊಳ್ಳುವನು. ಹೀಗೆ ಅವನಿಗೆ ಭಟ್ಟರ ವಿಷಯದಲ್ಲಿ ಒಂದು ಅಸೂಯೆ ತಲೆದೋರಿತು.

ಹೀಗೆ ಇರುತ್ತಿರುವಲ್ಲಿ ಒಂದು ಸಲ ಎಂದಿಗಿಂತ ಸ್ವಲ್ಪ ದೊಡ್ಡದಾದ ಸಮಾರಾಧನೆ ಬಂದು ಒದಗಿತು. ಆ ದಿನ ಭಟ್ಟರು ಅಂಗಳದಲ್ಲಿ ಕುಳಿತು ದೊನ್ನೆಗಳನ್ನು ಹಚ್ಚುತ್ತಾ ಪರಿಚಾರಕನನ್ನು ಕುರಿತು ಈ ದಿನ ನೀವೇ ಪೂಜೆಯನ್ನು ಮಾಡಿಬಿಡಿ ಎಂದರು. ಬಹಳ ಜನ ಅತಿಥಿಗಳು ನೆರೆದಿರಬೇಕಾದರೆ ಪರಿಚಾರಕನು ಗುಡುಗಿನಂತೆ ಮೊಳಗುವ ಧ್ವನಿಯಿಂದ ಮಂತ್ರಗಳನ್ನು ಹೇಳುತ್ತಾ ದೇವರ ಪೂಜೆಯನ್ನು ಮಾಡಿದನು. ಹೊರಗೆ ಬಂದಾಗ ಭಟ್ಟರು, ಪ್ರಬಂಧ ಸೂಕ್ಷ್ಮಮಾಡಿಬಿಟ್ಟಿರಲ್ಲಾ, ಎಂದರು. ಎಲ್ಲರೆದುರಿಗೆ ಹೀಗೆ ಹೇಳಿದ್ದರಿಂದ ಬ್ರಾಹ್ಮಣನಿಗೆ ಬಹಳ ಅವಮಾನವಾಯಿತು. ಅವನು ಯಜಮಾನಿಯ ಬಳಿಗೆ ಹೋಗಿ "ಅಮ್ಮ, ನಿಮ್ಮ ಮಕ್ಕಳು ನನಗೆ ಸಣ್ಣ ಮಾತನ್ನು ಹೇಳುತ್ತಾರೆ. ಎಲ್ಲರೆದುರಿಗೆ, ಪೂಜೆ ಬೇಗ ಮುಗಿಸಿಬಿಟ್ಟೆ, ಸ್ತೋತ್ರ ಬಿಟ್ಟೆ, ಪ್ರಬಂಧ ಬಿಟ್ಟೆ, ಎನ್ನುತ್ತಾರೆ. ನನಗೆ ತಲೆ ತಗ್ಗಿಸುವ ಹಾಗೆ ಆಗುತ್ತೆ" ಎಂದನು. ಯಜಮಾನಿ "ನೀನು ಸ್ತೋತ್ರ, ಪ್ರಬಂಧ ಬಿಟ್ಟೆಯೋ ಏನೋ, ಅದಕ್ಕೆ ಅವನು ಹಾಗೆ ಹೇಳುತ್ತಾನೆ" ಎಂದರು. ಪರಿಚಾರಕನು "ನಾನು ಒಂದು ಸ್ತೋತ್ರ ಬಿಟ್ಟರೆ, ಒಂದು ಸ್ತೋತ್ರವನ್ನಾದರೂ ಹೇಳುತ್ತೇನೆ. ಇವರು ಒಂದೊಂದು ಸಲ ಒಂದು ಸ್ತೋತ್ರವನ್ನೂ ಹೇಳದೆ ಪೂಜೆ ಮುಗಿಸುತ್ತಾರಲ್ಲ. ನಾನು ಮಾಡಿದ ಪೂಜೆ ಅದಕ್ಕಿಂತ ಸೂಕ್ಷ್ಮವಾಯಿತೆ" ಎಂದನು. ಯಜಮಾನಿ "ಹೋಗಲಿ ಬಿಡು; ಅವನಿಗೆ ಇನ್ನೂ ಚಿಕ್ಕ ವಯಸ್ಸು; ಒಂದೆರಡು ಮಾತು ಹೆಚ್ಚು ಕಡಿಮೆಯಾದರೂ ನೀನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದು" ಎಂದರು. ಅ ದಿನ ಸಾಯಂಕಾಲ ಮಗನನ್ನು ಕರೆದು "ಅಪ್ಪಾ, ಮನೆಯ ಬ್ರಾಹ್ಮಣನಿಗೆ ಅಷ್ಟು ಜನರೆದುರಿಗೆ, ದೇವರ ಪೂಜೆಯಲ್ಲಿ ಅದನ್ನು ಬಿಟ್ಟೆ ಇದನ್ನು ಬಿಟ್ಟೆ, ಎಂದರೆ ಅವಮಾನವಾಗುತ್ತದೆ" ಎಂದರು. ಭಟ್ಟರು "ಹೌದಮ್ಮ, ಹೇಳಿದೆ. ಆದರೆ ಅವರು ಅವಮಾನವೆಂದು ಎಣಿಸಿಕೊಳ್ಳುವರೆಂದು ತೋರಲಿಲ್ಲ. ಪಾಪ, ಅವರಿಗೇಕೆ ಅವಮಾನವಾಗಬೇಕು. ಇನ್ನುಮೇಲೆ ಹಾಗೆ ಹೇಳದಿದ್ದರೆ ಸರಿ" ಎಂದರು. ಬ್ರಾಹ್ಮಣನು ಒಳಗಿನಿಂದ ಇದನ್ನು ಕೇಳುತ್ತಲಿದ್ದನು. ಅವನಿಗೆ ಬಹಳ ಸಂತೋಷವಾಯಿತು.

ಇದಾದಮೇಲೆ ಕೊಂಚ ದಿನಕ್ಕೆ ನವರಾತ್ರಿಯ ತದೀಯಾರಾಧನೆಗಳು ಬಂದವು. ಒಂದು ದಿನ ಭಟ್ಟರೇ ಪೂಜೆಮಾಡಿದರು. ಐದು ನಿಮಿಷ ಕೂಡ ತೆಗೆದುಕೊಳ್ಳಲಿಲ್ಲ. ಮಾರನೆಯ ದಿನ ಪರಿಚಾರಕನನ್ನು ಪೂಜೆ ಮಾಡ ಹೇಳಿದರು. ಪೂಜೆ ಮುಗಿದಮೇಲೆ ಬಾಯಿತಪ್ಪಿ, ಬಹಳ ಬೇಗ ಮುಗಿಸಿದಿರಿ, ಎಂದರು. ಪರಿಚಾರಕನು ಯಜಮಾನಿಯ ಬಳಿಗೆ ಹೋಗಿ "ತಿರುಗಿ ಆರಂಭವಾಯಿತು ತಾಯಿ. ನಿನ್ನೆ ಇವರು ಐದು ನಿಮಿಷದಲ್ಲಿ ಪೂಜೆ ಮುಗಿಸಿದರು. ಈ ದಿವಸ ನಾನು ಅರ್ಧಗಂಟೆಯ ಹೊತ್ತು ಮಾಡಿದ ಪೂಜೆ ಸಾಲದು ಎನ್ನುತ್ತಾರೆ" ಎಂದನು. ಯಜಮಾನಿ, ತಿರುಗಿ ಹೇಳುತ್ತೇನೆ, ಬಿಡು, ಎಂದು ಸಮಾಧಾನ ಹೇಳಿ "ಇವನಿಗೆ ಇದರ ಮರ್ಮ ತಿಳಿಯ ಬೇಕು. ಇಲ್ಲದಿದ್ದರೆ ಇವನು ಉದ್ಧಾರವಾಗುವುದಿಲ್ಲ" ಎಂದುಕೊಂಡು ಇವನಿಗೆ ಇದು ತಿಳಿಯುವಂತೆ ಮಾಡಬೇಕೆಂದು ನಿಶ್ಚಯಿಸಿದರು. ಆ ದಿನ ಗೋಷ್ಠಿಯೆಲ್ಲಾ ಕುಳಿತಮೇಲೆ ಒಂದು ಕಡೆ ಭಟ್ಟರು ಊಟಕ್ಕೆ ಕುಳಿತರು. ಅವರ ಪಕ್ಕದಲ್ಲಿ ಒಂದು ಎಲೆಯನ್ನು ಹಾಕಿ ಯಜಮಾನಿ ಬ್ರಾಹ್ಮಣನನ್ನು ಕರೆದು "ಅಪ್ಪಾ ಇಂದು ಅಷ್ಟೇನೂ ಜನವಿಲ್ಲ, ನೀನೂ ಕುಳಿತುಕೊ, ಮನೆಯವರು ಬಡಿಸುತ್ತೇವೆ" ಎಂದರು. ಪರಿಚಾರಕನು ಕುಳಿತು ಕೊಂಡನು. ಯಜಮಾನಿ ಪಂಕ್ತಿಗೆ ತುಪ್ಪ ಬಡಿಸುತ್ತಾ ಬಂದು ಪರಿಚಾರಕನ ಮತ್ತು ಮಗನ ಎಲೆಗೆ ಬಡಿಸುವ ಮುಂದು ಅದು ಮುಗಿದುಹೋದಂತೆ ಮಾಡಿ ಪರಿಚಾರಕನನ್ನು ಕುರಿತು "ತುಪ್ಪ ನೀನು ಸಾಕಾದಷ್ಟು ತೆಗೆದಿಡ ಲಿಲ್ಲ, ಆಗಿಹೋಯಿತು, ತರುತ್ತೇನೆ" ಎಂದು ಹೇಳಿ ಒಳಗೆ ಹೋದರು. ಒಂದು ಕ್ಷಣ ಬಿಟ್ಟುಕೊಂಡು ಬಂದು ಅವನಿಗೂ ಮಗನಿಗೂ ಒಂದೇ ಪಾತ್ರೆಯಿಂದ ಬಡಿಸಿದರು. ಪರಿಚಾರಕನಿಗೆ ಕೊಂಚ ಬಿತ್ತು, ಮಗನ ಎಲೆಯಲ್ಲಿ ಹೆಚ್ಚಾಗಿ ಬಿತ್ತು. ಮುದುಕಿ ಪರಿಚಾರಕನಿಗೆ ಕೇಳುವಂತೆ "ಹೆಚ್ಚಾಯಿತು" ಎಂದು ಹೇಳಿಕೊಂಡು ಒಳಕ್ಕೆ ಹೋದರು. ಪರಿಚಾರಕ "ಮುದುಕಮ್ಮನಿಗೆ ಮಗನೆಂದರೆ ಪ್ರೀತಿ. ನನಗಿಂತ ಅವನಿಗೆ ಹೆಚ್ಚು ತುಪ್ಪ ಹಾಕಿದರು. ನ್ಯಾಯವೇ ಸರಿ. ನಮ್ಮಮ್ಮ ಇದ್ದರೆ ನನಗೆ ಹೆಚ್ಚಾಗಿ ಹಾಕುತ್ತಿದ್ದರು" ಎಂದುಕೊಂಡನು. ಪರಿಷೇಚನ ತೀರ್ಥ ಆದಮೇಲೆ ಎಲ್ಲರೂ ಊಟಕ್ಕೆ ಕುಳಿತರು.

ಪರಿಚಾರಕ ಅನ್ನವನ್ನು ಕಲೆಸಿ ಆಹುತಿಯ ನಾಲ್ಕು ಅಗುಳನ್ನು ಬಾಯಿಗೆ ಇಟ್ಟುಕೊಂಡನು. ಅದನ್ನು ಉಗಿಯಬೇಕೆನ್ನಿಸಿತು. ಆ ನಾಲ್ಕು ಅಗುಳೂ ವಿಷದಂತೆ ಕಹಿ. ಒಂದು ಕ್ಷಣ ತಡೆದನು; ಇತರರು ಏನುಮಾಡುತ್ತಿರುವರೋ ಎಂದು ಎರಡು ಕಡೆಯೂ ನೋಡಿದನು. ಅತಿಥಿಗಳೆಲ್ಲಾ ಸುಖವಾಗಿ ಊಟಮಾಡುತ್ತಿದ್ದಾರೆ. ಪಕ್ಕದಲ್ಲಿ ಭಟ್ಟರು ಆಹುತಿಗಳನ್ನೆಲ್ಲ ಮುಗಿಸಿದಾರೆ, ಅನ್ನವನ್ನು ಕಲೆಸಿ ಕೈಗೆ ಒಂದು ತುತ್ತು ತೆಗೆದುಕೊಂಡಿದ್ದಾರೆ. ಏಕೆ ಕಹಿ ಆಯಿತು ಎಂದು ಪರಿಚಾರಕನು ಇನ್ನು ನಾಲ್ಕು ಅಗುಳನ್ನು ಬಾಯಿಗೆ ಇಟ್ಟುಕೊಂಡನು. ಅದೂ ಕಹಿ. ಇನ್ನು ಯಾರಿಗೂ ಕಹಿ ಇಲ್ಲದೆ ನನಗೇಕೆ ಕಹಿ ಆಯಿತು ಎಂದು ಇವನು ಯೋಚಿಸಿದನು. ಒಳಗೆ ಮಂಚಿಗೆಯ ಮೇಲೆ ತುಪ್ಪದ ಪಾತ್ರೆಯ ಪಕ್ಕದಲ್ಲಿ ಬೇವಿನ ಎಣ್ಣೆಯ ಪಾತ್ರೆ ಇದ್ದದ್ದು ಜ್ಞಾಪಕಕ್ಕೆ ಬಂತು. ಮುದುಕಮ್ಮ ಮರೆತು ನನಗೆ ಬೇವಿನ ಎಣ್ಣೆಯನ್ನು ಬಡಿಸಿದಳೋ ಎಂದುಕೊಂಡನು. ಆದರೆ ತನಗೆ ಬಡಿಸಿದ್ದನ್ನೇ ಮಗನಿಗೂ ಬಡಿಸಿದಳು, ಆತ ಈಗಾಗಲೇ ಎರಡು ತುತ್ತು ತಿಂದಿದಾನೆ, ಕಹಿಯೆನ್ನಲಿಲ್ಲ, ಎಂದುಕೊಂಡು ಯಜಮಾನಿಯನ್ನು ಕರೆದು ಕೇಳಬೇಕೆಂದು ಯೋಚಿಸಿಕೊಂಡನು. ಅಷ್ಟುಹೊತ್ತಿಗೆ ಆಕೆ ಇನ್ನೇನನ್ನೋ ಬಡಿಸುವುದಕ್ಕೆ ಪಾತ್ರೆಯನ್ನು ತೆಗೆದುಕೊಂಡು ಬಂದರು. ಪರಿಚಾರಕನು ಅವರನ್ನು ಕರೆದು "ತಾಯಿ ತಾವು ಎರಡನೆಯ ಸಲ ಬಡಿಸಿದ್ದು ತುಪ್ಪವೋ ಇನ್ನೇನಾದರೂವೋ" ಎಂದನು. ಆಕೆ, ತುಪ್ಪ, ಎಂದರು. ಅವನು, ಇದೇಕೋ ಕಹಿಯಾಗಿದೆ, ತುಪ್ಪದ ಪಾತ್ರೆಯ ಪಕ್ಕದಲ್ಲಿ ಬೇವಿನ ಎಣ್ಣೆಯ ಪಾತ್ರೆ ಇತ್ತು, ಕೈ ತಪ್ಪಿ ಅದನ್ನೇನಾದರೂ ತಂದು ಬಡಿಸಿದಿರೋ, ಎಂದನು. ಅವರು "ಅಯ್ಯೋ, ಹಾಗುಂಟೆ? ನೋಡುತ್ತೇನೆ" ಎಂದು ಹೇಳಿ ಒಳಗೆ ಹೋಗಿ ಪಾತ್ರೆಯನ್ನು ತಂದು "ಹೌದು ಅರುವತ್ತು ವರುಷಕ್ಕೆ ಬರುವ ಅರುಳುಮರುಳು ನನಗೇ ಈಗಲೇ ಬಂದಿದೆಯೆಂದು ಕಾಣುತ್ತದೆ" ಎಂದು ಹೇಳಿ ಮಗನನ್ನು ಕುರಿತು "ಅಪ್ಪಾ ನಿನಗೂ ಇದನ್ನೇ ಬಡಿಸಿದೆನಲ್ಲಾ ಕಹಿಯಿಲ್ಲವೇ" ಎಂದು ಕೇಳಿದರು. ಭಟ್ಟರು ಆಗ ಬಾಯಿಗೆ ಇಟ್ಟುಕೊಂಡ ತುತ್ತನ್ನು ಚಪ್ಪರಿಸಿ ನೋಡಿ "ಹೌದಮ್ಮ, ಕಹಿಯಾಗಿದೆಯಲ್ಲ, ಇದೇಕೆ? ಏನು ಬಡಿಸಿದೆ?" ಎಂದು ಅನ್ನವನ್ನು ಒಂದು ಕಡೆ

ಇಟ್ಟರು. ಯಜಮಾನಿ ತನ್ನನ್ನು ತಾನು ಬಹು ವಿಧವಾಗಿ ಆಡಿಕೊಂಡಂತೆ ತೋರ್ಪಡಿಸಿ ಇವರಿಬ್ಬರಿಗೂ ಬೇರೆ ಅನ್ನವನ್ನೂ ತುಪ್ಪವನ್ನೂ ಬಡಿಸುತ್ತಾ ಮಗನನ್ನು "ಬೇವಿನ ಎಣ್ಣೆಯ ಕಹಿ ನಿನಗೆ ತಿಳಿಯಬೇಡವೇನಪ್ಪ, ನಾಲ್ಕು ತುತ್ತು ತಿಂದೆಯಲ್ಲ" ಎಂದರು. ಅವರು "ಕಹಿ ತಿಳಿಯದೇ ಏನಮ್ಮ, ಆಗ ಏನೋ ಯೋಚನೆ ಮಾಡುತ್ತಿದ್ದೆ ಅಷ್ಟೆ" ಎಂದರು.

"ಯೋಚನೆ ಯಾವುದಪ್ಪಾ ಅದು, ಎಲೆಯಲ್ಲಿ ಬಡಿಸಿದ ಕಹಿ ಸಹಿತ ತಿಳಿಯದೆ?"

"ಈ ದಿನ" ಪರಿಚಾರಕನ ಕಡೆ ತೋರಿಸಿ, "ಇವರು ದೇವರಪೂಜೆ ಯಲ್ಲಿ ನೀವಾರಶೂಕದ ಶ್ರುತಿಯನ್ನು ಚೆನ್ನಾಗಿ ಹೇಳಿದರು. ಅದನ್ನು ಕುರಿತು ಯೋಚನೆ ಮಾಡುತ್ತಿದ್ದೆ."

"ಒಳ್ಳೇ ಯೋಚನೆಯಪ್ಪ" ಎಂದರು ತಾಯಿ.

ಭಟ್ಟರು "ಪರಮಾತ್ಮನ ಸ್ವರೂಪ ವಿಚಿತ್ರವಾದದ್ದು ನಿಜ. ಆದರೆ ವೇದದಲ್ಲಿ ಅದನ್ನು ಹೇಳಿರುವ ರೀತಿ ಅಷ್ಟೂ ವಿಚಿತ್ರವಾಗಿದೆ. ನವಣೆಯ ಊಗಿನ ಕೊನೆಯಲ್ಲಿ ಕುಳಿತು ಓಲಾಡುತ್ತಿರುವನಂತೆ ಪರಮಾತ್ಮ. ಹಾಗೆ ಓಲಾಡುತ್ತಾ ಅವನು ತನ್ನ ಹೊಟ್ಟೆಯಲ್ಲಿ ಬ್ರಹ್ಮ, ರುದ್ರ, ಇಂದ್ರಾದಿ ಸಮಸ್ತ ದೇವತೆಗಳನ್ನೂ ಅಖಿಲ ಬ್ರಹ್ಮಾಂಡವನ್ನೂ ಧರಿಸಿ ಕುಳಿತಿದಾನಂತೆ. ಇದು ಎಷ್ಟು ವಿಚಿತ್ರ ಎಂದು ಯೋಚನೆಮಾಡುತ್ತಾ ಇದ್ದೆ. ಆಗ ತುತ್ತಿನ ರುಚಿ ತಿಳಿಯಲಿಲ್ಲ" ಎಂದು ಹೇಳಿದರು. ಊಟ ಮುಗಿಯಿತು.

ಎಲ್ಲಾ ಆದಮೇಲೆ ತಾಯಿ ಪರಿಚಾರಕನನ್ನು ಕರೆದು "ಅಪ್ಪಾ ನಿನ್ನ ಪೂಜೆಗೂ ಅವನ ಪೂಜೆಗೂ ವ್ಯತ್ಯಾಸ ತಿಳಿಯಿತೆ?" ಎಂದರು. ಅದಕ್ಕೆ ಮೊದಲೇ ಪರಿಚಾರಕನು ಈಕೆ ಬೇವಿನ ಎಣ್ಣೆಯನ್ನು ಬೇಕೆಂದೇ ಬಡಿಸಿದ್ದ ರೆಂದು ಊಹಿಸಿದ್ದನು. ತನಗೆ ಬುದ್ಧಿ ಬರಲೆಂಬ ಉದ್ದೇಶದಿಂದ ಹಾಗೆ ಮಾಡಿರಬೇಕೆಂದು ಅವನಿಗೆ ತೋರಿತ್ತು. ತಾನು ನಾಲ್ಕು ಅಗುಳು ಬಾಯಿಗೆ ಇಟ್ಟುಕೊಂಡು ಸಹಿಸಲಾರದೆಹೋದ ಆ ಎಣ್ಣೆಯಲ್ಲಿ ಕಲೆಸಿದ ಅನ್ನವನ್ನು ಭಟ್ಟರು ಭಗವದ್ಧ್ಯಾನಮಗ್ನರಾಗಿ ರುಚಿ ತಿಳಿಯದೆ ತುತ್ತು ತುತ್ತನ್ನೇ ತಿಂದದ್ದನ್ನು ನೆನೆದು ಅವನಿಗೆ ಆಶ್ಚರ್ಯವಾಗಿತ್ತು. ಯಜಮಾನಿ ಹೀಗೆ ಕೇಳಿದೊಡನೆ ಅವನು "ಹೌದು ತಾಯಿ ಅವರು ಮನಸ್ಸಿಟ್ಟು ಪೂಜೆ

ಮಾಡುತ್ತಾರೆ. ನಮಗೆ ಆ ಮನೋದಾರ್ಢ್ಯವಿಲ್ಲ'' ಎಂದನು. ಆಕೆ ''ಅವನು ಪೂಜೆ ಮಾಡುವುದು ದೇವರ ಜಗಲಿಯ ಮೇಲೆ ಕುಳಿತಾಗ ಮಾತ್ರವಲ್ಲ. ಎಲೆಯ ಮುಂದೆ ಕುಳಿತಾಗ, ಸ್ನಾನಕ್ಕೆ ಮೊದಲು, ದೊನ್ನೆ ಹಚ್ಚುವಾಗ, ಬೀದಿಯಲ್ಲಿ ಹೋಗುವಾಗ, ಇನ್ನು ಯಾವ ಕೆಲಸವನ್ನೇ ಆಗಲಿ ಮಾಡುವಾಗ, ಯಾವಾಗಲೂ ಅವನು ದೇವರ ಧ್ಯಾನವನ್ನು ಮಾಡುತ್ತಲೇ ಇರುವನು'' ಎಂದರು.

ಪರಿಚಾರಕನು ''ನಾನು ತಿಳಿಯದೇ ಹೇಳಿದ ಮಾತನ್ನು ನೀವು ತಪ್ಪಾಗಿ ಎಣಿಸಬಾರದು'' ಎಂದನು. ಆಕೆ ''ನಮ್ಮ ಹುಡುಗನ ರೀತಿ ತಿಳಿದು, ಅವನು ಏನಾದರೂ ಎಂದರೆ ನೀನು ಕೋಪಿಸಿಕೊಳ್ಳದೇ ಇರಲಿ, ನಿನಗೆ ಅವನ ಸಹವಾಸದಿಂದ ಒಳ್ಳೆಯದಾಗಲಿ, ಎಂದು ನಾನು ಹೀಗೆ ಮಾಡಿದೆ. ನಿನ್ನ ಮಾತನ್ನು ನಾನು ತಪ್ಪಾಗಿ ಎಣಿಸುವುದು ಹಾಗಿರಲಿ, ಹಸಿದಿರುವಾಗ ನಿನ್ನನ್ನು ಎಲೆಯ ಮುಂದೆ ಕೂರಿಸಿ ಈ ಪಾಪಿ ಕೈಯಲ್ಲಿ ಬೇವಿನ ಎಣ್ಣೆಯನ್ನು ಬಡಿಸಿದೆನು. ಆ ತಪ್ಪನ್ನು ನೀನು ಮನ್ನಿಸಬೇಕು'' ಎಂದರು. ಪರಿಚಾರಕನು ಅವರಿಗೆ ನಮಸ್ಕರಿಸಿ ''ನನ್ನನ್ನು ಇನ್ನೊಬ್ಬ ಮಗನೆಂದೆಣಿಸಿ ನನಗೆ ಬುದ್ಧಿ ಬರುವುದಕ್ಕಾಗಿ ಹೀಗೆ ಮಾಡಿದಿರಿ. ಇದೇ ರೀತಿಯ ಕೃಪೆಯಿಂದ ಮುಂದಕ್ಕೂ ಉದ್ಧಾರ ಮಾಡಬೇಕು'' ಎಂದು ಬೇಡಿಕೊಂಡನು.

# ನಿಜಗಲ್ಲಿನ ರಾಣಿ

ಇನ್ನೂರು ವರುಷಗಳ ಹಿಂದೆ ನಮ್ಮ ಸೀಮೆಯಲ್ಲಿ ಅಲ್ಲಲ್ಲಿ ಏರ್ಪಟ್ಟಿದ್ದ ಅನೇಕ ಪಾಳೆಯಪಟ್ಟುಗಳಲ್ಲಿ ನಿಜಗಲ್ಲಿನಲ್ಲಿ ಒಂದು ಪಾಳೆಯಪಟ್ಟು ಇತ್ತು. ಆ ಕಾಲದಲ್ಲಿ ಮರಾಟಿಯವರು ಆಗಾಗ ಮೈಸೂರಿನ ಮೇಲೆ ದಂಡೆತ್ತಿ ಬರುತ್ತಿದ್ದರು. ಮಹಾರಾಷ್ಟ್ರ ದೇಶದಿಂದ ಬೆಂಗಳೂರ ಕಡೆಗೆ ಬರಬೇಕಾದರೆ ನಿಜಗಲ್ಲು ದಾರಿಯಲ್ಲಿ ಸಿಕ್ಕುವುದು. ಮರಾಟಿಯವರು ದಂಡೆತ್ತಿ ಬಂದಾಗ ನಿಜಗಲ್ಲಿನ ಪಾಳೆಯಗಾರರು, ಇಲ್ಲವೆ ಅವರಿಗೆ ಕಪ್ಪವನ್ನು ಕೊಟ್ಟು ಅವರ ಜೊತೆಗೆ ತಮ್ಮ ದಂಡು ಸ್ವಲ್ಪವನ್ನು ಸಹಾಯಕ್ಕೆ ಕಳುಹಿಸಬೇಕು, ಇಲ್ಲವೇ ತಾವು ಮೈಸೂರ ಅರಸರ ಸಾಮಂತರು ಎಂದು ಮರಾಟಿಯವರೊಂದಿಗೆ ಹೋರಾಡಬೇಕು. ದೇಶ ಆಗ ಇದ್ದ ಸ್ಥಿತಿಯಲ್ಲಿ ಪಾಳೆಯಗಾರನು ತನ್ನ ಇಷ್ಟದಂತೆ ಈ ಎರಡರಲ್ಲಿ ಯಾವುದನ್ನಾದರೂ ಮಾಡಬಹುದಾಗಿತ್ತು.

ನಿಜಗಲ್ಲಿನ ಆಗಣ ಪಾಳೆಯಗಾರರಲ್ಲಿ ರಾಮರಸನಾಯಕನು ಪ್ರಸಿದ್ಧನು. ಆತನ ತಂದೆ ತಿಮ್ಮರಸನಾಯಕನ ನಂತರ ಅವನು ಗದ್ದಿಗೆಯನ್ನೇರಿದನು. ಗದ್ದಿಗೆಯನ್ನೇರುವಾಗ್ಗೆ ಅವನಿಗೆ ಸುಮಾರು ಇಪ್ಪತ್ತೈದು ವರ್ಷ. ಅವನು ಶೀಘ್ರದಲ್ಲೇ ಪಾಳೆಯಗಾರರಲ್ಲಿ ಒಳ್ಳೆಯವನೆಂದು ಹೆಸರು ಪಡೆದನು. ಪಾಳೆಯಕ್ಕೆ ಸೇರಿದ ಸುಮಾರು ಐವತ್ತು ಗ್ರಾಮಗಳನ್ನು ಬಿಟ್ಟು ಆಚೆಗೆ ಹೋಗಿ ಹಣ ವಸೂಲು ಮಾಡುತ್ತಿರಲಿಲ್ಲ; ತನ್ನ ಗ್ರಾಮಗಳಲ್ಲಿಯೂ ವಾಡಿಕೆಯಾಗಿ ಎಷ್ಟೋ ಅಷ್ಟನ್ನು ಮಾತ್ರ ವಸೂಲು ಮಾಡುತ್ತಿದ್ದನು; ಇದಕ್ಕೆ ಪ್ರತಿಯಾಗಿ ಆ ಗ್ರಾಮಗಳಿಗೆ ಸಾಮಾನ್ಯವಾದ ದೊಂಬಿ ದಾಳಿಗಳಿಂದ ರಕ್ಷಣೆಯನ್ನು ಕೊಟ್ಟಿದ್ದನು. ದೊಡ್ಡ ಸೈನ್ಯ ಬಂದಾಗ ಮಾತ್ರ ಅವನು ಊರುಗಳ ರಕ್ಷಣೆಗೆ ಹೋಗುತ್ತಿರಲಿಲ್ಲ. ಆ ಗ್ರಾಮಗಳೂ ಕೂಡ ಇವನಿಂದ ಅಂಥ ಸಮಯಗಳಲ್ಲಿ ಸಹಾಯವನ್ನು ನಿರೀಕ್ಷಿಸುತ್ತಿರಲಿಲ್ಲ. ನಾಯಕನು ನ್ಯಾಯದಂತೆ ವಸೂಲಾದ ಕಂದಾಯದಿಂದ ಮೈಸೂರಿನ ಅರಸರ ನಿರೂಪ ಬಂದಾಗ ವಾಡಿಕೆಯಂತೆ ಕಪ್ಪವನ್ನು ಕಳುಹಿಸುತ್ತ ಮೈಸೂರ ಅರಸರ ಸಾಮಂತನಾಗಿ ನಡೆದುಕೊಳ್ಳುತ್ತಿದ್ದನು.

ರಾಮರಸನಾಯಕನಿಗೆ ಇಬ್ಬರು ಹೆಂಡಿರು. ಮೊದಲನೆಯವಳು ಲಕುಮವ್ವೆ, ಎರಡನೆಯವಳು ಗಿರಿಜವ್ವೆ. ರಾಮರಸನು ಗದ್ದಿಗೆಯನ್ನು ಏರುವುದಕ್ಕೆ ಕೊಂಚ ಮೊದಲು ಲಕುಮವ್ವೆಯನ್ನು ಮದುವೆಯಾಗಿದ್ದನು. ಹತ್ತು ವರ್ಷ ಕಳೆದರೂ ಇವರಿಗೆ ಮಕ್ಕಳಾಗಲಿಲ್ಲ. ಆಗಿನ ದಿನದಲ್ಲಿ ಅದರಲ್ಲೂ ಪಾಳೆಯಗಾರರ ವಂಶಗಳಲ್ಲಿ ತಂದೆಯ ಜೊತೆಗೆ ಎದವಿದ ಮಗನಿಲ್ಲದಿದ್ದರೆ ಮುಂದಕ್ಕೆ ವಂಶ ನಡೆಯುವುದೆಂಬ ಆಸೆ ಕಡಿಮೆ. ರಾಮರಸನಿಗೆ ಒಡಹುಟ್ಟಿದವರೂ ಇಲ್ಲ. ಮಕ್ಕಳಾಗದುದರಿಂದ ನಾಯಕನು ಈ ಪಾಳೆಯಪಟ್ಟು ತನ್ನೊಂದಿಗೇ ಮುಗಿಯುವುದೇನೋ ಎಂದು ಒಂದೊಂದು ವೇಳೆ ಚಿಂತಿಸುವನು. ಮಕ್ಕಳಾಗಲೆಂದು ಹಾರೈಸಿ ಸಾಮಾನ್ಯ ವಾಗಿ ಮಾಡಬಹುದಾಗಿದ್ದದಕ್ಕಿಂತ ಸ್ವಲ್ಪ ಹೆಚ್ಚಾಗಿ ಬಾವಿಗಳನ್ನು ತೋಡಿಸಿ ತೋಪುಗಳನ್ನು ಹಾಕಿಸಿ ಮಂಟಪಗಳನ್ನು ಕಟ್ಟಿಸಿ ದೇವರ ಸೇವೆಯನ್ನು ನಡೆಯಿಸಿದನು. ಊರಿನಲ್ಲಿ ಪೂರ್ವದಿಂದ ಇದ್ದ ಶ್ರೀರಾಮದೇವರ ದೇವಾಲಯವನ್ನು ಭದ್ರಪಡಿಸಿ ಅಲ್ಲಿ ಚೆನ್ನಾಗಿ ಪೂಜೆ ನಡೆಯುವುದಕ್ಕೆ ಏರ್ಪಾಡು ಮಾಡಿದನು. ಆದರೆ ಭಗವಂತನು ಮಕ್ಕಳನ್ನು ಅನುಗ್ರಹಿಸ ಲಿಲ್ಲ. ಹೀಗಿರುತ್ತಿರುವಲ್ಲಿ ಊರಿನ ಮುಖಂಡರು ಒಂದು ಸಲ ನಾಯಕನಿಗೆ ನೆಂಟರಲ್ಲಿ ಯಾರನ್ನಾದರೂ ದತ್ತು ತೆಗೆದುಕೊಳ್ಳಬೇಕೆಂದು ಜನದ ಪರವಾಗಿ ಒಂದು ಬಿನ್ನಹ ಮಾಡಿದರು. ರಾಮರಸನು ಇದಕ್ಕೆ ಒಪ್ಪಲಿಲ್ಲ. ಇದು ತಿಳಿದು ಲಕುಮವ್ವೆ ತನ್ನ ನೆಂಟರಲ್ಲಿ ಸೇರಿದ ಗಿರಿಜವ್ವೆಯನ್ನು ಅರಮನೆಗೆ ಕರೆತಂದು ಎರಡು ಮೂರು ವರುಷ ಇರಿಸಿಕೊಂಡಿದ್ದು ನಾಯಕನ ಕಣ್ಣಿಗೆ ಬೀಳುವಂತೆ ಮಾಡಿ ಅವಳನ್ನು ಮದುವೆಯಾಗಬೇಕೆಂದು ಅವನನ್ನು ಬೇಡಿದಳು. ರಾಮರಸನು ಮೊದಲು, ಮರ್ಯಾದೆಗಾಗಿಯೋ ನಿಜವಾ ಗಿಯೋ, ಬೇಡವೆಂದು ಹೇಳಿದನು. ಲಕುಮವ್ವೆ "ನಾನು ಹತ್ತು ವರ್ಷ ನಿಮ್ಮ ಸೇವೆಯನ್ನು ಮಾಡಿದ್ದೇನೆ, ನೀವು ನನ್ನನ್ನು ಗಿಳಿಯಂತೆ ಪೋಷಿಸಿದಿರಿ. ಆದರೆ ನನ್ನಿಂದ ನಿಮ್ಮ ವಂಶ ಬೆಳೆಯಲಿಲ್ಲ. ನನಗೆ ಪ್ರಾಪ್ತಿಯಿಲ್ಲ. ನನಗೆ ಫಲ ಇಲ್ಲದಿದ್ದರೆ, ಕುಲ ಏತಕ್ಕೆ ಅಳಿಯಬೇಕು? ಇವಳನ್ನು ಮದುವೆ ಯಾಗಿ. ಅವಳಿಗೊಂದು ಮಗುವಾದರೆ ಮನೆ ಉಳಿಯುತ್ತದೆ" ಎಂದಳು. "ಅವಳು ನಿನ್ನನ್ನು ಅಸಡ್ಡೆಮಾಡಿದರೆ ಏನು ಮಾಡುವೆ?" ಎಂದು

ನಾಯಕನು ಕೇಳಿದನು. ಲಕುಮವ್ವೆ "ನಾನು ಸಾಕಿದ ಹುಡುಗಿ. ನನಗೆ ಅಸಡ್ಡೆ ಏನು ಮಾಡುತಾಳೆ? ನಾನು ಹಾಕಿದ್ದನ್ನು ಊಟಮಾಡುತಾಳೆ. ನಾನು ಹೇಳಿದಂತೆ ನಡೆದುಕೊಳ್ಳುತಾಳೆ. ಇದಕ್ಕೆ ನೀವು ಯೋಚನೆಮಾಡ ಬೇಡಿ" ಎಂದಳು. ರಾಮರಸನು ಒಪ್ಪಿ ಗಿರಿಜವ್ವೆಯನ್ನು ಮದುವೆ ಯಾದನು.

ಗಿರಿಜವ್ವೆ ಬಹು ಚೆಲುವೆ. ಮದುವೆಯಾದಂದಿನಿಂದ ಅವಳು ನಾಯಕನ ಮತ್ತು ಲಕುಮವ್ವೆಯ ಶುಶ್ರೂಷೆಯನ್ನು ತನ್ನ ಮುಖ್ಯ ಕೆಲಸ ವೆಂದು ವಹಿಸಿದಳು. ನಾಯಕನು ಶಂಕೆಪಟ್ಟಂತೆ ಅವಳು ಲಕುಮವ್ವೆ ಯನ್ನು ಅಶ್ರದ್ಧೆಯಿಂದ ಕಾಣಲಿಲ್ಲ. ಸಂಬಂಧದವರೇನೋ ಹಿರಿಯ ರಸಿಯನ್ನು ಒತ್ತಟ್ಟಿಗಿಡುವುದಕ್ಕೆ ಯತ್ನಮಾಡಿದರು; ಗಿರಿಜವ್ವೆಗೂ ಬೋಧಿಸಿದರು. ಗಿರಿಜವ್ವೆಯಾದರೆ "ಮನೆ ಅವಳದು. ತಾನಿದ್ದು ಕೊಂಡೇ ನನ್ನನ್ನು ಕರೆತಂದಳು. ಅವಳು ಕೊಟ್ಟ ಅರ್ಧ ನನ್ನದು. ನಾನು ಆ ಸಾಲವನ್ನೇ ಹರಿಸಬೇಕಾಗಿದೆ. ಅವಳ ಅರ್ಧವನ್ನು ಕಿತ್ತು ಕೊಂಡು ಪಾಪಕಟ್ಟಿಕೊಳ್ಳಲೇ? ದೇವರಕೃಪೆಯಿಂದ ಈಗ ರಾಣಿಯಾದೆ. ಅನ್ಯಾಯಮಾಡಿದರೆ ಮುಂದಿನ ಜನ್ಮಕ್ಕೆ ತೊತ್ತಾದೇನು" ಎಂದಳು. ಗಿರಿಜವ್ವೆ ಹೀಗೆ ನಡೆದುಕೊಳ್ಳುತ್ತಿದ್ದುದರಿಂದ ಸಂಸಾರದಲ್ಲಿ ಸುಖ ದಿನೇ ದಿನೇ ವೃದ್ಧಿಯಾಯಿತು. ಲಕುಮವ್ವೆ ಹೊರಗೆ ಧೈರ್ಯದಿಂದ ಮಾತನಾಡಿದರೂ ಮನಸ್ಸಿನಲ್ಲಿ ಇವಳೇನು ಮಾಡುವಳೋ ಎಂದು ಮೊದಲಲ್ಲಿ ಶಂಕೆಪಡುತ್ತಿದ್ದಳು. ಒಂದು ವರ್ಷದ ದಿನ ಗಿರಿಜವ್ವೆಯ ನಡತೆಯನ್ನು ನೋಡಿ, ತಾನು ಮಾಡಿದ ಕೆಲಸ ಇಷ್ಟು ಒಳ್ಳೆಯ ದಾಯಿತೆ, ಎಂದು ಬಹಳ ಸಂತೋಷಪಟ್ಟಳು. ಗಿರಿಜವ್ವೆಯನ್ನು ತನ್ನ ಮಗಳಂತೆ ಕಾಣುತ್ತ 'ಅವಳಿಗೆ ಒಡವೆ ವಸ್ತುಗಳನ್ನೆಲ್ಲ ತಾನೇ ನೋಡಿ ಮಾಡಿಸಿ ರಾಮರಸನಿಗೆ ಸಂಸಾರಸುಖದಲ್ಲಿ ಏನೂ ಕಡಿಮೆ ಇಲ್ಲದಂತೆ ನೋಡಿಕೊಂಡಳು. ತಾನು ವ್ರತ, ಸೇವೆ, ಪೂಜೆ ಇವುಗಳಲ್ಲಿ ಮನಸ್ಸ ನ್ನಿಟ್ಟಳು.

ನಾಯಕನಿಗೂ ಅವನ ರಾಣಿಯರಿಗೂ ಪರಸ್ಪರ ಅಂತಸ್ತಾಪಗಳು ಇಲ್ಲದೆ ಇದ್ದರೂ, ಅರಮನೆಯಲ್ಲಿ ಎಲ್ಲವೂ ಮೊದಲಿನಂತೆ ಇತ್ತೆಂದು

ಹೇಳುವಂತಿರಲಿಲ್ಲ. ಮದುವೆಯಾಗುವವರೆಗೆ ಗಿರಿಜವ್ವೆ ಒಬ್ಬಳೇ ಇದ್ದರೂ ಅದಾದಮೇಲೆ ಅವಳ ತಮ್ಮನೊಬ್ಬನೂ ತಾಯಿ ಒಬ್ಬಳೂ ಬಂದು ಅರಮನೆಯಲ್ಲೇ ನಿಂತರು. ಈ ತಾಯೇ ಗಿರಿಜವ್ವೆಗೆ ಲಕುಮವ್ವೆಯನ್ನು ಅಶ್ರದ್ಧೆಯಿಂದ ಕಾಣೆಂದು ಬೋಧಿಸಿದ್ದು. ಗಿರಿಜವ್ವೆ ತನ್ನ ಮಾತನ್ನು ಕೇಳದಿರಲು ಇವಳು ಅರಮನೆಯಲ್ಲಿ ಇತರರೊಂದಿಗೆ ಲಕುಮವ್ವೆಯ ವಿಚಾರವಾಗಿ ಸಣ್ಣ ಮಾತುಗಳನ್ನು ಆಡುವುದಕ್ಕೆ ಮೊದಲು ಮಾಡಿದಳು. ಲಕುಮವ್ವೆ ತನ್ನ ಗುಣದಿಂದ ಎಲ್ಲರಿಗೂ ಬೇಕಾದವಳಾಗಿ ತಾಯಂತೆ ಇದ್ದವಳು, ಇದೊಂದನ್ನೂ ಕಿವಿಗೆ ಹಾಕಿಕೊಳ್ಳದೆ ಅವರೇ ಸರಿಹೋಗುತ್ತಾರೆ ಎಂದು ಸುಮ್ಮನಿದ್ದಳು. ಗಿರಿಜವ್ವೆಯ ತಮ್ಮ ಹಳ್ಳಿಯಲ್ಲಿ ಪೋಲಿಯಾಗಿದ್ದವನು ಅರಮನೆಗೆ ಬಂದು ಅಲ್ಲಿಯ ಊಟ ಉಪಚಾರಗಳಿಂದ ಪುಂಡನಾಗಿ ಬೆಳೆದನು. ದೊರೆಯ ಮೈದುನನಾದುದರಿಂದ ಇವನಿಗೆ ಪುಂಡತನಕ್ಕೆ ಸೌಕರ್ಯ ಹೆಚ್ಚು. ಊರಿನ ತುಂಟರೊಂದಿಗೆ ಸೇರಿ ಓಡಿಯಾಡುವನೆಂದೂ ಸಂಸಾರಿ ಹೆಣ್ಣುಮಕ್ಕಳ ವಿಷಯದಲ್ಲಿ ಒಂದೆರಡು ಸಲ ಧೂರ್ತತೆಯಿಂದ ನಡೆದುಕೊಂಡನೆಂದೂ ಅರಮನೆಯಲ್ಲಿ ತಿಳಿದು ಒಂದೆರಡು ಸಲ ಸ್ವಲ್ಪ ಮಾತುಗಳಾದುವು. ನಾಯಕನಾಗಲಿ ಲಕುಮವ್ವೆಯಾಗಲಿ ಇಂಥ ಪುಂಡಾಟಗಳಿಗೆ ಅವಕಾಶ ಕೊಡುವವರಲ್ಲ. ಕಸ್ತೂರಿನಾಯಕನಿಗೆ ಆ ಎರಡು ಸಲವೂ ಬೈಗಳಾದುವು. ತಾಯಿ, ತಮ್ಮನ, ನಡತೆ ಸರಿಯಾಗಿರದಿದ್ದರೂ ಗಿರಿಜವ್ವೆ ತಾನು ಅರಮನೆಯ ಊಟಮಾಡುತ್ತಾ ಅವರನ್ನು ಹಳ್ಳಿಯ ಕೂಳಿಗೆ ಏಕೆ ಕಳುಹಿಸಬೇಕೆಂದು ಎಲ್ಲವನ್ನೂ ಸಹಿಸಿಕೊಂಡು ಸುಮ್ಮನಿರುತ್ತಿದ್ದಳು.

ಮದುವೆಯಾದ ಎರಡನೆಯ ವರ್ಷ ಗಿರಿಜವ್ವೆ ಒಬ್ಬ ಮಗನನ್ನು ಹೆತ್ತಳು. ನಾಯಕನಿಗೂ ಲಕುಮವ್ವೆಗೂ ಬಹಳ ಆನಂದವಾಯಿತು. ಊರಿನ ಜನವೆಲ್ಲ ಬಹಳ ಸಂತೋಷಪಟ್ಟರು. ಪಾಳೆಯದ ದೇವಸ್ಥಾನಗಳಲ್ಲೆಲ್ಲ ವಿಶೇಷ ಪೂಜೆಗಳು ನಡೆದುವು. ನಾಯಕನ ವಂಶ ಉಳಿಯುವಂತೆ ಆಯಿತೆಂದು ಎಲ್ಲರೂ ಸ್ವಸ್ಥಚಿತ್ತರಾದರು.

ಹೀಗಿರುವಲ್ಲಿ ಮರಾಟೆಯವರು ಸದಾಶಿವರಾಯನ ಕೈಕೆಳಗೆ ದಂಡೆತ್ತಿ ಬಂದರು. ರಾಮರಸನಾಯಕನು ಗದ್ದಿಗೆಯನ್ನೇರಿದ ಮೇಲೆ

ಅವರು ಇದಕ್ಕೆ ಹಿಂದೆ ಎರಡುಸಲ ಬಂದಿದ್ದರು. ಮೊದಲನೆಯ ಸಲ ನಾಯಕನು ಅವರಿಗೆ ತಾನು ಮೈಸೂರಿನವರಿಗೆ ಸಾಮಂತನೆಂದೂ ಮರಾಟೆಯವರು ಮೈಸೂರವರನ್ನು ಗೆದ್ದರೆ ಅವರಿಗೆ ಸಾಮಂತನಾಗುವೆನೆಂದೂ ಆಗ್ಗೆ ಮೈಸೂರಿಗೆ ಕೊಡಬೇಕಾಗಿದ್ದ ಕಪ್ಪವನ್ನು ಮರಾಟೆಯವರಿಗೆ ಸಲ್ಲಿಸುವೆನೆಂದೂ ಹೇಳಿಕಳುಹಿಸಿದನು. ಅವರು ಒಪ್ಪದೆ ಕೋಟೆಯ ಹೊರಗೆ ಕಾದಿದ್ದು ಹಳ್ಳಿಯ ಜನಗಳನ್ನು ಹಿಂಸಿಸುವುದಕ್ಕೆ ನೋಡಿದರು. ಆ ಜನರು ಎಂದಿನಂತೆ ಮನೆಮಠ ಬಿಟ್ಟು ಕಾಡಿಗೆ ಹೊರಟರು. ಹಳ್ಳಿಯವರನ್ನು ಕಾಡಿಗೆ ಅಟ್ಟಿ ಮರಾಟೆಯವರಿಗೆ ಫಲವೇನೂ ಇಲ್ಲ. "ರಾಮರಸನಾದರೆ ಕೋಟೆಯಲ್ಲಿ ಭದ್ರವಾಗಿ ನಿಂತು ನೀವು ಏನಾದರೂ ಮಾಡಿ ಎಂದುಬಿಟ್ಟನು. ರಾಮರಸನು ಇಷ್ಟು ಧೈರ್ಯಮಾಡುವುದಕ್ಕೆ ನಿಜಗಲ್ ಕೋಟೆ ದುರ್ಗಮವಾಗಿದ್ದುದೇ ಕಾರಣ." ಆ ಸಲ ಮರಾಟೆಯವರು ಬಹಳ ದಿನ ಕಾಯುವುದಕ್ಕಿರಲಿಲ್ಲ. ಐದು ದಿವಸ ನೋಡಿ ನಿಜಗಲ್ಲನ್ನು ಬಿಟ್ಟು ಸುಲಭವಾಗಿ ಸಗ್ಗಬಹುದಾದ ಬೇರೆಯ ಪಾಳೆಯಕ್ಕೆ ಹೊರಟರು. ರಾಮರಸನು ಸುಲಭದಲ್ಲಿಯೇ ಕಷ್ಟವನ್ನು ತಪ್ಪಿಸಿಕೊಂಡ ಹಾಗಾಯಿತು. ಎರಡನೆಯ ಸಲ ಬಂದಾಗ ರಾಮರಸನು ಸುತ್ತಲ ಪಾಳೆಯಗಾರರಿಗೆ ಹೇಳಿಕಳುಹಿಸಿ ಅವರಕಡೆಯ ಸೈನ್ಯ ಬಂದು ಮರಾಟೆಯವರ ಪಾಳೆಯದಿಂದ ಒಂದು ಮೈಲಿಯಷ್ಟು ದೂರದಲ್ಲಿ ನಿಲ್ಲುವ ಹಾಗೆ ಏರ್ಪಾಡು ಮಾಡಿ, ಆ ಸೈನ್ಯವು ಮೈಸೂರರಸರ ಕಡೆಯಿಂದ ಈ ಪ್ರಾಂತ್ಯದಲ್ಲಿ ಇರಿಸಲ್ಪಟ್ಟಿರುವ ಸೈನ್ಯವೆಂದೂ ಇನ್ನೂ ದೊಡ್ಡ ಸೈನ್ಯ ಬರುವುದರಲ್ಲಿದೆಯೆಂದೂ ವದಂತಿ ಹುಟ್ಟಿಸಿದನು. ಮರಾಟೆಯವರು ಹೇಗಾದರೂ ಕೋಟೆಯೊಳಕ್ಕೆ ಪ್ರವೇಶಿಸಿದರೆ ಮುಂದಕ್ಕೆ ಇದು ತಮ್ಮ ಪ್ರಯಾಣಗಳಲ್ಲೆಲ್ಲಾ ತಮಗೆ ಅನುಕೂಲವಾದ ಒಂದು ಬಿಡಾರವಾಗುವುದೆಂದು ಯೋಚಿಸಿ ಪಿತೂರಿಯಿಂದ ಬಾಗಿಲನ್ನು ತೆಗೆಯಿಸಿಕೊಳ್ಳಲು ಯತ್ನಮಾಡಿದರು. ಜನರು ರಾಮರಸನ ವಿಷಯದಲ್ಲಿ ಎರಡೆಣಿಸುವವರಲ್ಲ. ಅದರಿಂದ ಮರಾಟೆಯವರು ಹತ್ತು ದಿನ ಕೋಟೆಯ ಹೊರಗೆ ಕಾದರೂ ಪ್ರಯೋಜನವಾಗಲಿಲ್ಲ. ಅಷ್ಟರಲ್ಲಿ ಇನ್ನೊಂದು ದಾರಿಯಲ್ಲಿ ಮುಂದುವರಿದು ಹೋಗಿದ್ದ ಮರಾಟೆಯವರ ಪ್ರಮುಖ ಸೇನಾಪತಿ ಈ ದಳ ಬಂದು

ತನ್ನ ಜೊತೆಗೆ ಸೇರಬೇಕೆಂದು ಹೇಳಿಕಳುಹಿಸಿದನು. ಆ ಸಲವೂ ನಿಜಗಲ್ಲಿನ ಮೇಲೆ ಕೈ ಸಾಗದೆ ಮರಾಟೆಯುವರು ಹಿಂದಕ್ಕೆ ಹೋಗಬೇಕಾಯಿತು.

ಮೂರನೆಯ ಸಲ ಬರುವಲ್ಲಿ, ಹಿಂದಿನ ಎರಡು ಸಲ ರಾಮರಸ ನಾಯಕನು ಕಪ್ಪವನ್ನು ಕೊಡದೇ ಇದ್ದರೂ ಹೆವರಿ ಕೋಟೆಯೊಳಗೆ ನಿಂತಿದ್ದನೆಂಬ ಕಾರಣದಿಂದ ಅವರು ಕಡಿಮೆ ಜನ ಬಂದರು. ಹಿಂದಿನ ಸಲದ ಪರಿಶ್ರಮದಿಂದ ರಾಮರಸನಾಯಕನೂ ಸ್ವಲ್ಪ ಪ್ರಯೋಜನವನ್ನು ಪಡೆದಿದ್ದನು. ನೆರೆಯ ಒಬ್ಬಿಬ್ಬರು ಪಾಳೆಯಗಾರರ ಸಹಾಯದಿಂದ ಸ್ವಲ್ಪ ಸೈನ್ಯವನ್ನು ಸೇರಿಸಿ, ಅದಕ್ಕೆ ತಾನು ಮುಂದಾಳಾಗಿ ನಿಂತು ಮರಾಟೆಯವರ ಮೇಲೆ ಕೈಮಾಡುವುದಕ್ಕೆ ಏರ್ಪಾಡು ಮಾಡಿಕೊಂಡಿದ್ದನು. ಕಡಿಮೆ ಸೈನ್ಯ ಬಂದುದರಿಂದ ಈ ಏರ್ಪಾಡಿಗೆ ಅನುಕೂಲವೇ ಆಯಿತು. ಮೂರು ದಿನ ಒಳ್ಳೆಯ ಮಾತಿನಲ್ಲಿ ತಾನು ಏನೂ ಕೊಡಲಾಗುವುದಿಲ್ಲವೆಂದು ಹೇಳಿಕಳುಹಿಸಿದರೂ ಅವರು ಒಪ್ಪದೆ ಇರಲು, ನಾಲ್ಕನೆಯ ದಿನ ಬೆಳಗಾಗು ಮರಾಟೆಯ ಸೇನೆಯುವರು ಎದ್ದು ಕಣ್ಣು ಹೊಸಕಿಕೊಳ್ಳುವ ಮುಂದೆಯೇ ಅವರ ಪಾಳೆಯದ ಮೇಲೆ ನುಗ್ಗಿ ಅವರನ್ನು ಚೆಲ್ಲಾಪಿಲ್ಲಿ ಓಡಿಸಿದನು. ಮರಾಟೆಯುವರು ಕೆಟ್ಟೆವೆಂದು ಆಸಲಕ್ಕೆ ಬರಿಯ ಕೈಯಲ್ಲಿ ಹೊರಟು ಹೋದರು.

ಇದಾದ ಕೆಲವು ದಿವಸದಮೇಲೆ ಅರಸನ ಮಗನ ಹುಟ್ಟಿದ ಹಬ್ಬ ಬಂದಿತು. ಮರಾಟೆಯುವರ ಮೇಲೆ ಯುದ್ಧಮಾಡಿ ಗೆದ್ದಿದ್ದ ಸಂತೋಷ ಒಂದು ಕಡೆ. ಅರಗುವರನ ಹುಟ್ಟಿದ ಹಬ್ಬ ಒಂದು ಕಡೆ. ಜನರ ಉತ್ಸಾಹಕ್ಕೆ ಮೇರೆಯಿಲ್ಲವಾಯಿತು. ಊರಿನಲ್ಲಿ ದೇವರ ಉತ್ಸವಗಳು ಬಹಳ ವಿಜೃಂಭಣೆಯಿಂದ ನಡೆದು, ನಾಲ್ಕಾರು ದಿನ ಊರಿನ ಜನರು ಬ್ರಾಹ್ಮಣರಿಗೂ ಬಡಬಗ್ಗರಿಗೂ ಸಮಾರಾಧನೆಗಳನ್ನು ನಡೆಯಿಸಿದರು. ಊರಿನಲ್ಲೆಲ್ಲಾ ಭಜನೆ. ಮುಖ್ಯವಾದ ಉತ್ಸವಗಳೆಲ್ಲ ಅರಮನೆಯ ಕಡೆಯಿಂದ ನಡೆದುವು. ರಾಮರಸನಾಯಕನು ದೇವರ ಮುಂದೆ ನಮ್ರನಾಗಿ ನಿಂತು ಕಿಂಕರನಂತೆ ನಡೆದುಕೊಂಡನು. ಹಿರಿಯರೂ ಪುಣ್ಯವಂತರೂ ಭಕ್ತರಂತೆ ನಡೆದರೆ ಜನರು ಅವರಿಗೆ ಅತಿಶಯವಾದ ಪ್ರೀತಿ ಗೌರವಗಳನ್ನು ತೋರಿಸುವರು. ರಾಮರಸನು ಈ ಕಾರಣದಿಂದ ಪ್ರಜೆಗಳ ವಿಶ್ವಾಸವನ್ನು ಎಂದಿಗಿಂತ ಹೆಚ್ಚಾಗಿ ಸಂಪಾದಿಸಿಕೊಂಡನು.

"ಊರಿನಲ್ಲಿ ಉತ್ಸವಗಳು ಹೆಚ್ಚಿದುವೆಂದರೆ ಬರಿಯ ಒಳ್ಳೆಯದು ಮಾತ್ರ ಹೆಚ್ಚಾಗುವುದಿಲ್ಲ. ಆಗ ಒಳ್ಳೆಯವರು ಸಂತೋಷಪಡುವಂತೆ ದುಷ್ಟರೂ ಸಂತೋಷಪಡುತ್ತಾರೆ." ನಿಜಗಲ್ಲಿನ ಈ ಉತ್ಸವಗಳಲ್ಲಿ ಊರಿನ ಸಣ್ಣ ಪುಟ್ಟ ಪೋಲಿ ಪುಂಡರು ಒಟ್ಟುಗೂಡಿ ತಾವೂ ತಮಾಷೆಯಾಗಿ ಕಾಲವನ್ನು ಕಳೆದರು. ಇವರಿಗೆಲ್ಲ ಕಸ್ತೂರಿನಾಯಕನು ಮುಂದಾಳು. ರಾತ್ರಿ ಇವರು ಬಹಳ ಹೊತ್ತಾಗುವ ತನಕ ಒಂದು ಕಡೆ ಗುಂಪುಕೂಡಿ ಮದ್ಯವನ್ನು ಕುಡಿದು ಎರಡು ಮೂರು ದಿನ ಹುಚ್ಚಾಪಟ್ಟೆ ಆಡಿದರು. ಇದು ರಾಮರಸನಾಯಕನ ಕಿವಿಗೆ ಬಿದ್ದು ಅವನು ಗಿರಿಜವ್ವೆಯನ್ನು ಕರೆದು ಅವಳ ತಮ್ಮನಿಗೆ ಬುದ್ಧಿ ಹೇಳಬೇಕೆಂದು ಹೇಳಿದನು. ಗಿರಿಜವ್ವೆ ತಮ್ಮನಿಗೆ ಈ ಮಾತನ್ನು ತಿಳಿಸಿದಳು. "ನಾನು ತಮಾಷೆಯಾಗಿರುವುದಕ್ಕೆ ನಿಮ್ಮದೇನು ಅಡ್ಡಿ ?" ಎಂದು ಕಸ್ತೂರಿನಾಯಕನು ಒದರಿದನು. ಅಂದಿನ ರಾತ್ರಿ ಎಂದಿಗಿಂತ ಹೆಚ್ಚು ಮದ್ಯ ಖರ್ಚಾಯಿತು. ಕಸ್ತೂರಿಗೆ ಅದಕ್ಕೆ ತಕ್ಕಹಾಗೆ ಬುದ್ಧಿ ಸ್ವಾಧೀನ ತಪ್ಪಿತು. ದೇವರ ಉತ್ಸವದ ಗಲಭೆಯಲ್ಲಿ ಅವನೂ ಅವನ ಜೊತೆಯವರೂ ಯಾರೋ ಒಬ್ಬ ಕುಲಸ್ತ್ರೀಯ ಮೇಲೆ ಕೈಹಾಕಿದರು. ಜನರು ಇನ್ನು ತಡೆಯಲಾರದೆ ಪ್ರತ್ಯಕ್ಷವಾಗಿ ರಾಜನ ಬಳಿಗೆ ಬಂದು, ತಮ್ಮ ಮೈದುನನಿಂದ ನಮ್ಮ ಸಂಸಾರಗಳ ಮಾನ ಉಳಿಯುವಂತಿಲ್ಲ, ಎಂದು ಹೇಳಿಕೊಂಡರು. ಮಾರನೆಯ ದಿನ ರಾಮರಸ ನಾಯಕನು ಕಸ್ತೂರಿಯನ್ನು ಸಭೆಗೆ ಕರೆಯಿಸಿ, ಏನು ನಡೆಯಿತೆಂಬುದನ್ನು ಪಂಚಾಯಿತರ ಸಮಕ್ಷಮ ವಿಚಾರಣೆಮಾಡಿ, ಮೈದುನನು ತಪ್ಪು ಮಾಡಿದ್ದು ನಿಷ್ಕರ್ಷೆಯಾಗಿ ತಿಳಿಯಲು ಅವನನ್ನು ಎಲ್ಲರೆದುರಿಗೆ ಛೀಗುಟ್ಟಿ, ಹೀಗೆ ಮತ್ತೆ ಮಾಡಬಾರದು, ಮಾಡಿದರೆ ಕ್ರೂರವಾದ ಶಿಕ್ಷೆಯನ್ನು ವಿಧಿಸುವೆವು, ಎಂದು ಎಚ್ಚರಿಸಿದನು; ಅರಮನೆಯಲ್ಲಿ ಗಿರಿಜವ್ವೆಯನ್ನು ಕುರಿತು, ನಿನ್ನ ತಮ್ಮನಿಂದ ನನಗೆ ಮಾನ ಉಳಿಯುವಂತಿಲ್ಲ, ಎಂದು ಹೇಳಿದನು. ಗಿರಿಜವ್ವೆ ಅದಕ್ಕೆ ಮೊದಲೇ ಅವಳ ತಮ್ಮನನ್ನು ಹಳ್ಳಿಗೆ ಕಳುಹಿಸಿಬಿಡಬೇಕೆಂದು ಯೋಚಿಸಿದ್ದಳು. ಅಂದು ನಾಯಕನ ಮಾತನ್ನು ಕೇಳಿ ತಮ್ಮನನ್ನು ಊರಿಗೆ ಕಳುಹಿಸಿಬಿಡುವೆನೆಂದು ಹೇಳಿದಳು. ಲಕುಮವ್ವೆ "ಕಸ್ತೂರಿ ಮಾಡಿದ್ದೇನೋ ತಪ್ಪೇ. ಆದರೆ ಅವನು ಇನ್ನೂ ಹುಡುಗ. ಈ ಸಲಕ್ಕೆ

ಬುದ್ಧಿ ಹೇಳಿದ್ದಾಯಿತು. ಇನ್ನು ಮೇಲೆ ಅವನು ಪುಂಡತನ ಮಾಡದಂತೆ ನೋಡಿಕೊಂಡರೆ ಸರಿ" ಎಂದಳು. ಗಿರಿಜವ್ವೆ ಸುಮ್ಮನಾಗಬೇಕಾಯಿತು.

ಸಭೆಯಲ್ಲಿ ಎಲ್ಲರೆದುರಿಗೆ ಮಾತು ಕೇಳಿ ಕಸ್ತೂರಿಗೆ ಬಹಳ ಕೋಪ ಬಂದಿತು. ಅವನು ತನ್ನ ತಪ್ಪು ಎಂಥದೆಂದು ಯೋಚಿಸದೆ ಅರಸನ ಮೇಲೆ ಆಕ್ರೋಶಗೊಂಡನು. "ತಪ್ಪು ಮಾಡಿದರೆ ಒಂದು ಕಡೆಗೆ ಕರೆದು ಬುದ್ಧಿ ಹೇಳಬಾರದಿತ್ತೆ? ಎಲ್ಲರೆದುರಿಗೆ ಅವಮಾನಮಾಡಿದರಲ್ಲ," ಎಂದು ಅವನು ತಾಯ ಬಳಿ ಹೇಳಿಕೊಂಡನು. ಅವಳು "ಅರಸನು ಮಗನನ್ನು ಹೆರುವುದಕ್ಕೆ ನಿಮ್ಮಕ್ಕನನ್ನು ಮದುವೆಯಾದನೇ ಹೊರತು ಅವಳನ್ನು ರಾಣಿಯಂತೆ ಕಾಣುತ್ತಿಲ್ಲ. ಲಕುಮವ್ವೆಯೇ ರಾಣಿ. ನಿಮ್ಮಕ್ಕನಿಗೆ ಏನೂ ಸ್ವತಂತ್ರವಿಲ್ಲ. ಇದ್ದಿದ್ದರೆ ಅರಸನು ನಿನ್ನನ್ನು ಇಷ್ಟು ಬಯ್ಯುವುದಕ್ಕಿತ್ತೆ? ಅದರ ರೀತಿಯೇ ಬೇರೆಯಿರುತ್ತಿತ್ತು. ಹಿರಿಯವಳು ತಾನೇ ತಾನಾಗಿ ಇರುವುದರಿಂದಲೇ ಅರಸನು ನಿನ್ನನ್ನು ಇಷ್ಟು ತುಚ್ಛವಾಗಿ ಕಾಣುತ್ತಿದಾನೆ. ಹೀಗೆಲ್ಲಾ ಮಾಡಬೇಕೆಂದು ಅವಳೇ ಅವನಿಗೆ ಹೇಳಿಕೊಟ್ಟಿರಬೇಕು" ಎಂದು ಹೇಳಿದಳು. ಕಸ್ತೂರಿಗೆ ಲಕುಮವ್ವೆಯ ವಿಷಯದಲ್ಲಿ ಬಹಳ ಆಗ್ರಹ ವುಂಟಾಯಿತು. ಸಾಲದುದಕ್ಕೆ ಊರಿನ ದುಷ್ಟರ ಸಮುದಾಯದಲ್ಲಿ ಅವನಿಗೆ ಇದ್ದ ದೊಡ್ಡಸ್ತಿಕೆ ಸಭೆಯಲ್ಲಿ ದಂಡನೆಯಾದ ಕಾರಣದಿಂದ ಕಡಿಮೆಯಾಯಿತು. ಯಾರೂ ಹತ್ತಿರ ಸೇರದಾದರು. ಬದುಕು ಬೇಸರ ಕ್ಕಿಟ್ಟುಕೊಂಡಿತು. ಅರಸನ ಮೇಲೆಯೂ ಲಕುಮವ್ವೆಯ ಮೇಲೆಯೂ ಈ ಕೋಪವನ್ನು ಹೇಗೆ ತೀರಿಸಿಕೊಳ್ಳಬೇಕೆಂದು ಅವನು ದಿನವೂ ತನ್ನಲ್ಲಿ ತಾನೇ ಯೋಚನೆಮಾಡುತ್ತಿದ್ದನು. ತಾನು ಮಾಡುತ್ತಿರುವ ಯೋಚನೆ ಯಿಂದ ತನ್ನ ಅಕ್ಕನಿಗೂ ಕೇಡಾದೀತೆಂದು ಅವನಿಗೆ ತೋರಲಿಲ್ಲ. ಅವನಂಥ ಜನರ ಬುದ್ಧಿ ಅಷ್ಟು ದೂರ ಓಡುವುದಿಲ್ಲ.

ಮೂರನೆಯ ಸಲ ಬಂದಾಗ ಅಜಾಗ್ರತೆಯಿಂದ ಸೋತು ಓಡಿದ ಮಹಾರಾಷ್ಟ್ರ ಸೈನ್ಯ ಒಂದಕ್ಕೆ ಮೂರರಷ್ಟಾಗಿ ಒಂದು ತಿಂಗಳಲ್ಲಿ ಮತ್ತೆ ಬಂದಿತು. ರಾಮರಸನಾಯಕನು ಇದಕ್ಕೆ ಸಿದ್ಧನಾಗಿರಲಿಲ್ಲ. ಕೋಟೆ ಯಲ್ಲೇನೋ ಬೇಕಾದಷ್ಟು ದವಸಧಾನ್ಯವಿತ್ತು. ನಾಯಕನು ನೆರೆಯ ಪಾಳೆಯಗಾರರ ಸಹಾಯವನ್ನು ಮತ್ತೆ ಕೇಳುವುದಕ್ಕೆ ಚಾರರನ್ನು ಕಳುಹಿಸಿ

ಈ ದೊಡ್ಡ ಸೇನೆಯನ್ನು ತಡೆಯುವುದು ಹೇಗೆ ಎಂದು ಯೋಚಿಸುತ್ತ ಇದ್ದನು. ಒಬ್ಬ ಚಾರನನ್ನು ಮೈಸೂರ ಕಡೆಗೂ ಅಟ್ಟಿದನು. ಊರಿನಲ್ಲಿದ್ದ ಜನರನ್ನು ಸ್ವಲ್ಪ ಹುರಿಗೊಳಿಸಿ ಸಾಧ್ಯವಾದರೆ ಪಾಳೆಯದ ಸೇನೆಯನ್ನೂ ಗುಂಪು ಕಟ್ಟಿಸಿ ಶತ್ರುವಿನ ಮೇಲೆ ಬೀಳುವುದೆಂದು ಯೋಚನೆಮಾಡಿದನು. ಇಂಥ ಗುಂಪಿಗೆ ಕೇವಲ ಸಭ್ಯರು ಮಾತ್ರವಲ್ಲದೆ ಪುಂಡರೂ ತುಂಟರೂ ಕೂಡ ಸೇರಬೇಕು. ಈ ವೇಳೆಗೆ ಕಸ್ತೂರಿ, ತಾನು ಹೀಗೆ ಮಾಡುತ್ತೇನೆ ಹಾಗೆ ಮಾಡುತ್ತೇನೆ, ಎಂದು ಜಂಭಕೊಚ್ಚಿ ಅವರ ಮೇಲೆ ತನಗಿದ್ದ ಅಧಿಕಾರವನ್ನು ಪುನಃ ಸಂಪಾದಿಸಿದ್ದನು. ರಾಮರಸನು ಪುನಃ ಸೇನೆಯನ್ನು ಕರೆಯಬೇಕೆಂದಾಗ ಕಸ್ತೂರಿಯ ಬೋಧನೆಯಿಂದ ಅದು ಸಾವಕಾಶವಾಯಿತು.

"ಕಸ್ತೂರಿಗೆ ಮೊದಲಲ್ಲಿ ತನ್ನ ಶಕ್ತಿ ಎಷ್ಟು ಎಂಬುದನ್ನು ನಾಯಕನಿಗೆ ತೋರಿಸಬೇಕೆಂಬ ಉದ್ದೇಶ ಹೊರತು ಬೇರೆ ಇರಲಿಲ್ಲ." ಆದರೆ ಯಾವಾಗ ತನ್ನ ಮಾತಿನಂತೆ ಕೆಲವು ಜನ ನಡೆದು ಅವನು ರಾಮರಸನಿಗಿಂತ ತಾನು ಗಟ್ಟಿಗನೆಂದು ಎಣಿಸಿದನೋ ಆಗ ಅವನ ಮನಸ್ಸಿನಲ್ಲಿ ಒಂದು ದುರಾಲೋಚನೆ ಹುಟ್ಟಿತು. "ರಾಮರಸನು ಎಷ್ಟರ ಮನುಷ್ಯ? ಇವನು ಏಕೆ ಪಾಳೆಯಗಾರನಾಗಿರಬೇಕು? ತಾನೇ ಏಕೆ ಆಗಬಾರದು? ಮರಾಟಿಯವರ ಸೇನಾಪತಿಯ ಬಳಿಗೆ ಹೋಗಿ ತಾನು ಕೋಟೆಯನ್ನು ಬಿಟ್ಟುಕೊಡುವುದಾಗಿ ಮಾತುಕೊಟ್ಟು ಅವರು ರಾಮರಸನನ್ನು ಹಿಡಿಯುವಂತೆಯೂ ತನ್ನನ್ನು ಪಾಳೆಯಗಾರನೆಂದು ಒಪ್ಪುವಂತೆಯೂ ಏಕೆ ಮಾಡಬಾರದು? ಹೀಗೆಂದು ಅವನು ಮೂರು ದಿನ ಯೋಚಿಸಿ ಹಾಗೆಯೇ ಮಾಡುವುದಾಗಿ ನಿರ್ಧರಿಸಿದನು. ಮಾರನೆಯ ದಿನ ರಾಮರಸನ ಬಳಿಗೆ ಹೋಗಿ ತಾನು ಜನರನ್ನು ಒಟ್ಟುಗೂಡಿಸುವುದಾಗಿಯೂ ನಾಯಕನು ಯೋಚನೆಮಾಡಬೇಕಾಗಿಲ್ಲವೆಂದೂ ಧೈರ್ಯ ಹೇಳಿದನು.

ರಾಮರಸನಿಗೆ ಬಹಳ ಸಂತೋಷವಾಯಿತು. ಅವನು ಇದಕ್ಕೆ ಮೆಚ್ಚಿ ಕಸ್ತೂರಿಗೆ "ನಿನ್ನ ಹುಡುಗತನ ಬಿಟ್ಟರೆ ನೀನು ಈ ಊರಿನಲ್ಲಿ ಪಾಳೆಯಗಾರನಂತಿರಬಹುದು. ನಿನಗೇನು ಕಡಮೆ?" ಎಂದು ಹೇಳಿದನು. ಆ ದಿನ ರಾತ್ರಿ ರಾಮರಸನು ಎಂದಿನಂತೆ ಕೋಟೆಯನ್ನು ನೋಡಿಕೊಂಡು

ಬರುವುದಕ್ಕೆ ಹೊರಟಾಗ ಕಸ್ತೂರಿಯನ್ನು ಜೊತೆಗೆ ಕರೆದುಕೊಂಡು ಹೋದನು. ಇದರಿಂದ ಕಸ್ತೂರಿ ಕಾವಲ ಸಂಚುಗಳನ್ನೆಲ್ಲಾ ಕೊಂಚ ಮಟ್ಟಿಗೆ ತಿಳಿದುಕೊಂಡನು. ಆ ದಿನ ರಾತ್ರಿಯೇ ಹೋಗಿ ಮರಾಟಿಯುವರೊಂದಿಗೆ ಮಾತನಾಡಿ ಮಾರನೆಯ ದಿನ ರಾತ್ರಿ ತಾನು ಬಾಗಿಲನ್ನು ತೆಗೆಯಿಸುವುದಾಗಿಯೂ ಮರಾಟಿಯುವರು ಒಳಗೆ ಬರಬಹುದೆಂತಲೂ ರಾಮರಸನನ್ನು ಅವರು ಸೆರೆ ಹಿಡಿಯಬೇಕೆಂದೂ ಕೊಲ್ಲಕೂಡದೆಂದೂ ತನ್ನನ್ನು ಪಾಳೆಯಗಾರನಾಗಿ ಮಾಡಬೇಕೆಂದೂ ಏರ್ಪಾಡು ಮಾಡಿಕೊಂಡನು.

ಮಾರನೆಯ ದಿನ ರಾತ್ರಿ ರಾಮರಸನು ಎಂದಿನಂತೆ ಕಾವಲನ್ನು ನೋಡಿ, ಮೈಸೂರ ಕಡೆ ಹೋದ ಬೇಹು ಏನಾಯಿತೋ ಎಂದು ಯೋಚಿಸುತ್ತಾ, ನೆರೆಯ ಪಾಳೆಯಗಳಿಂದ ಬಂದಿದ್ದ ಅರ್ಧಮನಸ್ಸಿನ ಉತ್ತರಗಳನ್ನು ನೋಡಿ, ಈ ಸಲ ಹೇಗೆ ಕಡೆಹಾಯುವುದು, ಮರಾಟಿಯುವರನ್ನು ಯಜಮಾನರೆಂದು ಒಪ್ಪಿಕೊಳ್ಳಬೇಕೇನೋ ಎಂದುಕೊಂಡು ಚಿಂತೆಯಿಂದ ಮಲಗಿದನು. ಊರಿನ ಜನವೆಲ್ಲ ಹೊತ್ತಾಗಿ ಮಲಗಿತ್ತು. ಶತ್ರು ಎಷ್ಟು ದಿನ ಹೀಗೆ ಊರ ಮುಂದೆ ಪಾಳೆಯ ಹಾಕಿ ನಿಲ್ಲುವನೋ, ಹೊರಗೆ ಹೋಗುವುದಕ್ಕಿಲ್ಲದೆ ಒಳಗೆ ಬರುವುದಕ್ಕಿಲ್ಲದೆ ದಿನ ವರುಷವಾಯಿತು, ಎಂದು ಅವರು ಯೋಚನೆಮಾಡುತ್ತಿದ್ದರು. ಕಸ್ತೂರಿ ಕೋಟೆಯ ಬಾಗಿಲಲ್ಲಿ ಆ ರಾತ್ರಿ ತನ್ನ ಕಡೆಯವರ ಪಹರೆಯನ್ನು ಏರ್ಪಾಡು ಮಾಡಿದನು. ಊರೆಲ್ಲ ನಿಶ್ಶಬ್ದವಾದ ಮೇಲೆ ಕೋಟೆಯ ಬಾಗಿಲನ್ನು ತೆಗೆದು ಶತ್ರುಗಳನ್ನು ಊರೊಳಕ್ಕೆ ಬಿಟ್ಟನು. ಶತ್ರು ಸೈನ್ಯ ಶಬ್ದಮಾಡದೆ ಊರೊಳಕ್ಕೆ ಬಂದು ಮುಖ್ಯವಾದ ಸ್ಥಳಗಳನ್ನು ಆಕ್ರಮಿಸಿಕೊಂಡಿತು. ಕೊನೆಗೆ ಕೊಂಚ ಜನ ಅರಮನೆಯ ಮುಂದೆ ಜಯಘೋಷವನ್ನು ಹಾಕಿ ಒಳಕ್ಕೆ ನುಗ್ಗಿದರು.

ಏನಾಯಿತೆಂದು ತಿಳಿಯದೆ ರಾಮರಸನು ಕತ್ತಿಯನ್ನು ಹಿಡಿದು ಹೊರಕ್ಕೆ ಬಂದನು. ಪಹರೆಯ ಜನ ಈಟಿ ಭಲ್ಲೆಗಳನ್ನು ಹಿಡಿದು ನಿಂತಿದ್ದರು. ಶತ್ರುಗಳು ಎಲ್ಲಾ ಕಡೆಗೂ ನುಗ್ಗುತ್ತಿದ್ದರು. ಗುಂಪಿನಲ್ಲಿ ಕಸ್ತೂರಿಯನ್ನು ಕಂಡು ರಾಮರಸನು, "ಏನಾಯಿತು, ಕಸ್ತೂರಿ?

ಜನವನ್ನು ಕೂಗು, ನಡೆ!" ಎಂದನು. ಕಸ್ತೂರಿ ಅವನನ್ನು ತೋರಿಸಿ ಮರಾಟಿಯವರಿಗೆ, ಹಿಡೀರಿ, ಇವನನ್ನು ಹಿಡೀರಿ, ಎಂದನು. ಮೇಲೆ ಬಿದ್ದು ಬಂದ ಮರಾಟಿಯವರನ್ನು ಕಂಡು ರಾಮರಸನು ತನ್ನ ಕತ್ತಿಯಿಂದ ಅರ್ಧಗಳಿಗೆಹೊತ್ತು ಹೋರಾಡಿದನು. ಆದರೆ ಅವನು ಒಬ್ಬ. ಮೇಲೆ ಬಿದ್ದವರು ಹತ್ತಾರು ಜನ. ಅವರಲ್ಲೊಬ್ಬನು ಇವನನ್ನು ಕತ್ತಿಯಿಂದ ಇರಿದನು. ಅದು ಎದೆಯ ಬಳಿ ಚುಚ್ಚಿ ರಾಮರಸನು ಶಿವ ಶಿವ ಎಂದು ನೆಲಕ್ಕುರುಳಿದನು. ಶತ್ರುಗಳು ಮುಂದಕ್ಕೆ ನುಗ್ಗಿದರು. ಅರಸನನ್ನು ಊಳಿಗದವರು ಒಂದು ಕಡೆಗೆ ಒಯ್ದುಕೊಂಡು ಹೋದರು. ॥

ಕೋಟೆ ಮರಾಟಿಯವರ ಪಾಲಾಯಿತು. ಅರಮನೆಯಲ್ಲಿ ಎಲ್ಲರೂ ಎದ್ದು, ದಿಕ್ಕುತೋರದೆ ಅಲ್ಲಲ್ಲೇ ಇದ್ದವರು ಕೆಲವರು, ದಿಕ್ಕಾಪಾಲಾಗಿ ಓಡಾಡಿದವರು ಕೆಲವರು, ಹೀಗೆ ಕಾಲ ಕಳೆದುಹೋಯಿತು. ಕಸ್ತೂರಿ ನಾಯಕ ಊರನ್ನು ಮರಾಟಿಯವರ ಕೈಗೆ ಕೊಟ್ಟುಬಿಟ್ಟನೆಂದು ಊರಿನಲ್ಲೆಲ್ಲಾ ಮಾತು ಹಬ್ಬಿತು. "ಗಿರಿಜವ್ವೆ ತನ್ನ ತಮ್ಮನಿಂದ ಎಂತಹ ಅನಾಹುತ ಉಂಟಾಯಿತು, ತಾನು ಈ ಮನೆಗೆ ಮಾರಿಯಂತೆ ಬಂದೆನೆ, ಎಂದು ಎಣಿಸಿ ದುಃಖಿಸಿದಳು. ಲಕುಮವ್ವೆ ಈಗ ಇನ್ನೇನು ಮಾಡುವುದು, ಏನು ಮಾಡಿದರೆ ಈಗ ಶತ್ರುಗಳು ಹೊರಟುಹೋದಾರು, ಕಪ್ಪವನ್ನು ಕೊಡುವೆವೆನ್ನೋಣವೇ, ಎಂದು ಪ್ರಧಾನಿಗಳನ್ನು ಕೇಳಿದಳು. ಅವರು, ಬೊಕ್ಕಸವೇ ಅವರ ಕೈಗೆ ಸೇರಿರುವಾಗ ಕಪ್ಪವನ್ನು ಕೊಡುವುದೇನು, ಎಂದರು. ಅಷ್ಟು ಹೊತ್ತಿಗೆ ಬೆಳಗಾಯಿತು. ಊರಿನಲ್ಲೆಲ್ಲಾ ಕಳವಳ. ಅರಮನೆಯಲ್ಲಿ ರಾಮರಸನು ಪ್ರಾಣವನ್ನು ಬಿಟ್ಟನು. ॥

ಮರಾಟಿಯವರ ದಳಪತಿ ಕಿಲ್ಲೇ ಕಚೇರಿಯಲ್ಲಿ ಇಳಿದುಕೊಂಡು ಕೋಟೆಯಲ್ಲೆಲ್ಲಾ ತನ್ನ ಕಡೆಯವರನ್ನು ಕಾವಲಿರಿಸಿ, ಊರಿನಲ್ಲಿ ಎಲ್ಲರಿಗೂ ತಿಳಿಯುವಂತೆ "ನಿಜಗಲ್ಲನ್ನು ಮರಾಟಿಯವರು ಹಿಡಿದಿದ್ದೇವೆ. ಜನಗಳು ಯಾರೂ ಭಯಪಡಕೆಲಸವಿಲ್ಲ. ರಾಮರಸನಿಗೆ ಬದಲಾಗಿ ಇನ್ನೊಬ್ಬ ಪಾಳೆಯಗಾರನನ್ನು ಇರಿಸುತ್ತೇವೆ. ನಿಮ್ಮನಿಮ್ಮ ಆಸ್ತಿಪಾಸ್ತಿ ನಿಮಗೇ ಇರುತ್ತದೆ. ನಾಲ್ಕು ದಿನ ಜನ ಊರು ಬಿಟ್ಟು ಬೇರೆ ಕಡೆಗೆ ಹೋಗಕೂಡದು" ಎಂದು ಡಂಗೋರೆ ಹೊಡೆಸಿದನು. ॥ ರಾಮರಸನ ಪ್ರಾಣ

ಹೋಗುವುದೆಂದು ಅವನಿಗೆ ಮೊದಲೇ ತಿಳಿದಿತ್ತು. ಅದಾದ ಕೂಡಲೆ ತನಗೆ ತಿಳಿಸಬೇಕೆಂದು ಅವನು ಹೇಳಿದ್ದನು. ವರ್ತಮಾನ ಬಂದಾಗ ಅವನು ಕಸ್ತೂರಿ ನಾಯಕನೊಂದಿಗೆ ಅರಮನೆಗೆ ಬಂದು ರಾಮರಸನ ಸಂಸ್ಕಾರ ಗಳಿಗೆಲ್ಲ ಏರ್ಪಾಡು ಮಾಡಿಸುತ್ತೇವೆ ಎಂದು ಧೈರ್ಯ ಹೇಳಿದನು. ಲಕುಮವ್ವೆ "ಊರು ಗೆದ್ದ ಮೇಲೆ ನೀವೇ ಕರ್ತರು. ಎಲ್ಲಾ ಸರಿಯಾಗಿ ನಡೆಸುವುದಕ್ಕೆ ನೀವೇ ಬಾಧ್ಯರು" ಎಂದು ಹೇಳಿ, ಮರಾಟೆಯವರು ದಯಮಾಡಿ ನಾಯಕನ ಮಗನನ್ನು ಗದ್ದಿಗೆಯ ಮೇಲೇರಿಸಿ ಅವನನ್ನು ತಮ್ಮ ಸಾಮಂತನಾಗಿ ಕಾಣಬೇಕೆಂದು ಬೇಡಿಕೊಂಡಳು.

ದಳಪತಿ ಕಸ್ತೂರಿಯೊಡನೆ ಅರಮನೆಗೆ ಬಂದು ಅರಸನ ಕಳೇಬರದ ಬಳಿ ಈ ಮಾತೆಲ್ಲಾ ನಡೆದಾಗ ಗಿರಿಜವ್ವೆ ಅಲ್ಲೇ ಇದ್ದಳು. ಅವಳಿಗೆ ಅರಸು ತೀರಿಹೋದನೆಂಬುದು ಒಂದು ಗೊತ್ತೇ ಹೊರತು ಇನ್ನೇನೂ ಬೇಕಾಗಿರ ಲಿಲ್ಲ. ತನ್ನ ಮಗ ಪಾಳೆಯಗಾರನಾಗುವುದೋ, ಇನ್ನು ಯಾರಾದರೂ ಆಗುವುದೋ, ಮುಂದಕ್ಕೆ ಏನು ಗತಿಯೋ, ಎಂದು ಅವಳು ಯೋಚಿಸ ಲಿಲ್ಲ. ಇಂಥ ಮಾತಿಗೆಲ್ಲ ಆಗ ಸಮಯವಲ್ಲವೆಂದು ಅವಳಿಗೆ ತೋರಿತು. ಇಲ್ಲಿ ಅರಸನು ಸತ್ತು ಬಿದ್ದಿರುವಾಗ, ತೀರ ಪ್ರಾಣ ಹೋಗುವುದಕ್ಕೆ ಮುಂಚೆಯೇ, ಮಗುವಿನ ಪಟ್ಟದ ಮಾತೇನು? ಕಸ್ತೂರಿ ನಾಯಕನು ಮರಾಟೆಯವರೊಂದಿಗೆ ಒಂದಾಗಿ ಉಂಡ ಮನೆಗೆ ಎರಡು ಬಗೆದನೇ ಎಂದು ಅವಳು ಕುದಿಯುತ್ತಿದ್ದಳು; ಅವನು ಬಂದು ಹತ್ತಿರ ನಿಂತಾಗ ಅವನ ಕಡೆ ನೋಡಲಿಲ್ಲ. ಕಸ್ತೂರಿಯೂ ತಲೆ ತಗ್ಗಿಸಿಕೊಂಡು ನಿಂತಿದ್ದನು. ದಳಪತಿ ಇದನ್ನೆಲ್ಲ ನೋಡಿದನು. ಅವನಿಗೆ ಲಕುಮವ್ವೆಯ ಸ್ಥೈರ್ಯ, ಗಿರಿಜವ್ವೆಯ ಪತಿಪರಾಯಣತೆ, ಇವೆರಡರಲ್ಲಿ ಒಂದಕ್ಕಿಂತ ಒಂದು ಶ್ಲಾಘ್ಯವೆಂದು ತೋರಿತು. ಗಿರಿಜವ್ವೆ ಬಹಳ ಚೆಲುವೆ. ಅವಳನ್ನು ತಾನು ಒಲಿಸಿಕೊಳ್ಳ ಬೇಕೆಂದು ಅವನಿಗೆ ಮನಸ್ಸಿನಲ್ಲಿ ಆಸೆಯಾಯಿತು.

ಅರಸನ ಉತ್ತರಕ್ರಿಯೆಗಳಿಗೆ ಎಲ್ಲಾ ಏರ್ಪಾಡೂ ಆಯಿತು. ಲಕುಮವ್ವೆ ತಾನು ಸಹಗಮನ ಮಾಡುವುದಾಗಿ ತಿಳಿಸಿದಳು. ಗಿರಿಜವ್ವೆ "ನೀವು ಮನೆಗೆ ದೊಡ್ಡವರು. ಮಗುವನ್ನು ಸಾಕಿ ಗದ್ದಿಗೆಯ ಮೇಲೆ ಇರಿಸಬೇಕು. ಅದು ನಿಮ್ಮಿಂದ ಆಗುವುದಲ್ಲದೆ ನನ್ನಿಂದ ಆಗುತ್ತದೆಯೇ?

ನೀವು ಇರಿ. ನಾನು ಸಹಗಮನ ಮಾಡುತ್ತೇನೆ" ಎಂದಳು. ತಾನು ದೊಡ್ಡವಳು, ಸಹಗಮನ ಅಧಿಕಾರ ತನ್ನದು ಎಂದು ಲಕುಮವ್ವೆಗೂ, ಮನೆಗೆ ದೊಡ್ಡವಳು ಇರಬೇಕು, ತಾನು ಹೋಗುವೆನು, ಎಂದು ಗಿರಿಜವ್ವೆಗೂ ವಾದ ನಡೆಯಿತು. ಕೊನೆಗೆ ಗಿರಿಜವ್ವೆ "ನಿಮ್ಮ ಇಷ್ಟ. ನೀವು ಉಳಿದಿದ್ದರೆ ನಾನು ಇದ್ದರೂ ಇದ್ದೆ. ನೀವು ಹೋಗುವುದಾದರೆ ನಾನು ಹೋಗುವುದೂ ಖಂಡಿತ" ಎಂದಳು. ಇಷ್ಟಾಗುವ ವೇಳೆಗೆ ಊರಿನ ಮುಖಂಡರು ಬಂದು, ಯಾರೂ ಸಹಗಮನ ಮಾಡಕೂಡದು, ಹುಡುಗನನ್ನು ದೊಡ್ಡವನಾಗಿ ಮಾಡುವುದಕ್ಕೆ ಇಬ್ಬರೂ ಇರಬೇಕೆಂದು ಬೇಡಿಕೊಂಡರು. ಮರಾಟಿಯವರ ದಳಪತಿಯೂ ಹೀಗೆಯೇ ಹೇಳಿದನು. ಸಹಗಮನದ ಮಾತು ನಿಂತುಹೋಯಿತು. ಆ ದಿನ ಉತ್ತರಕ್ರಿಯೆಗಳು ನಡೆದುಹೋದುವು.

ಮೂರು ದಿನ ಕಳೆಯಿತು. ಈ ಮಧ್ಯೆ ಕಸ್ತೂರಿಗೂ ದಳಪತಿಗೂ ಮುಂದಿನ ಏರ್ಪಾಡಿನ ವಿಷಯದಲ್ಲಿ ಮನಸ್ತಾಪ ಬಂದಿತು. ದಳಪತಿ ನಾಯಕನ ಮಗನನ್ನು ಗದ್ದಿಗೆಯ ಮೇಲೇರಿಸಿ ಲಕುಮವ್ವೆಯನ್ನೂ ಕಸ್ತೂರಿಯನ್ನೂ ಅವನ ರಕ್ಷಣೆಗೆ ನಿಲ್ಲಿಸುವುದಾಗಿಯೂ ಗಿರಿಜವ್ವೆಯನ್ನು ತಾನು ಕರೆದುಕೊಂಡು ಹೋಗುವುದಾಗಿಯೂ ಹೇಳಿದನು. ಕಸ್ತೂರಿ ತಾನೇ ಗದ್ದಿಗೆಯನ್ನೇರಬೇಕೆಂದೂ, ತನ್ನ ಸೋದರಳಿಯ ತನ್ನ ನಂತರ ಗದ್ದಿಗೆಯನ್ನೇರಬೇಕೆಂದೂ, ಗಿರಿಜವ್ವೆ ಧಾರಾಳವಾಗಿ ಒಪ್ಪಿದರೆ ಮಾತ್ರ ಅವಳನ್ನು ದಳಪತಿ ಕರೆದುಕೊಂಡು ಹೋಗಬಹುದೆಂದೂ ಹೇಳಿದನು. ಗದ್ದಿಗೆಯನ್ನು ಯಾರು ಏರಬೇಕು ಎನ್ನುವ ವಿಷಯದಲ್ಲಿ ಇವರು ಒಬ್ಬರ ಮಾತಿಗೊಬ್ಬರು ಒಪ್ಪಲಿಲ್ಲ. ಕಸ್ತೂರಿ ದಳಪತಿಗೆ ಅವನು ಕೊಟ್ಟ ಮಾತನ್ನು ಜ್ಞಾಪಕ ಮಾಡಿದನು. ದಳಪತಿ ಅದಕ್ಕೆ "ನಾಯಕನಿಗೆ ಒಬ್ಬ ಮಗನಿರುವ ಮಾತನ್ನು ನೀನು ನನಗೆ ಹೇಳಲಿಲ್ಲ" ಎಂದನು. ದಳಪತಿಯ ನಡತೆಗೆ ಇದು ಕಾರಣವೋ, ಇಲ್ಲ, ತಾನು ಗಿರಿಜವ್ವೆಯ ಮಗನ ಪರವನ್ನು ವಹಿಸಿದರೆ ಗಿರಿಜವ್ವೆಯನ್ನು ಸ್ವಾಧೀನಪಡಿಸಿಕೊಳ್ಳುವುದು ಸುಲಭ ಎಂಬುದು ಕಾರಣವೋ, ಹೇಳುವುದು ಹೇಗೆ? ಅಂತೂ ಇವರಿಗೆ ವಿವಾದ ವುಂಟಾಯಿತು. ಕೊನೆಗೆ ದಳಪತಿ ಈ ಮಾತನ್ನು ಚರ್ಚೆಮಾಡುವುದಕ್ಕೆಂದು ರಾಣಿಯರಿಬ್ಬರಿಗೂ ಕರೆಯಕಳುಹಿಸಿದನು. ಒಬ್ಬೊಬ್ಬರು ಒಂದೊಂದು

ಸಲ ಬರಬೇಕೆಂದೂ, ತಾನು ಏನೂ ತೊಂದರೆಪಡಿಸುವುದಿಲ್ಲವೆಂದೂ, ತನ್ನ ಜೊತೆಯಲ್ಲಿ ಕಸ್ತೂರಿ ನಾಯಕನಿರುವನೆಂದೂ ತಿಳಿಸಿದನು. ಹಿರಿಯ ರಾಣಿ ಬಂದಾಗ, ಯಾರನ್ನು ನಾಯಕನನ್ನಾಗಿ ಮಾಡುವುದೆಂದು ಆಕೆಯೊಂದಿಗೆ ಚರ್ಚಿಸಿ, ಆಮೇಲೆ ಕಿರಿಯ ರಾಣಿಯನ್ನು ಕರೆಯಕಳುಹಿಸಿದನು. ಗಿರಿಜವ್ವೆಯನ್ನೂ ಅದೇ ಮಾತು ಕೇಳಿದನು. ಆಕೆ, ನಮ್ಮ ಹಿರಿಯ ರಾಣಿಯನ್ನು ಕೇಳಿದಮೇಲೆ ನನ್ನನ್ನು ಕೇಳಬೇಕಾದ್ದಿಲ್ಲ, ಅವರು ಹೇಳಿದಂತೆ ಮಾಡಿ, ಎಂದಳು. ದಳಪತಿ ಆ ಮಾತು ಈ ಮಾತು ಆಡಿ ಕೊನೆಗೆ ಗಿರಿಜವ್ವೆ ತನ್ನ ವಶವಾಗಬೇಕೆಂದು ಹೇಳಿದನು. ಗಿರಿಜವ್ವೆ ಅದುವರೆಗೆ ತಲೆ ತಗ್ಗಿಸಿಕೊಂಡು ಮಾತನಾಡುತ್ತಿದ್ದವಳು ಆಗ ಅವನನ್ನೂ ಕಸ್ತೂರಿಯನ್ನೂ ಚೆನ್ನಾಗಿ ನೋಡಿ, ಇವನು ಅದಕ್ಕೆ ಒಪ್ಪಿದಾನೆಯೆ, ಎಂದು ಕೇಳಿದಳು. ದಳಪತಿ "ಒಪ್ಪಿದಾನೆ" ಎಂದನು. ಅವಳು ದಳಪತಿಯನ್ನು ಮದುವೆಯಾಗುವುದಕ್ಕೆ ತಾನು ಒಪ್ಪಿದರೆ, ದಳಪತಿ ತಾನು ನಾಯಕನಾಗುವುದಕ್ಕೆ ಸಹಾಯ ಮಾಡುವನೆಂದು ಕಸ್ತೂರಿಗೆ ಯೋಚನೆ. ಅಲ್ಲದೆ ಅವಳು ದಳಪತಿಯೊಂದಿಗೆ ಹೊರಟು ಹೋಗಬೇಕಾದರೆ ಮಗು ಇಲ್ಲಿರುವುದಕ್ಕಾಗುವುದಿಲ್ಲ. ಆಗ ಹೆಸರಿಗೆ ಮಾತ್ರ ಮಗು ನಾಯಕನಾದರೂ ತಾನು ನಾಯಕನಾಗುವುದಕ್ಕೆ ಅನುಕೂಲ. ತನ್ನ ತಮ್ಮನು ಇದಕ್ಕೆ ಒಪ್ಪಿದನೆಂದು ಕೇಳಿ ಗಿರಿಜವ್ವೆ ಒಂದು ನಿಮಿಷ ಯೋಚಿಸಿ, "ನೀವು ನನ್ನ ಮೇಲೆ ಮಾಡಿರುವ ಅನುಗ್ರಹಕ್ಕೆ ನಾನು ತಕ್ಕವಳಲ್ಲ. ಆದರೆ ಈಗ ನಾನಿರುವ ಸ್ಥಿತಿಯಲ್ಲಿ ಅದನ್ನು ಬೇಡವೆಂದು ಹೇಳಲಾರೆ" ಎಂದಳು. ದಳಪತಿಗೂ ಕಸ್ತೂರಿಗೂ ಇವಳು ಇಷ್ಟು ಸುಲಭವಾಗಿ ಒಪ್ಪಿದಳಲ್ಲಾ ಎಂದು ಆಶ್ಚರ್ಯ. ಅದರ ಜೊತೆಗೆ ಬಹಳ ಸಂತೋಷ. "ನಾನು ಇಷ್ಟರಲ್ಲೇ ಹಿಂದಕ್ಕೆ ಹೋಗಬೇಕಾಗುತ್ತದೆ. ಸಾಧ್ಯವಾದರೆ ಎರಡು ಮೂರು ದಿವಸಗಳಲ್ಲಿ ಎಲ್ಲ ಆಗಬೇಕು." "ಅಪ್ಪಣೆ." ಹೀಗೆಂದು ಗಿರಿಜವ್ವೆ ಅರಮನೆಗೆ ಬಂದಳು. ಮಾರನೆಯ ದಿನ ತಾನು ದಳಪತಿಯನ್ನು ವರಿಸುವುದೆಂದೂ, ತನ್ನ ತಮ್ಮ ಕಸ್ತೂರಿ ನಾಯಕ ಸದ್ಯಕ್ಕೆ ನಾಯಕನಾಗುವುದು ತನ್ನ ಇಷ್ಟವೆಂದೂ, ತನ್ನ ಮದುವೆಯ ದಿನವೇ ಕಸ್ತೂರಿಗೆ ಗದ್ದಿಗೆಯೇರುವ ಉತ್ಸವ ನಡೆಯಬೇಕೆಂದೂ ಹೇಳಿಕಳುಹಿಸಿ ಇದೇ

ಮಾತನ್ನು ಹಿರಿಯ ರಾಣಿಗೆ ತಿಳಿಸಿದಳು. ಲಕುಮವ್ವೆಗೆ ಇದೇನೆಂದು ತಿಳಿಯದಾಯಿತು. ಅವಳು ಗಿರಿಜವ್ವೆಯನ್ನು ನೋಡಲು ಬಂದಳು. ಗಿರಿಜವ್ವೆ ಅವಳನ್ನು ನೋಡುವುದಿಲ್ಲವೆಂದಳು. ಈ ಮಾತು ಊರಿನಲ್ಲೆಲ್ಲಾ ಹರಡಿ ಕೋಲಾಹಲವುಂಟಾಯಿತು. ಆದರೆ ಯಾರೇನು ಮಾಡಬಹುದು? ದಳಪತಿಯ ಇಷ್ಟಕ್ಕೆ ಪ್ರತಿ ಹೇಳುವವರಿಲ್ಲ. ಉತ್ತರಕ್ರಿಯೆಗಳೆಲ್ಲ ಮುಗಿದ ಐದು ದಿನದ ಮೇಲೆ ಸಂಬಂಧಕ್ಕೆ ದಿನ ಗೊತ್ತಾಯಿತು. ಅದರ ಹಿಂದಿನ ದಿನ ಗಿರಿಜವ್ವೆ, ಮಾರನೆಯ ದಿನ ತಾನೂ ತನ್ನ ತಮ್ಮನೂ ಊರಿನವರಿಗೆಲ್ಲ ತಿಳಿಯುವಂತೆ ಕೋಟೆಯ ಗೋಡೆಯ ಮೇಲೆ ಊರಸುತ್ತ ಮೆರವಣಿಗೆ ಮಾಡಬೇಕೆಂದೂ ಅದಾದಮೇಲೆ ತಾನು ಸಂಬಂಧವಾಗುವುದು ಅವನು ಗದ್ದಿಗೆಯನ್ನೇರುವುದು ಎಂದೂ ಹೇಳಿ ಕಳುಹಿಸಿದಳು. ಅವಳು ಬೇಕೆಂಬುದನ್ನು ಯಾರೂ ಬೇಡವೆನ್ನುವಂತಿರಲಿಲ್ಲ. ಅವಳ ಇಷ್ಟದಂತೆ ಎಲ್ಲವೂ ಸಿದ್ಧವಾಯಿತು.

ಮಾರನೆಯ ದಿನ ಗಿರಿಜವ್ವೆ ಬೆಳಗಾಗ ಎದ್ದು ಸ್ನಾನಮಾಡಿ ದೇವರ ಪೂಜೆಯನ್ನು ಮುಗಿಸಿಕೊಂಡು ಮಗುವನ್ನೆತ್ತಿಕೊಂಡು ಲಕುಮವ್ವೆಯ ಬಳಿಗೆ ಬಂದು "ಇದು ನನ್ನ ಹಣೆಯಲ್ಲಿ ಬರೆದಿತ್ತು; ಇಂದಿನಿಂದ ಈ ಮಗು ನನ್ನದಲ್ಲ, ನಿಮ್ಮದು; ಇದನ್ನು ಕಾಪಾಡುವ ಕೆಲಸ ನಿಮ್ಮದು" ಎಂದು ಹೇಳಿ, "ನನಗೆ ಒಳ್ಳೆಯದಾಗುವಂತೆ ಹರಸಿ" ಎಂದು ಕಣ್ಣೀರು ಸುರಿಸಿದಳು. ಲಕುಮವ್ವೆ "ನಿನ್ನ ಬುದ್ಧಿಯೆಲ್ಲಾ ಎಲ್ಲಿ ಹೋಯಿತು? ಅವನು ಕೇಳಿದರೆ ಬೇಡವೆನ್ನುವುದಕ್ಕೆ ನಿನಗೆ ತಿಳಿಯಲಿಲ್ಲವೇ? ಈಗಲೂ ಇಷ್ಟವಿಲ್ಲದಿದ್ದರೆ ಬೇಡವೆನ್ನು" ಎಂದಳು. ಗಿರಿಜವ್ವೆ "ಹೇಳಿ ಆಯಿತು. ಇನ್ನು ಆ ಮಾತು ಬೇಡಿ. ಇನ್ನು ನನ್ನ ದಾರಿ ಬೇರೆ" ಎಂದು ಹೇಳಿ ಅರಮನೆಯಿಂದ ಹೊರಟಳು. ಬಾಗಿಲಲ್ಲಿ ಊರ ಪ್ರದಕ್ಷಿಣಕ್ಕೆ ಬೇಕಾದ ಏರ್ಪಾಡೆಲ್ಲಾ ಆಗಿತ್ತು. ಗಿರಿಜವ್ವೆ ಸುಮಂಗಲಿಯಂತೆ ಅಲಂಕಾರವನ್ನು ಮಾಡಿಕೊಂಡಿದ್ದಳು. ಜನರಿಗೆಲ್ಲ ಇದನ್ನು ನೋಡಿ ಅಸಹ್ಯ. ಗಿರಿಜವ್ವೆ ಕಸ್ತೂರಿಗೆ "ನೀನು ಈ ಕಡೆಯಿಂದ ಬಾ. ನಾನು ಆ ಕಡೆಯಿಂದ ಬರುತ್ತೇನೆ. ಕೊತ್ತಲದ ಬಳಿ ಇಬ್ಬರೂ ಸೇರೋಣ" ಎಂದಳು. ಅದರಂತೆ ಉತ್ಸವ ಹೊರಟಿತು.

ನಿಜಗಲ್ಲಿನ ಕೋಟೆ ಬಹಳ ಅಂದವಾದ ಕೋಟೆ. ಭೀಕರವಾದ ಬಂಡೆಯ ಮೇಲೆ ಶತ್ರುವನ್ನು ಧಿಕ್ಕರಿಸುವ ಗೋಡೆಗಳು. ಒಂದೇ ಕಡೆ ಬಾಗಿಲು. ಬಾಗಿಲಿಗೆ ಎದುರಾಗಿ ಕೋಟೆಯ ಗೋಡೆಯ ಆ ಕಡೆ ಅರ್ಧ ದಲ್ಲಿ ಒಂದು ಕೊತ್ತಳ. ಅದರಿಂದ ಊರಿನೊಳಕ್ಕೆ ಇಳಿಯುವುದಕ್ಕೆ ಒಂದು ಸೊಗಸಾದ ಮೆಟ್ಟಲ ಪಂಕ್ತಿ. ನಾಯಕನು ವಿಹಾರಕ್ಕಾಗಿ ಕೆಲವು ವೇಳೆ ಇಲ್ಲಿಗೆ ಬಂದು ನಿಲ್ಲುವುದುಂಟು. ಇಲ್ಲಿಂದ ನೋಡಿದರೆ ಹತ್ತಾರು ಮೈಲಿಯ ದೂರಕ್ಕೂ ಇರುವ ಹಳ್ಳಿ, ಕೊಳ, ತೋಪು, ಎಲ್ಲಾ ಚಿತ್ರಗಳಲ್ಲಿ ಬರೆದಂತೆ ಕಾಣುವುದು. ಹೊರಗಡೆ ಬಂಡೆ ಕೋಟೆಯ ಗೋಡೆಯ ಕೆಳಗೆ ಮುಂದಕ್ಕೆ ಚಾಚಿ ಪೀಠದಂತಾಗಿತ್ತು. ಪೀಠದ ಮೇಲೆ ಕೋಟೆಯ ಗೋಡೆ ಏಳಾಳೆತ್ತರ. ಆ ಬಂಡೆಯ ಆಚೆಗೆ ಅಗಳು. ಪೀಠವು ವಿಶಾಲವಾಗಿ ಚಪ್ಪಟೆಯಾಗಿ ರಾಜರು ಕುಳ್ಳಿರುವ ಗದ್ದಿಗೆಯಂತೆ ಕಾಣುತ್ತಿದ್ದದರಿಂದ ಅದಕ್ಕೆ ಜನ ಗದ್ದಿಗೆಯ ಬಂಡೆ ಎಂದು ಹೆಸರಿಟ್ಟಿದ್ದರು. ಹಾಗೆಯೇ ಆ ಕೊತ್ತಲವನ್ನು ಗದ್ದಿಗೇ ಕೊತ್ತಳ ಎನ್ನುವರು.

ಕಸ್ತೂರಿ ಒಂದು ಕಡೆಯಿಂದಲೂ ತಾನು ಒಂದು ಕಡೆಯಿಂದಲೂ ಕೊತ್ತಳದ ಮೆಟ್ಟಲಿಗೆ ಬರುವುದೆಂದು ಏರ್ಪಾಡುಮಾಡಿ ಗಿರಿಜವ್ವೆ ಒಬ್ಬ ಚೇಟಿಯನ್ನು ಕುರಿತು, "ಇಂದು ನನ್ನ ತಮ್ಮನಿಗೆ ಆರತಿಮಾಡಬೇಕು, ಒಂದು ತಟ್ಟೆಯಲ್ಲಿ ಆರತಿ ತಂದಿರಿ" ಎಂದು ಹೇಳಿ, ಕೋಟೆಯ ಗೋಡೆಯ ಮೇಲೆ ಹೊರಟಳು. ಊರಿನಲ್ಲಿ ಜನವೆಲ್ಲ "ಇಂಥ ವಿಚಿತ್ರ ಉಂಟೆ? ಇವಳ ಸೊಗಸೇನು, ಈ ಆರತಿಯೇನು?" ಎಂದು ವಿಸ್ಮಿತರಾಗಿ, ಕೋಟೆಯಮೇಲೆ ಎರಡು ಕಡೆಯಿಂದಲೂ ಬರುತ್ತಿರುವ ಮೆರವಣಿಗೆಯ ಗುಂಪನ್ನು ನೋಡುತ್ತಿದ್ದರು. ಒಂದು ಗಳಿಗೆಯ ಹೊತ್ತಿಗೆ ಎರಡು ಗುಂಪೂ ಗದ್ದಿಗೆಯ ಕೊತ್ತಳದ ಹತ್ತಿರ ಬಂದುವು. ಗಿರಿಜವ್ವೆ ಅರ್ಧ ನಿಮಿಷ ಮುಂದಾಗಿ ಬಂದಿದ್ದು, ಕಸ್ತೂರಿ ಬಂದಾಗ್ಗೆ ಚೇಟಿಯ ಕೈಯಿಂದ ಆರತಿಯ ತಟ್ಟೆಯನ್ನು ತೆಗೆದುಕೊಂಡು ಮಾತನಾಡದೆ ಹತ್ತಿರಕ್ಕೆ ಬಂದಳು. ಇಬ್ಬರೂ ಕೊತ್ತಳದ ಮಧ್ಯೆ ನಿಂತಿದ್ದರು. ಇತ್ತ ಒಂದಿಪ್ಪತ್ತು ಜನ, ಅತ್ತ ಒಂದಿಪ್ಪತ್ತು ಜನ. ಸದ್ದುಮಾಡದೆ ನಿಂತಿದ್ದಾರೆ. ಗಿರಿಜವ್ವೆ ಎಂದಿನಂತೆ ಗಂಭೀರಭಾವದಲ್ಲಿ ತಮ್ಮನಿಗೆ ಆರತಿಯನ್ನೆತ್ತಿ ತಟ್ಟೆಯನ್ನು ಚೇಟಿಯ

ಕೈಗೆ ಕೊಟ್ಟು ಸ್ವಲ್ಪ ನಗುತ್ತಾ ತಮ್ಮನನ್ನು ಕುರಿತು ಮೃದುವಾದ ನುಡಿಯಿಂದ, "ಕಸ್ತೂರಿ, ನಿನ್ನಿಂದ ನನಗೆ ಈ ಪದವಿ ಬಂತು. ನಿನ್ನನ್ನು ನಾನು ಮರೆಯಬಾರದು. ನಿನಗೂ ಗದ್ದಿಗೆಯ ಮೇಲೆ ಆಸೆ" ಎಂದು ಹೇಳಿ, ಉತ್ತರ ಕ್ಷಣದಲ್ಲಿ ಕರ್ಕಶವಾದ ಧ್ವನಿಯಿಂದ "ನನ್ನ ನಿನ್ನಿಂದ ರಾಮರಸನ ಮನೆ ಕೆಟ್ಟಿತು. ನಮ್ಮನ್ನು ಹೆತ್ತವರಿಗೆ ಅಪಕೀರ್ತಿ ಬಂತು. ಕಸ್ತೂರಿ, ನಾವು ಬದುಕಬಾರದು" ಎಂದು ಕೂಗಿ, ಅವನನ್ನು ಭದ್ರವಾಗಿ ಅಪ್ಪಿಕೊಂಡು ಕೊತ್ತಳದಿಂದ ಗೋಡೆಯ ಹೊರಕ್ಕೆ ಧುಮುಕಿಬಿಟ್ಟಳು. //

ಜನರು "ಹಾ" ಎನ್ನುವ ಮೊದಲು ಅಕ್ಕ ತಮ್ಮಂದಿರು ಗದ್ದಿಗೆಯ ಬಂಡೆಯನ್ನು ಸೇರಿದ್ದರು. ಆ ಎತ್ತರದಿಂದ ಬಂಡೆಯ ಮೇಲೆ ಬಿದ್ದವರಿಗೆ ಉಳಿವಿಲ್ಲ. ಎರಡು ಕ್ಷಣದಲ್ಲಿ ಅವರಿಬ್ಬರ ದೇಹಗಳೂ ಜೀವವನ್ನುಳಿದು ಬಂಡೆಯಿಂದ ನೆಲಕ್ಕೆ ಉರುಳಿದ್ದುವು.

ರಾಮರಸನ ಮಗನನ್ನು ನಿಜಗಲ್ಲಿನ ನಾಯಕನಾಗಿ ಮಾಡಿದರು. ಲಕುಮವ್ವೆ ಅವನು ಮರಾಟೆಯವರ ವಶವರ್ತಿಯಾಗಿರುವುದಾಗಿ ಭರವಸೆ ಕೊಟ್ಟು ರಾಜ್ಯದ ಆಡಳಿತವನ್ನು ಊರ ಮುಖಂಡರ ಸಹಾಯದಿಂದ ನಡೆಯಿಸಿದಳು. ಊರಿಗೆ ಉಪದ್ರವದಂತೆ ಬಂದಿದ್ದ ಕಸ್ತೂರಿಯನ್ನು ಕೊನೆಗಾಣಿಸಿದ ಕಿರಿಯ ರಾಣಿಯನ್ನು ಜನರು ಪ್ರೀತಿಯಿಂದ ನೆನೆದು ಬಹುವರ್ಷ ಊರದೇವಿಯೆಂದು ಪೂಜಿಸಿ ಅವಳ ಹೆಸರಲ್ಲಿ ವರ್ಷ ವರ್ಷವೂ ಹಬ್ಬವನ್ನು ಮಾಡಿದರು. ಈಗ ಆ ಹಬ್ಬ ನಡೆಯುತ್ತಿಲ್ಲ. ಊರು ಪಾಳೆಯಗಾರರನ್ನು ಮರೆತಿದೆ. ಆದರೆ ನಿಜಗಲ್ಲಿಗೆ ಹೋದವರಿಗೆ ಊರ ಜನ ಅಲ್ಲಿಯ ರಾಣಿಯ ಈ ಕತೆಯನ್ನು ಹೇಳುವರು; ಆ ವೀರ ರಮಣಿಯ ಆತ್ಮಯಜ್ಞದಿಂದ ಪವಿತ್ರವಾದ ಆ ಬಂಡೆಯನ್ನು ತೋರಿಸುವರು. //

# ಸಾರಿಪುತ್ರನ ಕಡೆಯ ದಿನಗಳು

೧

"ಗುರುದೇವನ ಮಹಾಪರಿನಿರ್ವಾಣಾನಂತರ ಸಾರಿಪುತ್ರನು ಊರ ಕಡೆಗೆ ತಿರುಗಿದನು. ಅವನು ಆ ಊರನ್ನು ಬಿಟ್ಟು ಅಂದಿಗೆ ನಾಲ್ವತ್ತು ವರುಷಕ್ಕೆ ಮೇಲೆ ಆಗಿತ್ತು. ಊರನ್ನು ಬಿಟ್ಟಾಗ ಅವನಿನ್ನೂ ಚಿಕ್ಕವನು; ಈಗ ಮುದುಕನಾಗಿದ್ದನು. ಶಾಕ್ಯಮುನಿ ವಾರಣಾಸಿಯಲ್ಲಿ ನವೀನ ಮತವೊಂದನ್ನು ಪ್ರಚಾರಗೊಳಿಸುತ್ತಿರುವನೆಂಬ ಸಂಗತಿ ತಿಳಿದು ಅವನು ಆ ಮುನಿಯ ವಾಕ್ಯಾರ್ಥವನ್ನು ಕೇಳಬೇಕೆಂದು ಅಪೇಕ್ಷಿಸಿದ ಅಂದಿನ ದಿನ ಅವನಿಗೆ ಈಗ ಮೊನ್ನೆಯಂತೆ ಕಂಡಿತು. ಅಂದು ಅವನು ನರಸಿಂಹಶರ್ಮ; ಆಮೇಲೆ ಸಾರಿಪುತ್ರನಾದನು. ಆ ಹೆಸರಿನೊಂದಿಗೆ ಬಂದ ಮಾರ್ಪಾಡೆಷ್ಟು! ನರ್ಮದಾತೀರ್ಥದ ಬಳಿಯ ನರಸಿಂಹೇಶ್ವರನ ಅಗ್ರಹಾರದ ಅಗ್ರ ಘನಪಾಠಿಯ ಒಬ್ಬನೇ ಮಗ ಇವನು ಬುದ್ಧದೇವನ ಶಿಷ್ಯರಲ್ಲಿ ಒಬ್ಬನಾದನು. ಆ ಕತೆಯೆಲ್ಲ ಈಗ ಅವನಿಗೆ ಇನ್ನು ಯಾರ ವಿಷಯವೋ ಎಂಬಂತೆ ಕಾಣು ವುದು. ಬಾಲ್ಯದಿಂದ ತಂದೆ ಅವನನ್ನು ಪಂಡಿತನಾಗಲೆಂದು ತಿದ್ದಿದನು. ಮಗನೂ ತಂದೆಯಂತೆ ಸಂಸ್ಕೃತ ವಿದ್ಯೆಯಲ್ಲಿ ಘನ ಪಂಡಿತನೆಂದು ಹೆಸರು ಪಡೆದು ವಂಶವನ್ನೂ ವಂಶದ ಹೆಸರನ್ನೂ ಉಳಿಸುವಂಥ ವಿದ್ವಾಂಸ ನೆನಿಸಿಕೊಂಡನು. ಇಪ್ಪತ್ತು ವರುಷದ ಮಗನಿಗೆ ಮದುವೆಮಾಡಿ ತಂದೆ ಸೊಸೆಯನ್ನು ಮನೆಗೆ ಕರೆತಂದನು. ಸಂಸಾರವು ಎಲ್ಲಾ ವಿಧದಲ್ಲೂ ಸುಖ ವಾಗಿತ್ತು. ಆದರೆ ಸಾರಿಪುತ್ರನಿಗೆ ತೃಪ್ತಿಯಿರಲಿಲ್ಲ. ಅವನಿಗೆ ವಿದ್ಯೆಯೆಲ್ಲ ವ್ಯರ್ಥವೆಂದು ಕಂಡಿತು; ಕಲಿತುದೆಲ್ಲಾ ವೃಥಾ ಕೃಷಿಯೆಂದು ತೋರಿತು. ವರ್ಷವೆಲ್ಲಾ ನೀರೆರೆದು ಬಳ್ಳಿಯನ್ನು ಬೆಳೆಯಿಸಿ ಕೊನೆಗೆ ಅದರಲ್ಲಿ ಹೂವನ್ನು ಕಾಣದವನಂತೆ ಅವನು ಕಾತರನಾದನು. ಅವನಿಗೆ ಭಗವಂತನೆಂಬ ವಸ್ತುವಿನಲ್ಲಿ ಸಾಕಾದಷ್ಟು ನಂಬಿಕೆ ಹುಟ್ಟಲಿಲ್ಲ. ವೇದದಿಂದ ಅಂಥ ಅತ್ಯುತ್ತಮ ಪರವಸ್ತುವನ್ನು ಅರಿತರೆಂಬ ಮಹನೀಯರು ಆ ಜ್ಞಾನಕ್ಕೆ ತಕ್ಕ ನಡತೆಯುಳ್ಳವರಾಗಿರಲಿಲ್ಲ. ಅದನ್ನು ಕಂಡು ಅವನು "ಈ ತಿಳಿವಿ ನಿಂದ ಫಲವೇನು? ಯಾವ ತಿಳಿವಿನಿಂದ ಮನುಷ್ಯನು ದೇವರಾಗುವನೊ

ಅದನ್ನು ನಾನು ತಿಳಿವು ಎಂದೇನು, ಅದಾಗದಿದ್ದರೆ ಅದು ತಿಳಿವಲ್ಲ" ಎಂದುಕೊಳ್ಳುವನು. ಇದು ತಿಳಿವಿನ ಹೆಚ್ಚಿನ ಮಟ್ಟಗಳಲ್ಲಿ ಬರುವ ಅತೃಪ್ತಿ. ಇದರಿಂದ ಸಾರಿಪುತ್ರನು ಅತೃಪ್ತನಾಗಿದ್ದನು." ಬುದ್ಧನು ವಾರಣಾಸಿಯಲ್ಲಿ ಹೊಸಮತವನ್ನು ಪ್ರಚಾರಪಡಿಸುತ್ತಿರುವನೆಂದು ಕೇಳಿದೊಡನೆ ಸಾರಿಪುತ್ರನು ಇದರಲ್ಲಿ ಏನಿದೆಯೋ ನೋಡಬೇಕೆಂದು ಸಿದ್ಧರಮಾಡಿಕೊಂಡನು. ಆಗ ಅವನ ತಂದೆ ಮುದುಕರು. ಮಗನನ್ನು ಕುರಿತು "ಹೋಗಬೇಡ; ಅವನೆಲ್ಲೋ ಆ ವೇದವನ್ನು ಬಿಟ್ಟ ಕಪಿಲವಸ್ತುವಿನ ಜನರ ರಾಜನ ಮಗ ನಂತೆ; ವೇದವನ್ನು ಬಿಟ್ಟವನು ತತ್ವವೇನನ್ನು ಹೇಳಿಯಾನು" ಎಂದರು." ಆದರೆ ನರಸಿಂಹನಿಗೆ ಬುದ್ಧನಲ್ಲಿ ಆಗಲೇ ಅರ್ಧ ನಂಬಿಗೆ ಹುಟ್ಟಿತ್ತು. ಸಣ್ಣ ವಯಸ್ಸಿನಲ್ಲಿ ಸತ್ಯಾನ್ವೇಷಣಕ್ಕಾಗಿ ಅರಮನೆ ರಾಜ್ಯ ಹೆಂಡತಿ ಮಕ್ಕಳನ್ನು ಬಿಡುವವನು ಸತ್ಯವ್ರತನೇ ಸರಿ. ಅಂಥವನು ಆರು ವರುಷ ಅರಣ್ಯದಲ್ಲಿ ತಪಸ್ಸುಮಾಡಿ ತನಗೆ ತಿಳಿವುವುಂಟಾಗಿದೆಯೆಂದರೆ ಆ ಮಾತು ಸುಳ್ಳಾಗಿರಲಾರದು. ಆ ತಿಳಿವು ವೇದದಿಂದ ಬೇರೆಯಾದದ್ದೆಂದಲ್ಲವೇ ಎಲ್ಲರ ಆಕ್ಷೇಪಣೆ? ವೇದವು ನಿತ್ಯ, ವೇದವು ಏಕ. ಅದು ಉಪದೇಶ ವಾಗುವುದು ಭಗವಂತನಿಂದ. ಶಾಕ್ಯಮುನಿಯಂಥ ತಪಸ್ವಿಗೆ ಬಂದ ಬೆಳಕು ವೇದದ್ದಲ್ಲದೆ ಇನ್ನೆಲ್ಲಿಯದು? ಬೇರೆಯಾದರೆ ಅದು ಎಂಥದು ಎಂದು ನೋಡುವುದಕ್ಕೆ ಏನು ಅಡ್ಡಿ? ಅದನ್ನು ಕೇಳಿದ ಮಾತ್ರಕ್ಕೆ ವೇದದಲ್ಲಿ ನಂಬಿಕೆ ಕೆಡುವುದಾದರೆ ವೇದದ ಅರ್ಥದ ಬೆಲೆ ಏಷ್ಟಾದ ಹಾಗಾಯಿತು? ಗುರುವಾಕ್ಯದಲ್ಲಿ ವಿತರ್ಕ ಕೂಡದು. ಆದರೆ ಗುರುವಾಕ್ಯದಿಂದ ಮನಸ್ಸಿಗೆ ಶಾಂತಿಯುಂಟಾಗದಿದ್ದರೆ ಇತರ ವಾಕ್ಯವನ್ನು ಕೇಳಿಯಾದರೂ ಇದರ ಅರ್ಥವನ್ನು ತಿಳಿದು ಶಾಂತಿಯನ್ನು ಪಡೆಯಬಹುದಷ್ಟೆ. ಹೃದಯದಲ್ಲಿನ ಗುರು ಗುರು ಅಲ್ಲವೆ? ಸತ್ಯ ಇಷ್ಟೆ ಅಲ್ಲ ಎಂದು ತನಗೆ ಆ ಗುರು ಏಕೆ ಹೇಳುತ್ತಿದಾನೆ? ಹೀಗೆಲ್ಲ ಯೋಚಿಸಿ ಬುದ್ಧನ ಉಪದೇಶವನ್ನು ಕೇಳಬೇಕು ಎಂದು ನರಸಿಂಹನು ದೃಢಮಾಡಿಕೊಂಡನು; ಕೆಲವು ದಿನ ಬಿಟ್ಟು ವಾರಣಾಸಿಗೆ ಹೊರಟುಹೋದನು; ಮತ್ತೆ ಊರಿಗೆ ಬರಲಿಲ್ಲ. "ಬುದ್ಧನು ಯಶೋಧರೆಯನ್ನೂ ರಾಹುಲನನ್ನೂ ಬಿಟ್ಟಂತೆ ಇವನು ತನ್ನ ಹೆಂಡತಿ ವೇದವತಿಯನ್ನೂ ಎರಡು ವರುಷದ ಮಗಳು ಕುಮುದಿನಿಯನ್ನೂ ಅಂದು

ತಂದೆಯ ಜೊತೆಯಲ್ಲಿ ಬಿಟ್ಟು ನಡೆದನು.'' ಇಂದೇ ಅವನು ಮತ್ತೆ ಊರ ಕಡೆ ತಿರುಗಿದ್ದು. ಅದುವರೆಗೆ ಅವನು ಗುರುಸೇವೆಯಲ್ಲೇ ಎಲ್ಲ ಸುಖ ವನ್ನೂ ಕಂಡನು; ಎಲ್ಲ ಆಸೆಗಳಿಗೂ ಪರಿತೃಪ್ತಿಯನ್ನು ಪಡೆದನು.

ಆ ಗುರುವಾಗಲಿ ಎಂಥ ಗುರು! ಅವನನ್ನು ನೋಡದ ಜನರಿಗೆ ಅಂಥ ಜೀವವಿರಬಹುದೆಂದು ತೋರದು. ನೋಡಿದ ತನಗಾಗಲಿ ಅವನ ಗುಣ ಇಷ್ಟೇ ಎಂದು ಹೇಳುವುದು ಸಾಧ್ಯವೆ? ಆ ಮನುಷ್ಯ ಅಂಥ ದೈವ ವಾದದ್ದು ಹೇಗೆ? "ಅಂದು ತಾನು ವಾರಣಾಸಿಯಲ್ಲಿ ಆತನನ್ನು ನೋಡಿದ ಮೊದಲು ಮಹಾಪರಿನಿರ್ವಾಣದವರೆಗೆ ಆ ಗುರುದೇವನು, ಆ ದೇವತಾಂಶ ಪುರುಷನು, ಒಂದೇ ಸಮನಾಗಿ, ಯೋಚನೆಯಿಲ್ಲದೆ, ಭೀತಿಯಿಲ್ಲದೆ, ಆಕ್ರೋಶವಿಲ್ಲದೆ, ಅಶ್ರದ್ಧೆಯಿಲ್ಲದೆ, ತಾನೆನ್ನದೆ, ತನ್ನದೆನ್ನದೆ, ತಾನು ಹೆಚ್ಚೆನ್ನದೆ, ನೀನು ಬೇರೆಯೆನ್ನದೆ, ಸಮಸ್ತ ಭೂತದಲ್ಲಿಯೂ ಏಕರೀತಿ ಯಾದ ಭ್ರಾತೃವಾತ್ಸಲ್ಯವನ್ನು ತೋರಿದ್ದನು.'' ಆ ಗುರು ದೇವರಲ್ಲದೆ ಬೇರೆ ಹೇಗೆ? ಕೃಷ್ಣಾವತಾರ ಆದಮೇಲೆ ಈತನೇ ಅವತಾರ. ಇವನೇ ಒಂಬತ್ತ ನೆಯ ಅವತಾರ. ಇವನು ದೇವರೇ. ದೇವರಲ್ಲದವನಿಗೆ ಆ ನಡತೆ ಬರುವುದು ಹೇಗೆ? ದೇವರಲ್ಲದವನಿಗೆ ಆ ಆತ್ಮ ಪ್ರತ್ಯಯವೆಲ್ಲಿರುವುದು? ದೇವರಲ್ಲಲ್ಲದೆ ಆ ಶಾಂತಿಯಿನ್ನೆಲ್ಲಿ? ತಾನು ದೇವರನ್ನು ಕಣ್ಣಾರ ನೋಡಿ ದ್ದಾಯಿತು; ತನ್ನ ಜನ್ಮ ಸಾರ್ಥಕವಾಯಿತು.

ಹಾಗೆಯೇ ಸಾರಿಪುತ್ರನು ತಾನು ಮೊದಲು ಗುರುವಿನ ಬಳಿ ಹೋದ ದಿನ ಏನು ನಡೆಯಿತೆಂದು ನೆನೆದುಕೊಂಡನು. ಆ ಚಿತ್ರ ಮನಸ್ಸಿನಲ್ಲಿ ಇನ್ನೂ ಸ್ಥಿರವಾಗಿತ್ತು. ನಗರದ ಉಪವನದಲ್ಲಿ ದೊಡ್ಡದಾದ ಅಶ್ವತ್ಥ ವೃಕ್ಷ. ಅದರಡಿ ಗುರು ಕುಳಿತಿದ್ದನು. ಹತ್ತಿರ ನಾಲ್ಕು ಜನ ವೇದಾನು ಯಾಯಿಗಳು. ಸುತ್ತ ನೂರಾರು ಜನ ಸೇರಿಕೊಂಡಿದ್ದರು. ವೈದಿಕರು ಪ್ರಶ್ನೆಗಳನ್ನು ಕೇಳುವರು. ಗುರು ಉತ್ತರವನ್ನು ಹೇಳುತ್ತಿದ್ದನು.

"ನಿಮ್ಮ ಮತದ ಪ್ರಕಾರ ದೇವರಿರುವನೊ ಇಲ್ಲವೊ?"

"ದೇವರು ಎಂದರೆ ಯಾರು?"

"ಸರ್ವವ್ಯಾಪಿಯೂ ಸರ್ವಶಕ್ತನೂ ಜಗನ್ನಿಯಾಮಕನೂ ಆದ ಪರಮಪುರುಷನು."

"ನೀವು ಪರಮಪುರುಷನನ್ನು ನೋಡಿರಬಹುದು; ಅವನ ಗುಣಗಳಿಷ್ಟನ್ನು ವರ್ಣಿಸುತ್ತಿದೀರಿ. ನಾನು ಅವನನ್ನು ನೋಡಿಲ್ಲ."

"ನಿಮ್ಮ ಮತ ಸರಿಯೆ ಎಂದು ನಿರ್ಧರಿಸುವುದು ಹೇಗೆ?"

"ನನ್ನ ಮತ ನನಗೆ ಸರಿ."

"ಹಾಗಾದರೆ ಅದನ್ನು ಇವರಿಗೆ ಹೇಳಿಕೊಡುವುದೇಕೆ?"

"ಅವರಿಗೆ ಅವರ ಮತವನ್ನು ಕಂಡುಕೊಳ್ಳಿ ಎಂದು ಹೇಳುತ್ತೇನೆ."

"ಹಾಗಾದರೆ ನೀವು ಮತಸ್ಥಾಪಕರಲ್ಲವೋ?"

"ಒಬ್ಬೊಬ್ಬನೂ ಅವನ ಮತವನ್ನು ಸ್ಥಾಪಿಸಿಕೊಳ್ಳಬೇಕು; ನಾನು ನನ್ನ ಮತವನ್ನು ಸ್ಥಾಪಿಸಿಕೊಂಡಿದ್ದೇನೆ."

"ಹಾಗಾದರೆ ನೀವು ಏನನ್ನು ಹೇಳಿಕೊಡುವಿರಿ?"

"ಹೇಳಿಸಿಕೊಂಡವರನ್ನು ಕೇಳಿ."

"ನೀವು ಕರ್ಮಕ್ಕೆ ವಿರೋಧಿಗಳೊ?"

"ಕರ್ಮವೆಂದರೇನು?"

"ಯಜ್ಞ ಯಾಗಗಳು, ನಿತ್ಯವಿಧಿ ಹೋಮಗಳು."

"ತಿಳಿದು ಮಾಡಿದರೆ ಅದರಲ್ಲಿಯೂ ಪ್ರಯೋಜನವಿರಬಹುದು."

"ಅದನ್ನು ಬಿಡಬಹುದೆಂದು ನೀವು ಹೇಳುವುದೇಕೆ?"

"ಬೇರೆಯದನ್ನು ಹಿಡಿದು ಅದನ್ನು ಬಿಡಿ ಎನ್ನುತ್ತೇನೆ."

"ಬಿಟ್ಟರೆ ತೊಂದರೆಯಿಲ್ಲದುಂಟೆ?"

"ಕೆಲವರಿಗೆ ಉಂಟು."

"ಯಾರಿಗೆ?"

"ಅದು ಅವರಿಗೇ ತಿಳಿಯುತ್ತದೆ."

"ಹಾಗಾದರೆ ಅವರವರ ಇಷ್ಟದಂತೆ? ಮಾಡಿದರೆ ಮಾಡಬಹುದು ಬಿಟ್ಟರೆ ಬಿಡಬಹುದು."

"ಇಷ್ಟದಂತೆ ಅಲ್ಲ, ಬುದ್ಧಿಯಂತೆ."

"ಬುದ್ಧಿ ಕೆಟ್ಟಿದ್ದಾದರೆ."

"ಆಗ ಮಾಡಿದ ಕರ್ಮವೂ ಕೆಡುವುದು."

"ಕರ್ಮವನ್ನು ಬಿಟ್ಟರೆ ಒಳ್ಳೆಯದು ಹೇಗೆ ಆಗುವುದು?"

"ಒಳ್ಳೆಯ ನಡತೆಯಿಂದ."

"ಒಳ್ಳೆಯದೆಂದು ತಿಳಿಯುವುದು ಹೇಗೆ?"

"ಒಳಗಿರುವ ಬೆಳಕಿನಿಂದ."

"ಅದು ಮಂಕಾಗಿದ್ದರೆ?"

"ಇನ್ನೊಬ್ಬರ ಬೆಳಕಿನಿಂದ."

"ಅದು ಮಂಕಾಗಿದ್ದರೆ?"

"ಮನುಷ್ಯನಿಗೆ ಬೇರೆ ಗತಿಯಿಲ್ಲ."

"ವೇದಗಳಿವೆಯಲ್ಲ?"

"ವೇದ ಇದೆ."

"ಅದು ಸುಳ್ಳೆ?"

"ವೇದ ಸುಳ್ಳಲ್ಲ."

"ನೀವು ಅದನ್ನು ನಂಬುವಿರ?"

"ನಂಬಿ ನಡೆಯುತ್ತಿದೇನೆ."

"ಮತ್ತೆ ಕರ್ಮವನ್ನು ಬಿಟ್ಟದೀರಿ!"

"ಯಾವುದನ್ನು ಕರ್ಮ ಕರ್ಮ ಎನ್ನುವಿರಿ? ಕರ್ಮವಿಲ್ಲದೆ ಬದುಕಿಲ್ಲ."

"ಇದು ಬರಿಯ ಮಾತು."

"ವೇದವೂ ಮಾತೇ."

"ನೀವು ಜನರನ್ನು ಕೆಡಿಸುತ್ತಿದೀರಿ ಎಂದು ನಮ್ಮ ಭಾವನೆ."

"ಅವರ ನಡತೆಯನ್ನು ನೋಡಿ ಹೇಳಿ?"

ಹೀಗೆ ಬಹಳ ಹೊತ್ತು ಮಾತು ನಡೆಯಿತು. ಎಲ್ಲರೂ ಕೇಳುತ್ತಿದ್ದರು. ಕೊನೆಗೆ ಗುರುದೇವನು "ಅಯ್ಯಾ, ನೀವು ನನ್ನನ್ನು ಪರೀಕ್ಷೆ ಮಾಡುವುದಕ್ಕೆ ಬಂದಿದ್ದೀರಿ. ನಿಮ್ಮ ಮನಸ್ಸನ್ನು ಹೀಗೆಯೇ ಪರೀಕ್ಷೆಮಾಡಿಕೊಳ್ಳಿ. ನಿಮಗೆ ನೀವೇ ಉತ್ತರವನ್ನು ಹೇಳಿಕೊಳ್ಳಿ; ನನಗೆ ಹೇಳಬೇಡಿ." ಎಷ್ಟು ವೇದವನ್ನು ನಂಬುತ್ತೀರೋ ಎಷ್ಟನ್ನು ನಂಬುವುದಿಲ್ಲವೋ ಕಂಡುಕೊಳ್ಳಿ. ಹಿರಿಯರು ಹೇಳಿದ್ದೆಂದು ಅದರಂತೆ ಮಾಡುವುದು ಒಳ್ಳೆಯದೇ; ನಮಗೆ ಏನೆಂದು ತೋರುತ್ತದೆ ಎಂದು ನೋಡುವುದೂ ಒಳ್ಳೆಯದೇ. ಹಿರಿಯರು

ಹೊರಗಣ ಗುರುಗಳು. ಅವರ ಧ್ವನಿಯನ್ನು ಕೇಳಿ. ಒಳಗೂ ಒಬ್ಬ ಗುರು ಇದ್ದಾನೆ. ಅವನ ಧ್ವನಿಯನ್ನೂ ಕೇಳಿ. ಅವನನ್ನು ಮುಚ್ಚಿಡಬೇಡಿ. ಎರಡು ಧ್ವನಿಯೂ ಶ್ರುತಿ ಸೇರಿದಾಗ ತೋರುವ ಸತ್ಯ ನಿಜವಾದ ಸತ್ಯ. ಅದುವರೆಗಿನ ಸತ್ಯ ವೇಷದ ಸತ್ಯ" ಎಂದನು." ಅವರು ಹೊರಟುಹೋದರು. ಆಮೇಲೆ ಗುರುವರನು ಜನರಿಗೆಲ್ಲ ಅಂತಃಸಾಕ್ಷಿಯ ವಿಷಯವಾಗಿ ನಾಲ್ಕು ಮಾತನ್ನು ಹೇಳಿ ಎಲ್ಲರನ್ನೂ ಕೊಟ್ಟುಕಳುಹಿಸಿದನು.

ಗುರುವಿನ ಈ ವಿಲಕ್ಷಣವಾದ ಪಾರಿಶುದ್ಧ್ಯ ಸಹನ ಸೌಜನ್ಯಗಳಿಗೆ ಆ ದಿನ ತಮ್ಮ ಮನ ಹೇಗೆ ಸೋತುಹೋಯಿತೆಂಬುದೂ ತಾನು ಹೋಗಿ ಅವನ ಬಳಿ ನಿಂತು ತನ್ನ ಪೂರ್ವೋತ್ತರವನ್ನು ಹೇಳಿ ತನ್ನನ್ನು ಶಿಷ್ಯನಾಗಿ ಇಟ್ಟುಕೊಳ್ಳಬೇಕೆಂದು ಪ್ರಾರ್ಥಿಸಿದುದೂ ಗುರು ನಗುತ್ತ "ಇಷ್ಟು ಕಲಿತ ನೀನು ಗುರುವಾಗಬಹುದೇ ಹೊರತು ಶಿಷ್ಯನಾಗುವುದು ಹೇಗೆ" ಎಂದು ಹೇಳಿ ಮತ್ತೆ, "ನಿನ್ನಿಂದ ಧರ್ಮಕ್ಕೆ ಸೇವೆ ನಡೆಯುವುದು ಇರುವುದೋ ಏನೊ ನಾನು ಬಲ್ಲೆನೆ? ನೀನು ನಮ್ಮ ಬಳಿ ಇರು. ಶಿಷ್ಯ ಎನ್ನುವ ಮಾತು ಹಾಗಿರಲಿ" ಎಂದುದೂ ಸಾರಿಪುತ್ರನಿಗೆ ಜ್ಞಾಪಕಕ್ಕೆ ಬಂದುವು. ಕೆಲ ದಿನದಲ್ಲಿ ಅವನು ಶಿಷ್ಯನಾದನು; ಸಾರಿಪುತ್ರನೆಂದು ಹೆಸರು ಪಡೆದನು. ಆಮೇಲೆ ದಿನ ದಿನವೂ ಆ ಮಹಾಪುರುಷನ ದಿವ್ಯತೇಜಸ್ಸಿನ ಮಹಿಮೆಯಿಂದ ತನಗೆ ಮನಸ್ಸಿನಲ್ಲಿದ್ದ ಸಂದೇಹಗಳೆಲ್ಲ ನಿವೃತ್ತಿಯಾಗಿ, "ಸರ್ವವ್ಯಾಪಿಯಾದ ಭಗವಂತನು ಹೃದಯದಲ್ಲಿದಾನೆ, ಮನುಷ್ಯನ ಬದುಕು ಅವನ ನಿರಂತರ ಪ್ರೇರಣೆಯಿಂದ ಸದಾಕಾಲವೂ ಒಳ್ಳೆಯದಾಗುತ್ತಿದೆ, ಹಾಗೆ ಆಗುತ್ತಿರುವುದನ್ನು ಅರಿಯುವುದೇ ಅವನ ಅಜ್ಞೇಯವಾದ ಸ್ವರೂಪವನ್ನು ತಿಳಿಯುವುದಕ್ಕೆ ಮೊದಲ ಮೆಟ್ಟಿಲು, ಇದಿಷ್ಟು ಸಿದ್ಧವಾಗುವುದು ಬದುಕಿನ ಮುಖ್ಯ ಕೆಲಸ" ಎಂಬ ಭಾವನೆ ಸಿದ್ಧವಾಯಿತು." ಇದರಿಂದಲೇ ಅಲ್ಲವೇ ವೇದ ಹಿರಿದಾದದ್ದು? ಇದರಿಂದಲೇ ವೇದ ಒಂದೇ ಒಂದು. ದೇಶವಿಲ್ಲ, ಕಾಲವಿಲ್ಲ, ವ್ಯಕ್ತಿಪ್ರಭೇದವಿಲ್ಲ. ನಿತ್ಯವಾದ ಒಂದೇ ಒಂದು ತತ್ವ ಎಲ್ಲ ಉಪಾಧಿಯಲ್ಲಿ ಅದಕ್ಕೆ ತಕ್ಕಂತೆ ಆಕಾರವನ್ನು ತಾಳುತ್ತಿದೆ. ಇದರಿಂದಲೇ ಮಾನವ ಜೀವನ ಸತ್ಯಕ್ಕೆ ಸಮನ್ವಯವಾಗುವುದು. ಒಬ್ಬೊಬ್ಬನೂ ಅವನಿಗೆ ತಕ್ಕ ಕರ್ತವ್ಯವನ್ನು ಮಾಡಬೇಕು. ಇದರಿಂದಲೇ ಜೀವನ

ಸಾರ್ಥಕವಾಗಬೇಕು. "ಹೀಗೆಂದು ಮೊದಲಾಗಿ ನರಸಿಂಹಶರ್ಮನು ಗುರುವಿನ ಮುಖದಿಂದ ತಿಳಿದು ಪ್ರಪಂಚದ ಸಮಸ್ತ ವ್ಯಾಪಾರವನ್ನೂ ಸಮದೃಷ್ಟಿಯಿಂದ ನೋಡುವುದನ್ನು ಕಲಿತನು." ಕೊಂಚಕಾಲದಲ್ಲಿ ಗುರು ವೈದಿಕ ಪಂಥದ ಪಂಡಿತರು ಚರ್ಚೆಗೆ ಬಂದರೆ ಅವರಿಗೆ ಸಾರಿಪುತ್ರನನ್ನು ತೋರಿಸಿ, "ನಾನು ವೇದಗಳನ್ನು ಓದಿದವನಲ್ಲ. ನಿಮ್ಮೊಂದಿಗೆ ಚರ್ಚೆ ಮಾಡಲಾರೆ. ಈತ ಓದಿದವರು. ಇವರು ನಿಮಗೆ ಸಮ್ಮತವಾಗಿ ಎಲ್ಲವನ್ನೂ ಹೇಳುವರು" ಎನ್ನುವನು. ಸಾರಿಪುತ್ರನು ಗುರುವಿನ ಪಾದಗಳನ್ನು ಮುಟ್ಟಿ ಬಂದು ಪಂಡಿತರಲ್ಲಿ ಕುಳಿತು ಸಾಧ್ಯವಾದಷ್ಟುಮಟ್ಟಿಗೆ ವೇದಗಳ ಭಾಷ್ಯಗಳ ಮಾತುಗಳನ್ನು ಉಪಯೋಗಿಸಿ ಬುದ್ಧ ಧರ್ಮ ಅವರ ಧರ್ಮಕ್ಕೆ ವಿರೋಧವೆಂದು ಕಂಡರೂ ಜನರಿಗೆ ಅದಕ್ಕಿಂತಲೂ ಉತ್ತಮವಾದ ಮಾರ್ಗವನ್ನು ತೋರಿಸುವುದಕ್ಕೆಂದೇ ಪ್ರಾಪ್ತವಾದದ್ದೆಂದು ವಾದಿಸುವನು. ಗುರುವಿನ ಅನುಗ್ರಹದಿಂದ ಇಂಥ ವಾದಗಳಲ್ಲಿ ಅವನು ಸಮಾಧಾನವಾಗಿಯೂ ಸಮಂಜಸವಾಗಿಯೂ ಯುಕ್ತಿಯುಕ್ತವಾಗಿಯೂ ಮಾತನಾಡುವುದು ಸಾಧ್ಯವಾಯಿತು." ಗುರುದೇವನು ಇದಕ್ಕೆಲ್ಲ ಮೆಚ್ಚಿ ಒಮ್ಮೆ, "ನಾನರಿತ ಧರ್ಮಕ್ಕೆ ಸಾರಿಪುತ್ರನು ಬಲಗಣ್ಣು; ಆನಂದನು ಎಡಗಣ್ಣು; ಇವರಿಬ್ಬರಿಂದ ಅದು ಸ್ಥಿರವಾಗಿ ಪ್ರಚಾರವಾಗಬೇಕು" ಎಂದನು." ಆನಂದನು ಗುರುವಿನ ಸೋದರದ ನೆಂಟನು; ಅವನಿಗೆ ಸಮೀಪದ ಸೇವಕನು; ಅತ್ಯಂತ ಪ್ರಿಯ ಶಿಷ್ಯನು. ಇಂತಹವನೊಂದಿಗೆ ತನ್ನನ್ನು ಸರಿಯೆಂದು ಭಾವಿಸಿದ ಗುರುವಿನ ಅತುಲವಾದ ಪವಿತ್ರಪ್ರೇಮದ ಭಾರದಿಂದ ಸಾರಿಪುತ್ರನು ಅಂದು ಅತಿ ಸುಖಿಯೂ ಅತಿ ಖಿನ್ನನೂ ಆದನು. ಆಮೇಲೆ ಎಂದಿಗೆ ನಾನು ಈ ಪ್ರೇಮಕ್ಕೆ ತಕ್ಕ ವಸ್ತು ಆಗುವೆನೊ ಎಂದು ಮತ್ತೆ ಮತ್ತೆ ಯೋಚಿಸುತ್ತ ಗುರುವಿನ ಕೃಪೆಯಿಂದ ಅದು ಬೇಗ ಆಗಲಿ ಎಂದು ಪ್ರಾರ್ಥಿಸುವನು.

ಸಂವತ್ಸರದ ಮೇಲೆ ಸಂವತ್ಸರ ಹರಿದುಬರಲು "ಗುರುದೇವನ ಬದುಕು ಗಂಗಾನದಿಯ ಪ್ರವಾಹದಂತೆ ವಿಶಾಲವಾಗಿ ಪ್ರಶಾಂತವಾಗಿ ಸುಖದಾಯಕವಾಗಿ ನಾಡಿನಲ್ಲೆಲ್ಲ ಹರಡಿತು." ಆ ಪ್ರವಾಹದಲ್ಲಿ ಮಿಳಿತವಾಗಿ ಅವನ ಸೇವಕರ ಬದುಕು ಆ ವಿಶಾಲತೆ, ಆ ಸುಪ್ರಶಾಂತತೆ, ಆ ಸುಖದಾಯಕತೆ

ಯಲ್ಲಿ ಭಾಗಿಗಳಾದುವು. ಸುಂದರ ಸುಖಾವಾಸಗಳಾದ ವನಪ್ರದೇಶಗಳಲ್ಲಿ ಧೀರಗಂಭೀರಗಳಾದ ವೃಕ್ಷತಂಡಗಳ ಮಧ್ಯದಲ್ಲಿ ನೀಲನಿರ್ಮಲಗಳಾದ ನದೀತೀರಗಳ ಆಶ್ರಮಗಳಲ್ಲಿ ಗುರುದೇವನು ತನ್ನ ಆ ಸುಂದರನಾದ ಸುಖ ಸಾಧಕವಾದ ಧೀರವಾದ ಗಂಭೀರವಾದ ನಿತ್ಯನಿರ್ಮಲವಾದ ತನ್ನ ನೀತಿ ಪದ್ಧತಿಯನ್ನು ಜನರಿಗೆ ವಿವರಿಸಿದನು. ಆ ವಿವರಣದ ರೀತಿ ದಿನದಿಂದ ದಿನಕ್ಕೆ ದೇಶವಿಸ್ತಾರವಾದ ಧರ್ಮಸೌಧವನ್ನು ಕಟ್ಟುವ ರೀತಿಯೋ ಎಂಬಂತಿತ್ತು." ನಾಲ್ವತ್ತು ವರುಷಗಳ ಕಾಲ ಹೀಗೆ ಜೀವನವನ್ನು ನಡೆಯಿಸಿ ಗುರುದೇವನು ಮಹಾಪರಿನಿರ್ವಾಣವನ್ನೈದಿದನು. ಆನಂದನು ತಬ್ಬಲಿ ಯಾದೆನೆಂದು ಅತ್ತನು. ಸಾರಿಪುತ್ರನು ದೇವರು ಕಣ್ಮರೆಯಾದನೆಂದು ಖಿನ್ನನಾಗಿ ಮುಂದೆ ಏನು ಮಾಡುವುದೆಂದು ಯೋಚಿಸುವ ಮೊದಲು ಬಂಧುಗಳನ್ನು ಒಮ್ಮೆ ನೋಡುವ ಎಂದು ಊರಕಡೆ ತಿರುಗಿದನು."

ಯೌವನದಲ್ಲಿ ಎಲ್ಲವನ್ನೂ ಬಿಟ್ಟು ಜಾತಿಗೆಟ್ಟು ತಾನು ವೈದಿಕನೆಂಬು ದನ್ನು ಮರೆತು ಬೌದ್ಧ ಸಂನ್ಯಾಸಿಯಾದವನಿಗೆ ಮುಪ್ಪಿನಲ್ಲಿ ಊರಿನ ಚಿಂತೆ ಯೇನು? ಸಾರಿಪುತ್ರನಿಗೆ ಈ ಯೋಚನೆಯುಂಟು. ಆದರೆ ಅವನಿಗೆ ಅನೇಕ ಕಾರಣಗಳಿಂದ ಊರಿಗೆ ಹೋಗುವುದು ಅವಶ್ಯಕವೆಂದು ತೋರಿತು. ತಾನು ಚಿಕ್ಕಂದಿನಲ್ಲ ಸಣ್ಣ ವಯಸ್ಸಿನ ಹೆಂಡತಿಯನ್ನೂ ಮಗಳನ್ನೂ ಮುದುಕನಾಗಿದ್ದ ತನ್ನ ತಂದೆಗೆ ಭಾರವಾಗಿ ಬಿಟ್ಟುಬಂದಿದ್ದನು. ಸಂಸಾರ ಹೇಗೆ ನಡೆಯುವುದೆಂದು ಏನೂ ಯೋಚನೆ ಇಲ್ಲ. ಆದರೂ ಅವರು ಬಹಳ ದುಃಖಿತರಾಗಿದ್ದಿರಬೇಕು. ತಾನಾದರೋ ಗುರುವನ್ನು ನೋಡಿ ವೈರಾಗ್ಯ ಸ್ಥಿರವಾದ ಮೇಲೆ ಊರಿಗೆ ಹೋಗುವ ಯೋಚನೆಯನ್ನು ತೀರಾ ಬಿಟ್ಟು ಬಿಟ್ಟಿದ್ದನು. ವೈರಾಗ್ಯ ಎಲ್ಲಿ ಹೇಗೆ ಬಂದರೆ ಅಲ್ಲಿಯೇ ಹಾಗೆಯೇ ಅದನ್ನು ಸ್ವೀಕರಿಸು ಎಂದು ಶ್ರುತಿಸಿದ್ಧವಾದ ಬುದ್ಧಿವಾದ. ಅದ್ದರಿಂದ ಅವನು ಸಂನ್ಯಾಸವನ್ನು ಸ್ವೀಕರಿಸುವ ಮೊದಲು ಊರಿಗೆ ಹೋಗಿ ಬರಲಿಲ್ಲ. ಆಮೇಲೆ ಬುದ್ಧದೇವನು ಕಪಿಲವಸ್ತುವಿಗೆ ಹೋದಾಗ ಯಶೋಧರೆಯನ್ನೂ ರಾಹುಲನನ್ನೂ ಹೇಗೆ ಕಂಡನೆಂಬುದನ್ನು ನೋಡಿದನು. ಗುರುದೇವನಿಗೆ ಜಗತ್ತೇ ತನ್ನದಾಗಿತ್ತು. ಅವನಿಗೆ ಯಶೋಧರೆ ಮತ್ತೆ ಯಾರಾದರೂ ಹೆಂಗಸು ಹೇಗೋ ಹಾಗೆಯೇ. ರಾಹುಲನು ಮಗನೇ; ಆದರೆ ಪಕ್ಕದವರ

ಮಕ್ಕಳಂತೆಯೇ ಪ್ರಿಯನು. ಗುರು ಅನೇಕ ಸಲ ಇವನ್ನು "ನಾನು ಮನೆಯನ್ನು ಬಿಟ್ಟೆ, ದೇಶವನ್ನು ಕಟ್ಟಿಕೊಂಡೆ" ಎಂಬ ಮಾತಿನಿಂದ ವರ್ಣಿಸುವನು. ಅಲ್ಲದೆ ತನ್ನ ಹೆಂಡತಿ ಮಗು ಎಂದ ಮಾತ್ರಕ್ಕೆ ಹತ್ತಿರ ಹೋದರೆ ಬಂಧನಕ್ಕೆ ಸಿಕ್ಕಿಯೇನು ಎಂದು ದೂರ ಇರುತ್ತಿರಲಿಲ್ಲ. "ಹತ್ತಿರ ಹೋದರೆ ಬಂಧನಕ್ಕೆ ಸಿಕ್ಕಿಯೇನು ಎನ್ನುವವನು ಇದ್ದಲ್ಲಿಯೇ ಬಂಧನ ದಲ್ಲಿದಾನೆ" ಎನ್ನುವನು. ಅವನು ಸಾರಿಪುತ್ರನನ್ನು ಕುರಿತು ಒಂದೆರಡು ಸಲ, "ಊರಿಗೆ ಬೇಕಾದರೆ ಹೋಗಿ ಬಾ. ತಂದೆ ಮುದುಕನೆಂದೆ. ಯಾರಾದರೂ ಒಬ್ಬ ಮುದುಕನನ್ನು ಕಂಡರೆ ಕನಿಕರದಿಂದ ನೋಡಬೇಕಲ್ಲ, ಅವರಂತೆ ತಂದೆಯನ್ನು ಕಾಣಬೇಕು. ಹೋಗಿ ಸಮಾಧಾನಮಾಡಿ ಬಾ" ಎಂದು ಹೇಳಿದನು. ಸಾರಿಪುತ್ರನು, "ನಮ್ಮ ತಂದೆ ಬಹಳ ಜ್ಞಾನಿಗಳು. ಅವರು ಇದಕ್ಕೆಲ್ಲ ವ್ಯಥೆಪಡುವವರಲ್ಲ. ನನ್ನ ಪತ್ನಿ ಸಂಪ್ರದಾಯದಲ್ಲಿ ಬೆಳೆದಾಕೆ. ಮನೆಗೆ ತಾಯಾಗಿ ಇರುತ್ತಾಳೆ. ನನಗೆ ಯಾವ ವಿಧವಾದ ಯೋಚನೆಯೂ ಇಲ್ಲ" ಎಂದು ಉತ್ತರ ಹೇಳಿದ್ದನು. ಅಲ್ಲದೆ ದಿನ ಕಳೆದ ಹಾಗೆ ಅವನಿಗೆ ಬುದ್ಧದೇವನು ದೇವರ ಅವತಾರವೇ ಎಂದು ಮನಸ್ಸಿನಲ್ಲಿ ಭಾವನೆ ದೃಢವಾಗುತ್ತ ಬಂದಿತು. ತಾನು ದೇವರ ಸಾನ್ನಿಧ್ಯವಲ್ಲಿರ ಬೇಕಾದರೆ ತನ್ನದೆನ್ನಬಹುದಾದ ಯಾವ ವಸ್ತುವಿಗಾಗಲಿ ತೊಂದರೆ ಆಗಲಾರದೆಂದು ಅವನ ನಂಬಿಕೆ. ಇಂದೂ ಅದೇ ಧೈರ್ಯವುಂಟು. ಆದರೆ ಗುರುಸೇವಾಕಾರ್ಯ ಇಂದು ಮುಗಿದದ್ದರಿಂದ ಮನೆಯವರ ಮನಸ್ತೃಪ್ತಿಗಾಗಿ ಹೋಗಿ ಅವರಿಗೆ ಮುಖವನ್ನು ತೋರಿಸಬೇಕೆಂದು ಅವನಿಗೆ ತೋರಿತು. ಅದರಿಂದ ಊರಕಡೆ ಹೊರಟಿದ್ದನು.

ಊರ ಹತ್ತಿರ ಹತ್ತಿರ ಬಂದಹಾಗೆ ಸಾರಿಪುತ್ರನಿಗೆ ತನ್ನ ಬಾಲ್ಯದ ಬದುಕೆಲ್ಲ ಚೆನ್ನಚೆನ್ನವಾಗಿ ಜ್ಞಾಪಕಕ್ಕೆ ಬಂದಿತು. ಇದು ನರ್ಮದಾ ನದಿಯ ವಿಸ್ತಾರವಾದ ಪ್ರವಾಹದ ಶಯ್ಯೆ. ಇಲ್ಲಿ ಅದರ ನೀರಿನಿಂದ ಬೆಳೆಯುವ ಸುಂದರವಾದ ವನಗಳು! ಇಲ್ಲಿ ನದಿಯ ಪಾರ್ಶ್ವದಲ್ಲಿ ಉನ್ನತ ವಾಗಿ ಬೆಳೆದಿರುವ ವಟವೃಕ್ಷಗಳು. ತಾನೂ ಇತರ ಹುಡುಗರೂ ಸೇರಿ ಇಲ್ಲಿ ಅನೇಕಾವರ್ತಿ ಹೂವು ತುಳಸಿಗಾಗಿ ಬರುತ್ತಿದ್ದರು. ಅಗೋ ಅಲ್ಲಿ ನರ್ಮದಾತೀರ್ಥದ ಸ್ನಾನಘಟ್ಟದ ಸೋಪಾನ. ಮಂಟಪಗಳು ಹೆಚ್ಚಾಗಿರುವ

ಮರಗಳ ಮಧ್ಯೆ ಶುಭ್ರವಾಗಿ ಮಿನುಗುತ್ತಿರುವುವು. ಅಲ್ಲಿ ಕೆಲವರು ನಿಂತಿರುವುದು ಕಾಣುವುದು. ಕಟ್ಟಡ ಅಂದು ಇದ್ದಂತೆಯೆ ಇದೆ. ಈ ದೂರ ದಿಂದ ನೋಡಿದರೆ, ಜನರೂ ಅದೇ ಜನರೇ ಇದ್ದರೂ ಇರಬಹುದು, ಇಂದು ಅಂದೇನೋ, ಎಂಬಂತೆ ಇದೆ. ಸುಮಾರು ಅದೇ ಸಮಕ್ಕೆ ಈ ತೋಪಿನ ಆಚೆಗೆ ನೃಸಿಂಹೇಶ್ವರನ ಅಗ್ರಹಾರ. ಅಷ್ಟು ಹೊತ್ತಿಗೆ ದಾರಿಯಲ್ಲಿ ಊರ ಕಡೆಯಿಂದ ಕೆಲವು ಜನ ಬಂದರು. ಅವರ ಹಿಂದೆ ಒಬ್ಬರಿಬ್ಬರು ಹುಡುಗರು ಕೆಲವು ದನಗಳನ್ನು ಹೊಡೆದುಕೊಂಡು ಬಂದರು. ಕಾಷಾಯ ವಸ್ತ್ರವನ್ನು ಧರಿಸಿರುವ ಈತನನ್ನು ನೋಡಿ ದೊಡ್ಡವರಾದವರು ನಮಸ್ಕಾರ ಮಾಡಿ ಮುಂದೆ ನಡೆದರು. ದೊಡ್ಡವರು ಮಾಡಿದ್ದನ್ನು ನೋಡಿ ಸಣ್ಣವರೂ ನಮಸ್ಕಾರ ಮಾಡಿ ಹೋದರು. ಸಾರಿಪುತ್ರನು, "ಇವರು ಯಾರಿಗೂ ನನ್ನ ಗುರುತು ಸಿಕ್ಕಲಿಲ್ಲ. ಸಂನ್ಯಾಸಿಯೆಂದು ನಮಸ್ಕಾರ ಮಾಡುತ್ತಿದ್ದಾರೆ," ಎಂದುಕೊಂಡನು. ತೋಪನ್ನು ದಾಟಿದ ಮೇಲೆ ಊರು ಕಾಣುವುದು. ಊರಲ್ಲಿ ಮಧ್ಯದ ಮನೆ ತನ್ನದಾಗಿತ್ತು. ಅದು ಈಗ ಏನಾಗಿದೆಯೋ ಅದರ ಜನ ಏನಾಗಿದ್ದಾರೋ? ವೇದವತಿ ಈಗ ಬಹಳ ವೃದ್ಧಸ್ತ್ರೀಯಾಗಿರ ಬೇಕು. ಸಾರಿಪುತ್ರನಿಗೆ ಅವಳು ಜೀವಂತಳಾಗಿರುವಳೆಂಬ ಭಾವನೆಯೇ ವಿನಾ ತೀರಿಹೋಗಿರಬಹುದೆಂದು ಭಾವಿಸುವುದು ಅಸಾಧ್ಯವಾಗಿತ್ತು. ತನ್ನ ತಂದೆ ಆ ವೇಳೆಗೆ ತೀರಿ ಹೋಗಿರಬೇಕು. ಆ ಮಗಳೋ? ಸಂಸಾರಿಯಾಗಿ ಬಾಳುತ್ತಿರುವಳೋ? ಮಗಳು ಏನಾಗಿರಬಹುದು ಎಂದಾಗ ಸಾರಿಪುತ್ರನು ಕ್ಷಣಮಾತ್ರ ನರಸಿಂಹಶರ್ಮನಾಗಿ ಅವನ ಕರುಳು ಸ್ವಲ್ಪ ನುಲಿಚಿದಂತಾ ಯಿತು. "ಒಡನೆ ಅವನು ಮಗುವನ್ನು ಕಳೆದುಕೊಂಡ ಗೌತಮಿಗೆ ಗುರು ಸಮಾಧಾನವನ್ನು ತಂದ ವಿಚಾರವನ್ನು ನೆನೆದುಕೊಂಡನು." ಯಾರ ಮನೆ ಯಲ್ಲಿ ಎಂದೂ ಸಾವಾಗಿಲ್ಲವೋ ಅಂಥವರ ಮನೆಯಿಂದ ಒಂದು ಕಾಳು ಮೆಣಸನ್ನು ತಂದು ಸತ್ತವರ ಬಾಯಲ್ಲಿ ಹಾಕಿದರೆ ಅವರು ಮತ್ತೆ ಬದುಕು ವರು; ಅಂಥ ಮೆಣಸು ಮಾತ್ರ ಇಲ್ಲ. ಹೀಗೆಂದುಕೊಂಡು ಅವನು ತೋಪನ್ನು ದಾಟಿ ಮುಂದಕ್ಕೆ ಬಂದನು. ಊರು ಕಣ್ಣಿಗೆ ಬಿತ್ತು. ಅದನ್ನು ಕಣ್ಣಾರೆ ನೋಡುತ್ತ ಅದರ ಮುಂದುಗಡೆಯ ಒಂದು ಅಶ್ವತ್ಥವೃಕ್ಷದ ಬಳಿ ಬಂದು ಸೇರಿದನು. ಅಲ್ಲಿ ಸ್ವಲ್ಪ ನಿಂತು, ಮೊದಲು ತೀರ್ಥಕ್ಕೆ ಹೋಗಿ

ಸ್ನಾನ ಮುಗಿಸಿಕೊಂಡು ಆಮೇಲೆ ಊರೊಳಗೆ ಹೋಗುವುದೇ, ಇಲ್ಲ ಮೊದಲು ಊರೊಳಗೆ ಹೋಗಿ ಆಮೇಲೆ ಸ್ನಾನಕ್ಕೆ ಹೋಗುವುದೇ ಎಂದು ಯೋಚಿಸಿ, ಇಲ್ಲಿ ಎರಡು ನಿಮಿಷ ಕುಳಿತು ಹೇಗೆ ತೋರಿದರೆ ಹಾಗೆ ಮಾಡು ವುದು ಎಂದು ಆ ಮರದ ಕೆಳಗೆ ಕಟ್ಟಿದ್ದ ಒಂದು ಕಟ್ಟೆಯ ಮೇಲೆ ಕುಳಿತನು.

ತನ್ನ ಊರ ಬಳಿಗೆ ಬಂದೆನೆಂದಾಗಲಿ, ತನ್ನ ಜನದ ಬಳಿ ಬಂದೆ ನೆಂದಾಗಲಿ, ತನ್ನ ಬಾಲ್ಯದ ನೆನಪಿನಿಂದಾಗಲಿ, ಸಾರಿಪುತ್ರನ ಮನಸ್ಸಿನಲ್ಲಿ ವಿಶೇಷ ಕೋಲಾಹಲವೇನೂ ಆಗಲಿಲ್ಲ. ಅಂದಿನ ಚರಿತ್ರವೆಲ್ಲ ಚಿತ್ರಸರಣಿ ಯಂತೆ ಸಾವಧಾನವಾಗಿ ಅವನ ಮನಸ್ಸಿನಲ್ಲಿ ಪ್ರವಹಿಸಿತು. ಎಲ್ಲಾ ಸಂಗತಿಯೂ ಒಟ್ಟಿನ ಒಂದು ಚಿತ್ರವಲ್ಲಿ ಅದರದರ ಸ್ಥಳದಲ್ಲಿ ಸೇರಿ ಸಮಂಜಸವಾಗಿ ಕಂಡಿತು. ಅವನು ಅದನ್ನೆಲ್ಲ ಸಮಚಿತ್ತದಿಂದ ಪರಿಶೀಲಿಸಿ, ತಾನು ಅತೃಪ್ತಿಪಟ್ಟದ್ದು ಸರಿಯೆಂದೂ ಗುರುದೇವನ ಹೆಸರನ್ನು ಕೇಳಿ ಅವನನ್ನು ಅರಿಸಿಹೋದದ್ದು ಸರಿಯೆಂದೂ ಎಲ್ಲವೂ ಭಗವದನುಗ್ರಹದಿಂದ ನಡೆದದ್ದೆಂದೂ ಅರಿತನು. "ಸಾರಿಪುತ್ರನು ಬೌದ್ಧನಾದರೂ ಭಗವಂತನನ್ನು ಬಿಡಲಿಲ್ಲ." ಭಗವಂತನನ್ನು ಕಣ್ಣಾರೆಕಂಡವನು ಅವನನ್ನು ಇಲ್ಲವೆನ್ನುವುದು ಹೇಗೆ? ಕಣ್ಣಿಗೆ ದಿನಾ ಕಾಣುತ್ತಿರುವ ದೈವ ಇರುವುದು ನಿಜವೇ ಎಂದು ಸಂಶಯಪಡುವುದು ಹೇಗೆ? ಗುರು ಕೂಡ ಅನೇಕ ಸಲ, "ಕಾಣದುದನ್ನು ದೈವವೆನ್ನಬೇಡ. ದೇಹದಲ್ಲಿ ಕಾಣುವ ದೇವರು ಉಂಟು. ದೇಹದಲ್ಲಿ ಕಾಣದ ದೇವರೂ ಉಂಟು." ದೇಹದಲ್ಲಿರುವವನು ದೇಹಬಿಟ್ಟವನು ಕಾಣು ವಂತೆ ದೇವರನ್ನು ಕಾಣುವುದು ಅಸಾಧ್ಯ. ದೇವರೆಂಬ ಭಾವನೆ ಮನಸ್ಸಿನಲ್ಲಿ ಹುಟ್ಟುವುದು ದೇವರ ಸಂಬಂಧ ಉಂಟಾದಾಗಲೇ. ಮನಸ್ಸಿನಲ್ಲಿ ದುಃಖ ಹುಟ್ಟುವುದು ಆ ಭಾವ ಕಡಮೆಯಾದಾಗ. "ದೇವರೆಂಬ ಭಾವ ಮನಸ್ಸಿನಲ್ಲಿ ಬಂದಾಗ ಅದನ್ನು ಅಟ್ಟಬೇಡ. ಅದನ್ನೇ ಆರಾಧಿಸು. ಕೆಲವರಿಗೆ ಗುಣ ರಹಿತವಾದ ತತ್ತ್ವ ಗೋಚರವಾಗುವುದು. ಅದು ಅವರ ದೈವ. ಕೆಲವರಿಗೆ ಗುಣರಹಿತ ತತ್ತ್ವ ಮನಸ್ಸಿಗೆ ಅಂಟುವುದಿಲ್ಲ. ಅವರು ಗುಣಸಹಿತವಾದ ತತ್ತ್ವವನ್ನು ಗ್ರಹಿಸಬೇಕು" ಎಂದು ಹೇಳುವನು. ಒಂದು ದಿನ ಸಾರಿ ಪುತ್ರನು ಇಂಥ ಸಂದರ್ಭದಲ್ಲಿ, "ಗುರುದೇವ, ನಾನು ಒಂದು ಮಾತನ್ನು ಕೇಳುತ್ತೇನೆ. ದಯಮಾಡಿ ಅನುಗ್ರಹಿಸಬೇಕು" ಎಂದನು. ಗುರುದೇವನು,

"ನೀನು ಏನು ಕೇಳಿದರೂ ನಾನು ಇಲ್ಲವೆನ್ನುವುದಿಲ್ಲ" ಎಂದನು. "ತಾವು ದೇವರ ಒಂಬತ್ತನೆಯ ಅವತಾರವೆ? ನನಗೆ ತಿಳಿಸಬೇಕು."

"ನೀನು ಬ್ರಾಹ್ಮಣ ಕುಲದಲ್ಲಿ ಜನಿಸಿದವನು. ನಿನಗೆ ಇನ್ನೂ ಈ ರೀತಿಯ ನಂಬುಗೆ ಹೋಗಲಿಲ್ಲ."

"ಮೊದಲು ಸ್ವಲ್ಪ ಅಸ್ಥಿರವಾಗಿತ್ತು. ನಿಮ್ಮನ್ನು ನೋಡಿದಮೇಲೆ ಸ್ಥಿರವಾಗುತ್ತ ಬಂದಿದೆ."

"ದೇವರು ಎನ್ನದಿದ್ದರೆ ನಿನಗೆ ತೃಪ್ತಿಯಿಲ್ಲವೋ?"

"ಇಲ್ಲ."

"ಹಾಗಾದರೆ ನಿನಗೊಬ್ಬ ದೇವರು ಬೇಕು."

"ಹೌದು."

"ನನ್ನನ್ನು ದೇವರೆಂದೆಣಿಸಿ ಪೂಜಿಸುವುದು ಸಾಧ್ಯವೋ?"

"ಸಾಧ್ಯ."

"ಹಾಗಾದರೆ ಪೂಜಿಸು."

ಸಾರಿಪುತ್ರನು "ನಾನು ಧನ್ಯ" ಎಂದು ಅವನಿಗೆ ನಮಸ್ಕರಿಸಿದನು. 'ಮತ್ತೊಂದು ಸಲ ಗುರು, "ದೇವರು ಭೂಮಿಗೆ ಬಂದು ತಾನು ದೇವರೆಂದು ಹೇಳಿದರೆ ಜನ ಒಪ್ಪುವ ದಿನ ಕಳೆದುಹೋಯಿತು. ಮುಂದಕ್ಕೆ ಗುರುವೆಂದರೂ ಒಪ್ಪರು. ಮನುಷ್ಯನೇ ದೇವರು. ಒಬ್ಬೊಬ್ಬನೂ ದೇವಾಂಶ. ಜ್ಞಾನ ಬೆಳೆದಹಾಗೆ ದೇವರೆನ್ನುವುದನ್ನು ಹೃದಯದಲ್ಲಿ ಕಾಣುವೆವು" ಎಂದು ಹೇಳಿದನು.' ಇನ್ನು ಅವನು ದೇವರೆನ್ನುವುದರಲ್ಲಿ ಸಂಶಯವೇನು? ಸಾರಿಪುತ್ರನು ತನ್ನ ಬಾಲ್ಯದ ವೇದವಿದ್ಯೆಯೆಲ್ಲವೂ ಗುರುದೇವನ ಸೇವೆಯಲ್ಲಿ ಪರಿಪಾಕಕ್ಕೆ ಬಂದಿತು ಎಂದುಕೊಂಡನು.

ಇದನ್ನೆಲ್ಲ ನೆನೆದುಕೊಂಡು ಸಾರಿಪುತ್ರನು ಅಲ್ಲೇ ಕುಳಿತಿದ್ದನು. ಊರಿನ ಜನರು ತೀರ್ಥಕ್ಕೆ ಹೋಗುತ್ತಿದ್ದರು. ಅವರಲ್ಲಿ ಯಾರಾದರೂ ತಿಳಿದವರಿರುವರೇ ಎಂದು ಇವನು ನೋಡಿದನು. ಯಾರೂ ಕಾಣಲಿಲ್ಲ. ಹೆಂಗಸರು ಕೆಲವರು ಪಾತ್ರೆಗಳನ್ನು ತೆಗೆದುಕೊಂಡು ಕೆಲವರು ಮಡಿಬಟ್ಟೆಯನ್ನು ತೆಗೆದುಕೊಂಡು ಕೆಲವರು ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದರು. ಅವರಲ್ಲಿ ತನ್ನ ಮಗಳಂತೆ ಯಾರಾದರೂ ಇರುವರೋ ಎಂದು ನೋಡಿದನು.

ಮೂರು ವರ್ಷದ ಹುಡುಗಿಯನ್ನು ನೋಡಿದ್ದವನು ನಾಲ್ವತ್ತು ವರ್ಷದ ಮೇಲೆ ಅವಳನ್ನು ಗುರುತಿಸುವುದು ಸಾಧ್ಯವಲ್ಲ ಎಂದು ಅವನಿಗೆ ತೋರಿದರೂ ಮನಸ್ಸು ಅದನ್ನು ಒಪ್ಪಿರಲಿಲ್ಲ. ಇಂಥ ಹಠ ಮನಸ್ಸಿಗೆ ಸಹಜ. ಅದರಿಂದಲೇ ಮನುಷ್ಯನು ದೇವರೆಂಬ ವಸ್ತುವನ್ನು ಈ ಬದುಕಿನಲ್ಲಿ ನೋಡದೆ ಇದ್ದರೂ ನೋಡಿದ್ದಂತೆಯೇ ಧೈರ್ಯದಿಂದಲೂ, ನೋಡಿದಾಗ ಗುರುತಿಸುವನೆಂಬ ಭರವಸೆಯಿಂದಲೂ, ಪ್ರವರ್ತಿಸುತ್ತಾನೆ. ಮನಸ್ಸಿಗೆ ಆ ಶಕ್ತಿ ಇರುವುದೂ ನಿಜ. ತಿದ್ದಿಕೊಂಡರೆ ಅದು ವೃದ್ಧಿಯಾಗುವುದು. ಸಾರಿಪುತ್ರನು ಹೀಗೆಯೇ ನೋಡುತ್ತಿರಲಾಗಿ ಊರಕಡೆ ಹೋಗುತ್ತಿದ್ದವರಲ್ಲಿ ಇಬ್ಬರು ಹೆಂಗಸರಲ್ಲಿ ಒಬ್ಬಳು ಸಂನ್ಯಾಸಿಯನ್ನು ನೋಡಿ, ಯಾರಾದರೂ ಹೋಗಿ ಊರಿಗೆ ಕರೆಯಬಾರದೆ, ಎಂದಳು. ಇನ್ನೊಬ್ಬಳು ಬೌದ್ಧರವನು ಇರಬಹುದು, ಯಾರು ಕರೆಯುತ್ತಾರೆ, ಎಂದಳು. ಬುದ್ಧನ ಮಾತು ಆ ವೇಳೆಗೆ ಸೀಮೆಯಲ್ಲೆಲ್ಲ ತಿಳಿದಿತ್ತು. ಸಾರಿಪುತ್ರನಿಗೆ ಹೀಗೆ ತೋರಿ ಇದರಿಂದ ಸಂತೋಷವಾಯಿತು. ಅಷ್ಟರಲ್ಲಿ ಅವರ ಜೊತೆಯಲ್ಲಿದ್ದ ಸಣ್ಣ ಹುಡುಗಿಯೊಂದು ಇವನ ಕಡೆಗೆ ಬಂದು ಅಲ್ಲಿ ಬಿದ್ದಿದ್ದ ಅಶ್ವತ್ಥದ ಹಣ್ಣನ್ನು ಆರಿಸುತ್ತ ಇವನ ಕಡೆ ಆಗಾಗ ನೋಡುತ್ತ ನಿಂತಿತು. ಸಾರಿಪುತ್ರನು ಓಂದಿನ ರಾತ್ರಿ ತಂಗಿದ್ದ ಸ್ಥಳದಲ್ಲಿ ಯಾರೋ ಕೊಟ್ಟಿದ್ದ ಎರಡು ಬಾಳೇ ಹಣ್ಣನ್ನು, ಮಕ್ಕಳು ಯಾರಾದರೂ ಬಂದರೆ ಕೊಡುವುದಕ್ಕೆ ಇರಲಿ, ಎಂದು ತನ್ನ ಕೂಡ ತಂದಿದ್ದನು. ಅದನ್ನು ಮಗುವಿಗೆ ಕೊಡೋಣ ಎಂದು ಕೊಂಡನು. ಹಾಗೆಯೇ ಹುಡುಗಿಯ ಮುಖವನ್ನು ನೋಡಿ ತನ್ನ ಮಗಳ ಮುಖದಂತೆ ಇದೆ ಎಂದು ಭಾವಿಸಿದನು. ಆಮೇಲೆ ಇದು ಭ್ರಮೆ ಯೆಂದನು. ಆಮೇಲೆ ಇದರಲ್ಲಿ ಆಶ್ಚರ್ಯವೇನು ಎಂದುಕೊಂಡನು. ಆಮೇಲೆ "ಮಗು, ನಿನ್ನ ಹೆಸರೇನಮ್ಮ?" ಎಂದು ಕೇಳಿದನು.

"ವೇದ."

"ನಿನಗೆ ಹಣ್ಣು ಬೇಕೆ? ಕೊಡುತ್ತೇನೆ ಬಾ"

"ಕೊಡು, ನೋಡೋಣ" ಹೀಗೆಂದು ಹೇಳಿ ಹುಡುಗಿ ಪಂಥ ಮಾಡುವವಳಂತೆ ಹತ್ತಿರ ಬಂದು ಕೈನೀಡಿದಳು. ಸಾರಿಪುತ್ರನು ಹಣ್ಣನ್ನು ತೆಗೆದು ಅವಳಿಗೆ ಕೊಟ್ಟನು. ಹುಡುಗಿ ತೆಗೆದುಕೊಂಡು

"ನಿನ್ನ ಹೆಸರೇನು ?" ಎಂದಳು.

"ಸಾರಿಪುತ್ರ."

"ನಮ್ಮ ತಾತ ನಿನ್ನ ಹಾಗೆಯೇ ಬಟ್ಟೆಹಾಕಿಕೊಂಡು ಸಂನ್ಯಾಸಿಯಾಗಿದ್ದಾನೆ."

"ಅವನೆಲ್ಲಿ ?"

"ಎಲ್ಲೋ"

"ಅವನ ಹೆಸರೇನು ?"

"ತಿಳಿಯದು."

"ನಿಮ್ಮ ತಾಯಿ ಹೆಸರೇನು ?"

"ಅಮ್ಮ."

"ನಿಮ್ಮಪ್ಪನ ಹೆಸರು ?"

"ವೇದಮ್ಮನವರು."

ಹೆಂಗಸರು ಮುಂದೆ ಹೋಗಿದ್ದರು. ಅವರಲ್ಲಿ ಒಬ್ಬಳು ಹಿಂದಿರುಗಿ "ಲೇ ಹರಟೇಮಲ್ಲಿ, ಬಾ" ಎಂದು ಕೂಗಿದಳು. ಹುಡುಗಿ "ಬಂದೆ" ಎಂದಳು. ಅವರು ಮುಂದೆ ನಡೆದರು. ಹುಡುಗಿ ತನ್ನ ಮಗಳ ಮಗಳಿರಬೇಕು, ಅದರಿಂದಲೆ ಈ ಹೋಲಿಕೆ, ಎಂದು ಸಾರಿಪುತ್ರನು, "ವೇದಮ್ಮ, ನಿಮ್ಮ ತಾತನನ್ನು ತೋರಿಸುತ್ತೇನೆ. ನನ್ನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗು" ಎಂದನು. ಹುಡುಗಿ "ಬಾ" ಎಂದು ಮುಂದೆ ಹೊರಟಳು. ಇವನು ಅವಳನ್ನೆತ್ತಿಕೊಂಡು, ನಾನು ನಿಮ್ಮ ಮನೆ ತೋರಿಸಲೆ, ಎಂದು ಅವಳ ಸಂಗಡ ಮಾತನಾಡುತ್ತ ಊರನ್ನು ಹೊಕ್ಕನು.

ಅದೇ ಬೀದಿ, ಅದೇ ದೇವಾಲಯ; ಅದೇ ಮನೆ; ಮನೆಯ ಮುಂದೆ ಒಬ್ಬ ಮಧ್ಯವಯಸ್ಸಿನ ಸ್ತ್ರೀ ರಂಗವಲ್ಲಿಯನ್ನಿಕ್ಕುತ್ತಿದ್ದಳು. ಅಪರಿಚಿತನು ಮಗುವನ್ನೆತ್ತಿಕೊಂಡು ಬರುತ್ತಿರುವುದನ್ನು ನೋಡಿ ರಂಗವಲ್ಲಿಯನ್ನಿಕ್ಕುವುದನ್ನು ಬಿಟ್ಟು ಸುಮ್ಮನೆ ನಿಂತಳು.

ಸಾರಿಪುತ್ರನಿಗೆ ಅವಳು ತನ್ನ ನುಗಳೆಂಬುದು ಖಂಡಿತವಾಯಿತು. ತನ್ನ ಪರಿಚಯವನ್ನು ಮೆಲ್ಲಗೆ ತಿಳಿಸಬೇಕೆಂದು ಸಾರಿಪುತ್ರನ ಉದ್ದೇಶ.

ಮಗುವನ್ನು ಕೆಳಗೆ ಬಿಡುತ್ತ ಅವನು "ಇದು ನಿಮ್ಮ ಮಗುವೇ, ತಾಯಿ?" ಎಂದು ಕೇಳಿದನು.

"ಹೌದು."

"ನನ್ನ ಹೆಸರು ಸಾರಿಪುತ್ರ. ನಾನು ಈ ಊರಿನಲ್ಲಿ ಹುಟ್ಟಿ ಬೆಳೆದವನು. ನನ್ನನ್ನು ಆಗ ನರಸಿಂಹಶರ್ಮನೆಂದು ಕರೆಯುತ್ತಿದ್ದರು."

ಇವನು ಈ ಮಾತುಗಳನ್ನು ಹೇಳುವುದರೊಳಗಾಗಿ ಕುಮುದಿನಿ ತಂದೆಯನ್ನು ದೃಷ್ಟಿಸಿ ನೋಡಿ ತಂದೆಯೆಂದು ಹೇಗೋ ತಿಳಿದಳು. ಅವನು ಮಾತನ್ನು ಮುಗಿಸುವುದರೊಳಗೆ, "ಅಮ್ಮಾ, ಅಪ್ಪ ಬಂದರು" ಎಂದು ಕೂಗುತ್ತ ದಡದಡನೆ ಮನೆಯೊಳಕ್ಕೆ ಓಡಿದಳು. ಒಳಗಿಂದ ಒಬ್ಬ ವೃದ್ಧ ಸುಮಂಗಲಿ—ಮಗಳು ಕೂಗಿದುದು ಕೇಳಿರಬೇಕು, ಮಾತು ತಿಳಿದಿರಲಾರದು—"ಏನೇ ಅಮ್ಮಾ, ಮಗು ಬಿದ್ದಳೆ" ಎನ್ನುತ್ತ ಹೊರಕ್ಕೆ ಬಂದಳು. ಕೈಸಾಲೆಯಲ್ಲಿ ಮಗಳ ಮಾತನ್ನು ಕೇಳಿದಳು.

ಕುಮುದಿನಿ ಎರಡುಸಲ, "ಅಪ್ಪ ಬಂದರು, ಸಂನ್ಯಾಸಿಯಾಗಿದ್ದಾರೆ, ಅಲ್ಲಿ ನಿಂತಿದ್ದಾರೆ ನೋಡು" ಎಂದು ಸ್ವಲ್ಪ ಗಟ್ಟಿಯಾಗಿ ಹೇಳಿದಳು. ವೇದವತಿಗೆ ವಯಸ್ಸಿನಿಂದ ಕಿವಿ ಮಂದವಾಗಿತ್ತು. ಇಷ್ಟು ಹೇಳಿದಮೇಲೆ ಮಗಳ ಮಾತು ಏನೆಂದು ತಿಳಿಯಿತು.

ಮುಖವನ್ನು ಬೇರೆಕಡೆ ತಿರುಗಿಸಿಕೊಂಡು, "ಸಂನ್ಯಾಸಿಯೇ? ಅವರೇ?" ಎಂದಳು.

"ಅಪ್ಪಾ. ಹೇಳಲಿಲ್ಲವೆ? ಹೆಸರು ಹೇಳಿದರು; ಸಂನ್ಯಾಸಿಯಾಗಿವಾರೆ."

ವೇದವತಿ "ಹೆಸರು ಹೇಳಿದರೆ? ಸಂನ್ಯಾಸಿ ಆಗಿದಾರೆಯೆ? ಮನೆಗೆ ಬರಬಾರದಲ್ಲ. ನಾನು ನೋಡುವುದು ಅವರಿಗೆ ಅನಿಷ್ಟ. ನೀನು ಹೋಗಿ ವಿಚಾರಿಸಿಕೊ. ಸುಖವಾಗಿ ಬಂದರಲ್ಲ. ಅಷ್ಟೇ ಸಂತೋಷ," ಎಂದು ಹೇಳಿ "ನನಗೆ ನೋಡೋ ಪುಣ್ಯ ಇಲ್ಲ" ಎಂದಳು. ಸಾರಿಪುತ್ರನು "ನಾನು ಬೌದ್ಧ ಸಂನ್ಯಾಸಿ, ನನಗೆ ವೈದಿಕ ಸಂನ್ಯಾಸಿಗಳ ನಿಯಮವಿಲ್ಲ. ನೀವು ಬರಬಹುದು" ಎಂದನು.

ವೇದವತಿಗೆ ಚೆನ್ನಾಗಿ ತಿಳಿಯಲಿಲ್ಲ. "ಏನಂತೆ?" ಎಂದಳು; ಕುಮುದಿನಿ ತಿಳಿಸಿದಳು. ವೇದವತಿ "ಹಾಗೆಯೇ? ಒಳ್ಳೆಯದಾಯಿತು"

ಎಂದು ಹತ್ತಿರಕ್ಕೆ ಬಂದು, "ಗಂಡನನ್ನು ದೃಷ್ಟಿಸಿ ನೋಡಿ "ನಿಮ್ಮ ಮಗಳನ್ನು ನೋಡುವುದಕ್ಕೆ ಬಂದಿರಲ್ಲ ಅಷ್ಟೇ ಸಂತೋಷ" ಎಂದು, ಅವನ ಕಾಲನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡು, ಅಲ್ಲೇ ಕುಳಿತು ಒಂದು ಕ್ಷಣ ಬಿಟ್ಟು "ಕುಮುದಾ, ಒಂದು ಮಣೆಹಾಕಿ ಕುಳ್ಳಿರಿಸಮ್ಮ. ವೇದಾ, ಬಾ ತಾಯಿ, ನಿಮ್ಮ ತಾತನಿಗೆ ನಮಸ್ಕಾರಮಾಡು" ಎಂದಳು."

ಅಂದು ಮನೆಯಲ್ಲಿ ಬಹಳ ಸಡಗರ. ಅರ್ಧಗಳಿಗೆಯಲ್ಲಿ ಊರ ಜನವೆಲ್ಲ ಬಂದು ಸೇರಿತು. "ಹಿಂದೆ ನರಸಿಂಹನನ್ನು ನೋಡಿದ್ದವರನೇಕರು ಸಾರಿಪುತ್ರನನ್ನು ನೋಡಿ ಗುರುತಿಸಿ ವಿಶ್ವಾಸದಿಂದ ಮಾತನಾಡಿಸಿದರು." ಕೆಲವರು ಜಾತಿ ಏಕೆ ಕೆಟ್ಟೆ ಎಂದರು; ಕೆಲವರು ಸಂನ್ಯಾಸಿಯೇಕಾದೆ ಎಂದರು; ಕೆಲವರು ಚಿಕ್ಕಂದಿನಲ್ಲಿ ತಾವು ಜೊತೆಯಾಗಿ ಆಡಿದ್ದನ್ನೆಲ್ಲ ಜ್ಞಾಪಕಕೊಟ್ಟರು. ಸಾರಿಪುತ್ರನು ಸಮಾಧಾನವಾಗಿ ಎಲ್ಲರಿಗೂ ಉತ್ತರ ಕೊಡುತ್ತ ನಗುತ್ತ ಎಲ್ಲರನ್ನೂ ವಿಶ್ವಾಸದಿಂದ ಮಾತನಾಡಿಸಿದನು. ಸಣ್ಣವರನೇಕರು ಅವನಿಗೆ ನಮಸ್ಕಾರಮಾಡಿ ಆಶೀರ್ವಾದ ಪಡೆದರು. ಮಧ್ಯಾಹ್ನ ಬಹಳ ಹೊತ್ತಿನವರೆಗೆ ಸಲ್ಲಾಪಗಳು ನಡೆದುವು."

ಸಾರಿಪುತ್ರನ ತಂದೆ ತೀರಿಹೋಗಿ ಐದಾರು ವರುಷವಾಗಿತ್ತು. ಅವರು ಮೊಮ್ಮಗಳಿಗೆ ಮದುವೆಮಾಡಿ ಆ ಅಳಿಯನನ್ನು ಮನೆಯಲ್ಲಿರಿಸಿ ಕೊಂಡಿದ್ದರು. ಕುಮುದಿನಿಗೆ ತಾತನನ್ನೂ ತಾಯನ್ನೂ ಬಿಡಲು ಮನಸ್ಸಿಲ್ಲ. ಅಳಿಯನ ತಾಯಿತಂದೆ ಹಟಮಾಡಿದರು. ಅವನು ಅವಳನ್ನು ಅಲ್ಲೇ ಬಿಟ್ಟು ತನ್ನ ಊರಿನಲ್ಲಿದ್ದನು. ಕುಮುದಿನಿ ಆರು ತಿಂಗಳು ಅಲ್ಲಿ, ಆರು ತಿಂಗಳು ಇಲ್ಲಿ ಇರುತ್ತಿದ್ದಳು. "ಸಾರಿಪುತ್ರನ ತಂದೆ, ಮಗನನ್ನು ನೋಡಿದರೂ ನೋಡಬಹುದು, ಅವನು ಬಂದಾನೆ, ಎಂದು ಆಶೆ ಇಟ್ಟು ಕೊಂಡೇ ತೀರಿಹೋದರಂತೆ. "ಅವನು ಬಂದರೆ ಈ ಸಂಸಾರ ಅವನ ಮೇಲೆ ಹಾಕಿ ಹೋಗಬಹುದು, ಬರಲಿಲ್ಲವಲ್ಲ," ಎಂದು ಆಗಾಗ ಹೇಳುವರು. ಸೊಸೆ "ನೀವು ನಮಗಾಗಿ ಚಿಂತೆ ಮಾಡಬೇಡಿ, ನಾರಾಯಣಾ ಗೋವಿಂದಾ ಅಂತ ಇರಿ. ನನ್ನನ್ನೇ ಮಗನೆಂದು ಎಣಿಸಿಕೊಳ್ಳಿ. ನಿಮಗೆ ಆಗಬೇಕಾದ ಕರ್ಮವೆಲ್ಲ ನಾನು ಮಾಡಿಸುತ್ತೇನೆ. ನಾನು ಒಂಟಿಯಾಗುತ್ತೇನೆ ಅಂತ ಅಲ್ಲವೆ? ನಾನು ಕುಮುದಾ ಅವರ ಮನೆಗೆ ಹೋದರೂ ಹೋದೆ. ನನ್ನ

ಮಾತೇನು" ಎನ್ನುತ್ತಿದ್ದಳು. ಕೊನೆಗೆ ಅವರು ಸೊಸೆಯನ್ನು "ನೀನು ಹುಟ್ಟಿನಲ್ಲಿ ಹೆಂಗಸು ಹೊರತು ಗುಣದಲ್ಲೆಲ್ಲ ಗಂಡಸರಂತೆ ಇದ್ದೀಯೆ. ಮನೆಗೆ ಒಳ್ಳೇ ಹೆಸರು ತಂದೆ.'' ನೀನು ದೀರ್ಘಸುಮಂಗಲಿಯಾಗಿರು. ಮುಂದಿನ ಜನ್ಮದಲ್ಲಿ ದೇವರು ನಿನಗೆ ಈ ಪಾತಿವ್ರತ್ಯಕ್ಕೆ ಸರಿಯಾದ ಪತಿ ಸಹವಾಸವನ್ನು ಕೊಡುತ್ತಾನೆ" ಎಂದು ಹೇಳಿ, "ಕುಮುದಾ ನಿಮ್ಮ ಅತ್ತೆಯ ಮನೆಯವರು ಏನೇ ಹೇಳಲಿ, ನಿಮ್ಮಮ್ಮನನ್ನು ಒಬ್ಬಳನ್ನೇ ಬಿಡಬೇಡ; ಒಂಟಿಯಾಗಿರುತ್ತಾಳೆ, ಬೇಸರಪಡುತ್ತಾಳೆ" ಎಂದು ಅವಳನ್ನು ಬೇಡಿ ಕಣ್ಣುಮುಚ್ಚಿಕೊಂಡರಂತೆ. \ \ಸಾರಿಪುತ್ರನು ಇದನ್ನೆಲ್ಲ ಕೇಳಿದನು; ಮಧ್ಯಾಹ್ನವಾದ ಮೇಲೆ ತೀರ್ಥಕ್ಕೆ ಹೋಗಿ ಸ್ನಾನಾದಿಗಳನ್ನು ಮುಗಿಸಿಕೊಂಡು ಬಂದನು. ಮನೆಯೊಳಗೆ ಊಟಮಾಡಬೇಕೆಂದರು." ನೀವು ಕೊಟ್ಟರೂ ಭಿಕ್ಷೆ, ಯಾರು ಕೊಟ್ಟರೂ ಭಿಕ್ಷೆ, ನೀವು ಕೊಡುವ ಭಿಕ್ಷವನ್ನು ತಿನ್ನಬೇಕೆಂದರೆ ಅದೇ ಆಗಲಿ ಎಂದನು." ಮಾರನೆಯ ದಿನದಿಂದ ತೀರ್ಥದ ಬಳಿಯ ಮಂಟಪ ಒಂದರಲ್ಲಿ ಸ್ಥಳ ಮಾಡಿಕೊಂಡು ಅಲ್ಲಿ ನಿಂತನು. ವಿಧಿಯಂತೆ ಭಿಕ್ಷದಿಂದ ಜೀವನವನ್ನು ನಡೆಸುತ್ತ ಮುಂದಣ ದಾರಿಯನ್ನು ದೇವರು ತೋರಿಸಲಿ ಎಂದು ಅಲ್ಲಿ ಧ್ಯಾನದಲ್ಲಿರುತ್ತಿದ್ದನು."

"ಸಾರಿಪುತ್ರನ ಹೆಸರು ಆ ಕಡೆಯೆಲ್ಲ ಪ್ರಸಿದ್ಧವಾಯಿತು. ಬೌದ್ಧ ಮತ ಬೇರೊಂದು ಮತವಲ್ಲವೆಂದೂ, ವೈದಿಕ ಧರ್ಮವನ್ನೇ ಎಲ್ಲರ ಮೋಕ್ಷಕ್ಕೆಂದು ಸುಲಭವಾಗಿ ಮಾಡಲು ಭಗವಂತನು ಬೌದ್ಧಾವತಾರವನ್ನು ಮಾಡಿದನೆಂದೂ ಅಲ್ಲೆಲ್ಲ ಸಾರಿ ಸಾರಿಪುತ್ರನು ಜನರಿಗೆ ಬೌದ್ಧಮತದಲ್ಲಿ ಪ್ರೀತಿ ಉಂಟಾಗುವಂತೆ ಮಾಡಿದನು." ಅವನು ಊರಿಗೆ ಬಂದ ಕೆಲವು ಕಾಲದಲ್ಲಿ ಬೌದ್ಧ ಸಂನ್ಯಾಸಿಗಳು ಇನ್ನು ಕೆಲವರು ಅಲ್ಲಿ ಬಂದು ಸೇರಿದರು. ಅಷ್ಟರಲ್ಲಿ ಕುಮುದಿನಿಯ ಯಜಮಾನನು ಅಲ್ಲಿಗೆ ಬಂದು ಆ ಮನೆಯಲ್ಲಿ ನಿಂತನು. ಅವನೂ ಕುಮುದಿನಿಯೂ ಮತ್ತೆ ಮತ್ತೆ ಸಾರಿಪುತ್ರನ ಮಂಟಪದ ಬಳಿ ಬರುತ್ತಾ ಅಲ್ಲಿಯೇ ಇರುತ್ತ ಅವನ ಉಪಚಾರ ಮಾಡುತ್ತಿದ್ದರು. \ ಎರಡು ವರುಷವಾದನಂತರ ವೇದವತಿ "ನಿಮ್ಮ ಧರ್ಮದಲ್ಲಿ ನಾನೂ ಭಿಕ್ಷುಣಿಯಾಗಬಹುದಾದರೆ ನನಗೂ ಅದೇ ಸ್ಥಿತಿಯನ್ನು ಕೊಡಿ ನಿಮ್ಮ ಜೊತೆಗೆ ಇರುತ್ತೇನೆ" ಎಂದಳು. ಸಾರಿ

ಪುತ್ರನು ಅವಳನ್ನು ಭಿಕ್ಷುಣಿಯನ್ನಾಗಿ ಮಾಡಿದನು. ಆಮೇಲೆ ಅಲ್ಲಿ ಇನ್ನೂ ಕೆಲವರು ಭಿಕ್ಷುಣಿಯರು ಬಂದು ಸೇರಿದರು. ಅಷ್ಟರಲ್ಲಿ ಆನಂದನಿಗೆ ಗೋದಾವರೀತೀರದ ಪುಳಿಂದರಾಜರಿಂದ ಆಹ್ವಾನ ಬಂದು ಅವನು ಅಜಾಂತದ ಬಳಿ ಐನೂರು ಜನ ಶ್ರಮಣರಿಗಾಗಿ ಒಂದು ವಿಹಾರವನ್ನು ಏರ್ಪಡಿಸುವ ಯೋಚನೆಯನ್ನು ಮಾಡಿ ಈ ಕೆಲಸಕ್ಕೆ ನೀನು ಬರಬೇಕೆಂದು ಸಾರಿಪುತ್ರನಿಗೆ ಹೇಳಿಕಳುಹಿಸಿದನು. ಸಾರಿಪುತ್ರನು ಊರ ಜನರಿಗೆಲ್ಲ ಹೇಳಿ ಮಗಳನ್ನೂ ಅಳಿಯನನ್ನೂ ಮೊಮ್ಮಗಳನ್ನೂ ಬಿಟ್ಟು ಭಿಕ್ಷುಣಿಯಾದ ವೇದವತಿಯೊಡನೆಯೂ ತನ್ನ ಇತರ ಸಹವಾಸಿಗಳಾದ ಶ್ರಮಣರೊಡನೆಯೂ ಕರ್ಣಾಟಕ ರಾಷ್ಟ್ರದ ಮುಖವಾಗಿ ತೆರಳಿದನು."

1103—54. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಸಿ. ವಾಸುದೇವರಾಯರವರು ಮುದ್ರಿಸಿರುವರು.

# ವಿಷಯಸೂಚಿ

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ಸುಬ್ಬಣ್ಣ (ಕತೆ)
ವಿಮರ್ಶೆ ೧,೨,೩,೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೪, ೫, ೬
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯು ತಮ್ಮಡಿ (ಭಾಷಣ)
ನವರಾತ್ರಿ ೧,೨,೩,೪,೫ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ (ಕಾದಂಬರಿ)
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)
ಚಿಂತನ (ವಿಚಾರ)
ಮಾಸತಿ (ದೃಶ್ಯ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಮೇಲೂರಿನ ಲಕ್ಷ್ಮಮ್ಮ

೧

"ನಮ್ಮ ಮಗುವಿಗೆ ಈ ಹೊತ್ತು ಆರತಿ ಅಕ್ಷತೆ"......

ಯಾರೋ ನನ್ನ ಪಕ್ಕದಲ್ಲಿ ಮಾತನಾಡಿದರು. ನಾನು ಬೆಚ್ಚಿಬಿದ್ದೆ. ಮಾರ್ಕೆಟ್ಟಿಗೆ ಹೋಗುತ್ತ ಏನೋ ಯೋಚನೆಯಲ್ಲಿದ್ದೆ. ಇಲ್ಲಿ ಆರತಿ ಅಕ್ಷತೆಯ ಮಾತೇನು? ಕೋಟೇ ವೆಂಕಟರಮಣ ಸ್ವಾಮಿಯ ದೇವ ಸ್ಥಾನದ ಆಚೆ: ರಸ್ತೆಯ ಅಂಚಿನಲ್ಲಿ. ಇದು ಯಾರು ಎಂದು ನೋಡಿದೆ. ಒಬ್ಬ ಹೆಂಗಸು. ಹತ್ತಿರ ಇನ್ನು ಯಾರೂ ಇರಲಿಲ್ಲ. ಇವರೇ ಈ ಮಾತ ನ್ನಾಡಿರಬೇಕು. ನನಗೆ ಒಡನೆಯೇ ಈಕೆ ಯಾರೋ ಹುಚ್ಚಿ ಎಂದು ತೋರಿತು. ಆದರೆ ಮಾತು ಸಮಾಧಾನವಾಗಿತ್ತು. ಏನು ಹೇಳು ತ್ತಾರೋ ನೋಡೋಣವೆಂದು ನಡೆಯನ್ನು ಮೆಲ್ಲನೆ ಮಾಡಿದೆ. ಆಕೆ ಮುಂದಕ್ಕೆ ಮಾತನಾಡಿದರು. "ನೀವೆಲ್ಲಾ ಬನ್ನಿ ಅಮ್ಮಾ, ಬರದೆ ಇರಬೇಡಿ. ಸುಮಂಗಲೀರು ಬಂದು ಹರಸಿ; ಅವನಿಗೆ ಒಳ್ಳೆಯದಾಗಲಿ."

ಮಾತು ಮೊದಲಿನಂತೆಯೇ ಸಮಾಧಾನವಾಗಿ ಇತ್ತು. ಆ ವೇಳೆಗೆ ನಾಲ್ಕೈದು ಜನ ಆಕೆಯ ಹತ್ತಿರಲೇ ನಡೆದಿದ್ದರು. ಅದು ಆಕೆಗೆ ತಿಳಿದಂತಿರಲಿಲ್ಲ. ಈಕೆ ಕುರುಡಿ ಇರಬೇಕು ಎಂದು ನನಗೆ ತೋರಿತು. ನಾನು ಸ್ವಲ್ಪ ಹತ್ತಿರಕ್ಕೆ ಹೋಗಿ ನಿಂತೆ.

"ಅಮ್ಮಾ ನರಸಮ್ಮ, ಯಾಕಮ್ಮ ನಗುತೀರಿ? ಕುರುಡು ಮಗು ವಿಗೆ ಏನು ಒಳ್ಳೇದಾಗೋದು ಎಂತಲೇ ತಾಯಿ? ಅಮ್ಮಾ ಮಗು ಕುರುಡಾದರೇನು, ಮಗು ಅಲ್ಲವೇನಮ್ಮಾ? ನಾನು ಅದನ್ನ ಎತ್ತಿ ಕೊಂಡಿದ್ದರೆ ನೆರೆಮನೆ ಸಾಕಮ್ಮನವರ ಗಂಡ ಯಶೋದೆ ಕೃಷ್ಣನ್ನ ಎತ್ತಿ ಕೊಂಡು ಕುಳಿತಿದಾಳೆ ಎನ್ನುತಾರೆ......ಕುರುಡು ಯಶೋದೆ ಕುರುಡು ಕೃಷ್ಣನ್ನ ಎತ್ತಿಕೊಂಡಿದಾಳೆ ಎಂತೀರಾ ಅಮ್ಮಾ. ಹೋಗಲಿ ಬಿಡಿ. ಕುರುಡು ಅಲ್ಲ ಅಂದರೆ ಹೋಗುತ್ತೆಯೇ? ನಾವು ಕೇಳಿಬಂದದ್ದು. ಒಳ್ಳೇ

ಸುಮಂಗಲೀರು ಬಂದು ನಮ್ಮಮ್ಮನ್ನ ಹರಸಿದ್ದರೆ ನನಗೆ ಕಣ್ಣಿರುತಿತ್ತು. ನಾನು ಸರಿಯಾಗಿ ದೇವರ ಪೂಜೆ ಮಾಡಿದ್ದರೆ ನಮ್ಮ ಮಗುವಿಗೆ ಕಣ್ಣಿರುತಿತ್ತು. ನೀವು ಬಂದು ಈ ಹೊತ್ತು ಮಗುವನ್ನ ಚೆನ್ನಾಗಿ ಹರಸಿ. ಕಣ್ಣಿಲ್ಲದಿದ್ದರೆ ಹೋಗಲಿ ಚೆನ್ನಾಗಿ ಬದುಕಲಿ.''

ನಾನು ಯೋಚಿಸಿಕೊಂಡಂತೆ ಈಕೆ ಕುರುಡಿಯೇ ಹೌದು. ಕುರುಡಿ, ಹುಚ್ಚಿ. ಈ ವೇಳೆ ಏನನ್ನೋ ನೆನೆದುಕೊಂಡು ತನಗೆ ತಾನೇ ಮಾತನಾಡಿಕೊಳ್ಳುತ್ತಿದ್ದರು. ಮುಖದಲ್ಲಿ ಕುಂಕುಮವಿತ್ತು. ನೋಡುವುದಕ್ಕೆ ಲಕ್ಷಣವಾಗಿದ್ದರು. ಹತ್ತಿರ ಒಂದು ಬಟ್ಟೆಯ ಗಂಟು. ನೋಡಿದರೆ ಬೀದಿಯ ಹುಚ್ಚಿಯಂತೆ ಕಾಣಲಿಲ್ಲ; ಎಲ್ಲೋ ತಪ್ಪಿಸಿಕೊಂಡು ಬಂದಿರುವಂತೆ ಇತ್ತು. ನಾನು ಅಲ್ಲಿಯೇ ನಿಂತು ಇವರ ಮಾತನ್ನು ಇನ್ನೂ ಕೇಳಿದೆ. ಅವರು ಮರಳಿ ಮಾತನಾಡಿದಾಗ ಅವರ ಮನಸ್ಸು ಬೇರೆಯ ವಿಷಯಕ್ಕೆ ಹೋಗಿತ್ತು.

"ಅಲ್ಲವೇ ಮೊದ್ದು ಹುಡುಗಿ ಇಷ್ಟು ತಿಳೀಲ್ಲವೇ? ಸ್ವಲ್ಪ ದಿನ ವೇಷ ಮಾಡಿದರೆ ಆಯಿತು. ಆಮೇಲೆ ಕಣ್ಣು ಯಾಕೋ ಮಂಕಾಯಿತು ಅನ್ನು. ಆಮೇಲೆ ಕಣ್ಣು ತೀರ ಮಂದವಾಯಿತು ಅನ್ನು. ಕೊನೆಗೆ ಬೇಕಾದರೆ ಕುರುಡಿ ಅಂತಲೇ ತಿಳಿಯಲಿ. ಮದುವೆ ಆಗೋವರೆಗೆ ಹೇಗೋ ವೇಷ ಮಾಡಬೇಕು. ಆಮೇಲೆ ಕೈಹಿಡಿದ ಹೆಂಡತೀನ ಬಿಡುತಾರೆಯೇ? ಸರಿಯಾಗಿ ಬಾಳಿಸಿದರೆ ಸಂತೋಷ ಅನ್ನೋದು. ಬೇಡ ಎಂದರೆ ಒಂದು ಕಡೆ ಕೂರಿಸಿ ಅನ್ನ ಹಾಕುತಾರೆ. ದೇವರ ಇಚ್ಛೆ ಅನ್ನೋದು. ಆದರೆ ಏನೇ ತಾಯಿ, ಗಂಡನ ಗುರುತು ಹಿಡಿಯೋಕೆ ಮಾತ್ರ ಏನಾದರೂ ಒಂದು ನೆಪ್ಪು ಇಟ್ಟುಕೋಬೇಕು. ನಿಮ್ಮ ತಂದೇನ ನಾನು ಗುರುತು ಹಿಡಿಯೋಕೆ ಹಾಗೆ ಮಾಡಿಕೊಂಡಿದ್ದೆ. ಅವರ ಎಡತೋಳ ಹಿಂದಗಡೆಗೆ ಒಂದು ಕಡಲೆಕಾಳಿನಷ್ಟು ಗಾತ್ರದ ಉಣ್ಣೆಯಿದೆ ನೋಡು. ಚಿಕ್ಕಂದೇ ಅದನ್ನು ಮುಟ್ಟಿ ಗುರುತುಮಾಡಿಕೊಂಡೆ. ಹೊತ್ತಿಲ್ಲದ ಹೊತ್ತಿನಲ್ಲಿ ಆಗದವರು ಕೆಡಿಸೋಕೆ ಬಂದರೆ ನಮ್ಮ ಮಾನ ಕಾಯೋರ್ಯಾರಮ್ಮ. ನಮ್ಮ ದೇವರು ನಮಗೆ ಒಳ್ಳೇ ಬುದ್ಧಿ ಕೊಡಬೇಕು. ನಮ್ಮ ಬುದ್ಧಿ ನಮ್ಮ ಕೈಲಿರಬೇಕು. ಆ ಸಲ ಆ ಪುಂಡ ನನ್ನ ಹತ್ತಿರ ಬಂದ. ಮಾತನಾಡಲಿಲ್ಲ, ಮುಟ್ಟಿದ.

ಗಂಡ ಅಂತ ತಿಳಿದುಕೊಳ್ಳುತಾಳೆ ಎಂತ ಇದ್ದನೇನೋ. ಗಂಡನಾದರೆ ಮಾತನಾಡು ಇಲ್ಲದಿದ್ದರೆ ನಡಿ ಎಂದೆ. ಗಂಟ್ಲು ಕಟ್ಟಿಕೊಂಡಿದೆ ಎನ್ನುವ ಹಾಗೆ ವೇಷಮಾಡಿ ಗಂಟ್ಲು ಕಟ್ಟಿಕೊಂಡಿದೆ ಎಂದ. ನನಗೆ ಆಗ ತಿಳೀತು. ಎಲ್ಲಿ ನಿನ್ನ ತೋಳು ಎಂದೆ. ಕೊಟ್ಟ. ನೋಡಿದೆ ಗುರುತು ಇರಲಿಲ್ಲ. ದೇವರಾಣೆ ನೀನು ಕೆಟ್ಟದ್ದಕ್ಕೆ ಬಂದಿದೀಯೆ ನಡಿ ಎಂದೆ. ಇರಲಿ ಬಾ ಎಂತ ನನ್ನನ್ನು ಹಿಡಿದ. ಮೂತಿಗೆ ಹೊಡೆದೆ ಕಾಣೆ......''

ಮಾತು ಸಮಂಜಸವಾಗಿತ್ತು. ಆರತಿ ಅಕ್ಷತೆಗೆ ಸಂಬಂಧವಿಲ್ಲ. ಒಂದು ಕುರುಡು ಹುಡುಗಿಗೆ ಬುದ್ಧಿವಾದ. ತನ್ನ ಚರಿತ್ರೆಯ ಒಂದು ವಿಷಯದ ನೆನಪು. ಆದರೆ ಇದ್ದದಿದ್ದಹಾಗೆ: ''ಹೋ ಹೊಡೆದರಲ್ಲಾ. ಅಯ್ಯೋ ನನ್ನ ಮಗು ಹೋಯಿತಲ್ಲಾ. ಅಯ್ಯೋ ಅಯ್ಯೋ.'' ಯಾರೋ ತನ್ನನ್ನು ಕೆಡಿಸುವುದಕ್ಕೆ ಬಂದಿದ್ದರು ಎಂಬ ಮಾತನ್ನು ಬಿಟ್ಟು, ಈ ಹೆಂಗಸು ತನ್ನ ಮಗು ಸತ್ತ ಮಾತನ್ನು ನೆನೆದು ಗೋಳಗುವುದಕ್ಕೆ ಮೊದಲುಮಾಡಿದರು. ನನಗೆ ಇವರಲ್ಲಿ ಬಹಳ ಕನಿಕರವಾಯಿತು. ಇವರು ಎಲ್ಲಿಯವರೋ ಏನೋ, ಇವರ ಸಂಬಂಧವನ್ನು ವಿಚಾರಿಸಿ ಆಮೇಲೆ ಏನುಮಾಡುವುದು ಎಂತ ಯೋಚಿಸೋಣ, ಎಂದು ನಾನು ಹತ್ತಿರ ಹೋಗಿ ಮೆಲ್ಲಗೆ ''ಅಮ್ಮಾ ನಿಮ್ಮದು ಯಾವ ಊರು'' ಎಂದೆ.

''ಮೇಲೂರು.''

''ನೀವು ಯಾರ ಮನೆಯವರಮ್ಮ?''

ಆಕೆ ಮಾತನಾಡಲಿಲ್ಲ.

''ನಿಮ್ಮನ್ನು ಮೇಲೂರಿಗೆ ಕಳುಹಿಸಿಕೊಡಲೇ ತಾಯಿ?''

''ಇಲ್ಲಪ್ಪ ನಾನು ಕಾಶೀಗೆ ಹೊರಟಿದೇನೆ. ನಮ್ಮ ಯಜಮಾನರು ಕಾಶಿಗೆ ಹೋಗಿದಾರೆ. ನಾನೂ ಅಲ್ಲಿಗೆ ಹೋಗೋಣ ಎಂತ ಹೊರಟೆ.''

''ಇದೇನು ಬೆಂಗಳೂರಲ್ಲಿ ಮಾರ್ಕೆಟ್ಟು ಬಳಿ ಕುಳಿತಿದೀರಿ ಮತ್ತೆ? ನಿಮಗೆ ಜೊತೆಗೆ ಯಾರೂ ಇಲ್ಲವೆ?''

''ಜೊತೆಗೆ ಯಾರೂ ಇಲ್ಲವಪ್ಪ. ನಮ್ಮ ಯಜಮಾನರು ಹೊರಟು ಹೋದರು. ನಾನೂ ಹೋಗುತ್ತೇನೆ ಎಂದೆ. ನಮ್ಮಣ್ಣ ಬೇಡ ಎಂದರು. ಇವರನ್ನು ಕೇಳಿದರೆ ಹೀಗೇ ಎಂತ ಬಂದುಬಿಟ್ಟೆ.''

"ಇಲ್ಲಿ ಏನೇನೋ ಮಾತನಾಡುತ್ತಾ ಇದ್ದೀರಲ್ಲಾ. ಅದೆಲ್ಲಾ ಏನು?"

"ನನಗೆ ಆಗಾಗ್ಯೆ ಹಾಗೆ ಆಗುತ್ತೆ ಅಪ್ಪ. ಚೆನ್ನಾಗಿ ಬಾಳಿದವಳು. ಮಕ್ಕಳನ್ನು ಹೆತ್ತೆ. ಅಯ್ಯೋ ನನ್ನ ಮಗು ಹೋಯಿತಲ್ಲಾ. ನನ್ನ ತಾಯಿಾ ನೀನು ಬೇರೇ ಬಾವೀಲಿ ಬಿದ್ದಿಯೇನೇ. ಅಯ್ಯೋ ನನ್ನ ಹಣೇಬರಹಾನೇ ಅಯ್ಯೋ ಅಯ್ಯೋ......"

ಮೊದಲ ಮೂರು ಮಾತು ವಿವೇಕದ ಮಾತು. ಕೊನೆಯ ಮೂರು ಯಾವುದೋ ನೆನಪಿನ ಹುಚ್ಚುಮಾತು. ನಾನು ಒಂದು ಕ್ಷಣ ಯೋಚನೆ ಮಾಡಿ "ಅಮ್ಮ ನಮ್ಮ ಮನೆಗೆ ಬನ್ನಿ. ಆಮೇಲೆ ನೀವು ಕಾಶಿಗೆ ಹೋಗುವಿರಂತೆ. ಯಾರನ್ನಾದರೂ ಜೊತೆ ಬೇಕಾದರೆ ಮಾಡಿಕೊಡೋಣ. ನಿಮ್ಮಣ್ಣನೋರಿಗೆ ಹೇಳಿಕಳುಹಿಸೋಣ" ಎಂದೆ.

ಆಕೆ ಸ್ಥಳ ಬಿಟ್ಟು ಕದಲಲಿಲ್ಲ. ಇವರನ್ನು ಏನುಮಾಡುವುದು ತೋರದೆ ಮೇಲೂರಿನ ಕಡೆಯ ಮೋಟಾರುಗಳು ಬರುವ ಸ್ಥಳಕ್ಕೆ ಹೋಗಿ ಆ ಕಡೆಯಿಂದ ಬಂದ ಮೋಟಾರುಗಳನ್ನು ವಿಚಾರಿಸಿದೆ. ಕುರುಡು ಹೆಂಗಸು, ಹುಚ್ಚಾಪಟ್ಟೆ ಮಾತನಾಡುವವಳು, ಬಟ್ಟೆ ಗಂಟು ಮಾತ್ರ ತಂದವಳು, ಎಂದರೆ ಅವರು ಗುರುತಿಸಿದರು. ಇಂಥಾ ಹೆಂಗಸನ್ನು ಇಲ್ಲಿಗೆ ಕರೆತರಬಹುದೇನಯ್ಯಾ ಎಂದರೆ "ನಮಗೇನು ಗೊತ್ತು? ರಸ್ತೇಲಿ ಬಂದರು, ಗಾಡೀಲಿ ಕೂತುಕೊಂಡರು. ಟಿಕೇಟು ದುಡ್ಡು ಕೊಡಿ ಎಂದರೆ ನಮ್ಮಣ್ಣನನ್ನು ಕೇಳಿ ಎಂದರು. ಇಳೀರಿ ಎಂದರೆ ಗಲಭೆ ಮಾಡಿದರು. ಇಲ್ಲಿ ಇಳಿಸಿದಿವಿ" ಎಂದರು. ನಾನು "ನಿಮಗೆ ಅವರ ಟಿಕೇಟಿನ ದುಡ್ಡು ಕೊಡುತ್ತೇನೆ. ಮೇಲೂರಿಗೆ ಒಂದು ಕಾಗದ ತೆಗೆದುಕೊಂಡುಹೋಗಿ" ಎಂದು ಹೇಳಿ ಅವಶ್ಯಕವಾದ ಏರ್ಪಾಡು ಮಾಡಿದೆ. ಇತ್ತ ಬಂದು ಒಂದು ಜಟಕಾಗಾಡಿಯನ್ನು ತಂದು "ಅಮ್ಮ ನಮ್ಮ ಮನೆಗೆ ಬನ್ನಿ. ಅಡಿಗೆ ಮಾಡಿಕೊಳ್ಳಿವಿರಂತೆ. ಆಮೇಲೆ ಕಾಶಿಗೆ ಹೋಗುವಿರಂತೆ" ಎಂದೆ. ಅವರು "ನೀವು ಯಾರಪ್ಪಾ ಬಹಳ ಒಳ್ಳೆಯವರಾಗಿದೀರಿ. ಕಷ್ಟಕಾಲಕ್ಕೆ ನನ್ನ ದೇವರಹಾಗೆ ಬಂದಿರಿ" ಎಂದರು. ಸ್ವಲ್ಪ ಹೊತ್ತಿನಮೇಲೆ ಗಾಡಿಯಲ್ಲಿ ಕುಳಿತು ಮನೆಗೆ ಬಂದರು. ಒಳಗೆ ಹೆಜ್ಜೆಯಿಡುವುದಿಲ್ಲ ಎಂತ ಬಾಗಿಲ

ಜಗಲಿಯಲ್ಲಿ ಕುಳಿತರು. ನಾನು ಮನೆಯವರಿಗೆ ಅವರನ್ನು ಸ್ವಲ್ಪ ವಿಚಾರಿಸಿ ಕೊಳ್ಳುವಂತೆ ಹೇಳಿ ನನ್ನ ಕೆಲಸಕ್ಕೆ ಹೋದೆ. ಸಂಜೆಗೆ ಮೊದಲು ಅವರಿಗೆ ಬೇಕಾದ ಜನ ಬರಬೇಕು. ಬಂದರಂತೂ ಸರಿಯೆ, ಬಾರದೆ ಇದ್ದರೆ ಏನು ಮಾಡುವುದು ತೋರಲಿಲ್ಲ. ಆಗ್ಯೆ ನೋಡೋಣ ಎಂತ ಸುಮ್ಮನಾದೆ.

ಮಧ್ಯಾಹ್ನ ನಾನು ಕಚೇರಿಯಲ್ಲಿ ಕುಳಿತಿರುವಾಗ ಯಾರೋ ಬಂದು ನನ್ನನ್ನು ನೋಡಬೇಕೆಂದು ಹೇಳಿಕಳುಹಿಸಿದರು. ನಾನು ಹೊರಕ್ಕೆ ಹೋಗಿ ಯಾರು ಎಂದು ಕೇಳುವ ಒಳಗಾಗಿಯೇ ಅವರು ತಾವು ಕಳುಹಿಸಿದ ಚೀಟಿ ಬಂತು ಎಂದರು. ನಾನು ತಮ್ಮೂರು ಮೇಲೂರೇ ಎಂದೆ. ಅವರು "ಹೌದು ಆಕೆ ನನ್ನ ತಂಗಿ. ಬೆಳಗಾಗ ನಾವು ಏಳುವ ಮೊದಲೇ ಎದ್ದು ರಸ್ತೆಯ ಹತ್ತಿರ ಬಂದು ಬಸ್ಸಿನಲ್ಲಿ ಕುಳಿತು ಇಲ್ಲಿಗೆ ಬಂದುಬಿಟ್ಟರು. ತಮ್ಮಂಥ ಪುಣ್ಯಾತ್ಮರ ಕಣ್ಣಿಗೆ ಬಿದ್ದದ್ದರಿಂದ ಅನುಕೂಲವಾಯಿತು. ಇಲ್ಲದೆ ಇದ್ದರೆ ಆಕೆ ಎಷ್ಟು ಕಷ್ಟಪಡುತ್ತಿದ್ದರೋ, ನನಗೆ ಎಷ್ಟು ಕಷ್ಟವಾಗು ತ್ತಿತ್ತೋ" ಎಂದರು. ನಾನು "ನಿಮಗೆ ಅನುಕೂಲವಾದದ್ದು ಸಂತೋಷ ಸ್ವಾಮಿ. ನಾನು ಮಾಡಿದ್ದೇನೂ ಹೆಚ್ಚಲ್ಲ. ನನ್ನ ಕಾಗದ ಎಷ್ಟುಹೊತ್ತಿಗೆ ಬಂತು" ಎಂದೆ. "ತಮ್ಮ ಕಾಗದ ಬಂದಾಗ ನಮಗೆ ಊಟದ ಹೊತ್ತು ಮುಗಿದಿತ್ತು. ನನ್ನ ತಂಗಿ ಹೋಗಿ ಎಲ್ಲಿಯಾದರೂ ಭಾವಿಗೆ ಬಿದ್ದಳೋ ಎಂತ ತಾರಾಮಾರಾ ಓಡಿಯಾಡುತ್ತಿದ್ದೆ. ಯಾರೋ ಒಬ್ಬರು ಆಕೆ ಮೋಟಾರಿಗೆ ಹೋದದ್ದಾಗಿ ಹೇಳಿದರು. ಅದು ಹೌದೇ ಎಂದು ವಿಚಾರಿಸು ವುದಕ್ಕೆ ರಸ್ತೆಗೆ ಜನರನ್ನು ಕಳುಹಿಸಿದೆ. ಇಲ್ಲಿಂದ ಬರುವ ಬಸ್ಸುಗಳಲ್ಲಿ ಒಂದು ಬಸ್ಸಿನ ಮನುಷ್ಯ ತಮ್ಮ ಕಾಗದವನ್ನು ಕೊಟ್ಟನಂತೆ. ಅದರ ಮೇಲೆ ನಾನು ಒಡನೆಯೇ ಬಂದೆ. ನನ್ನ ತಂಗಿ ಸೌಖ್ಯವಾಗಿದಾರಷ್ಟೆ?" "ಅವರ ಮನಸ್ಸು ಸ್ವಲ್ಪ ಅಸ್ವಸ್ಥವಾಗಿರಬೇಕಲ್ಲವೆ?" "ಹೌದು. ಅದು ಹೊರತು ಇನ್ನೇನೂ ಇಲ್ಲದಿದ್ದರೆ ನನಗೆ ಸಂತೋಷ. ಹುಚ್ಚು ಹೆಂಗಸು, ಕುರುಡಿ, ಮೋಟಾರು ಹತ್ತಿ ಇಳಿದು ಈ ಊರಿನ ರಸ್ತೆಯಲ್ಲಿ ಓಡಾಡಿ, ಏನಾಗಿದ್ದರೆ ಬೇಡ ಎಂದಿತು. ಈ ಮೋಟಾರುಗಳೋ ಈ ಜಟಕಾಗಳೋ! ಕಣ್ಣಿರುವ ಜನವೇನೆ ಜ್ಞಾನವಾಗಿರುವಾಗಲೇನೆ ರಸ್ತೆಯಲ್ಲಿ ಓಡಾಡುವುದು ಕಷ್ಟ." ನಾನು "ಆಕೆ ಸೌಖ್ಯವಾಗಿದ್ದಾರೆ. ಮನೆಗೆ ಹೋಗೋಣ ಇರಿ"

ಎಂದು ನಮ್ಮ ಅಧಿಕಾರಿಗಳಿಗೆ ಹೇಳಿ ಅಪ್ಪಣೆ ಪಡೆದು ಈತನೊಂದಿಗೆ ಮನೆಗೆ ಹೊರಟೆ. ದಾರಿಯಲ್ಲಿ ಅವರು ತನ್ನ ತಂಗಿಯ ಕತೆಯನ್ನು ಹೇಳಿದರು.

೨

ಮೇಲೂರಿನಲ್ಲಿ ಸುಬ್ಬರಾಮಯ್ಯನವರು ಎಂಬ ಜೋಯಿಸರಿದ್ದರು. ಅವರಿಗೆ ನರಸಿಂಹಯ್ಯ ಮಗ. ಲಕ್ಷ್ಮಮ್ಮ ಮಗಳು. ಲಕ್ಷ್ಮಮ್ಮ ಹುಟ್ಟು ಕುರುಡಿ. ಆದರೆ ರೂಪವಂತೆ. ಬಹಳ ಬುದ್ಧಿಶಾಲಿ. ಕಣ್ಣಿಲ್ಲದ ಮಗುವೆಂದು ತಂದೆ ಆಕೆಯನ್ನು ಬಹು ಕನಿಕರದಿಂದ ನೋಡಿಕೊಳ್ಳುತ್ತಿದ್ದರು. ಆತ ಸ್ವಲ್ಪ ಕೋಪದ ಮನುಷ್ಯ. ಅವರ ಕೋಪಕ್ಕೆ ಸಿಕ್ಕದ ಜನರೇ ಇಲ್ಲ. ಈ ಮಗಳು ಮಾತ್ರ ಏನುಮಾಡಿದರೂ ತಡೆಯುತ್ತಿತ್ತು. ಒಂದು ರೀತಿಯಲ್ಲಿ ಇದರಿಂದ ತಂದೆಗೆ ಒಳ್ಳೆಯದಾಯಿತೆಂದೇ ಹೇಳಬೇಕು. ಲಕ್ಷ್ಮಮ್ಮನವರ ಬುದ್ಧಿ ಎಂಥದೆನ್ನುವುದಕ್ಕೆ ಆಕೆಯ ಚಿಕ್ಕಂದಿನಲ್ಲಿ ನಡೆದ ಒಂದು ಸಂಗತಿಯನ್ನು ನರಸಿಂಹಯ್ಯ ಹೇಳಿದರು. ಒಂದು ಸಲ ಸುಬ್ಬರಾಮಯ್ಯನವರು ತಾಯ ತಿಥಿ ಮಾಡಿದ ಸಂಜೆ ತಮ್ಮ ತಾಯನ್ನು ಬಹಳವಾಗಿ ಹೊಗಳಿ ತಮ್ಮ ತಂದೆ ಅವರನ್ನು ಬಹಳ ಬಯ್ಯುತ್ತಿದ್ದರು ಎಂದು ಹೇಳಿದರಂತೆ. ಲಕ್ಷ್ಮಮ್ಮ, ಅಪ್ಪಾ ಅಪ್ಪಾ ಈಗ ನಾವು ಅಮ್ಮನ್ನ ಬಹಳ ಒಳ್ಳೆಯವಳು ಎನ್ನುತ್ತೇವೆ ನೀನು ಸುಮ್ಮನೆ ಬಯ್ಯುತ್ತಾ ಇರುತ್ತೀಯ ಹೀಗೇ ಅಲ್ಲವೇ ಅಪ್ಪಾ, ಎಂದರಂತೆ. ಸುಬ್ಬರಾಮಯ್ಯನವರಿಗೆ ಕಕಮಕವಾಯಿತು. ಆದರೆ ಅವರು ಒಂದು ಕ್ಷಣ ಬಿಟ್ಟು ನಕ್ಕು, ನಮ್ಮ ಲಕ್ಷ್ಮಮ್ಮ ಮೈತ್ರೇಯಿಯ ಅವತಾರ, ನನಗೆ ನೀತಿ ಕಲಿಸುತ್ತಾ ಇದಾಳೆ, ಎಂದು ಹೇಳಿದರು. ಇದರ ಹಾಗೆ ಲಕ್ಷ್ಮಮ್ಮನವರ ಬುದ್ಧಿಯ ಮಾತು ಇನ್ನು ಹತ್ತು. ಕಣ್ಣಿಲ್ಲದೇ ಹೋದುದಕ್ಕಾಗಿ ಬುದ್ಧಿಯನ್ನು ಹೆಚ್ಚಾಗಿ ಪಡೆದಿದ್ದರೆಂಬಂತೆ ಇವರ ನಡೆ ನುಡಿ ಎಲ್ಲವೂ ಚೆನ್ನವಾಯಿತು. ಹುಡುಗಿಗೆ ಎಂಟು ವರುಷದ ವೇಳೆಗೆ ಹೇಗಾದರೂ ಮಾಡಿ ಮದುವೆ ಮಾಡಿಬಿಡಬೇಕೆಂದು ತಂದೆ ಬಹಳ ಪ್ರಯತ್ನಪಟ್ಟರು. ಕಂಡವರೆಲ್ಲಾ, ಈ ಕುರುಡಿಯನ್ನು ಮದುವೆಯಾಗುವವರು ಯಾರು, ಎಂದು ಕೇಳುವವರೇ. ಅವರಲ್ಲಿ ಕೆಲವರ ಉದ್ದೇಶ ಸ್ವಲ್ಪ ಹಣ ಕಾಸು ಬರುವುದಾದರೆ ಮಾಡಿಕೊಂಡೇವು ಎಂದು. ಸುಬ್ಬರಾಮಯ್ಯ

ನವರು ಅಂಥ ಹಣವಂತರೇನೂ ಅಲ್ಲ. ಆದರೆ ಪೂರ್ವಾರ್ಜಿತದ ಭೂಮಿ ಮನೆ ಸ್ವಲ್ಪ ಇತ್ತು. ತಾವೂ ಜ್ಯೋತಿಷದಿಂದ ಒಂದಷ್ಟು ಕಾಸನ್ನು ಸಂಪಾದಿಸಿದ್ದರು. ಉಳಿದ ಜನಕ್ಕೆ ಇದೂ ಇಲ್ಲ. ಆದುದರಿಂದ ಅವರಿಗೆ ಇವರ ಕಾಸಿನ ಮೇಲೆ ಕಣ್ಣು. ಮನೆ ಮಠ ಮಾರದಹಾಗೆ ಮಗಳಿಗೆ ಯಾವುದಾದರೊಂದು ಸಂಬಂಧವನ್ನು ಮಾಡಬೇಕೆಂಬ ಯೋಚನೆಯಲ್ಲಿ ಸುಬ್ಬರಾಮಯ್ಯನವರು ತೀರಿಹೋದರು. ಹೋಗುತ್ತಾ ಮಗನಿಗೆ "ಅಪ್ಪಾ ನನ್ನ ಪ್ರಾರಬ್ಧ ನನ್ನ ಹೆಣ್ಣು ಮಗುವಿಗೆ ಕಣ್ಣಿಲ್ಲದೆ ಮಾಡಿತು. ಆ ಮಗು ವನ್ನು ನಿನ್ನ ಕೈಯಲ್ಲಿ ಬಿಟ್ಟು ಹೋಗುತಿದೇನೆ. ಹೇಗಾದರೂ ಮಾಡಿ ಅದನ್ನು ಒಬ್ಬ ಬ್ರಾಹ್ಮಣನ ಕೈಯಲ್ಲಿಡು. ನೀನು ಒಳ್ಳೆಯ ಹುಡುಗ. ನಿನಗೆ ದೇವರು ಒಳ್ಳೆಯದು ಮಾಡುತ್ತಾನೆ" ಎಂದು ಹೇಳಿದರು. ನರಸಿಂಹಯ್ಯ ನವರು ಲಕ್ಷ್ಮಮ್ಮನಿಗಿಂತ ಎಂಟು ವರುಷ ದೊಡ್ಡವರು. ತಂದೆ ತೀರಿ ಹೋದ ವರುಷವೇ ಕನ್ಯಾದಾನ ಮಾಡಬೇಕೆಂದು ಬಲ್ಲವರು ಹೇಳಿದರು; ತಾಯಿಯೂ ಒತ್ತಾಯ ಮಾಡಿದರು; ಅವರಿಗೂ ಆಸೆ. ತಂದೆ ಸಾವಕಾಶ ಮಾಡಿದಂತೆ ಸಾವಕಾಶ ಮಾಡುವುದು ಇವರಿಗೆ ಸಾಧ್ಯವಿಲ್ಲ. ಹುಡುಗಿ ಬೇರೆ ಬೆಳೆಯುತ್ತಿದ್ದಳು. ಈ ಎಲ್ಲ ಕಾರಣದಿಂದ ಅವರು ತಮ್ಮ ಊರಿನಲ್ಲೇ ತಮ್ಮ ಸಂಬಂಧದ ಒಬ್ಬ ಹುಡುಗನಿಗೆ ಈ ಹುಡುಗಿಯನ್ನು ಕೊಡುವ ಏರ್ಪಾಡನ್ನು ಮಾಡಿದರು. ತನಗೇ ಮದುವೆಯಿಲ್ಲ; ಆದರೆ ಅದರ ಏರ್ಪಾಡು ಮುಂದಕ್ಕೆ ಮಾಡುವುದೆಂದು ಸ್ವಲ್ಪ ಭೂಮಿಯನ್ನು ಮಾರಿ ಅಳಿಯನಿಗೆ ಸ್ವಲ್ಪ ಹೆಚ್ಚಿನ ಮರ್ಯಾದೆಯನ್ನೇ ಮಾಡಿ ಸಂಬಂಧವನ್ನು ಬೆಳೆಸಿದರು. ಲಕ್ಷ್ಮಮ್ಮ "ನಮ್ಮ ಅಣ್ಣಯ್ಯ ಬಹಳ ಒಳ್ಳೆಯವನು. ತಂಗಿಯಾದ ಹುಡುಗಿ ತಂದೆ ತೀರಿಹೋದರು ಎಂದು ಹೇಳದಹಾಗೆ ನೋಡಿ ಕೊಳ್ಳುತ್ತಿದಾನೆ" ಎಂದರು.

ಕೆಲವು ವರ್ಷ ಕಳೆಯಿತು. ಹುಡುಗಿ ದೊಡ್ಡವಳಾದಳು. ಬೀಗರು ಆವಳನ್ನು ಮನೆಗೆ ಕರೆದುಕೊಳ್ಳುವುದಕ್ಕೆ ಸಾವಕಾಶಮಾಡಿದರು. ಮಾತು ಸ್ಪಷ್ಟವಾಗಿ ಬರದೇ ಇದ್ದರೂ ಇನ್ನು ಸ್ವಲ್ಪ ಹಣ ಬೇಕೆಂದು ಅವರ ಅಭಿಪ್ರಾಯ ಎಂದು ಕಂಡಿತು. ಈ ವೇಳೆಗೆ ನರಸಿಂಹಯ್ಯನವರು ತಾವೂ ಮದುವೆ ಮಾಡಿಕೊಂಡು ಆಸ್ತಿಯನ್ನು ಕಡಮೆ ಮಾಡಿಕೊಂಡಿದ್ದರು.

ಬೀಗರಿಗೆ ಬೇಕಾದ ಹಣವನ್ನು ಕೊಡುವುದಾದರೆ ಇನ್ನಷ್ಟು ಭೂಮಿಯನ್ನು ಮಾರದೆ ಆಗುವಂತಿರಲಿಲ್ಲ. ಲಕ್ಷ್ಮಮ್ಮನವರೂ ಅಣ್ಣನನ್ನು ಕುರಿತು "ನನ್ನನ್ನ ಅತ್ತೆಯ ಮನೆಗೆ ಕಳುಹಿಸುವುದಕ್ಕೆ ನೀನೇಕೆ ದಿವಾಳಿಯಾಗ ಬೇಕು ಅಣ್ಣ. ದುಡ್ಡು ಕೊಡದೆ ಇದ್ದರೆ ಸೊಸೇನ ಒಲ್ಲದ ಜನಕ್ಕೆ ಎಷ್ಟು ದುಡ್ಡು ಕೊಟ್ಟರೆ ನಾನು ಬೇಕಾದೇನು. ಸುಮ್ಮನಿರು. ನಾನು ತಂಗಿಯಲ್ಲ ತಮ್ಮ ಎಂತೆಣಿಸಿಕೋ. ನಾನು ಹುಟ್ಟಿದ ಮನೇಲೇ ಇದ್ದುಕೊಳ್ಳುತ್ತೇನೆ" ಎಂದಳು. ನರಸಿಂಹಯ್ಯ ತಂಗಿಯ ಮಾತಿಗೆ ಬಹಳ ಸಂತೋಷಪಟ್ಟರು. "ನೀನು ತಮ್ಮನಾಗಿದ್ದರೆ ಆಸ್ತಿಯಲ್ಲಿ ಅರ್ಧ ನಿನ್ನ ಪಾಲಲ್ಲವೇ, ಅದಷ್ಟನ್ನು ಖರ್ಚುಮಾಡಿದರಾಯಿತು" ಎಂದು ಮಾರಬೇಕಾದ ಭೂಮಿಯನ್ನು ಮಾರಿ ಬೀಗರಿಗೆ ಅವರು ಕೇಳಿದಷ್ಟಲ್ಲದಿದ್ದರೂ ಏನೋ ಸ್ವಲ್ಪ ಹಣವನ್ನು ಕೊಟ್ಟು ತಂಗಿಯನ್ನು ಅತ್ತೆಯ ಮನೆಗೆ ಕಳುಹಿಸಿದರು.

ಲಕ್ಷ್ಮಮ್ಮನವರ ಗಂಡ ಅಷ್ಟೇನೂ ದೊಡ್ಡಮನುಷ್ಯನಲ್ಲ. ಅವನು ಆಕೆಯನ್ನು ಮದುವೆಯಾದದ್ದು ತನ್ನ ತಾಯಿ ತಂದೆ ಅವರ ಇಷ್ಟಕ್ಕೋಸ್ಕರ. ಅವರ ಇಷ್ಟಕ್ಕೆ ಕಾರಣ ಸ್ವಲ್ಪ ಹಣ ದೊರೆಯುವುದೆಂಬ ಆಸೆ. ಗಂಡನಾದ ವನಿಗೆ ಹೆಂಡತಿಯ ವಿಷಯದಲ್ಲಿ, ಕುರುಡಿ ಏನು ಸಂಸಾರ ಮಾಡಿಯಾಳು, ಎಂತ ಅಲಕ್ಷ್ಯ. ಅಲ್ಲದೆ ಅವನಿಗೆ ಏಕಸ್ತ್ರೀವ್ರತನಾಗಿರಬೇಕೆಂಬ ಹಠವೂ ಇರಲಿಲ್ಲ. ಅವನು ಹೆಂಡತಿಯನ್ನು, ಬೇಡವೆಂದು ಹೇಳದಹಾಗೆ ಎಷ್ಟು ಅಸಡ್ಡೆಯಿಂದ ನೋಡುವುದು ಸಾಧ್ಯವೋ, ಅಷ್ಟು ಅಸಡ್ಡೆಯಿಂದ ಕಾಣು ತ್ತಿದ್ದನು. ಹುಟ್ಟಿದೂರಿನಲ್ಲೇ ಸಂಬಂಧವಾದದ್ದರಿಂದ ಲಕ್ಷ್ಮಮ್ಮ ತೌರು ಮನೆಗೆ ಬರುತ್ತಾ ಹೋಗುತ್ತಾ ಹೇಗೋ ಕಾಲವನ್ನು ನೂಕಿದರು. ಮೂರು ವರ್ಷದ ಮೇಲೆ ಅವರಿಗೆ ಒಂದು ಗಂಡು ಮಗುವಾಯಿತು. ಅದು ಹುಟ್ಟು ಕುರುಡು. ಅತ್ತೆಯ ಮನೆಯವರು ಅವರನ್ನು ಆಡಿದ ಮಾತುಗಳನ್ನು ಯಾರೂ ಕೇಳಬೇಡ. ಇದಾದ ಕೆಲವು ವರ್ಷದ ಮೇಲೆ ಅವರು ಪುನಃ ಗರ್ಭಿಣಿಯಾದರು. ಮಗು ಎಲ್ಲಿ ಕುರುಡಾಗುತ್ತೋ ಎಂದು ಅವರಿಗೆ ಭಯ. ಮನೆಯಲ್ಲಿ ಎಲ್ಲರೂ ಈ ಮಾತನ್ನು ಆಡುತ್ತಿದ್ದರು. ದಿನ ತುಂಬಿ ಅವರು ಒಂದು ಹೆಣ್ಣು ಮಗುವನ್ನು ಹೆತ್ತರು. ಅದೂ ಕುರುಡು. ಮಾಡಿದ ತಪ್ಪನ್ನೇ ಮಾಡುವ ಹುಡುಗನಿಗೆ ಹಳ್ಳಿಯ ಪಾಠಶಾಲೆಯ ಉಪಾಧ್ಯಾಯರು

ರೂಲು ದೊಣ್ಣೆಯಿಂದ ಗೆಣ್ಣಿನಮೇಲೆ ಹೊಡೆಯುವರು. ಲಕ್ಷ್ಮಮ್ಮ ಕುರುಡು ಮಗನಾದ ಮೇಲೆ ಕುರುಡು ಮಗಳನ್ನು ಹೆತ್ತಾಗ ಮನೆಯವರು ಹಿಂದೆ ಹೇಳುತ್ತಿದ್ದ ಕೆಟ್ಟಮಾತನ್ನು ಹತ್ತು ಸಲ ಒತ್ತಿ ಹೇಳಿದರು. ಲಕ್ಷ್ಮಮ್ಮನವರು ಏನೂ ಮಾಡುವಂತಿರಲಿಲ್ಲ. ಕುರುಡು ಮಕ್ಕಳನ್ನು ಹೆತ್ತದ್ದಾಯಿತು. ಈ ಮಕ್ಕಳ ಗತಿ ಏನು ಎನ್ನುವ ಚಿಂತೆಯೇ ಅವರಿಗೆ ಸಾಕಾಗಿತ್ತು. ಆದರೆ ಈ ವೇಳೆಗೆ ಅವರಿಗೆ ಅತ್ತೆಯ ಮನೆಯಲ್ಲಿ ಸ್ವಲ್ಪ ಸ್ವತಂತ್ರ ವಹಿಸಿ ನಡೆಯುವ ಧೈರ್ಯ ಬಂದಿತ್ತು. ಯಾರಾದರೂ ತಪ್ಪು ಮಾತನ್ನು ಎತ್ತಿದರೆ "ಕಣ್ಣಿಲ್ಲದೆ ಇದ್ದರೆ ನಾನೇನು ಕಡಮೆಯಾದೆ? ಗಂಡನ್ನು ಹೆತ್ತೆ. ಹೆಣ್ಣನ್ನು ಹೆತ್ತೆ. ನನ್ನ ಕೈಯಿಂದ ಏನು ಚಾಕರಿ ಆಗುತ್ತೋ ಅದನ್ನು ಮಾಡುತ್ತೇನೆ. ಕಣ್ಣಿರುವ ಸೊಸೆ ಅತ್ತೆ ಮಾವನಿಗೆ ಇದಕ್ಕಿಂತ ಚಾಕರಿ ಏನು ಮಾಡುತಾಳೆ. ಕೈಹಿಡಿದ ಗಂಡ ಬೇಕಾದರೆ ಅಯ್ಯೋ ಹೆಂಡತಿಗೆ ಕಣ್ಣಿಲ್ಲವಲ್ಲ ಎನ್ನಬಹುದು. ಕಣ್ಣಿರುವ ಹೆಂಗಸು ಗಂಡ ಎಲ್ಲೆಲ್ಲಿ ಹೋದ ಎಂತ ನೋಡ್ತಾ ಇರಬಹುದು. ನನ್ನಂಥ ಪುಣ್ಯಾತಗಿತ್ತಿಗೆ ಇಂಥ ಯೋಚನೆ ಇಲ್ಲ. ಗಂಡನಿಗೆ ನನ್ನಿಂದ ಒಂದು ತೊಂದರೆ ಇಲ್ಲ. ನನ್ನನ್ನು ಸಿಕ್ಕಿದೋರು ಸಿಕ್ಕಿದಹಾಗೆ ಅನ್ನಬೇಡಿ" ಎಂದು ಜೀವನದಲ್ಲಿ ತಮ್ಮ ಮನಸ್ಸಿನ ಸ್ಥಿತಿ ಏನೆಂದು ಸ್ಪಷ್ಟಪಡಿಸಿದರು. ಅಂತೂ ಅವರ ಬದುಕು ಒಂದು ರೀತಿಯಾಗಿ ನಡೆಯುತ್ತಾ ಬಂದಿತು.

ಹೀಗಿರುತ್ತಾ ಒಂದು ತಿಥಿಯ ದಿನ ತಾತ ಮಡಿಯಲ್ಲಿರುವಾಗ ಕುರುಡು ಹುಡುಗ ಅಲ್ಲೆಲ್ಲೋ ಓಡಿಯಾಡಿ ಅವರನ್ನು ಮುಟ್ಟಿದನು. ಕೆಲಸವೆಲ್ಲ ಹಾಳು; ಮುದುಕನಿಗೆ ತಿರುಗಿ ಸ್ನಾನ. ಇದನ್ನು ನೋಡಿ ಲಕ್ಷ್ಮಮ್ಮನ ಗಂಡ ಮಗನನ್ನು ಸುಮ್ಮನೆ ಹೊಡೆದರು. ಏಟು ಹೆಚ್ಚಾಯಿತೆಂದು ಕಾಣುತ್ತದೆ. ಕುರುಡು ಮಗು ಅಯ್ಯೋ ಅಯ್ಯೋ ಎಂದು ಕೂಗಿಕೊಂಡಿತು. ತಾಯಿಯಾದವಳು ಅದನ್ನು ಬಿಡಿಸಿಕೊಳ್ಳುವುದಕ್ಕೆ ಹೋದಳು. ತಂದೆ ಅವಳ ಕೈಗೆ ಅದನ್ನು ಸಿಕ್ಕಲೀಸದೆ ಮಗನನ್ನು ಅಂಗಳದಲ್ಲೆಲ್ಲಾ ದರಬರ ಎಳೆದು ಹೊಡೆದು ಕೆಳಗೆ ಹಾಕಿದನು. ಮಗುವಿಗೆ ಪೆಟ್ಟು ಹೆಚ್ಚಾಯಿತು. ಭಯ ಬೇರೆ. ಅವನು ಅತ್ತು ಅಕ್ಕಾರಿದನು. ಜ್ವರ ಬಂದು ಮೂರು ದಿನದಲ್ಲಿ ತೀರಿಹೋದನು. ಲಕ್ಷ್ಮಮ್ಮನವರ ಸ್ಥಿತಿ ಸ್ವಲ್ಪ ಅಭದ್ರವಾಯಿತು. ಇಷ್ಟರಲ್ಲಿ ಇವರತ್ತೆ ಇವರನ್ನೂ ಇವರ ಗಂಡನನ್ನೂ

ಬೇರೆ ಹಾಕಿದರು. ಇವರ ಮಗಳು ಬೆಳೆಯುತ್ತಾ ಬಂದಳು. ಅವಳಿಗೆ ಒಂದು ಮದುವೆಯನ್ನು ಮಾಡಿಸಬೇಕು. ಇವಳು ತೀರ ಕುರುಡಿ ಎಂದರೆ ಇವರ ಸಂತತಿ ಕುರುಡು ಎಂದು ಜನ ಹಿಂತೆಗೆಯುತ್ತಾರೆ ಎಂಬ ಕಾರಣ ದಿಂದ ಲಕ್ಷ್ಮಮ್ಮನವರು ಮಗಳಿಗೆ ಕಣ್ಣು ಸ್ವಲ್ಪ ಕಂಡಹಾಗೆ ನಟಿಸು ಎಂದು ಹೇಳಿಕೊಡುವರು. ಹುಡುಗಿ ಹೀಗೆ ಮಾಡುವುದಕ್ಕೆ ಹೋಗಿ ಒಂದೆರಡು ಸಲ ಗೋಡೆಗೆ ಕಂಬಕ್ಕೆ ತಲೆ ಚಚ್ಚಿಕೊಂಡಿತು. ಇನ್ನೆರಡು ಸಲ ನಗೆಗೀಡಾಯಿತು. ಲಕ್ಷ್ಮಮ್ಮನವರು ಬಹಳ ಹೀನಾಯಪಟ್ಟರು. ಹೀಗೆಯೇ ಇರುತ್ತಾ ಮಗಳಿಗೆ, ಮದುವೆಯಾದಮೇಲೆ ಹೇಗೆ ನಡೆದುಕೊಳ್ಳಬೇಕು, ಏನು, ಎನ್ನುವುದನ್ನು ಕಲಿಸುವುದಕ್ಕೆ ಅವರು ಮೊದಲುಮಾಡಿದರು. ಕಣ್ಣಿಲ್ಲದ ಹೆಂಗಸು ಎಲ್ಲರಂತೆ ಹೆಮ್ಮೆಯಿಂದ ನಡೆಯುವುದು ಕೂಡದು. ತಲೆ ತಗ್ಗಿಸಿಕೊಂಡು ನಡೆಯಬೇಕು. ಹೇಳಿದ ಮಾತು ಕೇಳಬೇಕು. ಹೆಂಗಸಿಗೆ ಎಂದಿದ್ದರೂ ಗಂಡ ದೇವರು. ಕುರುಡಿ ಬೇರೆ ಆಗಿಬಿಟ್ಟರೆ ಅವಳು ಅವನನ್ನು ಪರದೈವ ಎಂತಲೇ ಕಾಣಬೇಕು. ತಾನು ಮಾನವಾಗಿರು ವುದಕ್ಕೆ ತನ್ನ ಗಂಡನ್ನ ತಿಳಿಯುವ ಗುರುತು ಏನಾದರೂ ಒಂದನ್ನು ಇಟ್ಟುಕೊಳ್ಳಬೇಕು. ಇತ್ಯಾದಿ, ಇತ್ಯಾದಿ. ಮಗಳಿಗೆ ಇವರು ಈ ವಿಷಯ ವನ್ನು ಬೋಧಿಸುತ್ತಲೇ ಇರುವರು. ಮಗು ಒಂದೆರಡು ಸಲ ತಾನು ಹೋದರೆ ಚೆನ್ನಾಗಿದ್ದೀತು ಎಂತ ಹೇಳುತ್ತಿತ್ತು. ಹೀಗಿರುತ್ತಿರಲಾಗಿ ಒಂದು ದಿನ ಆ ಹೆಣ್ಣು ಕೆಲವು ಸ್ನೇಹಿತೆಯರ ಜೊತೆಗೆ ಭಾವಿಗೆ ಹೋಗಿದ್ದದ್ದು ಅಲ್ಲಿ ಮುಳುಗಿಕೊಂಡು ಜೀವವನ್ನು ಬಿಟ್ಟಿತು. ಬೇಕೆಂದು ಜೀವ ಬಿಟ್ಟಿತೋ ಅಜಾಗ್ರತೆಯಿಂದ ಹೋಯಿತೋ ಹೇಳುವಂತಿಲ್ಲ. ಲಕ್ಷ್ಮಮ್ಮನವರ ಗೋಳು ಕೇಳಬೇಡ. ಇಷ್ಟರವೇಳೆಗೆ ಅವರ ಗಂಡನಿಗೆ ಸಂಸಾರದಲ್ಲಿ ಬೇಸರವಾಯಿತು. ತಾವು ಕಾಶಿಯಾತ್ರೆ ಹೋಗಬೇಕೆಂದು ಉದ್ದೇಶಿಸಿರು ವುದಾಗಿ ತಿಳಿಸಿದರು. ಲಕ್ಷ್ಮಮ್ಮನವರು ತನ್ನನ್ನು ಬಿಟ್ಟು ಹೋಗಕೂಡ ದೆಂದು ಬಹಳವಾಗಿ ಗಂಡನನ್ನು ಕೇಳಿಕೊಂಡರು. ಆತ ಕೇಳಲಿಲ್ಲ. ಇವರನ್ನು ನಿನ್ನ ಅಣ್ಣನ ಮನೆಗೆ ಹೋಗೆಂದು ಹೇಳಿ ತಾನು ಹೊರಟು ಹೋದರು. ಲಕ್ಷ್ಮಮ್ಮನವರು ಅಣ್ಣನ ಮನೆಗೆ ಬಂದರು. ಆಗ್ಗೆ ಅವರಿಗೆ ಮೂರನೆಯ ಗರ್ಭ. ನಾಲ್ಕು ತಿಂಗಳು ಕಳೆದ ಮೇಲೆ ಅಕಾಲದಲ್ಲಿ ಹೆರಿಗೆ

ಯಾಯಿತು. ಮಗು ಉಳಿಯಲಿಲ್ಲ. ಬಾಳಿನ ಕಷ್ಟ ಹೆಚ್ಚಾದದ್ದರಿಂದ ಎಂದು ಕಾಣುತ್ತದೆ, ಬುದ್ಧಿ ಸ್ವಲ್ಪ ಭ್ರಮಿಸಿತು. ತೀರಿಹೋದ ಮಕ್ಕಳು ಇನ್ನೂ ಇರುವಹಾಗೆ ಆಕೆ ಆಗಾಗ ಮಾತನಾಡುವರು. ಎರಡು ದಿನ ಮೂರು ದಿನ ಹೀಗೆ ಇದ್ದು ಆಮೇಲೆ ಬುದ್ಧಿ ತಿಳಿಯಾಗುವುದು. ಅವರು ಬೆಂಗಳೂರಿಗೆ ಬಂದ ಮೂರು ದಿನಗಳ ಹಿಂದೆ ಗಂಡ ಕಾಶಿಗೆ ಹೋಗಿದ್ದಾರಷ್ಟೆ ತಾನು ಅಲ್ಲಿಗೆ ಹೋಗಬೇಕು ಎಂದು ಹಠಮಾಡಿ ಕುಳಿತರಂತೆ. ಅಣ್ಣನೂ ತಾಯೂ ಬೇಡವೆಂದರು. ಆಕೆ ಕೇಳಲಿಲ್ಲ. ಬೇಡವೆಂದು ಅವರೂ, ಹೋಗ ಬೇಕೆಂದು ಇವರೂ, ವಾದದಲ್ಲಿ ಇರುವಾಗ ಆ ದಿನ ಬೆಳಗೆ ಲಕ್ಷ್ಮಮ್ಮ ಅರೆತಿಳಿವಿನಲ್ಲಿ ತಾವೇ ಹೊರಟು ರಸ್ತೆಯನ್ನು ಸೇರಿ ಬಸ್ಸಿನಲ್ಲಿ ಕುಳಿತು ಬೆಂಗಳೂರಿಗೆ ಬಂದುಬಿಟ್ಟಿದ್ದರು. ಆಮೇಲೆ ಆದ ವಿಚಾರವನ್ನು ನಾನು ಹೇಳಿದ್ದೇನೆ.

ನರಸಿಂಹಯ್ಯನವರ ಈ ಕಥೆಯನ್ನು ಕೇಳುತ್ತಾ ನಾನು ಅವರೊಂದಿಗೆ ಮನೆಯನ್ನು ಸೇರಿದೆನು. ಲಕ್ಷ್ಮಮ್ಮನವರು ಆ ವೇಳೆಗೆ ಸ್ನಾನಮಾಡಿ ಸ್ವಲ್ಪ ಹಣ್ಣು ಹಂಪಲು ತೆಗೆದುಕೊಂಡಿದ್ದರು. ನಾವು ಹೋದಾಗ ಧ್ವನಿ ಯಿಂದ ಅಣ್ಣನನ್ನು ಗುರುತಿಸಿ "ಅಣ್ಣಯ್ಯ, ನನ್ನನ್ನು ಕಾಶಿಗೆ ಕರೆದು ಕೊಂಡು ಹೋಗು" ಎಂದರು. ಒಡನೆಯೇ ಪಕ್ಕದಲ್ಲಿ ಯಾರೋ ನಿಂತಿರು ವುದನ್ನು ಕುರುಡರಿಗೆ ಮಾತ್ರ ಸಾಧ್ಯವಾದ ಸೂಕ್ಷ್ಮದಿಂದ ತಿಳಿದು, ಯಾರು ಜೊತೆಯಲ್ಲಿ, ಎಂದು ಕೇಳಿದರು. ನಾನು "ನಾನು ತಾಯಿ ಈ ಮನೆಯ ಮನುಷ್ಯ" ಎಂದೆ. ಗಂಡ ಬಂದನೆಂದು ತಿಳಿದುಕೊಂಡಿದ್ದರೇನೋ. ನನ್ನ ಮಾತು ಕೇಳಿ ಅವರ ಮುಖ ಜೋಲುಬಿತ್ತು. ನರಸಿಂಹಯ್ಯನವರು, ಊರಿಗೆ ಹೋಗೋಣ ಬಾ ಲಕ್ಷ್ಮಮ್ಮ, ಎಂದರು. ಆಕೆ "ಹೌದು ಹುಡುಗಿಗೆ ಆರತಿ ಅಕ್ಷತೆ ಮಾಡಬೇಕು. ಬಿಟ್ಟು ಬಂದುಬಿಟ್ಟೆ" ಎಂದು ಹೇಳಿದರು. ಭ್ರಮೆಯ ಮಾತು. ಗಾಳಿಯಲ್ಲಿ ಕಟ್ಟಿದ ಬಟ್ಟೆಯಂತೆ ಅವರ ಬುದ್ಧಿ ಕ್ಷಣಕ್ಷಣಕ್ಕೆ ಹಿಂದುಮುಂದಾಗುತ್ತಿತ್ತು. ಒಂದು ಗಾಡಿ ಯನ್ನು ತರಿಸಿ ಅವರನ್ನು ಅಲ್ಲಿ ಕೂರಿಸಿಕೊಂಡು ನರಸಿಂಹಯ್ಯನವರು ಊರಿಗೆ ಹೋದರು.

೩

ಇಪಾದದು ಈಗ ಮೂರು ತಿಂಗಳ ಹಿಂದೆ. ಅವರ ಕ್ಷೇಮಸಮಾಚಾರವನ್ನು ವಿಚಾರಿಸೋಣವೆಂದು ನನಗೆ ಆಗಾಗ ತೋರುತ್ತದೆ. ಆಮೇಲೆ ನಾನೇ, ಮರಳಿ ವಿಚಾರಿಸಿ ಏನುಮಾಡುವಂತಿದೇನೆ, ಎಂದು ಸುಮ್ಮನಾಗುತ್ತೇನೆ. ನಿನ್ನೆ ಈ ಮಾತು ಬಂದಾಗ ನಮ್ಮ ಮನೆಯವರು, ಎಷ್ಟೋ ಇಂಥ ಗೋಳು, ಇದನ್ನು ಹಚ್ಚಿಕೊಂಡುಹೋದರೆ ಮೊದಲೆಲ್ಲಿ ಕೊನೆಯೆಲ್ಲಿ, ಎಂದರು. ನಾನು, ಅವರ ಬಾಳು ಬಹು ಕಷ್ಟ, ಎಂದೆ. ಅವರು, ಬ್ರಹ್ಮ ಬರೆದ ಬರಹ, ಎಂದರು. ನಾನು, ಇದೇನು ಬರಹವೋ ಕಾಣೆ, ನಮ್ಮ ರಾಮು ಬರೆಯುವ ಬರಹದ ಹಾಗೆ, ಎಂದೆ. ಅವರು ರಾಮೂನೇ ಶಾಮೂನೇ ಎಂದರು. ಶಾಮು ನಮ್ಮ ಹಿರಿಯ ಮಗ. ಅಕ್ಷರ ಕಲಿತಿದಾನೆ. ರಾಮು ಚಿಕ್ಕವನು. ಅವನಿಗೆ ಅಕ್ಷರ ಬರುವುದಿಲ್ಲ. ಹಲಗೆ ತೆಗೆದುಕೊಂಡು ಸುಮ್ಮನೆ ಗೆರೆ ಎಳೆಯುವುದೇ ಅವನ ಕೆಲಸ. ಹಲಗೆ ತುಂಬಿದಮೇಲೆ, ಅಣ್ಣ ಇಲ್ಲಿ ನೋಡು ನಾನು ಬರೆದಿರೋದು, ಎನ್ನುತ್ತಾನೆ. ಅದರಿಂದಲೇ ನಮ್ಮ ಮನೆಯವರು ರಾಮೂನೆ ಶಾಮೂನೆ ಎಂತ ಕೇಳಿದ್ದು. ನಾನು "ಶಾಮು ಅಲ್ಲ ರಾಮೂನೇ" ಎಂದು ಹೇಳಿದೆ: "ಗೆರೆ ಎಳೆಯುತಾ ಇರೋದೇ ಬರಹ. ಅದರಲ್ಲೆಲ್ಲಾದರೂ ಒಂದು ಅಕ್ಷರ ಆದರೆ ಅದು ಅವನ ತಪ್ಪಲ್ಲ. ಬ್ರಹ್ಮನ ಬರಹದಲ್ಲಿ ಸಿಕ್ಕಾಪಟ್ಟೆ ಹೋಗೋದೇ ಪದ್ಧತಿ. ಸಾವಿರದಲ್ಲಿ ಒಂದು ಒಳ್ಳೆಯದಿಲ್ಲ. ಅದು ಒಳ್ಳೆಯದಾದಾಗ ಆಯಿತು, ಅದು ಅವನ ತಪ್ಪಲ್ಲ" ಎಂದೆ. ಇದೆಲ್ಲಾ ವೇದಾಂತವೆಂದು ನಮ್ಮ ಮನೆಯವರ ಅಭಿಪ್ರಾಯ. ಅವರು ಇದಕ್ಕೆ ಗಮನ ಕೊಡಲಿಲ್ಲ.

# ಪೆನುಕೊಂಡೆಯ ಕೃಷ್ಣಮೂರ್ತಿ

ವಿಜಯನಗರದ ರಾಜ್ಯಲಕ್ಷ್ಮಿ ತಾಳೀಕೋಟೆಯ ಸೋಲಿನಿಂದ ತಗ್ಗಿಸಿದ ತಲೆಯನ್ನು ಪೆನುಕೊಂಡೆಯಲ್ಲಿ ಸ್ವಲ್ಪಮಟ್ಟಿಗೆ ಮೇಲಕ್ಕೆ ಎತ್ತು ವುದಕ್ಕೆ ಯತ್ನಮಾಡಿದಳು. ಆ ರಾಜಧಾನಿಯ ವೈಭವವಾಗಲಿ ಅಂದಿನ ಅರಸರ ಶೌರ್ಯವಾಗಲಿ ಪೆನುಕೊಂಡೆಯಲ್ಲಿ ಮರಳಿ ಕಾಣಲಿಲ್ಲ. ಹೂವು ಮಾರುತ್ತಿದ್ದ ಅಂಗಡಿಯಲ್ಲಿ ಹುಲ್ಲು ಮಾರಿದರೆಂಬಂತೆ ವಿಜಯನಗರದ ಹೆಸರನ್ನುಳಿಸಿ ರಾಜ್ಯ ಹೋಯಿತೆಂಬ ಮಾತನ್ನು ತಪ್ಪಿಸಿದ್ದೇ ಪೆನುಕೊಂಡೆಯ ಹಿರಿತನವಾಗಿತ್ತು. ಆದರೂ ಜನರ ರಾಷ್ಟ್ರಪ್ರೇಮವೂ ಧರ್ಮೋತ್ಸಾಹವೂ ಸಾಂಸ್ಕೃತಿಕ ವಿಜೃಂಭಣೆಯೂ ಇಲ್ಲಿ ಕೂಡ ಎಲ್ಲ ಜನರ ಮಿಳಿತದಲ್ಲಿ ಹೊಸದಾಗಿ ಕಟ್ಟಿದ ದೇವಾಲಯಗಳಲ್ಲಿ ಹೊಸದಾಗಿ ಬರೆದ ಕೃತಿಗಳಲ್ಲಿ ಇತರ ಕುಶಲ ಕಲೆಯಲ್ಲಿ ತಕ್ಕಮಟ್ಟಿಗೆ ರೂಪುಗೊಂಡಿತು. ಆದರೆ ದುರ ದೃಷ್ಟದಿಂದ ಇದಿನೈದು ವರ್ಷದಲ್ಲಿ ರಾಜವಂಶದ ಮೂರು ತಲೆ ಮುಗಿದಿತ್ತು. ತಾಳೀಕೋಟೆಯ ಯುದ್ಧಕ್ಕೆ ಮೊದಲೇ ಹೆಸರು ಮಾತ್ರಕ್ಕೆ ರಾಜನಾಗಿದ್ದ ಸದಾಶಿವರಾಯನು ಆ ಯುದ್ಧವಾದ ಮೇಲೆ ಐದು ವರ್ಷ ಜೀವಿಸಿದ್ದನು. ಅಳಿಯ ರಾಮರಾಜನು ಅಮಾತ್ಯನೆಂಬ ಹೆಸರಿನಿಂದ ರಾಜ್ಯವನ್ನು ಆಳಿದಾಗ ಮೂಲೆಯಲ್ಲಿದ್ದ ಇವನು ರಾಮರಾಯನು ತೀರಿಹೋದ ಐದು ವರ್ಷಕ್ಕೆ ಇಹಲೋಕವನ್ನು ಬಿಟ್ಟನು. ಆಮೇಲೆ ರಾಮರಾಯನ ತಮ್ಮನ ಮಗ ತಿರುಮಲರಾಜನು ಮೂರು ವರ್ಷ ರಾಜ್ಯವಾಳಿ ದೇಹವನ್ನುಳಿದನು. ಇವನಾದ ಮೇಲೆ ಶ್ರೀರಂಗರಾಯನು ಹತ್ತು ವರ್ಷ ಆಳಿ ಸತ್ತನು. ಅವನ ಮಕ್ಕಳು ಸಣ್ಣವರೆಂಬ ಕಾರಣದಿಂದ ತಮ್ಮ ರಾಮರಾಜನು ದೊರೆ ಯಾಗುವುದೆಂದು ಏರ್ಪಾಡಾಯಿತು. ಪಟ್ಟಾಭಿಷೇಕವಾಗುವ ಮೊದಲೇ ಅವನು ತೀರಿಹೋದನು. ಈ ಕಾರಣದಿಂದ ಅವನ ತಮ್ಮ ವೆಂಕಟಾದ್ರಿ ರಾಜನಾದನು. ರಾಮರಾಜನ ಮೊದಲ ಹೆಂಡತಿಯ ಮಗ ತಿರುಮಲನು ಶ್ರೀರಂಗಪಟ್ಟಣದಲ್ಲಿ ಮಂಡಲೇಶ್ವರನಾಗಿದ್ದನು. ವೆಂಕಟಾದ್ರಿಗೆ ಚಂದ್ರಗಿರಿ ಯಲ್ಲಿ ಮಮತೆ; ಅವನು ಅಲ್ಲಿರುತ್ತಾ ಪೆನುಕೊಂಡೆಯಲ್ಲಿ ತಿರುಮಲನ

ತಮ್ಮ ಶ್ರೀರಂಗನನ್ನು ಚಿಕ್ಕ ರಾಜನಾಗಿ ನಿಯಮಿಸಿದ್ದನು. ಶ್ರೀರಂಗನು ರಾಮರಾಜನ ಎರಡನೆಯ ಹೆಂಡತಿಯ ಮಗ. ಅವನಿಗೆ ಇನ್ನೂ ಚಿಕ್ಕ ವಯಸ್ಸು. ಆದ್ದರಿಂದ ಮಹಾರಾಜನು ರಾಜಧಾನಿಯ ರಕ್ಷಣೆಗೆಂದು ಅವನಿಗೆ ಸಹಾಯವಾಗಿ ಜಗದೇವರಾಯನನ್ನು ಅಲ್ಲೇ ನಿಲ್ಲಿಸಿದ್ದನು. ಹೀಗೆ ಪೆನುಕೊಂಡೆ ಕೆಲವು ವರ್ಷದಲ್ಲಿ ಬಹು ರಾಜರನ್ನು ಕಳೆದುಕೊಂಡು, ಬಹು ಮಕ್ಕಳನ್ನು ನೀಗಿಕೊಂಡ ಮನೆಯ ತಾಯಂತೆ, ಹಿಂದಣ ಚಿಂತೆಯ ಖೇದದಿಂದ ಮುಂದೆ ಏನೆಂಬ ಶಂಕೆಯಿಂದ ಎಂಬಂತೆ, ಉತ್ಸಾಹರಹಿತವಾದ ಒಂದು ರೀತಿಯ ಜೀವನವನ್ನು ನಡೆಯಿಸುತ್ತಿದ್ದಿತು.

ವಿಜಯನಗರವನ್ನು ಹಾಳುಮಾಡಿದ ಸುಲ್ತಾನರು ಪೆನುಕೊಂಡೆಯನ್ನು ಸುಮ್ಮನೆ ಬಿಡಲಿಲ್ಲ. ಶ್ರೀರಂಗರಾಯನ ದಿನದಲ್ಲಿ ಎರಡುಸಲ ಬಂದರು. ಸೋತು ಹೋದರು. ಅವನು ತೀರಿದ ಮೇಲೆ ರಾಮರಾಜನಿಗೆ ಪಟ್ಟಾಭಿಷೇಕವಾಗುವ ಸಮಯದಲ್ಲಿ ಒಂದುಸಲ ಬಂದರು. ಹಾಗೆಯೇ ಸೋತು ಹಿಂತಿರುಗಿದರು. ಈಗ ನಾಲ್ಕನೆಯ ಸಲ ಬಂದಿದ್ದರು. ತಾಳೀಕೋಟೆಯ ಯುದ್ಧವಾಗಿ ಇಪ್ಪತ್ತನಾಲ್ಕು ವರ್ಷವಾಗಿತ್ತು. ವೆಂಕಟಾದ್ರಿರಾಜನು ಪಟ್ಟಕ್ಕೆ ಬಂದು ನಾಲ್ಕು ವರ್ಷ. ಇಂದು ರಾಜ್ಯಕ್ಕೆ ಮರಳಿ ಗಂಡಾಂತರ ಬಂದಂತೆ ಕಾಣುತ್ತಿತ್ತು. ಶತ್ರು ಸೇನೆ ಪೆನುಕೊಂಡೆಯನ್ನು ಮುತ್ತಿದ ಎರಡನೆಯ ದಿನ ಶ್ರೀರಂಗನ ಮಾತೆ ಲಕ್ಷ್ಮಮಾಂಬೆ ಅರಮನೆಯ ಆವರಣದ ಕೃಷ್ಣಮಂದಿರದಲ್ಲಿ ತನ್ನ ಇಷ್ಟದೈವದ ಎದುರಿಗೆ ಮಂಡಿಯೂರಿ, ದೈವವೇ ನಿನ್ನ ಈ ರಾಜ್ಯವನ್ನು ಉಳಿಸು, ಎಂದು ಪ್ರಾರ್ಥಿಸುತ್ತಿದ್ದಳು. ಅವಳ ಸೊಸೆ ಯಶೋದಾದೇವಿ ಅವಳ ಪೂಜೆಯಲ್ಲಿ ಜೊತೆಯಾಗಿ ದೇವರ ನಂದಾದೀಪವನ್ನು ಸರಿಮಾಡುತ್ತ ನಿಂತಿದ್ದಳು.

ಶ್ರೀರಂಗನು ದಕ್ಷನಾದ ತರುಣನಲ್ಲ. ರಾಮರಾಜನು ಕೆಲವು ವರ್ಷ ಆಳಿದ್ದರೆ ಇವನು ತಂದೆಯ ಬಳಿಯಲ್ಲಿ ರಾಜ್ಯಸೂತ್ರವನ್ನು ಕಲಿಯಬಹುದಾಗಿತ್ತೇನೊ, ಇವನಿಗೆ ಆ ಪುಣ್ಯವಿಲ್ಲದೆ ಹೋಯಿತು. ವೆಂಕಟಾದ್ರಿರಾಜನಾದಾಗ ಇವನಿಗಿನ್ನೂ ಹದಿನಾರು ವರ್ಷ. ಲಕ್ಷ್ಮಮಾಂಬೆಗೆ ಆಗಲೇ ತನ್ನ ಮಕ್ಕಳಲ್ಲಿ ಒಬ್ಬನು ರಾಜನಾಗಬಹುದೋ ಎಂದು ಆಸೆಯಿತ್ತು. ಅದು ನಡೆಯಲಿಲ್ಲ. ಆದರೆ ಅವಳಿಗೆ ಒಂದು ಸಂತೋಷ.

ವೆಂಕಟಾದ್ರಿಗೆ ತಿರುಮಲನಲ್ಲಿದ್ದ ವಿಶ್ವಾಸಕ್ಕಿಂತ ಶ್ರೀರಂಗನಲ್ಲಿ ಹೆಚ್ಚು. ಅವನು ಶ್ರೀರಂಗನನ್ನು ಪೆನುಕೊಂಡೆಯಲ್ಲಿಟ್ಟದ್ದಕ್ಕೂ ಅವನನ್ನು ಚಿಕ್ಕ ರಾಯನೆಂದು ಕರೆದದ್ದಕ್ಕೂ ಇದು ಒಂದು ಕಾರಣ. ಇದರ ಮೇಲೆ ಶ್ರೀರಂಗನ ತಾಯಿ ದಕ್ಷಳಾದ ಸ್ತ್ರೀ. ಮಾವನ ದಿನದಲ್ಲೇ ತನ್ನ ಗಾಂಭೀರ್ಯ ದಿಂದ ಸೌಶೀಲ್ಯದಿಂದ ಸತ್ಯಸಂಧತೆಯಿಂದ ದೀನವಾತ್ಸಲ್ಯದಿಂದ ಜನರ ವಿಶ್ವಾಸವನ್ನೂ ಗೌರವವನ್ನೂ ಸಂಪಾದಿಸಿದ್ದಳು. ಇದರಿಂದ ವೆಂಕಟಾದ್ರಿಗೆ ಅತ್ತಿಗೆಯಲ್ಲಿ ಬಹು ಗೌರವ. ಮಗನಿಗಾಗಿ ಆಕೆ ರಾಜ್ಯದ ಸೂತ್ರವನ್ನು ತಾನೇ ವಹಿಸಿದಳು. ಆಕೆ ಸ್ವತಃ ಒಂದು ರಾಷ್ಟ್ರವನ್ನು ಕಟ್ಟುವ ಶಕ್ತಿ ಯುಳ್ಳಾಕೆ. ಪೆನುಕೊಂಡೆಯ ರಾಷ್ಟ್ರವನ್ನು ನಡೆಸುವುದು ಆಕೆಗೆ ಕಷ್ಟವಾಗ ಲಿಲ್ಲ. ಅವಳು ಹುಡುಗನನ್ನು ಮುಂದೆ ರಾಜಪದವಿಗೆ ತಕ್ಕವನಾಗಲೆಂದು ತಿದ್ದಿ ಸಾಕಿದಳು. ಜನರಿಗೆ ತೊಂದರೆಯುಂಟಾಗದಂತೆ ರಾಜ್ಯವನ್ನಾಳುತ್ತ ನಾಡಗೌಡರನ್ನು ಗೌರವದಿಂದ ಕಾಣುತ್ತ, ಸೇನೆಯ ಮಂದಿಯನ್ನು ಸಂಬಳ ಸಾರಿಗೆಯಿಂದ ವಿಧೇಯಭಾವದಲ್ಲಿ ನಡೆಸಿಕೊಳ್ಳುತ್ತ ತಾನು ರಾಜ್ಯ ಸೂತ್ರವನ್ನು ಹಿಡಿದ ದಿನದಲ್ಲಿ ರಾಷ್ಟ್ರವು ಮೊದಲಿಗಿಂತ ಚೆನ್ನಾಗುವಂತೆ ಮಾಡಿದಳು. ಶ್ರೀರಂಗನು ಸ್ವಭಾವವಾಗಿ ಗುಣಶಾಲಿ. ಆದರೆ ನಮ್ಮಲ್ಲಿ ಹೆಂಗಸು ಸಾಕಿದ ಹುಡುಗನೆಂದು ಒಂದು ಮಾತಿದೆ. ಆ ರೀತಿಯಾಗಿ ಹೆಂಗಸು ಸಾಕಿದ ರಾಜಕುಮಾರನು ಸ್ವಲ್ಪ ಸಡಿಲದಲ್ಲಿ ಬೆಳೆದನು. ಹದಿನೆಂಟು ವಯಸ್ಸು ಆದಮೇಲೆ ರಾಜ್ಯದ ಸೂತ್ರವನ್ನು ಅವನ ಕೈಗೆ ಕೊಟ್ಟರು. ಸಂಪೂರ್ಣವಾದ ಶಕ್ತಿ ಬರುವ ಮೊದಲು ಅವನು ಚಿಕ್ಕ ರಾಜನಾದನು.

ರಾಣಿ ಲಕ್ಷ್ಮಮಾಂಬೆ ಭಗವದ್ಭಕ್ತಳು. ರಾಜ್ಯ ಎನ್ನುವುದು ಒಂದಿರ ಬೇಕಾದರೆ ಅದರ ಜನವೆಲ್ಲ ಒಂದು ಮುಖವಾಗಿ ಒಪ್ಪಬಹುದಾದ ಉದ್ದೇಶ ರಾಜನಲ್ಲಿ ಕಾಣಬೇಕು ಎಂದು ಅವಳು ಬಲ್ಲಳು. ರಾಷ್ಟ್ರಕ್ಕೆ ಒಳ್ಳೆಯದನ್ನು ಮಾಡುತ್ತೇನೆ ಎನ್ನುವುದು; ರಾಷ್ಟ್ರದ ಜನದ ಇಚ್ಛೆಯಂತೆ ಅವರ ಕಷ್ಟಸುಖವನ್ನು ನೋಡುತ್ತೇನೆ ಎನ್ನುವುದು; ಎಲ್ಲರಿಗೂ ಹಿರಿಯ ವನು ದೇವರು, ಎಲ್ಲಕ್ಕೂ ಹಿರಿಯದು ಧರ್ಮ, ದೇವರನ್ನು ಪೂಜಿಸು ತ್ತೇನೆ, ಧರ್ಮವನ್ನು ಆರ್ಜಿಸುತ್ತೇನೆ ಎನ್ನುವುದು; ಇವು ಇಂಥ ಉದ್ದೇಶ

ಗಳು. ಅದರಿಂದ ರಾಣಿಯು ಪೂರ್ವಿಕರು ಕಟ್ಟಿಸಿದ್ದ ಸದಾಶಿವೇಶ್ವರ ದೇವಾಲಯವನ್ನು ವಿಸ್ತಾರಪಡಿಸಿದಳು. ಶ್ರೀನಿವಾಸನ ದೇವಾಲಯಕ್ಕೆ ಗೋಪುರವನ್ನು ಕಟ್ಟಿಸಿದಳು. ಚಿಕ್ಕ ಅರಮನೆಯ ಪಕ್ಕದಲ್ಲಿ ಸದಾಶಿವೇಶ್ವರನ ದೇವಾಲಯಕ್ಕೂ ಅದಕ್ಕೂ ಮಧ್ಯೆ ಹೊಸದೊಂದು ಮಂದಿರವನ್ನು ಕಟ್ಟಿಸಲು ಆರಂಭಮಾಡಿದಳು. ಕುಶಲಿಯಾದ ಶಿಲ್ಪಿಯೊಬ್ಬನು ಬಂದಿರಲಾಗಿ ಹಲವು ಸುಂದರ ಮೂರ್ತಿಗಳನ್ನು ಅವನಿಂದ ಕಡೆಯಿಸಿದಳು. ಅವುಗಳಲ್ಲಿ ಒಂದು ಈ ಕೃಷ್ಣವಿಗ್ರಹ. ಇದಕ್ಕಾಗಿ ಒಂದು ಆಲಯ ಕಟ್ಟುವವರೆಗೆ ತನ್ನ ವಾಸದ ಗೃಹದ ಅಂಗಳದಲ್ಲಿ ಸಣ್ಣ ಒಂದು ಮಂದಿರವನ್ನು ಮಾಡಿಸಿ ಅದರಲ್ಲಿ ಆ ಮೂರ್ತಿಯನ್ನು ನಿಲ್ಲಿಸಿದ್ದಳು. ಅದು ಆಕೆಯ ಇಷ್ಟಮೂರ್ತಿ. ಮಗುವಿಗೆ ಒಡವೆ ಮಾಡಿಸುವ ತಾಯಂತೆ ಅವಳು ಅದಕ್ಕೆ ಒಂದು ಬಂಗಾರದ ಕೊಳಲನ್ನು ಮಾಡಿಸಿ ಕೈಯಲ್ಲಿರಿಸಿದ್ದಳು. ತನ್ನ ಕೆಲಸ ವ್ಯರ್ಥವಾಗದಂತೆ ನೋಡಿಕೊ ಎಂದು ಆಕೆ ಈಗ ಮೆಯ್ ಮನಗಳಿಂದ ವಂದಿಸಿ ಪ್ರಾರ್ಥಿಸುತ್ತಿದ್ದಪ್ಪು ಆ ಇಷ್ಟಮೂರ್ತಿಯ ಮುಂದುಗಡೆ.

ರಾಣಿ ಮಗನಿಗೆ ಹದಿನೈದನೆಯ ವಯಸ್ಸಿನಲ್ಲೇ ಮದುವೆ ಮಾಡಿದ್ದಳು. ಆ ಹುಡುಗಿ ಬಾಂಧವ್ಯದ ಹೆಣ್ಣು. ಗುಣವಂತೆ, ರೂಪವಂತೆ. ಒಂದು ರಾಜ್ಯದ ರಾಣಿಯಾಗಿರಬೇಕಾದರೆ ಏನೋ ಒಂದು ರೀತಿಯ ಹಿರಿತನವಿರಬೇಕೆಂದು ಎಲ್ಲ ದೇಶದಲ್ಲಿ ಎಲ್ಲ ಕಾಲದಲ್ಲಿ ಜನರು ನಿರೀಕ್ಷಿಸುವರು. ಚಿಕ್ಕ ರಾಣಿ ವಯಸ್ಸಿನಲ್ಲಿ ಚಿಕ್ಕವಳಾದರೂ ಸಂಪನ್ನೆ; ಒಳ್ಳೆಯ ಮನೆತನದಲ್ಲಿ ಹುಟ್ಟಿ ಬೆಳೆದವಳು. ಅವಳು ರಾಜನಿಗಿಂತ ಒಂದು ವರ್ಷ ಮಾತ್ರ ಚಿಕ್ಕವಳು. ಮದುವೆಯಾದ ಒಡನೆ ಅರಮನೆಗೆ ಬಂದು ಅತ್ತೆಯ ಬಳಿಯೂ ಹಿರಿತನವನ್ನು ಕಲಿಯುವುದಕ್ಕೆ ನಿಂತಳು. ತಂದೆ ಇದ್ದಾಗಲೂ ಆಮೇಲೆ ತಾನು ಚಿಕ್ಕರಾಜನಾಗುವವರೆಗೂ ಶ್ರೀರಂಗನು ತಕ್ಕಮಟ್ಟಿಗೆ ಸರಿಯಾಗಿಯೇ ನಡೆದುಕೊಂಡನು. ತಾಯ ವಿಷಯದಲ್ಲಿ ಗೌರವದಿಂದಲೂ ಭಯದಿಂದಲೂ ವರ್ತಿಸುತ್ತ ಆಡಳಿತದ ವಿವರಗಳಲ್ಲಿ ಅಭಿರುಚಿಯನ್ನು ತೋರಿಸುತ್ತ ಮೊದಲಲ್ಲಿ ಒಳ್ಳೆಯವನೆಂಬ ಹೆಸರನ್ನು ಸಂಪಾದಿಸಿಕೊಂಡನು. ಆದರೆ ಇದು ನಿಲ್ಲಲಿಲ್ಲ. ವಿಜಯನಗರದ ಅರಮನೆಯ

ವೈಭವದ ಸಂಪ್ರದಾಯದಲ್ಲಿ ರಾಜನಾದವನ ಹತ್ತಿರ ಸುಳಿಯುವ ಹೆಂಗಸರ ಸಂಖ್ಯೆ ಹೆಚ್ಚು. ಈ ಸಂಪ್ರದಾಯ ಕೃಷ್ಣದೇವರಾಯನ ದಿನದಲ್ಲಿ ಬೆಳೆಯಿತು. ಆಮೇಲೆ ಬಂದ ರಾಜರ ದಿನದಲ್ಲಿ ಬಲವಾಗಿ ನಾಟಿತು. ವಿಜಯನಗರ ಹಿರಿದಾಗಿ ಬಾಳಿದ ಕಾಲದಲ್ಲಿ ಅದರ ಐಶ್ವರ್ಯದ ಆಶ್ರಯಕ್ಕೆ ನಾನಾ ದೇಶದ ವಿಲಾಸಜೀವಿಗಳು ಬರುತ್ತಿದ್ದರು. ಇಂದು ಪೆನುಕೊಂಡೆಗೆ ಅಷ್ಟು ಜನ ಬಾರದಿದ್ದರೂ ದಕ್ಷಿಣ ದೇಶದಿಂದ ಉತ್ತರ ದೇಶದಿಂದ ಇವರ ಪ್ರೋತ್ಸಾಹವನ್ನು ಬೇಡಿ ಗಾಯಕ ಗಾಯಕಿಯರು ನರ್ತಕಿ ವಿಲಾಸಿನಿಯರು ವರುಷ ವರುಷವೂ ಬರುವುದುಂಟು. ಈ ಮನೆತನದಲ್ಲಿ ಚಿಕ್ಕರಾಯನೆಂಬವನೂ ಮಂಡಲೇಶ್ವರನೆಂಬ ಅಣ್ಣ ತಮ್ಮ ಚಿಕ್ಕಪ್ಪ ದೊಡ್ಡಪ್ಪನ ಮಗನೂ ರಾಜರೆಂಬಂತೆಯೇ ನಡೆದುಕೊಳ್ಳುತ್ತಿದ್ದರು. ದಾನ ಕೊಡುವುದು, ಕವಿಗಳನ್ನು ಪೋಷಿಸುವುದು, ಧರ್ಮವನ್ನು ಮಾಡಿಸುವುದು, ಇದರಲ್ಲಿ ಚಿಕ್ಕರಾಯನಾದವನ ಕೈಗೆ ಒಂದೂ ಅಡ್ಡಿಯಿಲ್ಲ. ಹಬ್ಬದಲ್ಲಿ ಗಾಯಕರು ನರ್ತಕರು ಬಂದರೆ ಅರಸಾದವನು ಪದ್ಧತಿಯಂತೆ ಗಾಯನವನ್ನು ಕೇಳುವುದು, ನರ್ತನವನ್ನು ನೋಡುವುದು, ಯುಕ್ತವೆಂದು ತೋರಿದ ಸಂಭಾವನೆಯನ್ನು ಕೊಡುವುದು ವಾಡಿಕೆ. ಶ್ರೀರಂಗನು ಚಿಕ್ಕರಾಯನಾದ ವರ್ಷ ಗಾಯಕಿಯರಲ್ಲಿ ಉತ್ತರ ಹಿಂದೂಸ್ಥಾನದ ತರುಣಿಯೊಬ್ಬಳು ಬಂದಳು. ಅವಳು ರೂಪವಂತೆ, ಕಲಾವಿದೆ. ರಾಜನನ್ನು ಮೆಚ್ಚಿಸಬೇಕೆಂಬ ಆಶೆಯಿಂದ ಹಾಡಿದಳು. ಮೂರು ವರ್ಷ ಸಂಸಾರದ ಸವಿ ನೋಡಿದ್ದ ತರುಣನಿಗೆ ಈ ಹೆಣ್ಣಿನ ಚೆಲುವಿನಲ್ಲಿ ತನ್ನ ಧರ್ಮಕಾಂತೆಯ ಚೆಲುವು ಕಳೆಗುಂದಿ ಮರೆಯಿತು. ಅವನು ಆ ಗಾಯಕಿ ತನ್ನ ಆಸ್ಥಾನದಲ್ಲಿಯೇ ಇರುವಂತೆ ಏರ್ಪಾಡುಮಾಡಿದನು. ಇಂಥ ಸಂದರ್ಭದಲ್ಲಿ ಪ್ರಭುವಿನ ಚಿತ್ತ ತಿಳಿಯುವುದು ತಡ. ತಿಳಿದರೆ ಅದನ್ನು ನಡೆಯಿಸುವುದಕ್ಕೆ ಬಹು ಜನರು ಅನುವಾಗುತ್ತಾರೆ. ಗಾಯಕಿ ಇರುವುದಕ್ಕೆ ಒಂದು ಒಳ್ಳೆಯ ಗೃಹ ಏರ್ಪಟ್ಟಿತು. ಕೊಂಚ ದಿನದಲ್ಲೇ ರಾಯನು ಅವಳನ್ನು ಉಪಪತ್ನಿಯನ್ನಾಗಿ ಮಾಡಿಕೊಂಡನು. ಸ್ವಲ್ಪದರಲ್ಲೆ ಚಿಕ್ಕ ಅರಮನೆಯ ಪಕ್ಕದಲ್ಲಿ ಹೊಸ ದೇವಾಲಯದ ಬಲಗಡೆಗೆ ಇದ್ದ ಗಗನಮಹಲು ಅವಳ ವಾಸಗೃಹವಾಯಿತು. ಮೊದಮೊದಲು ಶ್ರೀರಂಗನು ಒಂದು ರಾತ್ರಿಯನ್ನು

ಅರಮನೆಯಲ್ಲೂ ಒಂದು ರಾತ್ರಿಯನ್ನು ಗಗನಮಹಲಿನಲ್ಲೂ ಕಳೆಯು ತ್ತಿದ್ದನು. ಐದಾರು ತಿಂಗಳಲ್ಲಿ ಒಂದೊಂದು ರಾತ್ರಿಯನ್ನೂ ಗಗನಮಹಲಿನಲ್ಲಿಯೇ ಕಳೆಯುವುದರಲ್ಲಿ ಮುಗಿಸಿದನು. ಈ ಕಟ್ಟಡವನ್ನು ಅಳಿಯ ರಾಮರಾಯನು ಕಟ್ಟಿಸಿದನು. ಸದಾಶಿವರಾಯನೂ ತಿರುಮಲರಾಯನೂ ಅದರಲ್ಲಿ ಮಲಗುತ್ತಿದ್ದರು. ಅವರು ಅದರ ಶಯ್ಯಾಗೃಹದ ಗವಾಕ್ಷದಿಂದ ಬೆಳಗಾಗ ಎದ್ದೊಡನೆ ಎದುರಿನ ಶ್ರೀನಿವಾಸ ದೇವಾಲಯದ ಮೂರ್ತಿಯ ದರ್ಶನವನ್ನು ತೆಗೆದುಕೊಳ್ಳುತ್ತಿದ್ದರು. ಇಂದು ಆ ಕಟ್ಟಡದಲ್ಲಿ ವಿಲಾಸಿನಿಯೊಬ್ಬಳು ಪ್ರತಿಷ್ಠಿತಳಾದಳು. ಅವಳ ಮುಖವನ್ನು ನೋಡುವ ಸುಖದಲ್ಲಿ ಚಿಕ್ಕರಾಯನು ಕಿಟಕಿಯಿಂದ ಹೊರಕ್ಕೆ ದೇವರ ಕಡೆಗೆ ದೃಷ್ಟಿ ಹರಿಸುವುದನ್ನು ಮರೆತನು.

ಮಗನು ಕೆಟ್ಟದಾರಿಗೆ ಹೋದುದನ್ನು ಕಂಡಾಗ ಲಕ್ಷ್ಮಮ್ಮಾಂಬೆ ಬಹಳ ಕುಗ್ಗಿದಳು; ಹಿರಿಯರ ಮುಂದೆ ತಲೆ ತಗ್ಗಿಸಿಕೊಳ್ಳುವುದೆನ್ನುವುದು ಏನೆಂಬುದನ್ನು ತಿಳಿದಳು. ಅವಳು ಮಗನನ್ನು ಒಂದೆರಡು ಸಲ ಆ ದಾರಿಯನ್ನು ಬಿಟ್ಟುಬರಬೇಕೆಂದು ಬೇಡಿಕೊಂಡಳು. ತಾನು ಹುಡುಕಿ ತಂದ ಹೆಣ್ಣು ಮಗುವಿನ ಸಲುವಾಗಿ ಅವನು ಸರಿಯಾಗಿ ನಡೆದುಕೊಳ್ಳುವುದು ಅವಶ್ಯಕವೆಂದು ಅಧಿಕಾರದ ವಾಣಿಯಿಂದ ಹೇಳಿದಳು. ರಾಯನು ಇಂಥ ಸಮಯದಲ್ಲಿ ತಾಯಿಗೆ ಪ್ರತಿಹೇಳಲಿಲ್ಲ; ಆದರೆ ತನ್ನ ತಪ್ಪುದಾರಿಯನ್ನು ಬಿಡಲಿಲ್ಲ. ಹೊಸದರಲ್ಲಿ ಹೆಂಡತಿ ಒಂದು ಸಲ ರಾಯನು ತನ್ನ ಮಾನವನ್ನು ಉಳಿಸಬೇಕೆಂದು ಬೇಡಿಕೊಂಡಳು. "ನಾನು ನಿನಗೆ ಮಾನಕ್ಕೆ ಏನು ಕಡಮೆ ಮಾಡಿದೆ? ನನ್ನ ಅರಮನೆಯ ಲಕ್ಷ್ಮಿಯೆಂದು ಪೂಜಿಸುತ್ತಿದೇನೆ" ಎಂದು ಹೇಳಿ ರಾಯನು ಆ ಮಾತನ್ನು ಮುಗಿಸಿದನು. ಲಕ್ಷ್ಮಮ್ಮಾಂಬೆಗೆ ಒಂದು ನಿರೀಕ್ಷೆ ಇತ್ತು. ಕೆಲದಿನ ಹೀಗೆ ಅಲೆದು ಮರಳಿ ಮಗನು ಒಳ್ಳೆಯ ದಾರಿಗೆ ಬರುತ್ತಾನೆ, ಬಾರದೆ ಉಂಟೆ, ಎಂದು ಆಕೆಗೆ ಒಂದು ಧೈರ್ಯ. ಆದರೆ ಮತ್ತೆ, ಅಧರ್ಮದ ಹುಸಿಮರಳಿನಲ್ಲಿ ಕಾಲಿಟ್ಟ ಮನುಷ್ಯ ಹೊರಗೇನು ಬಂದಾನು, ಎಂದು ಭಯ. ಹೀಗಾದರೆ ಇನ್ನು ಇವನು ರಾಜನಾಗುವ ಹಾಡುಂಟೆ? ಚಿಕ್ಕರಾಜನು ಧರ್ಮಿಷ್ಠನೆಂದರೆ ಅವನು ರಾಜನಾಗಲು ಜನ ಒಪ್ಪುವರು. ಅವನು ಅಯೋಗ್ಯನಾದರೆ,

ಇವನು ಬೇಡ, ಇನ್ನು ಯಾರಾದರೂ ಬಂದು ಸತ್ಯವಂತನಾಗಿ ನಮ್ಮನ್ನು ಆಳಲಿ, ಎನ್ನುವರು. ಈ ಯೋಚನೆಯಿಂದ ಲಕ್ಷ್ಮಮ್ಮಾಂಬೆ ಬಹಳವಾಗಿ ಭಯಪಟ್ಟಳು. ರಾಜ್ಯದ ಕೇಡು ಹತ್ತಿರಕ್ಕೆ ಬರುತ್ತಿದೆ ಎಂಬ ಒಂದು ಭಾವದ ಭಾರದಿಂದ ಅವಳ ಮನಸ್ಸು ಕುಗ್ಗಿ ಅಶಾಂತವಾಯಿತು.

ಇದು ಎರಡು ವರ್ಷದ ಹಿಂದಿನ ಮಾತು. ಅದರಿಂದೀಚೆಗೆ ಶ್ರೀರಂಗನ ಸಂಸಾರದ ಸ್ಥಿತಿ ಇನ್ನೂ ಕೆಟ್ಟಿತ್ತು. ಪೆನುಕೊಂಡೆಯ ಬೆಟ್ಟದ ತಲೆಯಲ್ಲಿ ಆಗ್ಗೆ ದೊಡ್ಡದೊಂದು ಊರೇ ಇತ್ತೆಂದು ಹೇಳಬಹುದು. ಶತ್ರುಗಳು ಎಂದಾದರೂ ಬಂದರೆ ಊರಿನ ಪುಣ್ಯವಂತರು ಧನಕನಕವನ್ನು ಹೊತ್ತುಕೊಂಡು ಮೇಲೆ ಇರಬೇಕೆನ್ನುವುದು ಆಗ ವಾಡಿಕೆಯಾದ ಭಾವನೆ. ಆದ್ದರಿಂದ ಅಲ್ಲಿ ಹಲವರಿಗೆ ಮನೆಗಳಿದ್ದುವು. ರಾಜನು ಇರುವುದಕ್ಕೆ ಅಲ್ಲಿ ಸಣ್ಣದೊಂದು ಅರಮನೆ. ಬದಿಯಲ್ಲಿ ದೇವಾಲಯವೂ ಇತ್ತು. ದೇವಾಲಯದ ಪಕ್ಕದಲ್ಲಿ ದೊಡ್ಡದಾದ ಆಳವಾದ ಒಂದು ಕೊಳ. ವರ್ಷದಲ್ಲಿ ಒಂದು ದಿನ ನರಸಿಂಹಸ್ವಾಮಿಗೆ ಅಲ್ಲಿ ತೆಪ್ಪೋತ್ಸವ ನಡೆಯುವುದು. ಅಲಕಸುಂದರಿ ಬಂದಮೇಲೆ ರಾಯನು ವರ್ಷದಲ್ಲಿ ಎರಡು ಮೂರು ಸಲ ಬೆಟ್ಟದ ಮೇಲೆ ಕಾಲ ಕಳೆಯುವನು. ಅವಳಿಗೆ ತೆಪ್ಪದಲ್ಲಿ ಕುಳಿತು ಕೊಳದ ಮೇಲೆ ಓಡಾಡುವುದರಲ್ಲಿ ಬಹಳ ಆಸೆ. ಬೆಟ್ಟದ ಕೆಳಗೆ ದೊಡ್ಡದೊಂದು ಕೆರೆ ಉಂಟು. ಆದರೆ ಅಲ್ಲಿ ರಾಯನೂ ಅವಳೂ ತೆಪ್ಪದಲ್ಲಿ ಕುಳಿತು ಓಡಾಡುವುದೆಂದರೆ ಬಹಳ ಜನ ನೋಡಬಹುದು. ಅದು ಅವಳಿಗೆ ಇಷ್ಟವಿಲ್ಲ. ಆದಕಾರಣ ಇವರು ಬೆಳದಿಂಗಳ ದಿನದಲ್ಲಿ ಬೆಟ್ಟದ ಮೇಲೆ, ಇದ್ದು ರಾತ್ರಿಯ ಅರ್ಧವನ್ನು ಕೊಳದಲ್ಲಿ ತೆಪ್ಪದ ಮೇಲೆ ಕಳೆಯುವರು. ಈ ಸಲದ ಆಶ್ವೀಜ ಪೂರ್ಣಿಮೆಯಲ್ಲಿ ರಾಜನು ಬೆಟ್ಟದ ಮೇಲಿರುತ್ತಾ ಕೊಳದಮೇಲೆ ತೆಪ್ಪದಲ್ಲಿ ಅಲಕಸುಂದರಿಯ ಗಾನವನ್ನು ಕೇಳುತ್ತಾ ತಾನು ಇಂದ್ರಲೋಕದಲ್ಲಿ ಮಂದಾಕಿನಿಯ ತೆರೆಯಲ್ಲಿ ರಂಭೆಯೊಡನೆ ವಿಹರಿಸುತ್ತಿರುವ ದೇವೇಂದ್ರನೋ ಎಂದು ಭ್ರಮೆಗೊಂಡನು. ಜೀವನವು ಅವನಿಗೆ ಬಹು ಸುಂದರವಾಗಿ ಬಹು ಸುಖಮಯವಾಗಿ ತೋರಿತು. ಗಗನಮಹಲಿನಿಂದ ದೇವರು ಕಾಣದೆ ಹೋದಂತೆ ಇವನಿಗೆ ಬೆಟ್ಟದ ತಲೆಯಿಂದ ರಾಷ್ಟ್ರ ಕಾಣದೆ ಹೋಯಿತು.

ಈ ಸಮಯದಲ್ಲಿ ಬಿಜಾಪುರದ ಮುಸಲ್ಮಾನರು ಪೆನುಕೊಂಡೆಯ ಮೇಲೆ ದಂಡೆತ್ತಿ ಬರುವರೆಂದು ಮಾತುಹುಟ್ಟಿತು. ಊರಜನ ಬಹಳ ಭಯಪಟ್ಟರು. ಜಗದೇವರಾಯನು ರಾಷ್ಟ್ರದ ಪಾಳೆಯಗಾರರಿಗೆ ಹೇಳಿ ಕಳುಹಿಸಿ ಎಚ್ಚರಿಕೆಯಿಂದಿರುವಂತೆ ಏರ್ಪಾಡುಮಾಡಿದನು. ತನ್ನ ದಳಗಳ ವ್ಯವಸ್ಥೆಯನ್ನು ಪುನಃ ನೋಡಿ ಅಲ್ಲಲ್ಲಿ ಪಡೆಗಳನ್ನು ನಿಲ್ಲಿಸಿ ಯುದ್ಧದ ವಿಷಯದಲ್ಲಿ ಸಜ್ಜಾಗಿ ಇದ್ದನು. ರಾಜನು ಈ ವಿಷಯದಲ್ಲಿ ಸಾಕಾದಷ್ಟು ಶ್ರದ್ಧೆ ತೋರಲಿಲ್ಲ. ಹದಿನೈದು ದಿವಸದಲ್ಲಿ ಶತ್ರುಸೇನೆ ಬರುತ್ತದೆ ಎಂದು ವರ್ತಮಾನ ತಿಳಿಯಿತು. ಅದಾದ ಕೆಲವು ದಿವಸವಲ್ಲಿ ಶತ್ರುಗಳು ದಾರಿಯ ಎರಡು ಪಾಳೆಯದವರನ್ನು ಸೋಲಿಸಿ ಪೆನುಕೊಂಡೆಗೆ ಎರಡು ಹರಿದಾರಿ ದೂರದ ಹಳ್ಳಿಯಲ್ಲಿ ತಂಗಿದರು. ಜಗದೇವರಾಯನು ತಾನೇ ಮುಂದೆ ಹೋಗಿ ಶತ್ರುವಿನೊಂದಿಗೆ ಯುದ್ಧಮಾಡಬಹುದಾಗಿತ್ತು. ಆದರೆ ಹಾಗೆ ಮಾಡಲಿಲ್ಲ. ಇದಕ್ಕೆ ಹಲವು ಕಾರಣ. ಮುಖ್ಯವಾದದ್ದು ಅವನಿಗೆ ಲಕ್ಷ್ಮಮಾಂಬೆ ಚಿಕ್ಕರಾಯರ ವಿಷಯದಲ್ಲಿ ಒಂದು ಅಸೂಯೆ. ಅವನ ತಂಗಿಯನ್ನು ವೆಂಕಟಾದ್ರಿ ಮದುವೆಯಾಗಿದ್ದನು. ಅವಳ ಮಗನು ಚಿಕ್ಕ ರಾಯನಾಗಬೇಕೆಂದು ಅವನ ಆಸೆ. ಆದರೆ ಅವಳಿಗೆ ಇನ್ನೂ ಮಕ್ಕಳಾಗಿರ ಲಿಲ್ಲ. ಆ ಮೊದಲೇ ಶ್ರೀರಂಗನು ಚಿಕ್ಕರಾಜನೆನಿಸಿಕೊಂಡನು. ಇದಾದ ಮೇಲೆ ಜಗದೇವನು ತನ್ನ ಮಗಳನ್ನು ಇವನಿಗೆ ಕೊಡಬೇಕೆಂದು ಯೋಚಿಸಿ ದ್ದನು. ಲಕ್ಷ್ಮಮಾಂಬೆ ಅದಕ್ಕೆ ಅಡ್ಡಿ ಬಂದಿದ್ದಳು. ಜಗದೇವನಿಗೆ ತನ್ನ ಮನೆಯವರು ಆಳ್ವಿಕೆಗೆ ಬರಬೇಕೆಂದು ಒಂದು ಅಪೇಕ್ಷೆ. ಅದಕ್ಕೆ ಇವರೆಲ್ಲ ಅಡ್ಡಿಯಾಗಿದ್ದರು. ಚಿಕ್ಕರಾಯನ ಯೋಗ್ಯತೆ ರಾಜನಿಗೆ ತಿಳಿಯಲಿ ಎಂದೇ ಇವನಿಗೆ ಒಂದು ಉದ್ದೇಶ. ಕೊನೆಗೆ ಶತ್ರುವನ್ನು ಸೋಲಿಸುವೆನೆಂಬ ಧೈರ್ಯವೇನೋ ಉಂಟು. ಮಧ್ಯೆ ಏನಾಗುವುದು ನೋಡೋಣ ಎಂದು ಅವನು ಸುಮ್ಮನಿದ್ದನು. ಹೀಗೆ ರಾಜನ ಅವಿವೇಕದಿಂದಲೂ ಸೇನಾಪತಿಯ ಅಶ್ರದ್ಧೆಯಿಂದಲೂ, ದೂರದಲ್ಲಿದ್ದ ಶತ್ರುಸೇನೆ ನಿರಾಯಾಸವಾಗಿ ರಾಜ ಧಾನಿಯ ಹತ್ತಿರ ಸೇರಿತು.

ರಾಜನ ಅಭಿಪ್ರಾಯ ಏನಿರಬಹುದೆಂದು ಯಾರಿಗೂ ತಿಳಿಯದು. ಸುಖಲಾಲಸೆಯಿಂದ ಅವನಿಗೆ ಈ ವಿಚಾರದಲ್ಲಿ ತಕ್ಕಷ್ಟು ಯೋಚನೆ

ಹರಿಯಲಿಲ್ಲವೆಂದು ತೋರುತ್ತದೆ. ಬಂದಿದ್ದ ಸೇನೆಯೇನೋ ಅಷ್ಟು ದೊಡ್ಡದಲ್ಲ. ಆದರೆ ಅದನ್ನು ರಾಜಧಾನಿಗೆ ಅಷ್ಟು ಹತ್ತಿರದವರೆಗೆ ಬರುವುದಕ್ಕೆ ಬಿಟ್ಟದ್ದು ಅವಿವೇಕವಾಯಿತೆಂದು ರಾಜನು ಮನಗಾಣಲಿಲ್ಲ. ಶತ್ರು ಪೆನುಕೊಂಡೆಯ ಬಳಿ ಪಾಳೆಯ ಹಾಕಿದ ಮಾರನೆಯ ಬೆಳಗ್ಗೆ ಅವನು ಬೆಟ್ಟದಿಂದ ಇಳಿದನು; ಸೇನೆ ಸಿದ್ಧವಾಗಿರಲಿ, ಇಂದು ತಪ್ಪಿದರೆ ನಾಳೆ ಯುದ್ಧಕ್ಕೆ ಹೋಗೋಣ, ಎಂದು ಅಪ್ಪಣೆ ಮಾಡಿದನು. ಅರಮನೆಗೆ ಬಂದು ತಾಯಿ ಹೆಂಡತಿ ಇಬ್ಬರೂ ಬೆಟ್ಟದಮೇಲಕ್ಕೆ ಹೋಗಬೇಕೆಂದು ಹೇಳಿದನು. ಲಕ್ಷ್ಮಮಾಂಬೆ ನಿಷ್ಠುರವಾಗಿ ಮಾತನಾಡಿದಳು. “ದೊಡ್ಡವರು ಆಳಿದ ರಾಜ್ಯ. ಅದನ್ನು ಉಳಿಸಿಕೊಳ್ಳಬೇಕಾದರೆ ಪುಣ್ಯವಿರಬೇಕು. ರಾಜಧಾನಿಯಲ್ಲಿರುತ್ತ ಶತ್ರುಸೇನೆ ಎರಡು ಹರಿದಾರಿಗೆ ಬರುವಂತೆ ಬಿಟ್ಟದ್ದು ತಪ್ಪು. ಊರಜನ ರಾಜನನ್ನು ನಂಬಿ ಇಲ್ಲಿ ಸೇರಿದಾರೆ. ಆಸ್ತಿಪಾಸ್ತಿಗಳನ್ನು ಅವನ ನೆರಳಿನಲ್ಲಿ ಹಾಕಿದಾರೆ. ತನ್ನ ಹೊಣೆ ಎಂಥದೆಂದು ತಿಳಿಯದೆ ರಾಜನು ಸುಖದಲ್ಲಿ ಕಾಲ ಕಳೆದರೆ ಊರಿಗೇನು ಗತಿ, ರಾಜ್ಯಕ್ಕೇನು ಗತಿ? ತಾನು ಬೆಟ್ಟದ ಮೇಲೆ ಹೋಗುವುದಿಲ್ಲ. ರಾಷ್ಟ್ರದ ಹಣೆಯಲ್ಲಿ ಊರಿನ ಹಣೆಯಲ್ಲಿ ಯಾವ ಅಮಂಗಳವನ್ನು ಬರೆದಿದ್ದರೆ ಅದು ತನಗೂ ಇರಲಿ. ನಮ್ಮವರು ಸೋತು ಶತ್ರುಸೇನೆ ಊರಿನೊಳಕ್ಕೆ ನುಗ್ಗಿದರಲ್ಲವೆ ತನಗೆ ಭಯ. ಇನ್ನು ಯಾರೂ ಅದನ್ನು ತಡೆಯದಿದ್ದರೆ ತಾನೇ ಹೋಗಿ ಬಾಗಿಲಲ್ಲಿ ನಿಂತು ಸೇನೆಯನ್ನು ಹುರಿಗೊಳಿಸುತ್ತೇನೆ” ಎಂದಳು. ರಾಜನಿಗೆ ಕೋಪಬಂದಿತು. ಆದರೆ ಅವನು ಮಾತನಾಡುವ ಅಧಿಕಾರವನ್ನು ಉಳಿಸಿಕೊಂಡಿರಲಿಲ್ಲ. ಹೆಂಡತಿಯನ್ನು ಕುರಿತು ಬೆಟ್ಟದಮೇಲಕ್ಕೆ ಹೋದರೆ ಒಳ್ಳೆಯದು ಎಂದು ಹೇಳಿದನು. ಅವಳು “ನಾನು ಬೆಟ್ಟದ ಮೇಲಿನ ಮನೆಯನ್ನು ಮರಳಿ ನೋಡಲಾರೆ” ಎಂದಳು. ರಾಣಿ “ನೀನು ಚಂದ್ರಗಿರಿಗಾದರೂ ಹೋಗಿ ಸುರಕ್ಷಿತವಾಗಿರು ತಾಯಿ. ನನಗೆ ಏನೂ ಭಯವಿಲ್ಲ. ಆದರೆ ಪ್ರಾಯದ ಹೆಣ್ಣು ನೀನು ಇಲ್ಲಿರುವುದು ಸರಿಯಲ್ಲ” ಎಂದಳು. ಸೊಸೆ ಅದಕ್ಕೆ ಪ್ರತಿಯಾಗಿ “ಗಂಡನನ್ನು ಮದುವೆಯಾಗಿ ನಿಮ್ಮೊಂದಿಗೆ ಸಂಸಾರಮಾಡಿದೆ. ಕೊನೆಗೂ ನಿಮ್ಮೊಂದಿಗೆ ಇದ್ದುಬಿಡುತ್ತೇನೆ. ಏನಾದರೂ ಕೆಟ್ಟದಾಗುವುದೆಂದರೆ ದೇಹವನ್ನು ಬಿಡುವುದಕ್ಕೆ ದಾರಿಯಿಲ್ಲವೆ? ನಿಮ್ಮನ್ನು ಕಷ್ಟಕ್ಕೆ ಬಿಟ್ಟು

ನಾನು ಚಂದ್ರಗಿರಿಗೂ ಹೋಗಲಾರೆ ಸುರಕ್ಷಿತವಾಗಿಯೂ ಇರಲಾರೆ" ಎಂದು ಹೇಳಿದಳು. ರಾಯನು ಈ ಎಲ್ಲ ಮಾತಿನಿಂದ ಅಸಮಾಧಾನಪಟ್ಟು ಸೈನ್ಯದ ವ್ಯವಸ್ಥೆಯನ್ನು ನೋಡುವುದಕ್ಕೆ ಹೊರಟುಹೋದನು.

ಅಂದಿನ ರಾತ್ರಿ ಶತ್ರುಗಳು ಬಂದು ಪೆನುಕೊಂಡೆಯ ಮೇಲೆ ಬಿದ್ದರು. ಪೆನುಕೊಂಡೆಯ ಸೇನೆ ಹಿಂಜರಿಯಲಿಲ್ಲ. ಜಗದೇವರಾಯನು ಅಸಾಧಾರಣವಾದ ಶೌರ್ಯದಿಂದ ಕದನಮಾಡಿದನು. ಶ್ರೀರಂಗನೂ ಅವನೊಡನೆ ಸೇರಿ ಸೈನ್ಯವನ್ನು ಹುರಿಗೊಳಿಸಿದನು. ಸೇನಾಧಿಪತಿಯು ಚಿಕ್ಕರಾಜನ ಧೈರ್ಯವನ್ನೂ ಉತ್ಸಾಹವನ್ನೂ ನೋಡಿ ಆಶ್ಚರ್ಯಗೊಂಡನು. ಅವನು ನಿಜವಾಗಿ ಯೋಧನು. ಆದದ್ದರಿಂದ ಶ್ರೀರಂಗನ ಶೌರ್ಯವನ್ನು ಮೆಚ್ಚಿದನು. ಅಸೂಯೆ ಇದ್ದರೂ ಅವನಿಗೆ ರಾಯನ ವಿಷಯದಲ್ಲಿ ಗೌರವ ಹುಟ್ಟಿತು. ತನ್ನ ರಾಜನಿಗೆ ಏನಾದರೂ ತೊಂದರೆಯಾದೀತೆಂದು ಅವನಿಗೆ ಭಯವಾಯಿತು. ಹಲವುಸಲ ಅವನು ಶ್ರೀರಂಗನನ್ನು ಕುರಿತು "ಸ್ವಾಮಿಯವರು ಯುದ್ಧದ ಮಧ್ಯೆ ನಿಲ್ಲುವುದು ಸರಿಯಲ್ಲ. ನಾವು ನೋಡಿಕೊಳ್ಳುತ್ತೇವೆ. ತಾವು ಅರಮನೆಯಲ್ಲಿ ಇರಬೇಕು. ನಾವು ವರ್ತಮಾನವನ್ನು ಕಳುಹಿಸುತ್ತಿರುತ್ತೇವೆ" ಎಂದು ಬೇಡಿದನು. ಚಿಕ್ಕರಾಯನು ಒಪ್ಪಲಿಲ್ಲ. ಅಂದು ಶತ್ರುಗಳು ಹಿಮ್ಮೆಟ್ಟಿದರು. ಮಾರನೆಯ ರಾತ್ರಿ ಪುನಃ ಬಂದರು. ಮತ್ತೆ ಹಾಗೆಯೇ ಯುದ್ಧ. ಯುದ್ಧದಷ್ಟೇ ಮಾತಾಗಿದ್ದರೆ ಪೆನುಕೊಂಡೆಗೆ ಅಂದೂ ಭಯವಿರಲಿಲ್ಲ. ಆದರೆ ಶತ್ರುಗಳು ಪಿತೂರಿಯಿಂದ ಕೆರೆಯ ಕಡೆಯ ದಿಡ್ಡೀಬಾಗಿಲ ಕಾವಲವರನ್ನು ಒಳಗೆ ಹಾಕಿಕೊಂಡಿದ್ದರು. ಆಕಡೆಗೆ ಕೆಲವು ಜನ ಹೋಗಿ ಗೋಡೆಯನ್ನೇರಿ ಊರೊಳಕ್ಕೆ ಇಳಿದು ದೀನ್ ದೀನ್ ಎಂದು ಓಡಿಯಾಡಿ ಪೇಟೆಯಲ್ಲಿ ಭಯವನ್ನು ಹುಟ್ಟಿಸಿ ನುಗ್ಗಿ ಬಂದರು. ಕೋಟೆಯ ದೊಡ್ಡ ಬಾಗಿಲನ್ನು ತೆಗೆದು ಪೆನುಕೊಂಡೆಯ ಸೈನ್ಯವನ್ನು ಹಿಂದುಗಡೆಯಿಂದ ಕಡಿಯುವುದಕ್ಕೆ ಆರಂಭಮಾಡಿದರು. ಯುದ್ಧಕ್ಕಿಂತ ಹೆಚ್ಚಾಗಿ ಎಲ್ಲಿಂದಲೋ ಬಂದ ಶತ್ರುವನ್ನು ನೋಡಿದ ಆಶ್ಚರ್ಯದಿಂದ ಕೋಟೆಯ ಬಾಗಿಲ ಸೇನೆ ಊರಿನಿಂದ ಇನ್ನಷ್ಟು ದೂರ ಸರಿಯಿತು. ಈ ಗದ್ದಲದಲ್ಲಿ ಶ್ರೀರಂಗನು ತಾಯಿಗೂ ಹೆಂಡತಿಗೂ ಈಗಲಾದರೂ ಬೆಟ್ಟದ ಮೇಲೆ

ಹೋಗಿ, ಇಲ್ಲದಿದ್ದರೆ ಚಂದ್ರಗಿರಿಗಾದರೂ ಹೋಗಿ, ಎಂದು ಹೇಳಿಕಳು ಹಿಸಿದನು. ರಾಣಿಯೂ ಸೊಸೆಯೂ ಕೃಷ್ಣನ ಪೂಜೆಯಲ್ಲಿ ನಿರತರಾಗಿದ್ದಾಗ ಈ ಮಾತು ಬಂದಿತು. ಲಕ್ಷ್ಮಮ್ಮಾಂಬೆ ಬೆಟ್ಟದ ಮೇಲಕ್ಕೆ ಹೋದರೂ ಹೋಗಬಹುದೆಂದು ಯೋಚಿಸಿದಳು. ಮಗನು ಶೌರ್ಯದಿಂದ ನಡೆಯು ತ್ತಿದಾನೆಂದು ತಿಳಿದು ಅವಳಿಗೆ ಸಂತೋಷವಾಗಿತ್ತು. ಆದರೆ ಚಿಕ್ಕರಾಣಿ "ಅಮ್ಮಾಜಿ, ನನ್ನ ಆಣೆ, ನಾನು ಆ ಹೆಂಗಸಿರುವ ಕಡೆಗೆ ಬರಲಾರೆ. ನೀವು ಹೋಗಿ. ನನ್ನ ಪಾಡು ಹೇಗಾದರೂ ಆಗುತ್ತದೆ" ಎಂದಳು. ರಾಣಿ "ನಿನ್ನನ್ನು ಬಿಟ್ಟು ನಾನು ಹೋಗಲೇ? ನನಗೇನು ಹೆದರಿಕೆ? ಹಾಗಾದರೆ ಇಲ್ಲಿಯೇ ಇರೋಣ" ಎಂದಳು. ಚಿಕ್ಕರಾಣಿ "ನನ್ನ ಅರಸು ಯುದ್ಧದಲ್ಲಿ ನಿಂತಿರಲಾಗಿ ನಾನು ಏನೆಂದು ಓಡಿಹೋಗಿ ಈ ಮೈಯನ್ನು ಉಳಿಸಿಕೊಳ್ಳಲಿ? ಎರಡು ವರುಷವಾಯಿತು, ವೈದ್ಯರನ್ನು ಕೇಳಿ ವಿಷದ ಗುಳಿಗೆಯನ್ನು ತಂದು. ಇಂದು ಅದನ್ನು ಉಪಯೋಗಿಸುತ್ತೇನೆ" ಎಂದಳು. ರಾಣಿ ಅವಳನ್ನು "ಯಾತರ ಮಾತು ಆಡುತ್ತೀಯೆ. ನಾನು ಇದ್ದೇನೋ ಹೋದೆನೋ? ಸುಮ್ಮನಿರು" ಎಂದು ಹೇಳಿ ಗುರಿಕಾರನನ್ನು ಕುರಿತು "ಈಗ ಬೆಟ್ಟದ ಮೇಲೆ ಹೋಗುವುದು ಬೇಡ. ಎಲ್ಲಾದರೂ ಒಂದು ಕಡೆ ತಲೆಮರೆಸಿಕೊಳ್ಳಲು ಏರ್ಪಾಡು ಮಾಡು. ನಾಳೆ ಬೇಕಾದರೆ ಚಂದ್ರಗಿರಿಗೆ ಹೋಗೋಣ" ಎಂದಳು. ಗುರಿಕಾರನು ಅರಮನೆಯ ಕಾವಲ ದಳಪತಿ ಯೊಂದಿಗೆ ಮಾತನಾಡಿ ರಾಣಿಯರನ್ನು ಊರಹೊರಗೆ ತಮ್ಮ ಹೊಲದ ಒಂದು ನೆಲಮಾಳಿಗೆಗೆ ಒಂದು ಸುತ್ತು ದಾರಿಯಿಂದ ಕರೆದುಕೊಂಡು ಹೋಗುವುದು ಎಂದು ನಿರ್ಧರಿಸಿದನು. ರಾಣಿ ಒಪ್ಪಿದಳು. ಒಡನೆಯೇ ಹೊರಡುವುದಕ್ಕೆ ಸಜ್ಜಾದಳು. ಗುರಿಕಾರನು ತನ್ನ ಹೊಲದ ಕಡೆ ಯಾರ ಸುಳಿವೂ ಇಲ್ಲವೆಂಬುದನ್ನು ನಿರ್ಧಾರಮಾಡಿಕೊಂಡು ಬಂದು ಇವರನ್ನು ಕರೆದುಕೊಂಡು ಹೊರಟನು. ಹೊರಡುವ ಹೊತ್ತಿನಲ್ಲಿ ರಾಣಿ ಏನೋ ತೋರಿ ನಿಂತು "ಊರು ಮುಸಲ್ಮಾನರ ಪಾಲಾದ ಮೇಲೆ ದೇವಸ್ಥಾನ ಉಳಿಯುವುದಿಲ್ಲ. ಅವರು ಅರಮನೆಗೆ ನುಗ್ಗಿದಾಗ ನಮ್ಮ ಕೃಷ್ಣಮೂರ್ತಿ ಯನ್ನು ಬಿಟ್ಟಾರೆ? ಬಾ, ದೇವರನ್ನು ಎತ್ತಿಕೋ. ನಾನು ಬಿಟ್ಟುಹೋಗ ಲಾರೆ" ಎಂದಳು. ಮೂರ್ತಿ ಅಷ್ಟೇನೂ ಲಘುವಾದದ್ದಲ್ಲ. ಆದರೂ

ಅವಳು ಅದನ್ನು ಬಿಟ್ಟುಹೋಗಲು ಒಪ್ಪಲಿಲ್ಲ. "ಇಷ್ಟರಲ್ಲೇ ನಿನಗೆ ಒಂದು ಆಲಯವನ್ನು ಕಟ್ಟಲು ನೋಡಿದೆ. ಅದು ನಡೆಯಲಿಲ್ಲ. ನಮ್ಮ ಮನೆಯಲ್ಲಿ ನೀನು ನೆಲಸೆಂದು ಬೇಡಿದೆ. ಇಂದು ನಾನು ಈ ಮನೆಯನ್ನು ಬಿಟ್ಟು ಹೋಗುವ ಕಾಲ ಬಂದಿದೆ. ನಾನು ಎಲ್ಲಿದ್ದರೆ ಅಲ್ಲಿ ಇರು. ನನ್ನನ್ನು ಕಾಪಾಡು" ಎಂದು ಅದರೆದುರಿಗೆ ಮರಳಿ ಮಂಡಿಯೂರಿ ಬೇಡಿದಳು. ಎದ್ದು ಆ ಮೂರ್ತಿಯನ್ನು ಎತ್ತಿಸಿಕೊಂಡು ಹೊರಟಳು. ಈ ವೇಳೆಗೆ ಊರಿನಲ್ಲಿ ಕೋಲಾಹಲ ಹೆಚ್ಚಾಗಿತ್ತು. ಯುದ್ಧವೇನಾಯಿತೆಂದು ಬೇಹಿನ ಜನ ಹೇಳುವುದು ನಿಂತುಹೋಗಿತ್ತು. ರಾಣಿಯರಿಬ್ಬರೂ ಕೃಷ್ಣಮೂರ್ತಿಯ ಸಮೇತ ತ್ವರೆಯಿಂದ ಊರನ್ನು ಬಿಟ್ಟರು. ಸ್ವಲ್ಪ ಹೊತ್ತಿನಲ್ಲಿ ಗುರಿಕಾರನ ಹೊಲದ ನೆಲಮಾಳಿಗೆಯನ್ನು ಸೇರಿದರು.

ಇರುಳು ನೆರೆದಂತೆ ಯುದ್ಧದ ಕೋಲಾಹಲ ಮುಗಿಲನ್ನು ಮುಟ್ಟಿತು. ಶತ್ರುಸೇನೆ ಊರೊಳಗೆ ಎಲ್ಲಾ ಕಡೆಯೂ ಓಡಿಯಾಡುವುದಕ್ಕೆ ಮೊದಲಾಯಿತು. ರಾಯನು ಕೋಟೆಯ ಬಾಗಿಲ ಬಳಿ ಇನ್ನೂ ಕಾದುತ್ತಲೇ ಇರಲು ಜಗದೇವರಾಯನು ಬಂದು "ತಾವು ಖಂಡಿತ ಇನ್ನು ಇಲ್ಲಿ ಇರಕೂಡದು" ಎಂದು ಹಠಮಾಡಿ ಅವನನ್ನು ಒಂದು ಕುದುರೆಯ ಮೇಲೆ ಕೂರಿಸಿ ಅರಮನೆಯ ಕಡೆಗೆ ತಿರುಗಿಸಿ "ಇಲ್ಲಿ ನಾನು ನೋಡಿಕೊಳ್ಳುತ್ತೇನೆ, ಮಹಾಸ್ವಾಮಿ ರಾಜಕುಟುಂಬದೊಡನೆ ಈಗಲೇ ಬೆಟ್ಟದ ಮೇಲಕ್ಕೆ ಹೋಗಬೇಕು" ಎಂದು ಹೇಳಿ ಜೊತೆಗೆ ಒಬ್ಬ ಸವಾರನನ್ನು ಕಳುಹಿಸಿದನು. ಚಿಕ್ಕರಾಯನ ತಪ್ಪನ್ನು ದೊಡ್ಡದೆನ್ನಿಸುವುದಕ್ಕೆ ತಾನು ಮಾಡಿದ ಆಲಸ್ಯದಿಂದ ಈಗ ರಾಷ್ಟ್ರಕ್ಕೆ ಹಾನಿ ತಟ್ಟಿತು, ಇದು ತಿಳಿದರೆ ವೆಂಕಟಾದ್ರಿರಾಯನು ತನ್ನನ್ನು ದಂಡಿಸಿಯಾನು, ಎಂದು ಅವನಿಗೆ ತೋರಿತು. ಆದ್ದರಿಂದ ಅವನು ಚಿಕ್ಕರಾಯನನ್ನೂ ಅವನ ಕುಟುಂಬವನ್ನೂ ಉಳಿಸುವುದು ಆವಶ್ಯಕವೆಂದು ನಿರ್ಧರಿಸಿದನು. ಅವನನ್ನು ಅತ್ತ ಕಳುಹಿಸಿ ಇತ್ತ ತನ್ನ ಸೇನೆಯನ್ನು ನಾಲ್ಕು ಕಡೆಗೂ ಹರಡಿ ಬಲವಾಗಿ ಕಾದಿದನು.

ರಾಯನು ಬೇಗಬೇಗನೆ ಅರಮನೆಗೆ ಬಂದನು. ಕುದುರೆಯಿಂದಿಳಿದು ಚಿಕ್ಕರಾಣಿಯ ತೊಟ್ಟಿಯ ಕಡೆ ಹೊರಟನು. ಅವನನ್ನು ಕಂಡ ಸೇವಕರು ರಾಣಿಯರಿಬ್ಬರೂ ಎಲ್ಲಿಗೋ ಹೋದರೆಂದರು. ಎಲ್ಲಿಗೆ ಹೋದರೋ

ಅವರು ಕಾಣರು. ದಳಪತಿ ಬಲ್ಲನು. ಆದರೆ ಅವನು ಆಗ ಅಲ್ಲಿ ಇರಲಿಲ್ಲ. ಸೇವಕರು ತೋರಿಸಿದ ದಿಕ್ಕಿನಿಂದ ರಾಣಿಯರು ಎಲ್ಲಿ ಹೋದರೆಂದು ಊಹಿಸುವುದಾಗಲಿಲ್ಲ. "ಬೆಟ್ಟದ ಮೇಲಕ್ಕೆ ಹೋಗಿರಬಹುದೇ?" "ಹೋಗಿರಬಹುದು ಮಹಾಸ್ವಾಮಿ. ಜನಕ್ಕೆ ತೋರದೆ ಇರಲಿ ಎಂತ ಹೀಗೆ ಹೋಗಿರಬಹುದು." ಕೋಟೆಯ ಬಾಗಿಲಬಳಿ ಗದ್ದಲ ಹೆಚ್ಚಾಯಿತು. ಸವಾರನೊಬ್ಬನು ಬಂದು, ಸೇನಾಧಿಪತಿ ಅರಸನನ್ನು ಕಾಪಾಡಿಕೊಳ್ಳಿ ಎಂದು ಹೇಳಿ ಕಳುಹಿಸಿದಾರೆ, ಎಂದನು. ರಾಯನಿಗೆ ಏನು ಮಾಡುವುದು ತೋರಲಿಲ್ಲ. ತಾಯಿಯೂ ಪತ್ನಿಯೂ ಮೇಲಕ್ಕೆ ಹೋಗಿರಬೇಕೆಂದು ಅವನು ಎಣಿಸಿಕೊಂಡನು. ಒಡನೆಯೆ ಬೆಟ್ಟದ ಮೇಲಕ್ಕೆ ಏರಲು ಹೊರಟನು. ಪೆನುಕೊಂಡೆ ಅಂದು ಶತ್ರುಗಳ ಪಾಲಾಯಿತೆಂಬಂತೆಯೇ ಇತ್ತು. ಹಗೆ ಊರೊಳಗೆ ನುಗ್ಗಿ ಜನವನ್ನು ಹೆದರಿಸಿ ಅರಮನೆಯನ್ನು ಆಕ್ರಮಿಸಿ ಕೊಂಡನು. ಬಿಜಾಪುರದ ಸೇನೆ ಗೆದ್ದೆನೆಂಬ ಹುಮ್ಮಸ್ಸಿನಲ್ಲಿ ಅನೇಕ ಅತ್ಯಾಚಾರಗಳನ್ನು ನಡೆಯಿಸಿತು. ಒಂದು ದಳ ಸದಾಶಿವನ ದೇವಾ ಲಯಕ್ಕೆ ನುಗ್ಗಿತು. ಇನ್ನೊಂದು ಗುಂಪು ಶ್ರೀನಿವಾಸನ ಮಂದಿರವನ್ನು ಪ್ರವೇಶಿಸಿತು. ಬೆಳಗಾಗುವ ಹೊತ್ತಿಗೆ ಪೆನುಕೊಂಡೆ ಬೀಜಾಪುರದ ಸುಲ್ತಾನನ ಒಂದು ಪಾಳೆಯದ ಒಂದು ಪಟ್ಟಣವೇ ಆಗಬೇಕು. ಆದರೆ ಜಗದೇವರಾಯನು ಅಸಹಾಯಶೂರನು. ಏನಾದರೂ ಸರಿಯೆ ಎಂದು ಅವನು ಮತ್ತೆ ಸೈನ್ಯವನ್ನು ಹುರಿಗೊಳಿಸಿ ಶತ್ರುವಿನ ಮೇಲೆ ಬಿದ್ದು ಒಳಗೆ ಸೇರಿದ್ದವರನ್ನು ಊರಹೊರಕ್ಕೆ ಅಟ್ಟಿದನು. ಇದಕ್ಕೆ ಮಾರನೆಯ ಹಗಲೆಲ್ಲಾ ಪ್ರಯತ್ನ. ಸಂಜೆ ಅವನು ಊರಬಾಗಿಲುಗಳನ್ನು ಮರಳಿ ಮುಚ್ಚಿಸಿ ಇದ್ದ ಜನವನ್ನು ಸುತ್ತ ಕಾವಲಿಟ್ಟು ಚಿಕ್ಕರಾಜನು ಚಂದ್ರಗಿರಿಗೆ ಹೋಗಬೇಕೆಂದೂ ಅಲ್ಲಿಂದ ಸಹಾಯದೊಂದಿಗೆ ಬರಬೇಕೆಂದೂ ಬೆಟ್ಟದ ಮೇಲಕ್ಕೆ ಹೇಳಿಕಳುಹಿಸಿದನು. ಈ ವೇಳೆಗೆ ಮಾರನೆಯ ರಾತ್ರಿ ನಾಲ್ಕು ಗಳಿಗೆಯಾಯಿತು.

ಹಿಂದಣ ರಾತ್ರಿ ರಾಯನು ಬೆಟ್ಟವನ್ನು ಸೇರಿದಾಗ ರಾಣಿಯರು ಅಲ್ಲಿ ಇಲ್ಲವೆಂದು ತಿಳಿಯಿತು. ಮಾರನೆಯ ದಿನ ಊರು ಮುಸಲ್ಮಾನರ ಪಾಲಾದಂತೆಯೇ ಕಂಡದ್ದರಿಂದ ಜಗದೇವರಾಯನು ಹೇಳಿಕಳುಹಿಸುವ

ಮೊದಲೇ ರಾಜನು ಚಂದ್ರಗಿರಿ ಕೋಟೆಗೆ ಹೋಗಿ ಸಹಾಯವನ್ನು ತರುವುದೆಂದು ನಿರ್ಧರವಾಗಿತ್ತು. ಜಗದೇವರಾಯನು ಹೇಳಿಕಳುಹಿಸಿದ ಮೇಲಂತೂ ಆ ವಿಷಯದಲ್ಲಿ ಸಂದೇಹವಿಲ್ಲವಾಯಿತು. ಆ ರಾತ್ರಿ ಜನದ ಸಹಾಯದಿಂದ ಬೇರೆಯ ದಾರಿಯಲ್ಲಿ ಬೆಟ್ಟದಿಂದಿಳಿದು ಅವನೂ ಅಲಕಸುಂದರಿಯೂ ಉಳಿದ ಪರಿವಾರವೂ ಚಂದ್ರಗಿರಿಯ ಕಡೆಗೆ ತೆರಳಿದರು. ಹೋಗುತ್ತಾ ರಾಯನು ತನ್ನ ತಾಯನ್ನೂ ಹೆಂಡತಿಯನ್ನೂ ಕುರಿತು ಯೋಚಿಸಿದನು. ಅವರು ಏನಾದರೋ ಎಂದು ಚಿಂತೆಗೆ ಸಿಕ್ಕಿದನು. ಅವರ ಸಮಾಚಾರವನ್ನು ವಿಚಾರಿಸಿ ತಿಳಿಸಬೇಕೆಂದು ಜಗದೇವರಾಯನಿಗೆ ಹೇಳಿಕಳುಹಿಸಿದನು. ಇಂಥ ಸಂದರ್ಭದಲ್ಲಿ ಅಸಾಧಾರಣವಲ್ಲದ ಒಂದು ಮನೋಧರ್ಮದಿಂದ ಅವರು ಹಿಂದಿನ ದಿನ ಚಂದ್ರಗಿರಿಗೇ ಹೋದರೋ ಏನೋ ಎಂದು ಕೂಡ ಯೋಚಿಸಿಕೊಂಡನು.

ಚಂದ್ರಗಿರಿಗೆ ಹೋದಮೇಲೆ ಅವರು ಅಲ್ಲಿಯೂ ಇಲ್ಲವೆನ್ನುವುದು ತಿಳಿಯಿತು. ಆದರೆ ಅವರು ಏನಾದರೆನ್ನುವುದನ್ನು ಅವನಿಗೆ ಹೇಳುವವರಿಲ್ಲವಾದರು. ಇತ್ತ ಜಗದೇವರಾಯನು ಅವರ ವಿಷಯ ಸ್ವಲ್ಪ ವಿಚಾರಿಸಿದನು. ಬಹಳ ವಿಚಾರಿಸುವುದಕ್ಕೆ ಅವನಿಗೆ ಆಗಲಿಲ್ಲ. ಅವರು ಗುರಿಕಾರನ ಹೊಲಕ್ಕೆ ಹೋದರೆಂದು ಬಲ್ಲ ದಳಪತಿ ಆ ಗುರಿಕಾರನ ಹೆಸರನ್ನು ಕಾಣನು. ಅದು ತಿಳಿದರೂ ಆ ಹೊಲ ಯಾವುದೋ ಅದರಲ್ಲಿ ಮಾಳಿಗೆಯೆಲ್ಲಿಯೋ ಯಾರಿಗೆ ತಿಳಿಯಬೇಕು? ಕೆಲವು ದಿನದ ಮೇಲೆ ಅವರು ಒಂದು ನೆಲಮಾಳಿಗೆಗೆ ಹೋದರೆನ್ನುವ ಮಾತು ಎಲ್ಲ ಕಡೆಯೂ ಹರಡಿತು. ಆದರೆ ಅದರ ಗುರುತು ಯಾರಿಗೂ ಸಿಕ್ಕಲಿಲ್ಲ. ಚಂದ್ರಗಿರಿಯಿಂದ ಸಹಾಯ ಬಂದು ಶತ್ರುಸೇನೆಯನ್ನು ಹೊಡೆದಟ್ಟುವುದು ಹದಿನೈದು ದಿನವಾಯಿತು. ಆ ವೇಳೆಗೆ ಇವರು ಹೋದ ದಾರಿಯ ಗುರುತು ಕೈಗೆ ಸಿಕ್ಕದಂತಾಯಿತು. ರಾಣಿಯೂ ಸೊಸೆಯೂ ಏನಾದರು?

ಯುದ್ಧದ ಆ ರಾತ್ರಿ ಶತ್ರುಗಳ ಕೈಯಿಂದ ತಪ್ಪಿಸಿಕೊಳ್ಳುವುದಕ್ಕೆ ಆಶ್ರಯವನ್ನು ಕೊಟ್ಟ ಆ ನೆಲಮಾಳಿಗೆ ಲಕ್ಷ್ಮಮಾಂಬೆಗೂ ಅವಳ ಸೊಸೆಗೂ ಸಮಾಧಿಯಾಯಿತು. ಮಾರನೆಯ ಹಗಲು ಅಲ್ಲಿದ್ದು ರಾತ್ರಿ ಹೊರಟು ಬರುವುದೆಂದು ಅವರ ಉದ್ದೇಶ, ಗುರಿಕಾರನ ಉದ್ದೇಶ. ಇವರ ನೆಲ

ಮಾಳಿಗೆಯ ಬಾಗಿಲಿಂದ ಹೊರಗೆ ಬಂದರೆ ಒಂದು ಮಂಟಪ. ಹೊರಗಿನಿಂದ ನೋಡುವವರಿಗೆ ಅದು ಬರಿಯ ಒಂದು ಮಂಟಪವೆಂದು ಕಾಣುವುದು. ಕತ್ತಲಾದ ಒಡನೆ ಗುರಿಕಾರನು ಹೋಗಿ ಊರ ಸುದ್ದಿಯನ್ನು ತಿಳಿದು ತರುವುದೆಂದೂ ಆಮೇಲೆ ತಾವು ಏನುಮಾಡುವುದೆಂದು ನಿರ್ಧರಿಸುವುದೆಂದೂ ಲಕ್ಷ್ಮಮ್ಮಾಂಬೆ ಯೋಚಿಸಿದ್ದಳು. ಆದರೆ ಆ ಸಂಜೆಯ ವೇಳೆಗೆ ಕೋಟೆಯಿಂದ ಹಿಮ್ಮೆಟ್ಟಿದ ಶತ್ರುಸೇನೆ ಕೆರೆಗೆ ಸಮೀಪವಾಗಿದೆಯೆಂಬ ಕಾರಣದಿಂದ ಆ ಹೊಲದ ಮೇಲೆ ಪಾಳೆಯ ಹೂಡಿತು. ಅದರಲ್ಲಿ ಕೆಲಜನರು ಮಂಟಪದಲ್ಲಿ ಕುಳಿತು ಹುಕ್ಕಾ ಸೇದುತ್ತಾ ಹೆಂಡ ಕುಡಿಯುತ್ತಾ ಸಿಕ್ಕಾಪಟ್ಟೆ ನಗುತ್ತಾ ಕೂಗುತ್ತಾ ಇದ್ದರು. ಗುರಿಕಾರನು ಹೊರಗೆ ಹೊರಡುವುದಕ್ಕೇ ಆಗಲಿಲ್ಲ. ಹದಿನೈದು ದಿನ ಪಾಳೆಯ ಅಲ್ಲಿಯೇ ಇದ್ದುಬಿಟ್ಟಿತು. ಒಳಗೆ ಲಕ್ಷ್ಮಮ್ಮಾಂಬೆಯೂ ಅವಳ ಸೊಸೆಯೂ ಅವರ ರಕ್ಷಣೆಗೆ ಹೋದ ಗುರಿಕಾರನೂ ಹಸಿವು ದಾಹದಿಂದಲೂ ವಿಷದ ಸಹಾಯದಿಂದಲೂ ಜೀವವನ್ನು ಬಿಟ್ಟರು.

ಜಗದೇವರಾಯನು ಪೆನುಕೊಂಡೆಯನ್ನು ಉಳಿಸಿದನು. ಶ್ರೀರಂಗನು ಮರಳಿ ಅಲ್ಲಿಗೆ ಚಿಕ್ಕರಾಯನಾಗಿ ಬಂದನು. ಆದರೆ ರಾಣಿಯರಿಗೆ ಏನಾಯಿತೆಂದು ಯಾರಿಗೂ ತಿಳಿಯಲಿಲ್ಲ.

ಇನ್ನೂರು ವರ್ಷದ ಮೇಲೆ ಪೆನುಕೊಂಡೆಯ ರೈತನೊಬ್ಬನು ತನ್ನ ಹೊಲದಲ್ಲಿ ಹಳೆಯ ಮಂಟಪವಿದ್ದ ಒಂದು ಸ್ಥಳವನ್ನು ಸಾಗುವಳಿಗೆ ಸರಿಪಡಿಸಲು ಅಗೆಯುತ್ತಿದ್ದನು. ಗುದ್ದಲಿ ಕಲ್ಲುಹಲಗೆಗಳಿಗೆ ಬಡಿಯಿತು. ಇದೇನೆಂದು ಅವನು ಮೇಲಣ ಮಣ್ಣನ್ನು ತೆಗೆಸಿದನು. ಒಂದು ಮಾಳಿಗೆ ಇರುವುದು ತಿಳಿಯಿತು. ಇದರಲ್ಲಿ ಏನಿರುವುದೋ ಎಂದು ಆಸೆಯಿಂದ ಅವನು ಸಂಜೆಯಾದ ಮೇಲೆ ಬಂದು ಹಲಗೆಯನ್ನು ಎತ್ತಿ ಒಳಗೆ ನೋಡಿದನು. ಏನಿದೆ ಎನ್ನುವುದು ಕತ್ತಲಲ್ಲಿ ಸ್ಪಷ್ಟವಾಗಿ ಕಾಣಲಿಲ್ಲ. ಒಳಗೆ ಇಳಿಯುವುದಕ್ಕೆ ಭಯ. ಮಾರನೆಯ ದಿನ ಬೆಳಗಾದ ಮೇಲೆಯೇ ನೋಡೋಣವೆಂದು ಸುಮ್ಮನಾದನು. ಆದರೆ ಆ ವೇಳೆಗೆ ಇದರ ಸುದ್ದಿ ಇತರರಿಗೆ ತಿಳಿಯಿತು. ಸರಕಾರದ ಅಧಿಕಾರಿಗಳು ಬಂದರು. ಜನರನ್ನು ಒಳಗಿಳಿಸಿ ನೋಡಿದರು. ನೆಲಮಾಳಿಗೆಯಲ್ಲಿ ಇವರಿಳಿದ ಕಡೆ ಮೊದಲು

ಕೆಲವು ಗುಡಾಣಗಳು, ಅವುಗಳಲ್ಲಿ ಒಂದರಲ್ಲಿ ಬಹು ಹಳೆಯದಾಗಿ ಸ್ವಲ್ಪ ತುಪ್ಪದ ಜಿಡ್ಡು, ಅದರ ಎದುರುಗಡೆಯ ಗೋಡೆಗೆ ಒರಗಿಸಿ ಒಂದು ಕೃಷ್ಣ ವಿಗ್ರಹ, ಇಷ್ಟು ಕಂಡವು. ಆ ವಿಗ್ರಹದ ಕೈಯಲ್ಲಿ ಒಂದು ಬಂಗಾರದ ಕೊಳಲಿತ್ತೆಂದು ಜನ ಹೇಳುತ್ತಾರೆ. ಅದರ ಕಾಲಿನ ಹತ್ತಿರ ಉದ್ದಕ್ಕೂ ಎರಡು ಮೂಳೆಗಳ ಸಾಲು, ಎರಡು ತಲೆಬುರುಡೆಯ ಚಿಪ್ಪುಗಳು ಇದ್ದವು. ಸ್ವಲ್ಪ ದೂರದಲ್ಲಿ ಇನ್ನೊಂದು ಗೋಡೆಯ ಒತ್ತಿಗೆ ಮೂಳೆಗಳ ದೊಂದಷ್ಟು ರಾಸಿ ಬಿದ್ದಿತ್ತು.

ಈ ಕೃಷ್ಣ ವಿಗ್ರಹ ಬಹು ಸುಂದರವಾದದ್ದೆಂದು ಕಲಾಭಿಜ್ಞರು ಅಭಿಪ್ರಾಯಪಟ್ಟರಂತೆ. ಸಾಮಾನ್ಯರಿಗೂ ಅದು ಚೆನ್ನಾಗಿದೆಯೆಂದು ತೋರಿತು. ಪೂಜೆಯಿಲ್ಲದ ಇಂಥ ವಿಗ್ರಹಗಳು ಸಿಕ್ಕುವುದು ಕಲಾ ಸಂಶೋಧನ ಕಾರ್ಯಕ್ಕೆ ಬಹಳ ಅನುಕೂಲ. ಸರಕಾರದವರು ಈ ಮೂರ್ತಿಯನ್ನು ಪ್ರಾಚ್ಯಕಲಾಮಂದಿರದ ವಿಚಿತ್ರವಸ್ತುಗಳ ಶಾಖೆಗೆ ಕಳುಹಿಸಿ ಕೊಟ್ಟರು. ಆ ಮೂಳೆಗಳನ್ನು ಯಾವ ಯುಗದವೆಂದು ಬೇಕಾದರೆ ನೋಡಬಹುದೆಂದು ವೈದ್ಯಶಾಸ್ತ್ರದ ವಿದ್ಯಾಲಯಕ್ಕೆ ಕಳುಹಿಸಿದರು. ಅಲ್ಲಿಯ ಪಂಡಿತರು ಆ ಮೂಳೆಗಳನ್ನು ನೋಡಿ ಅವು ಈ ಯುಗಕ್ಕೆ ಸೇರಿದುವೇ, ಎರಡು ಹೆಣ್ಣು ದೇಹದವು, ಒಂದು ಗಂಡು ದೇಹದ್ದು ಎಂದು ಹೇಳಿ ಅವನ್ನು ಒಂದು ಮಂಚಿಗೆಯಲ್ಲಿರಿಸಿದರು.

ಕೃಷ್ಣ ವಿಗ್ರಹ ಈಗಲೂ ಆ ವಿಚಿತ್ರ ವಸ್ತುಶಾಖೆಯಲ್ಲಿದೆ. ಮೂಳೆಗಳೂ ಇರಬಹುದು. ಆದರೆ ಅವು ಸಿಕ್ಕಿದ ಸಂದರ್ಭ ಬಹು ದಿನದ ಮಾತಾದದ್ದರಿಂದ ಅವುಗಳ ವಿವರವನ್ನು ಈಗ ಯಾರೂ ನೆನೆಯುವುದಿಲ್ಲ.

# ವೆಂಕಟಶಾಮಿಯ ಪ್ರಣಯ

೧

ಈ ಸಲದ ರಜದಲ್ಲಿ ನಾನು ರಾಮಸ್ವಾಮಿಯ ಗ್ರಾಮಕ್ಕೆ ಹೋಗಿದ್ದೆ. ಒಂದು ಸಂಜೆ ನಾನೂ ಅವನೂ ಅವನು ಹೊಸದಾಗಿ ಮಾಡಿಸುತ್ತಿರುವ ಒಂದು ತೋಟದ ಬಳಿ ಹೋಗಿ ಹಿಂದಕ್ಕೆ ಬರುತ್ತ ದಾರಿಯಲ್ಲಿ ಒಂದು ಮರದ ಕೆಳಗೆ ಕುಳಿತೆವು. ಅದು ಬಹು ಸೊಗಸಾದ ಸ್ಥಳ. ದೂರದಲ್ಲಿ ಒಂದು ಕೆರೆಯ ಕಟ್ಟೆ ಕಾಣುತ್ತಿತ್ತು. ಅದರ ಕೆಳಗೆ ಒಂದು ವಿಸ್ತಾರವಾದ ಗದ್ದೆಯ ಬೈಲು. ಅದರ ಬಲಗಡೆಗೆ ಒಂದು ಮಾವಿನ ತೋಪು. ಎಡಗಡೆಗೆ ಊರ ಹೊಲಗಳು. ಕೆರೆಯ ನೀರು ಗದ್ದೆಯ ಮೇಲೆ ಹಾಯ್ದು ನಾವು ಕುಳಿತಿದ್ದ ಸ್ಥಳದ ಪಕ್ಕದಲ್ಲಿ ಒಂದು ಸಣ್ಣ ಕಾಲುವೆಯಾಗಿ ಹರಿಯುತ್ತಿತ್ತು. ನಮ್ಮ ಎದುರಿಗೆ ಹೊಲಗಳ ಅಂಚಿನಲ್ಲಿ ಒಂದು ಹಸುರು ಚೌಕ ಕಾಣುತ್ತಿತ್ತು. ಅಂದು ದನಕರುಗಳೆಲ್ಲ ಆ ಮೊದಲೇ ಊರಕಡೆ ಹೊರಟುಹೋಗಿದ್ದವು. ಸುತ್ತ ಯಾರೂ ಜನರಿರಲಿಲ್ಲ. ಸೂರ್ಯನ ಕಿರಣಗಳು ಕಣ್ಣಿಗೆ ಸರಿಯಾಗಿ ಹರಿದುಬರುತ್ತ ಹೊಲ ಗದ್ದೆ ತೋಪು ಎಲ್ಲವನ್ನೂ ಅದರದರ ಬಣ್ಣದಿಂದ ಬೆಳಗುವಂತೆ ಮಾಡಿದ್ದವು. ಗಾಳಿ ತಣ್ಣಗೆ ಬೀಸುತ್ತಿತ್ತು. ಸಂಜೆಯ ಶಾಂತಿ ಕೈಗೆ ನಿಲುಕಬಹುದೆಂಬಂತೆ ಆಕಾಶದಿಂದ ಇಳಿದು ಬರುತ್ತಿತ್ತು. ಪಟ್ಟಣದಲ್ಲಿ ಬೆಳೆದ ನನ್ನ ಮನಸ್ಸು ಹಳ್ಳಿಗಳಲ್ಲಿರುವ ಜೀವನದ ಸುಖ ವೇನೆಂಬುದನ್ನು ಸ್ವಲ್ಪಮಟ್ಟಿಗೆ ತಿಳಿದಂತಾಯಿತು. ನಾನು ರಾಮಸ್ವಾಮಿಗೆ ಈ ಸ್ಥಳ ಬಹಳ ಚೆನ್ನಾಗಿದೆ ಎಂದೆನು.

ರಾಮಸ್ವಾಮಿ "ಹೌದು, ಇದು ನನ್ನ ಗ್ರಾಮದಲ್ಲೆಲ್ಲಾ ಬಹಳ ಚೆನ್ನಾದ ಸ್ಥಳ. ಅದರಿಂದಲೇ ನಮ್ಮ ತಂದೆಯವರು ಇಲ್ಲಿ ಈ ಮರವನ್ನು ಹಾಕಿಸಿದರು. ನಾನು ಇದರಡಿ ಕುಳಿತುಕೊಳ್ಳುವುದಕ್ಕೆ ಈ ಕಲ್ಲನ್ನು ನೆಡಿಸಿದೆ" ಎಂದನು. ನಾನು "ನಿಮ್ಮ ಹಾಗೆಯೆ ಬಲ್ಲವರು ಯಾರೋ ಅಲ್ಲಿ ಆ ತೋಪನ್ನು ಮಾಡಿಸಿದಾರೆ. ಇಲ್ಲಿ ಈ ಚೌಕದಲ್ಲಿ ನಾಲ್ಕು ಮೂಲೆಗೆ ನಾಲ್ಕು ಮರವನ್ನೂ ಮಧ್ಯೆ ಇನ್ನೊಂದನ್ನೂ ನೆಡಿಸಿ ಪಂಚವಟಿಯನ್ನು ಮಾಡಿದಾರೆ" ಎಂದೆನು.

ರಾಮಸ್ವಾಮಿ "ಅದೂ ನಿಜ. ಇಲ್ಲಿ ನಮ್ಮೂರ ನಾಯಿಂದನ ಮಗ ವೆಂಕಟಶಾಮಿಯ ಗೋರಿಯಿದೆ. ಮಧ್ಯದ ಆ ಬೇವಿನ ಮರ ಅವನ ಗೋರಿಯ ತಲೆಯಲ್ಲಿ ನೆಟ್ಟಿರತಕ್ಕದ್ದು. ಅವನು ತೀರಿಹೋಗುವಾಗ್ಯೆ ತನ್ನನ್ನ ಇಲ್ಲಿ ಹೂಳಬೇಕೆಂದು ಕೇಳಿದ. ಆ ಹೊಲ ಅವರ ತಂದೆಯದು. ಮಗನ ಇಷ್ಟ ನಡೆಸೋಣ ಎಂತ ತಂದೆ ಅವನ ಶವವನ್ನು ಇಲ್ಲಿ ಹೂಳಿಸಿ ಈ ಮರಗಳನ್ನು ಇಲ್ಲಿ ನೆಡಿಸಿದ. ಅದು ಒಂದು ಪ್ರೇಮದ ಕಥೆ" ಎಂದನು.

ನಾನು "ಪ್ರೇಮದ ಕಥೆಯೆ? ನನಗೆ ಹೇಳಬಾರದೆ" ಎಂದೆನು. ರಾಮಸ್ವಾಮಿ ಆ ಕಥೆಯನ್ನು ನನಗೆ ಹೇಳಿದನು.

೨

ವೆಂಕಟಶಾಮಿ ನನಗಿಂತ ಸುಮಾರು ಹತ್ತು ವರುಷ ದೊಡ್ಡವನು. ನಾನು ಮೊದಲನೆಯ ತರಗತಿಯಲ್ಲಿ ಓದುತ್ತಿರುವಾಗ್ಯೆ ಅವನು ನಮ್ಮ ಶಾಲೆಯಲ್ಲಿ ಓದುವುದನ್ನು ಬಿಟ್ಟನು. ತನ್ನ ಮಗನಿಗೆ ಓದುಬರಹ ಕಲಿಸಬೇಕು ಎಂತ ಅವರಪ್ಪ ನರಸನಿಗೆ ಬಹಳ ಆಸೆ. ಹುಡುಗ ಶಾಲೆಗೆ ಹೋಗುವಷ್ಟುದಿನ ಹೋದ. ಆದರೆ ಎರಡನೇ ಪುಸ್ತಕ ಓದುವಷ್ಟರಲ್ಲಿ ಓದನ್ನು ಮುಗಿಸಿದ. ಸ್ಕೂಲಿಗೆ ಹೋಗುತ್ತಿದ್ದಾಗಲೂ ವೆಂಕಟಶಾಮಿಗೆ ಓದಿನಲ್ಲಿ ಮನಸ್ಸಿಲ್ಲ. ಅವನಿಗೆ ಒಂದು ಹಡಪವನ್ನು ತಗಲಹಾಕಿಕೊಂಡು ತಂದೆಯ ಹಾಗೆ ಕಸಬು ಮಾಡುವುದರಲ್ಲಿ ಆಸಕ್ತಿ. ಕೈ ಬೇರೆ ಬಹಳ ನಯವಾಗಿತ್ತು. ಸ್ಕೂಲಿನ ಮೇಷ್ಟರುಗಳು ಆ ಮೊದಲು ಒಳ್ಳೆಯ ದಿನ ನೋಡಿಕೊಂಡು ನರಸನಿಗೆ ತಿಳಿಸಬೇಕಾಗಿತ್ತು. ವೆಂಕಟಶಾಮಿ ದೊಡ್ಡವನಾದಮೇಲೆ ಯಾವಾಗ ತೋರಿದರೆ ಆಗ ಅವನಿಗೆ ಹೇಳಿ ಕ್ಷೌರ ಮಾಡಿಸಿಕೊಳ್ಳುತ್ತಿದ್ದರು. ಮಗ ಹೇಗಾದರೂ ಜೀವನ ಸಂಪಾದಿಸಿಕೊಳ್ಳುತ್ತಾನೆ ಎಂಬ ಧೈರ್ಯದಿಂದ ತಂದೆ ಅವನನ್ನು ಅವನ ಇಷ್ಟದಂತೆ ಬಿಟ್ಟಿದ್ದನು.

ಹೀಗಿರುತ್ತಿರುವಾಗ ನಮ್ಮೂರಿಗೆ ಒಂದು ದೊಂಬರ ಗುಂಪು ಬಂದಿತು. ನಮ್ಮೂರ ರಾಮೇಗೌಡ ಕೈತುಂಬ ಕೊಡುವ ಧಣಿ ಎಂದು ಹೆಸರು. ದೊಂಬರ ಯಜಮಾನ ಇದನ್ನು ಕೇಳಿಯೇ ಇಲ್ಲಿ ಬಂದೆ ಎಂತ ಹೇಳಿದ.

ಊರಿನ ಜನಕ್ಕೇನು, ಕೊಡುವವನು ಕೊಡುತಾ ಇರಲಾಗಿ ತಾವು ತಮಾಷೆ ನೋಡುವುದೆಷ್ಟೋ ಅಷ್ಟೇ ಅಲ್ಲವೆ ಎಂತ ಸಂತೋಷ. ನಾವು ಹುಡುಗರು. ನಮಗೆ ಸ್ವರ್ಗವೇ ಭೂಮಿಗೆ ಇಳಿದುಬಂದಂತೆ ಉತ್ಸಾಹ. ಅಂತು ದೊಂಬರು ಬಂದದ್ದೊಂದು ನಮ್ಮ ಗ್ರಾಮದಲ್ಲಿ ದೊಡ್ಡ ಹಬ್ಬದಂತಾಯಿತು. ಮಾರನೆಯ ದಿನ ಆಟ. ಇದಕ್ಕೆ ಸರಿಯಾಗಿ ನಮ್ಮ ಶಾಲೆಯ ಮೇಷ್ಟರಿಗೆ ಸ್ವಲ್ಪ ಜ್ವರ ಬಂದಿತು. ಆ ದಿನ ಶಾಲೆಯನ್ನು ಮುಚ್ಚಿದರು. ಡೆಪುಟಿ ಕಮಿಷನರು ಬಂದರೆ ಆಗುವ ಮರ್ಯಾದೆ ನಮ್ಮ ಊರಿಗೆ ದೊಂಬರ ಆಟ ಬಂದದ್ದಕ್ಕೆ ಆಯಿತು. ಆ ದಿನ ಊರಿಗೆ ಊರೇ ಆಟವನ್ನು ನೋಡಿತು.

ಆಟ ಎಷ್ಟು ಚೆನ್ನಾಗಿತ್ತು ಎಂದು ನಾನು ಹೇಳುವುದಿಲ್ಲ. ನಮಗೆಲ್ಲ ಬಹಳ ಚೆನ್ನಾಗಿಯೇ ಇತ್ತು. ದೊಂಬರ ಹುಡುಗರು ಸಾಲು ಪರಟೆಹಾಕುವ ಮೊದಲು ಯಜಮಾನ ಸಣ್ಣ ಗಡೆಯ ಮೇಲೆ ಚಕ್ರ ಸುತ್ತಿದ್ದರವರೆಗೆ ಎಲ್ಲವೂ ನಮಗೆ ಚೆನ್ನವೇ. ಊರ ದೊಡ್ಡವರಾದರೂ ಆಶ್ಚರ್ಯಪಡದೇ ಇರಲಿಲ್ಲ. ಎಲ್ಲರಿಗೂ ಬಹಳ ಆಶ್ಚರ್ಯವಾದದ್ದು ಆ ದೊಂಬರ ಹುಡುಗಿ ಚಕ್ರ ಸುತ್ತಿದ ರೀತಿ. ನಾನು ಈಚೆಗೆ ಇಂಥ ಗಡೆಗಳನ್ನು ನೋಡಿದೇನೆ. ಈಗ ಅವು ನನಗೆ ಆಗ ಕಂಡಷ್ಟು ದೊಡ್ಡವಾಗಿ ಕಾಣುವುದಿಲ್ಲ. ಆದರೂ ಈ ಗಡೆಯೊಂದರಿಂದ ಬಿದ್ದರೆ ಮನುಷ್ಯರು ಬದುಕಲಾರರು. ದೊಂಬರ ಹೆಣ್ಣು ಆ ದಿನ ಗಡೆಯನ್ನೇರಿದಾಗ ನನಗಂತೂ ಎಲ್ಲೋ ಆಕಾಶವನ್ನೇ ಮುಟ್ಟಿಬಿಟ್ಟಳೆಂಬಂತೆ ಕಂಡಿತು. ಮೈಗೆ ಒತ್ತಿಕೊಂಡಿರುವಂತೆ ಸೀರೆಯನ್ನು ಬಿಗಿಯಾಗಿ ಉಟ್ಟು ಬಿಗಿಯಾದ ಕುಪ್ಪಸವನ್ನು ತೊಟ್ಟು ನಡುವಿಗೆ ಬಲವಾದ ಪಟ್ಟಿಯೊಂದನ್ನು ಕಟ್ಟಿ ಹುಡುಗಿ ಗಡೆಯನ್ನು ಸುತ್ತಿ ಏರಬೇಕಾದರೆ ತೆಂಗಿನ ಮರವನ್ನೇರುವ ಅಳಿಲಂತೆ ಕಂಡಳು. ಸರ್ರನೆ ಏರಿ ಗಡೆಯ ತಲೆಯನ್ನು ಮುಟ್ಟಿ ಅದರ ಮೊನೆಗೆ ನಡುವನ್ನು ಇರಿಸಿ ಬೆನ್ನಮೇಲೆ ಕೆಲವು ಸಾಮು ಹೊಟ್ಟೆಯ ಮೇಲೆ ಕೆಲವು ಸಾಮು ಮಾಡಿ ತೋರಿಸಿ ಕೊನೆಗೆ ಚಕ್ರವನ್ನು ಸುತ್ತಿದಳು. ಗಡೆಯ ಮೇಲೆ ಕೈಯನ್ನೊತ್ತಿ ಸುತ್ತುವುದಕ್ಕೆ ಮೊದಲು ಮಾಡಿ, ವೇಗ ಹೆಚ್ಚಿದ ಮೇಲೆ ಕೈಕಾಲುಗಳನ್ನು ಚಾಚಿ ಅದು ಯಾವುದೋ ರೀತಿಯಿಂದ ಓಟವನ್ನು ಹೆಚ್ಚಿಸಿದಳು. ಮೊದಲು ಕೈಕಾಲು ಬೇರೆ ಬೇರೆ ಯಾಗಿ ಕಾಣುತ್ತಿತ್ತು. ಓಟದ ವೇಗ ಹೆಚ್ಚಿದ ಹಾಗೆ ಅವಳು ಗಾಡಿಯ

ಚಕ್ರ ಓಡುವಂತೆ ಕಂಡಳು. ನೋಡುವ ಜನ ಮೊದಮೊದಲು ತಮ್ಮ ತಮ್ಮಲ್ಲಿ ಮೆಲ್ಲನೆ ಆಹಾ ಎಷ್ಟು ಚೆನ್ನಾಗಿ ಸುತ್ತುತ್ತಿದಾಳೆ, ಎಲಾ ಅವಳ ಕೈಯಾಡುವುದು ನೋಡೋ, ಏನಯ್ಯಾ ಕೈಬಿಟ್ಟಳು, ಎಂದು ಮೊದಲಾಗಿ ಮಾತನಾಡುತ್ತಿದ್ದವರು ಈ ವೇಗ ಹೆಚ್ಚಾದಾಗ ಮಾತು ನಿಲ್ಲಿಸಿದರು; ಏನಾಗುವುದೋ ಎಂದು ಭೀತಿಯಿಂದ ಉಸಿರು ಬಿಗಿಹಿಡಿದುಕೊಂಡರು; ಒಳಗೊಳಗೆ ಸದ್ಯ ಇವಳು ಇಳಿದುಬಂದರೆ ಸಾಕು ಎಂದುಕೊಂಡರು. ಅವಳ ತಮ್ಮ ಒಂದು ಕಡೆ ನಿಂತು ಸಣ್ಣ ಡೋಲು ಬಡಿಯುತ್ತಿದ್ದನು. ಅವಳ ತಂದೆ ಒಂದು ಕಡೆ ಕುಳಿತು ದೊಡ್ಡ ಒಂದು ಡೋಲನ್ನು ಬಡಿಯುತ್ತಿದ್ದನು. ಅವಳ ತಾಯಿ ಆವನ ಪಕ್ಕದಲ್ಲಿ ಕುಳಿತು ಮಗಳ ಕಡೆ ನೋಡುತ್ತಿದ್ದಳು. ಈ ಚಕ್ರದ ಸುತ್ತು ಬಹಳ ಹೊತ್ತು ಸುತ್ತಿದ ಮೇಲೆ ಊರಿನ ಗೌಡ ದೊಂಬರ ಯಜಮಾನನಿಗೆ ಸಾಮು ಸಾಕು ಬಿಡು ಎಂದನು. ಅವನು ಇನ್ನೇನು ಸ್ವಾಮಿ ಅದೂ ಆಯಿತು ಎಂದನು. ಹುಡುಗಿ ಸ್ವಲ್ಪದರಲ್ಲೇ ಸುತ್ತುವುದನ್ನು ನಿಲ್ಲಿಸಿ ಸರ್ರನೆ ಎದ್ದು ಗಡೆಯ ತಲೆಯಲ್ಲಿ ಎಡಗಾಲಿನ ಮೇಲೆ ನಿಂತು ಗುಂಪಿಗೆ ನಮಸ್ಕಾರ ಮಾಡಿ ಹಗ್ಗ ಒಂದರ ಮೇಲೆ ಕುಳಿತು ಜಾರಿ ನೆಲಕ್ಕೆ ಬಂದಳು; ತನ್ನ ಬಟ್ಟೆಯನ್ನು ಮೇಲೆ ಹಾಕಿಕೊಂಡು ತಾಯಿ ಪಕ್ಕದಲ್ಲಿ ನಿಂತುಕೊಂಡಳು.

ನಾನು ಆಗ ಇನ್ನೂ ಎಳೆಯವನು. ಆದರೆ ನನಗೂ ಅವಳ ಆ ದಟ್ಟಿಯ ವೇಷವನ್ನು ನೋಡಬೇಕೆನ್ನುವಂತಿತ್ತು. ವಯಸ್ಸಾದವರ ಮಾತನ್ನು ಹೇಳಬೇಕಾದದ್ದೇನು? ನಮ್ಮ ಉಪಾಧ್ಯಾಯರ ಮನೆಯಲ್ಲಿ, ಗೌಡರ ಮನೆಯಲ್ಲಿ ದೊಡ್ಡ ಹುಡುಗರಿದ್ದರು. ಅವರು ನಮ್ಮ ಪಾಠಶಾಲೆಗೆ ಬರುತ್ತಿದ್ದರು. ಅವರವರ ಮಾತು ಆಮೇಲೆ ಮೂರು ದಿನ ಆ ಹುಡುಗಿಯನ್ನು ಹೊರತು ಬೇರೇ ವಿಷಯಕ್ಕೆ ಹೋಗಲೇ ಇಲ್ಲ. ದೊಡ್ಡವರಿಗೂ ಹೀಗೆಯೇ ಆಗಿರಬೇಕು: ಆದರೆ ಸಂಪ್ರದಾಯವಂತರು ಇಂಥ ಸಂದರ್ಭದಲ್ಲಿ ಮಾತನಾಡುವಂತಿಲ್ಲ. ಊರಿನಲ್ಲಿ ಒಬ್ಬರಿಬ್ಬರು ರಸಿಕರಾದ ಜನ ಇದ್ದರು. ಅವರು ಉಳಿದ ಜನರ ಭಯಕ್ಕಾಗಿ ಸುಮ್ಮನೆ ಇದ್ದರೆಂದು ನನ್ನ ಭಾವನೆ. ಅಂತು ಊರಿನಲ್ಲಿ ಏನೂ ಗುಜುಗುಂಪು ಇರಲಿಲ್ಲವಾದುದರಿಂದ ಇವರೆಲ್ಲ ಬುದ್ಧಿವಂತರ ಹಾಗೆ ನಡೆದುಕೊಂಡರೆಂದು ಊಹಿಸಬಹುದು. ದೊಂಬರು

ಅಂದೂ ಮಾರನೆಯ ದಿನವೂ ನಮ್ಮೂರಲ್ಲಿದ್ದು ಗೌಡನಿಂದ ಮರ್ಯಾದೆಯನ್ನು ತೆಗೆದುಕೊಂಡು ಪಕ್ಕದ ಊರಿಗೆ ಹೋದರು. ಹುಡುಗರಷ್ಟಕ್ಕೆ ದೊಂಬರ ಬರವು ಹೋಗು ಮುಗಿದಂತಾಯಿತು. ಆದರೆ ಊರಿನ ದೃಷ್ಟಿಯಿಂದ ಒಂದು ತಂಟೆ ಉಳಿಯಿತು.

ದೊಂಬರು ಊರು ಬಿಟ್ಟು ಹೋದ ದಿನ ವೆಂಕಟಶಾಮಿ ಇನ್ನು ಕೆಲವರ ಸಹಿತ ಅವರ ಜೊತೆಗೆ ಹೋದನು. ಉಳಿದವರೆಲ್ಲ ಸ್ವಲ್ಪದೂರ ಹೋಗಿ ಹಿಂದಕ್ಕೆ ಬಂದರು. ವೆಂಕಟಶಾಮಿ ಇನ್ನೂ ಸ್ವಲ್ಪ ದೂರ ಹೋಗಿಬರುತ್ತೇನೆಂದನು. ಆ ದಿನವೆಲ್ಲಾ ಬರಲಿಲ್ಲ. ಮಾರನೆಯ ದಿನ ಪಕ್ಕದೂರಿನಿಂದ ಬಂದವರು ಯಾರೋ ಒಬ್ಬರು ಅವನು ದೊಂಬರ ಜೊತೆಯಲ್ಲೇ ಇದಾನೆ ಎಂದು ಹೇಳಿದರು. ಯಾರೋ ಕೇಳಿದ್ದಕ್ಕೆ ಅವನು ಅರ್ಧ ನಗುತ್ತಾ ತಾನು ಆ ದೊಂಬರ ಹುಡುಗಿಯನ್ನು ಮದುವೆಯಾಗುತ್ತೇನೆಂದು ಹೇಳಿದನಂತೆ. ಆ ಮಾತು ಊರನ್ನು ಮುಟ್ಟಿತು. ವೆಂಕಟಶಾಮಿಯ ಮನೆಯಲ್ಲಿ ಗೋಳಿದ್ದಿತು. ಊರಿನಲ್ಲಿ ಉಳಿದ ಜನಕ್ಕೂ ಸ್ವಲ್ಪ ಚಿಂತೆಯೇ ಆಯಿತು.

ವೆಂಕಟಶಾಮಿಯ ತಾಯಿ ಮುನಿಯಮ್ಮ ಗಂಡನನ್ನು ಕೂಗಿ, ಮಗನನ್ನು ಕರೆತರಬಾರದೆ, ಎಂದಳು. ಅವನು ಒಡನೆ ಕಿವಿಗೆ ಹಾಕಿಕೊಳ್ಳಲಿಲ್ಲ. ಅವಳು ಸ್ವಲ್ಪ ಒತ್ತಾಯಮಾಡಿ, ಹೆತ್ತ ಮಗ ಎಂದರೆ ಇಷ್ಟು ಅಗತ್ಯ ಬೇಡವೇ, ಎಂದಳು. ಅವನು ಆಗಲೂ ಕದಲದೇ ಇರಲು, ಮಗ ಎಂಥಾ ಪೋಲೀ ಕೆಲಸಕ್ಕೆ ಹೋದರೂ ನೋಡುತಾ ಇದೀಯಲ್ಲಾ ಇದೇನೋ ನಿನಗೆ ತಿಳಿದ ನಡತೆ, ಎಂದು ಕೇಳಿದಳು. ಅದರ ಹಿಂದಿನ ವರುಷ ವೆಂಕಟಶಾಮಿಗೆ ಮದುವೆ ಮಾಡುವ ಮಾತು ಬಂದಿತ್ತು. ತಾಯಿ ಇಷ್ಟು ಬೇಗನೆ ಬೇಡವೆಂದಿದ್ದಳು. ನರಸ ಈಗ ಆ ಮಾತನ್ನು ತೆಗೆದು, ಹೈದನಿಗೆ ವಯಸ್ಸು ಆಯಿತು ಸೊಸೇನ ತರೋಣ ಅಂದರೆ ಯಜಮಾನಿಪಟ್ಟ ಹೋಗುತ್ತೆ ಎಂತ ಬೇಡ ಅಂದೆಯಲ್ಲಾ ಈಗ ಅನುಭವಿಸು ಯಜಮಾನಿತನವನ್ನ, ಎಂದನು. ಅವಳು, ನಿನ್ನ ಯಜಮಾನತನಕ್ಕೆ ನನ್ನ ಯಜಮಾನಿತನ ಎಲ್ಲಾ ಸಾಕು ಹುಡುಗ ದೊಂಬಗ ಹುಡುಗೀನ ಕಟ್ಟಿಕೊಂಡಾನು ಹೋಗಿ ಕರತಾ, ಎಂದಳು. " ಅಲೇ ಅಲೇ ಯಜಮಾನಿಗಿತ್ತಿ ಎಷ್ಟು ಮಾತನಾಡುತೀಯಾ ಬಿಡತ್ತ. ನೀನೇನು ಮಗನ್ನ ದೊಂಬರಿಗೆ ಹೆತ್ತ್ಯಾ ಅವನು ದೊಂಬರ

ಹುಡುಗೀನ ಮದುವೆಯಾಗೋಕೇ. ಆ ಕೈನೆ ಎಲ್ಲೋ ಒಸಿ ನಕ್ಕಾಳೆ. ಇವ ಹಂಗೇ ನಿಂತಾನೆ. ಇದಕ್ಯಾಕ ಇಷ್ಟು ಕೂಗ್ಯಾಟ? ಎರಡು ದಿನ ನೋಡುತಾನೆ ಬರುತಾನೆ'' ಎಂದು ತಂದೆ ಮಾತನ್ನು ಮುಗಿಸಿದನು. ದಿಕ್ಕು ತೋಚದೆ ಮುನಿಯಮ್ಮ ಗೌಡನಲ್ಲಿ ಪಿರ್ಯಾದು ಮಾಡಿದಳು.

ಗೌಡನೂ ಊರ ಇನ್ನು ಕೆಲವರು ದೊಡ್ಡವರೂ ಚಾವಡಿಯಲ್ಲಿ ಕುಳಿತಿರಬೇಕಾದರೆ ಮುನಿಯಮ್ಮನ ಕೂಗಾಟ ಅವರ ಕೆಲಸವನ್ನು ಕೆಡಿಸಿತು. ನರಸ ಅಸಡ್ಡೆಮಾಡಿದ ಹಾಗೆ ಗೌಡ ಈ ಮಾತನ್ನು ಬಿಡುವಂತಿರಲಿಲ್ಲ. ಊರಿನ ಹೆಸರು ಕೆಟ್ಟೀತು ಎಂದು ಅವನಿಗೆ ಯೋಚನೆ. ತನ್ನ ಊರಿನ ನಾಯಿಂದನ ಮಗನನ್ನ ಯಾರೋ ದೊಂಬರ ಹುಡುಗಿ ಹಾರಿಸಿಕೊಂಡು ಹೋದಳು ಎಂದರೆ, ಬೇಟೆಗಾರನ ನಾಯನ್ನು ನರಿ ಎತ್ತಿಕೊಂಡು ಹೋದ ಹಾಗೆ, ಗೌಡನ ಗೌಡಿಕೆಯ ಮರ್ಯಾದೆಗೆ ಕಡಮೆ. ಅವನು ತೋಟಿ ಮರಿಯನನ್ನು ಕರೆದು "ಲಾ ಮರಿಗ್ಯಾ, ಹೋಗಿ ಆ ವೆಂಕಟಶಾಮೀನಾ ಆ ದೊಂಬರ ಯಜಮಾನನ್ನ ಕರೆತಾರೋ'' ಎಂತ ಹೇಳಿದನು. ಗೌಡ ಮಗನನ್ನ ಹೇಗಾದರೂ ಉಳಿಸಿಕೊಡುತಾನೆ ಎಂತ ಮುನಿಯಮ್ಮ ಮನೆಗೆ ಹೋದಳು.

ವೆಂಕಟಶಾಮಿಯನ್ನು ಕರೆದುತರುವುದಕ್ಕೆ ಮರಿಗಾ ಹೋಗಬೇಕಾಗ ಲಿಲ್ಲ. ಊಟದ ಹೊತ್ತಿಗೆ ಅವನೇ ಮನೆಗೆ ಬಂದ. ಆಗ ನರಸ ಊಟಕ್ಕೆ ಕೂತಿದ್ದ. ಮುನಿಯಮ್ಮ ಮಗನನ್ನು, ಏನೋ ಶಾಮಿಗಾ ನಿನ್ನೆ ಮನೆಗೇ ಬರಲಿಲ್ಲ, ಎಂದು ಕೇಳಿದಳು. ನರಸ ಅವನನ್ನು ಮಾತನಾಡುವುದಕ್ಕೆ ಬಿಡದೆ, ಏನೋ ಕೆಲಸ ಇತ್ತು ಪಕ್ಕದ ಊರಾಗೆ ಇದ್ದ, ಅದಕ್ಕೇನು ಅಷ್ಟು ಯಿಶಾರಣೆ, ಎಂದ. ವೆಂಕಟಶಾಮಿ ಕೈಕಾಲು ತೊಳೆದುಕೊಂಡು ತಂದೆಯ ಜೊತೆಗೆ ಊಟಕ್ಕೆ ಕೂತ. ಅವನ ತಾಯಿಗೆ ಆ ದೊಂಬರ ಹುಡುಗಿಯ ಮಾತನ್ನು ಎತ್ತಬೇಕು ವಿಷಯ ಫೈಸಲು ಮಾಡಬೇಕು ಎಂತ ಆತುರ; ಆದರೆ ಗಂಡ ಪ್ರಾಯಶಃ ಚರ್ಚೆಗೆ ಅಡ್ಡಿ ಬರುತಾನೆ ಎಂತ ಸಂದೇಹ. ಇದರಲ್ಲಿ ಅವಳು ಎಲ್ಲೋ ಮನಸ್ಸಾಗಿ ಮಗನಿಗೆ ಬಡಿಸಿದಳು. ಅರ್ಧ ಊಟ ಆಗಿರಬೇಕಾದರೆ ವೆಂಕಟಶಾಮಿ ತಂದೆಯನ್ನ "ಅಪ್ಪಾಜಿ ನಾನು ನಿನ್ನ ಒಂದು ಮಾತು ಕೇಳಬೇಕು ಅಂತ ಇದ್ದೆ'' ಎಂದ.

"ಏನಪ್ಪಾ ಅದು?"

"ನಾನು ಮೊನ್ನೆ ರಾಯರ ಮಗನಿಗೆ ಕೆಲಸ ಮಾಡಿದಾಗ ಅವರು, ವೆಂಕಟಶಾಮಿ ನಿನ್ನ ಕೈ ಬಹಳ ನಯವಾಗಿದೆ, ಇಷ್ಟು ನಯವಾಗಿ ಕೆಲಸ ಮಾಡುವವರು ಬೆಂಗಳೂರಲ್ಲೂ ಇಲ್ಲ, ನೀನು ಬೆಂಗಳೂರಿಗೆ ಬಂದರೆ ತಿಂಗಳಿಗೆ ಮೂವತ್ತು ರೂಪಾಯಿ ಸಂಪಾದಿಸಬಹುದು, ಎಂದರು. ನಾನು ಬೆಂಗಳೂರಿಗೆ ಹೋಗೋಣ ಎಂತ ಮಾಡಿದೇನೆ ಅಪ್ಪಾಜಿ."

ಮುನಿಯಮ್ಮ "ಏನೋ ಶಾಮಿಗ, ನಿಮ್ಮಪ್ಪನ್ನ ಕೇಳಿಬಿಟ್ಟರೆ ಆಯ್ತು ಅಲ್ಲೀ? ಅಮ್ಮನಿಗೆ ಹೇಳೋದು ಕೇಳೋದು ಏನೂ ಬೇಡ" ಎಂದಳು.

ವೆಂಕಟಶಾಮಿ "ನಿನ್ನ ಕೇಳದೀರ ಹೋಗುತೀನ ಅಮ್ಮ. ನೀವಿಬ್ಬರೂ ಇದೀರಾ ಎಂತಲೇ ಈಗ ಹೇಳಿದ್ದು" ಎಂದ.

ತಂದೆ: "ಹೋಗುವಂತೆ."

ವೆಂಕಟಶಾಮಿ: "ನಾಳೆ ನಾಡಿದ್ದರಲ್ಲಿ ಹೋಗೋಣ ಅಂತಿದೀನಿ."

ತಂದೆ: "ನೋಡೋಣಂತೆ. ಶಾನುಭೋಗರನ್ನ ಕೇಳಬೇಕು; ಗೌಡರನ್ನ ಕೇಳಬೇಕು. ಊರ ಬಿಟ್ಟು ಹೋಗೋ ಮಾತು; ಧಣಿಗಳು ಒಪ್ಪಬೇಕೋ ಇಲ್ಲೋ."

ಮುನಿಯಮ್ಮ: "ಶಾನುಭೋಗರೂ ಗೌಡರೂ ಹೋಗಬಹುದು ಅಂದರೆ ಮಗನ್ನ ಬೆಂಗಳೂರಿಗೆ ಕಳುಹಿಸತೀ ಏನು? ಇರೋ ಒಬ್ಬ ಮಗನ್ನ ಬೆಂಗಳೂರಿಗೆ ಕಳುಹಿಸಿ ನಾನೂ ನೀನೂ ಇಲ್ಲಿ ಸರಸಗಳಾಡುತಾ ಇರೋಣ" ಎಂದಳು.

ತಂದೆ "ಏನೆ ಇದು ಮನೆ ಯಜಮಾನತಿ ಬಹಳ ಬಾಯಿ ಬಿಚ್ಚತಾ ಇದೀಯಾ. ಮಗ ದೊಡ್ಡವನಾದ ಅಂತಲೋ. ಶಾನೆ ಮಾತ ಆಡಬೇಡ. ಮುಚ್ಚಿರಲಿ ಬಾಯಿ" ಎಂದ. ಮುನಿಯಮ್ಮ ಗೊಣಗುಟ್ಟಿಕೊಂಡು ಸುಮ್ಮನಾದಳು. ವೆಂಕಟಶಾಮಿಯಾ ತಂದೆಗೆ ನಿಜವಾಗಿ ಮನಸ್ಸಿನಲ್ಲಿ ಬಹಳ ಭಯ ಹುಟ್ಟಿತ್ತು. ಈ ಬೆಂಗಳೂರಿನ ಪ್ರಯಾಣಕ್ಕೂ ಆ ದೊಂಬರ ಹುಡುಗಿಗೂ ಏನೋ ಸಂಬಂಧ ಇದೆ ಎಂದು ಅವನಿಗೆ ತೋರಿತು. ಮಗನು ಆ ಹುಡುಗಿಯನ್ನು ಕಟ್ಟಿಕೊಂಡು ಹತ್ತು ದಿನ ಓಡಿಯಾಡಿದ್ದರೆ ಅವನು ಬೇಡವೆನ್ನುತ್ತಿರಲಿಲ್ಲ. ನಾಲ್ಕು ಜನದಲ್ಲಿ ಸ್ವಲ್ಪ ತಲೆ ಬಗ್ಗಿಸಬೇಕಾಗುವುದು.

ಆದರೆ ಮಾತು ಬಂದಾಗ, ತಿಳಿಯದ ಹುಡುಗ, ಎಂದರಾಯ್ತು. ಈಗ ಯಾಕೋ ಗ್ರಾಮದಲ್ಲಿ ಉಳಿಯುವ ಸಂದರ್ಭ ಕಾಣಲಿಲ್ಲ. ಈ ಮಗ ಬೆಂಗಳೂರಿಗೆ ಹೋಗೋಣ. ಗ್ರಾಮಕ್ಕೆ ಬೇರೆ ನಾಯಿಂದ ಬರೋಣ. ತನ್ನ ಇನಾಮತಿಯನ್ನು ಕಿತ್ತುಕೊಳ್ಳೋಣ. ಆ ಇನಾಮತಿಯಲ್ಲಿ ಬರುವ ಬೆಳೆ ಅಷ್ಟೇನೂ ಇಲ್ಲ. ಆದರೆ, ಇನಾಮು ಹಿಡಿದಿರುವ ಮರ್ಯಾದೆ, ಗ್ರಾಮದ ನೌಕರ ಎನ್ನುವ ಹೆಮ್ಮೆ, ಇದೆಲ್ಲಾ ದೊಡ್ಡದು. ಇದಕ್ಕೇನು ಗತಿ. ಮಗ ಹುಡುಗಿಯ ಮಾತನ್ನು ಏನಾದರೂ ಎತ್ತಿದ್ದರೆ, ಹೀಗೆಲ್ಲಾ ಮಾಡಬಾರದೋ, ಎಂದು ಬುದ್ಧಿ ಹೇಳಬಹುದಾಗಿತ್ತು. ಇದಕ್ಕೆ ಈಗ ಅವಕಾಶವಿಲ್ಲ. ತಂದೆಯಾದವನು ಬೆಳೆದ ಮಗನಿಗೆ ತಾನಾಗಿ ಇಂತ ಮಾತನ್ನೆತ್ತಿ ಹೇಳುವುದಕ್ಕಾಗುವುದಿಲ್ಲ. ಏನು ಮಾಡುವುದೆಂದು ತೋರದೆ ಅವನು ಊಟ ಮುಗಿಸಿಕೊಂಡು ಗೌಡನ ಬಳಿಗೆ ಹೋದನು. ಅವನು ಹಾಗೆ ಹೋಗುತ್ತಲೇ ಇಲ್ಲಿ ಮುನಿಯಮ್ಮ "ಎಲಾ ಶಾಮಿಗಾ ಊರಜನ ಎಲ್ಲಾ ಏನೇನೋ ಅಂತಾರಲ್ಲಾ ಅಪ್ಪಾಜಿ. ಇಂಥಾ ಮಾತಿಗೆ ಸಿಕ್ಕಬಹುದೇನೋ" ಎಂದಳು.

"ಏನಂತಾರಮ್ಮ?"

"ಆ ದೋಂಬರ ಹುಡುಗೀನ ಕಂಡು ಮರುಳಾದ ಅಂತಾರಲ್ಲೋ. ಯಾವಾಗಲೂ ಅವರ ಜೊತೆಯಲ್ಲೇ ಇರುತೀಯಂತಲ್ಲ?"

"ಹೌದಮ್ಮ."

"ಹಿಂಗೆ ಮಾಡಬೌದೇನೋ?"

"ಬೌದೋ ಗಿವ್ದೋ ಅವಳ ಬಿಟ್ಟು ನಾನಿರಲಾರೆ ಅಮ್ಮ."

"ಹಿಂಗನ್ನೋರುಂಟೇನೋ, ಹೆತ್ತೋರು ಸಾಕಿದೋರ ಮರ್ಯಾದಿ ಬೇಡವಾ, ಜಾತಿಯೋರು ಏನೆಂದಾರು ಅಂತ ಭಯ ಬೇಡವಾ?"

"ಅದಕ್ಕೇ ಕಾಣಮ್ಮ ಬೆಂಗಳೂರಿಗೆ ಹೋಗುತೀನಿ ಅಂದದ್ದು."

"ಬೆಂಗಳೂರಿಗೆ ಅವಳೂ ಬರುತ್ತಾಳೇನೋ."

"ಬಂದರೂ ಬರಬಹುದು. ಇಲ್ಲಂತೂ ಅವಳು ನನಗೆ ಸಂಸಾರ ಮಾಡೋಹಂಗಿಲ್ಲ. ಬೆಂಗಳೂರಿಗೆ ಹೋಗಿ ನೋಡ್ತೀನಿ."

"ಅಪ್ಪನ್ನ ಅಮ್ಮನ್ನ ಮರೆತುಬಿಟ್ಟು?"

"ಯಾಕೆ ಮರೀತೀನಮ್ಮ, ದುಡ್ಡು ಕಳುಹಿಸುತೀನಿ."

"ಅಂದರೆ ದೊಂಬರ ಹುಡುಗೀನ ನನ್ನ ಸೊಸೆ ಅನ್ನಬೇಕೇನೋ ನಾನು?"

"ಅಮ್ಮ ಅದು ಬಂಗಾರದಂತ ಹುಡುಗೀಮ್ಮ."

"ಹೌದಪ್ಪಾ ಹೌದು. ಅವಳು ನಿನಗೆ ಬಂಗಾರ, ನೋಡಿದವರಿಗೆಲ್ಲಾ ಬಂಗಾರ, ಅವರಪ್ಪನಿಗೆ ಬಂಗಾರ." ಮುನಿಯಮ್ಮ ಅಳುತ್ತಾ ಕುಳಿತಳು.

ವೆಂಕಟಶಾಮಿ ಯೋಚನೆಮಾಡುತ್ತಾ ಕುಳಿತು ಇಷ್ಟು ಮಾತನ್ನಾಡಿದ್ದನು. ಇನ್ನು ಈ ಚರ್ಚೆಗೆ ಕೊನೆ ಕಾಣದೆ ಎದ್ದು ಬೀದಿಗೆ ನಡೆದನು. ಮುನಿಯಮ್ಮ ಹೊರಕ್ಕೆ ಬಂದು ನೋಡಿದ್ದರೆ ಅವನು ದೊಂಬರು ಇಳಿದಿದ್ದ ಊರಿನ ಕಡೆ ಹೋದದ್ದು ತಿಳಿಯುತ್ತಿತ್ತು.

ವೆಂಕಟಶಾಮಿಯ ತಂದೆ ಗೌಡನ ಹತ್ತಿರ ಬರುವ ವೇಳೆಗೆ ಗೌಡನ ಸಂಗಡ ದೊಂಬರ ಯಜಮಾನ ಮಾತನಾಡುತ್ತಿದ್ದ.

"ಹೌದು ಮಾಸೋಮಿ, ಊರ ಗೌಡಗೋಳು ನೀವು ಯಿಶಾರಿಸಿ ಸರಿಪಡಿಸದೀರ ಇದ್ದರೆ ನಮ್ಮಂತವರ ಗತಿಯೇನು. ನಾವು ಕಾಗೆ ತಿಂಬೋರು. ಇವರು ಕೋಳಿ ತಿಂಬೋರು. ಈ ಹೈದ ಬಂದು ನಮ್ಮ ಸಂಬಂದ ಬೇಡೋದುಂಟೆ. ಇವ ಬಂದು ನಮ್ಮ ಹುಡುಗೀನ ಹಾರಿಸಿಕೊಂಡು ಹೋದರೆ ನಮ್ಮ ಜೀವನ ಹೆಂಗಾಗೋದು? ನಾನು ಮುದುಕನಾದೆ. ನನ್ನ ಹೆಂಡರು ಗಡೆ ಹತ್ತೋಹಂಗಿಲ್ಲ. ಹೈಕಳು ಇನ್ನಾ ಸಣ್ಣೋರು. ಗಡೇ ಮುರಿದು ಒಲೇ ಹಚ್ಚೀ ಅದರಾಗೆ ನಾವು ಏನು ಅಡೋದು?"

ಗೌಡ "ನಿನ್ನ ಮಗಳನ್ನ ಅವನ ಜೊತೆಗೆ ಹೋಗಬೇಡ ಅಂದರಾಗದೇನೋ?" ಎಂದು ಹೇಳಿ, ಆ ವೇಳೆಗೆ ನರಸ ಬರಲು ಅವನನ್ನು ಕುರಿತು "ನಿನ್ನ ಮಗನ ಮಾತೋ" ಎಂದನು. ನರಸ ಬಂದು ಸುಮ್ಮನೆ ಕೂತನು. ದೊಂಬರವನು "ಹೇಳಿ ಆಯಿತು ಮಾಸೋಮಿ, ಅವಳಿಗೂನೂ ಅಪ್ಪ ಅಮ್ಮನ್ನ ಬಿಡೋ ಇಷ್ಟ ಅಷ್ಟಿಲ್ಲ. ಆದರೂ ಈ ಪ್ರಾಯಸ್ಥನ್ನ ಕಂಡರೆ ಮನಸ್ಸು ಕದಲತದೆ ಅಂತ ಕಾಣತದೆ. ಅಳುತಾ ಕುಳಿತವಳೆ. ಹಂಗೂ ಹಿಂಗೂ ಮಾಡಿ ಇವನ್ನ ನಮ್ಮ ಮನೆ ತಾವಲಿಂದ ಅಟ್ಟದೆ. ಇನ್ನೈದಾರು ದಿನ ನಾವೇನೂ ಗಡೆ ಕಟ್ಟುವ ಹಂಗಿಲ್ಲ. ಎಲ್ಲೋ ಜ್ಞಾನ

ವಾಗಿ ಅವಳು ಅಲ್ಲಿಂದ ಬಿದ್ದರೆ ಏನುಮಾಡೋದು. ದೊಡ್ಡ ಧಣಿಗಳು ನಿಮ್ಮಿಂದ ಬದುಕೋನ ಅಂತ ಬಂದಿವಿ. ಈಗ ಹಿಂಗಾಗಿಬಿಟ್ಟದೆ" ಎಂದನು.

ವೆಂಕಟಶಾಮಿಯ ತಂದೆ ಇದನ್ನೆಲ್ಲ ಕೇಳಿದ. ಹಾಗಾದರೆ ಭಯವಿಲ್ಲ ಎಂದುಕೊಂಡ. ಗೌಡನಿಗೆ "ನಾನು ಇದೇ ಮಾತೇ ಹೇಳೋಣ ಅಂತ ಬಂದೆ. ಇವರೂ ಬೇಡ ಎಂತ ನಾವೂ ಬೇಡ ಎಂತ ಹೇಳುತಿರುವಾಗ ಇನ್ನೇನು? ನಾಲ್ಕು ಜನ ದೊಡ್ಡವರು ಛೀಗುಟ್ಟಿದರೆ ಆಯ್ತು" ಎಂದ. ಸ್ವಲ್ಪಹೊತ್ತು ಮಾತನಾಡಿದ ಮೇಲೆ ದೊಂಬರು ನಮ್ಮೂರಿಂದ ದೂರದ ಊರಿಗೆ ಹೊರಟುಹೋಗಬೇಕೆಂದೂ ಇಲ್ಲಿ ಇವರು ವೆಂಕಟಶಾಮಿಯ ಮೇಲೆ ಕಾವಲು ಹಾಕುವುದೆಂದೂ ಏರ್ಪಾಡಾಯಿತು. ಅವರವರು ಅವರವರ ಮನೆಗೆ ಹೋದರು.

ದೊಂಬರು ದೂರದ ಹಳ್ಳಿಗೇನೋ ಹೋದರು. ಆದರೆ ಎಷ್ಟುದೂರ ಹೋದರೆತಾನೆ ವೆಂಕಟಶಾಮಿಗೆ ಸಿಕ್ಕದಷ್ಟು ದೂರ ಆದೀತು? ಅಲ್ಲದೆ ನಿಜವಾಗಿ ಅದು ಬಹಳ ದೂರವೂ ಅಲ್ಲ. ನಮ್ಮ ಈ ಬಯಲುಸೀಮೆಯಲ್ಲಿ ನಾಲ್ಕು ಹಳ್ಳಿ ಆಚೆ ಹೋದರೆ ಬಹಳ ದೂರ ಎಂತ ಲೆಕ್ಕ. ಒಂದು ಹಳ್ಳಿಯಲ್ಲಿ ನಿಂತರೆ ಇನ್ನೊಂದು ಹಳ್ಳಿ ಕೈಗೆ ಸಿಕ್ಕುವಹಾಗೆ ಇರುತ್ತದೆ. ಬೇಕು ಎಂದರೆ ಪ್ರಾಯದ ಹುಡುಗ ಒಂದು ದಿನಕ್ಕೆ ಇಂಥಾ ಹತ್ತು ದೂರವನ್ನು ಅಳೆಯಬಹುದು. ವೆಂಕಟಶಾಮಿ ಆ ಹುಡುಗಿಯ ಹತ್ತಿರ ಹೋಗುವುದನ್ನ ಬಿಡಲಿಲ್ಲ. ಮನೆಯಲ್ಲಿ ತಾಯಿ ಗಲಾಟೆ ಮಾಡುತಾಲೇ ಇದ್ದಳು. ತಂದೆ ಕೂಡ ಘುಖಕೊಟ್ಟು ಮಾತನಾಡದೆ ತನ್ನ ಕೋಪವನ್ನ ತೋರಿಸುತಾ ಇದ್ದ. ವೆಂಕಟಶಾಮಿ ಲಕ್ಷ್ಯಮಾಡಲಿಲ್ಲ. ಭಾನುವಾರ ಭಾನುವಾರ ನಾವು ಹುಡುಗರು ಈ ಕೆರೆ ಇದೆಯಲ್ಲಾ ಇದರಾಚೆ ಗಿಡದಲ್ಲಿ ಕಾರೆಹಣ್ಣು ಮಿರುಪೇಹಣ್ಣು ಬುಡುಮೇಕಾಯಿ ಏನು ಸಿಕ್ಕಿದರೆ ಅದನ್ನು ತಿನ್ನುವುದಕ್ಕೆ ಅಲೆಯುತ್ತಾ ಇದ್ದೆವು. ಒಂದು ಭಾನುವಾರ ನಾವು ಅಲ್ಲಿ ಹೋದಾಗ ವೆಂಕಟಶಾಮಿಯೂ ಆ ಹುಡುಗಿಯೂ ಅಲ್ಲಿ ಇದ್ದರು. ವೆಂಕಟಶಾಮಿಯ ಕೈಲಿ ಒಂದು ಬಿಲ್ಲು ಇತ್ತು. ಅವನು ಆ ದೊಂಬರ ಹುಡುಗಿಗಾಗಿ ಕಾಗೆಗಳನ್ನು ಹೊಡೆಯುತ್ತಿದ್ದನು. ನಮ್ಮ ಜೊತೆಗೆ ಬಂದಿದ್ದ ದೊಡ್ಡ ಹುಡುಗರು ವೆಂಕಟಶಾಮಿಯ ಜೊತೆಯಲ್ಲಿ ಹುಡುಗಿ ಇರುವುದನ್ನೂ ಅವಳಿಗಾಗಿ

ಅವನು ಮಾಡುತ್ತಾ ಇರುವ ಕೆಲಸವನ್ನೂ ನೋಡಿ ನಕ್ಕರು. ಆ ಹುಡುಗಿ ಸೆರಗಿನಿಂದ ಮುಖ ಮರೆಸಿಕೊಂಡಳು. ವೆಂಕಟಶಾಮಿ ಏನೂ ನಾಚಿ ಕೊಳ್ಳಲಿಲ್ಲ. ನನಗೆ ಆಗ ನನ್ನ ಜೊತೆಯವರ ಈ ನಗು ಏಕೆ ಎಂದು ತಿಳಿಯಲಿಲ್ಲ. ಆಮೇಲೆ ಇವರೆಲ್ಲಾ "ನೋಡಿದಾ, ಹುಡುಗೀನ ಒಲಿಸಿ ಕೊಳ್ಳೋಕೆ ನಾಯಿಂದ ಕಾಗೆ ಹೊಡೆಯೋಕೆ ಹೊರಟಿದಾನೆ" ಎಂದ ಮಾತು ಊರಲ್ಲೆಲ್ಲಾ ಹರಡಿತು. ಈಗಲೂ ಈ ಕಡೆ, ದೊಂಬರ ಜೊತೇಗೆ ಚೋಸ್ತೀಮಾಡಿ ನಾಯಿಂದ ನಾಯಿ ತಿಂದ, ಎಂತ ಒಂದು ಗಾದೆ ಇದೆ.

ಆ ದಿನವೋ ಆ ಮಾರನೆಯ ದಿನವೋ ನಮ್ಮೂರ ಗೌಡರ ಮನೆಯ ಮರಿಯಪ್ಪ ಸ್ವಲ್ಪ ಹೊತ್ತಾದ ಮೇಲೆ ಈ ದಾರಿಯಲ್ಲಿ ಬರುತ್ತಾ ಇದ್ದನಂತೆ. ಇಲ್ಲಿ ಹುಲ್ಲಿನ ಮೇಲೆ ಯಾರೋ ಇಬ್ಬರು ನಿಂತಿದ್ದಂತಿತ್ತು. ಭೂತ ಅಲ್ಲ ಅಂತ ತಿಳಿದುಬಿಟ್ಟರೆ ಅವನೇನು ಯೋಚನೆ ಮಾಡುವವನಲ್ಲ. ಅದನ್ನು ಖಾತರಿ ಮಾಡಿಕೊಳ್ಳುವುದಕ್ಕೆ ಅವನು, ಯಾರದು, ಎಂದ. ವೆಂಕಟಶಾಮಿ, ನಾನು ಮರಿಯಣ್ಣಾ, ಎಂದ. "ಏನೋ ಈಸೊತ್ತನಾಗ ಇಲ್ಲಿ." "ನಮ್ಮ ಪಡ್ಡೆ ಎಲ್ಲೋ ಹೋಗಿತ್ತು ಹುಡುಕಿಕೊಂಡು ಬಂದೆ." "ವೆಂಕಟಶಾಮಿ ಏನೋ? ಸರಿಬಿಡು" ಎಂದು ಮರಿಯಣ್ಣ ಎರಡು ಹೆಜ್ಜೆ ಇಟ್ಟು ತಿರುಗಿ ನೋಡಿ "ಪಡ್ಡೆ ಸಿಕ್ಕಿರುವಹಂಗಿದೆಯಲ್ಲಾ" ಎನ್ನುತ್ತಾ ಮುಂದಕ್ಕೆ ಹೊರಟುಹೋದ. ಮರಿಯಪ್ಪನ ಹಾಸ್ಯದ ಮಾತಿಗೆ ವೆಂಕಟಶಾಮಿ ಉತ್ತರ ಹೇಳಲಿಲ್ಲ. ಮರಿಯಪ್ಪ ಪಡ್ಡೆ ಎಂದದ್ದು ಹುಡುಗನ ಜೊತೆಗಿದ್ದ ಹೆಣ್ಣನ್ನು.

ಇದಾದ ಕೆಲವು ದಿನದ ಮೇಲೆ ಒಂದು ರಾತ್ರಿ ಎಲ್ಲರೂ ಮಲಗಿರುವಾಗ ವೆಂಕಟಶಾಮಿ ಮನೆಯ ಹತ್ತಿರ ಬಂದು ಬಾಗಿಲು ತಟ್ಟಿದ. ಅವರ ತಾಯಿ ಬಾಗಿಲು ತೆರೆಯಲಿಲ್ಲ. ಅವನು ಇನ್ನೊಂದು ಸಲ ತಟ್ಟಿದ. ತಂದೆ, ಬಾಗಿಲು ತೆಗೆಯಲಿಲ್ಲೇನೇ ನಾ ತೆಗೀಲಾ, ಎಂದ. ತಾಯಿ, ಈ ಪೋಲಿ ಮುಂಡೇದಕ್ಕೆ ಬಾಗಿಲೇನ ತೆಗೆದೀಯ, ಮಲಗಿಕೋ, ಇವನು ಬಂದ ಹೊತ್ತಿಗೆ ಬಾಗಿಲು ತೆಗೆಯೋಕೆ ಇದೇನು ಇವನ ಸೂಳೆಮನೇನ, ಎಂದಳು. ವೆಂಕಟಶಾಮಿ ತಾಯಿ ಮಾತನಾಡಿದ್ದನ್ನ ಕೇಳಿದನು. ಬೇಕೆಂದೇ ಬಾಗಿಲು ತೆಗೆಯಲಿಲ್ಲವೆಂದು ತಿಳಿದುಕೊಂಡು ಹೊರಟುಹೋದನು. ಅವನು ಎಲ್ಲಿ ಹೋದನೋ ಮೂರು ನಾಲ್ಕು ದಿನ ಯಾರಿಗೂ ತಿಳಿಯಲಿಲ್ಲ. ವಿಚಾರಿ

ಸಿದ್ದರಲ್ಲಿ ದೊಂಬರ ಹುಡುಗಿಯ ಜೊತೆಗೆ ಎಲ್ಲಿಯೋ ಹೊರಟುಹೋಗಿರ ಬೇಕೆಂದು ತಿಳಿಯಿತು. ದೊಂಬರ ಯಜಮಾನ ಬಂದು ಗೌಡನಲ್ಲಿ ದುಃಖ ಹೇಳಿಕೊಂಡು ಹೋದನು. ಯಾರೇನು ಮಾಡುವುದು? ಎಲ್ಲರೂ ಸುಮ್ಮ ನಾದರು. ನಾಲ್ಕು ದಿನದ ಮೇಲೆ ಇಲ್ಲಿಗೆ ಐದು ಮೈಲಿ ದೂರದ ಒಂದು ಹಳ್ಳಿಯ ಗೌಡ, ತಾನಿತ್ತಲಾಗಿ ಬರುತ್ತಾ, ತಮ್ಮೂರಿನಲ್ಲಿ ಜ್ವರದಲ್ಲಿ ಮಲಗಿದ್ದ ವೆಂಕಟಶಾಮಿಯನ್ನು ಅವರ ತಂದೆಯ ಮನೆಗೆ ಕರೆತಂದನು. ದೊಂಬರ ಹುಡುಗಿ ಅವನ ಜೊತೆಗೆ ಅಲ್ಲಿ ಇದ್ದಳಂತೆ. ಆ ವೇಳೆಗೆ ಅವಳ ತಂದೆ ಅವಳನ್ನ ತನ್ನ ಮನೆಗೆ ಕರೆದುಕೊಂಡು ಹೋಗಿದ್ದನು. ವೆಂಕಟಶಾಮಿ ದೊಡ್ಡ ಕಾಯಿಲೆಯಲ್ಲಿ ತಾಯ ಮನೆಗೆ ಬಂದು ಮಲಗಿದನು.

ಅವನು ಆ ಜ್ವರದಿಂದ ಮೇಲಕ್ಕೆ ಏಳಲಿಲ್ಲ. ಅವನು ಬಹಳ ಚೆನ್ನಾದ ಹುಡುಗ. ದೊಡ್ಡ ಮುಖ. ಕಪ್ಪು ನಿಜ; ಆದರೆ ಬಹು ಸೊಗಸಾದ ಕಪ್ಪು. ಆ ಮುಖದ ಕಪ್ಪು, ಆ ಮೀಸೆಯ ಕೂದಲಿನ ಕಪ್ಪು, ಆ ಕಣ್ಣಿನ ಗುಡ್ಡಿನ ಕಪ್ಪು, ಇವು ಮೂರು ಜಾತಿಯ ಚೆಲುವಾದ ಕಪ್ಪು ಬಣ್ಣಗಳು. ಮುಖ ಕಪ್ಪಗಿದ್ದದ್ದರಿಂದ ಅವನು ನಕ್ಕರೆ ಮೋಡ ಮಿಂಚಿದಂತೆ ಕಾಣು ವುದು. ಅಚ್ಚುಕಟ್ಟಾದ ಮೈ: ಸುತ್ತಿಗೆ ತೆಗೆದುಕೊಂಡು ಹೊಡೆದರೆ ಸಗ್ಗಲಾರದೆನ್ನುವಂತಿತ್ತು. ಇಂಥ ಹುಡುಗನಿಗೆ ಬಂದ ಜ್ವರ ಬಿಡುವುದಕ್ಕೆ ಇಷ್ಟವಿಲ್ಲವೆಂಬಂತೆ ಪಟ್ಟಾಗಿ ಹಿಡಿಯಿತು. ಈಚೆಗೆ ಇದನ್ನು ವಿಷಮಶೀತ ಜ್ವರ ಎಂದು ಬೇಗನೆ ಗುರುತಿಸುತ್ತಾರೆ. ಆಗಿನ ದಿವಸದಲ್ಲಿ ಇದು ಯಾರಿಗೂ ತಿಳಿಯದು. ಆಗ ಇಲ್ಲಿಯ ಜನರಿಗೆ ನಾಲಿಗೆಗೆ ದೋಷ ಬಂತು ಎನ್ನುವುದು ಒಂದು ಗೊತ್ತು. ವೆಂಕಟಶಾಮಿಗೆ ಹಳ್ಳಿ ಔಷಧಿಗಳೇನೇನನ್ನೋ ಕೊಟ್ಟರು. ಹಳ್ಳಿಯ ಪಥ್ಯ ಆಯಿತು. ಆಮೇಲೆ ಹದಿನೈದು ದಿವಸದಲ್ಲಿ ವೆಂಕಟಶಾಮಿ ತೀರಿಹೋದ. ಜ್ವರದಲ್ಲಿ ಅವನ ಕನವರಿಕೆಯೆಲ್ಲಾ ಆ ದೊಂಬರ ಹುಡುಗಿಯ ಜೊತೆಗೆ ಓಡಾಡುತ್ತಿದ್ದಂತೆ ಇತ್ತು. ಮಧ್ಯೆ ಎಚ್ಚರವಾದಾಗ ಅವಳನ್ನು ಕರೆಯಿಸಿ ಎಂದು ಹೇಳಿದನು. ಕೈಹಿಡಿದ ಹೆಂಡತಿಯಾದರೆ ಇಂಥ ಸಂದರ್ಭ ದಲ್ಲಿ ಕರೆಕಳುಹಿಸುವುದೂ ಅಯ್ಯೋ ಪಾಪ ಎನ್ನುವುದೂ ನ್ಯಾಯವೆಂದು ಕಾಣುತ್ತದೆ. ಹುಡುಗನನ್ನ ತಪ್ಪುದಾರಿಗೆ ಎಳೆದು ಅವನೊಡನೆ ಪೋಲಿ ತಿರುಗಿದ ದೊಂಬರ ಹುಡುಗಿಯನ್ನ ಜ್ವರದ ಹಾಸಿಗೆಯ ಬಳಿಗೆ ಕರೆತಂದು

ಕುಳ್ಳಿರಿಸುತಾರೆಯೆ? ಕೊನೆಗೂ ವೆಂಕಟಶಾಮಿ ಅವಳನ್ನು ನೋಡಲಿಲ್ಲ. ತೀರಿಹೋಗುವ ಮೊದಲು ಅವನಿಗೆ ಮನಸ್ಸಿಗೆ ತೋರಿತೆಂದು ಕಾಣುತ್ತದೆ. ಅವನು ಅಪ್ಪನಿಗೆ, ಅಪ್ಪ ನಾನು ಒಂದು ಮಾತು ಕೇಳುತೇನೆ ಮಾಡಿ ಕೊಡುತೀಯಾ, ಎಂದ. ತಂದೆ ಯಾಕೋ ಏನಾಗ್ತದೆ ಎಂದ. ಮಗ "ಏನೂ ಆಗೋಲ್ಲ. ನನ್ನ ಆಟ ಮುಗಿಯಿತು. ನನಗೆ ನಮ್ಮ ಹೊಲ್ದ ಪಕ್ಕದ ಹುಲ್ಲು ಇದೆಯಲ್ಲಾ ಅಲ್ಲಿ ಜಾಗ ಮಾಡಬೇಕು" ಎಂದ. ಹತ್ತಿರ ಇದ್ದವರು ಯಾರೋ "ಏನು ಮಾತು? ಬಹಳ ಚೆನ್ನಾಗಿದೆಯೆಂತ ಆಡ್ತಾ ಇದ್ದೀ ಏನೋ?" ಎಂತ ಕೇಳಿದರು. ವೆಂಕಟಶಾಮಿ "ನನ್ನ ಚೆನ್ನ ಗಿನ್ನ ಯಾರಿಗೆ ಬೇಕು. ಹೇಳ್ದೀರ ಇದ್ದರೆ ಎಲ್ಲಾದರೂ ಹೂತ್ಬುಬಿಡ್ತಾರೆ" ಎಂದ. ಅವರು, ಹೋಗೋನಿಗೆ ಎಲ್ಲಿ ಹೂತರೆ ಏನು, ಎಂದರು. ವೆಂಕಟ ಶಾಮಿ "ನಾನು ಶಾನೆ ಮಾತ್ನಾಡಲಾರೆ. ಮಾತು ಕೊಟ್ಟೀಯಾಪ್ಪಾ" ಎಂದು ಕೇಳಿದ. ತಂದೆ, ಆಗಲಿ ಅಣ್ಣಾ, ಎಂದ್ರು. ವೆಂಕಟಶಾಮಿ ಒಂದು ಕ್ಷಣ ಬಿಟ್ಟು "ಮೂರು ರಾತ್ರಿ ಅಲ್ಲಿ ಮಲಗಿದ್ವಿ" ಅಂದ. ಸುಮಾರು ಅದೇ ಅವನ ಕೊನೆಯ ಮಾತು ಎಂತ ನನಗೆ ಜ್ಞಾಪಕ.

ವೆಂಕಟಶಾಮಿ ತೀರಿಹೋದ ಮೇಲೆ ಅವನ ಶವವನ್ನು ಅವನ ಇಷ್ಟದ ಪ್ರಕಾರ ಈ ಚೌಕದಲ್ಲಿ ಹೂತರು. ಅವನ ತಂದೆ ತಾಯಿ ಈ ಮರಗಳನ್ನು ನೆಡಿಸಿದರು. ನಾನು ಸಣ್ಣವನಾಗಿರಬೇಕಾದರೆ ಇಲ್ಲಿ ಬರೋದಕ್ಕೆ ಹೋಗೋದಕ್ಕೆ ಸ್ವಲ್ಪ ಹೆದರುತಾನೆ ಇದ್ದೆ ......

೩

ಸ್ನೇಹಿತನು ಹೇಳಿದ ಕಥೆ ಇಲ್ಲಿಗೆ ಮುಗಿಯಿತು. ನಾನು ಆ ದೊಂಬರ ಹುಡುಗಿ ಏನಾಯಿತು ಎಂದೆ. ರಾಮಸ್ವಾಮಿ ನನಗೆ ತಿಳಿಯದು ಎಂದ. ವಿಚಾರಿಸಬೇಕು ಅಂತ ತೋರಲಿಲ್ಲವೇನಯ್ಯ ಎಂದು ನಾನು ಕೇಳಿದೆ. "ಈಗಾಗಿದ್ದರೆ ತೋರಿರಬಹುದಾಗಿತ್ತು; ಅಥವಾ ನನಗೆ ತೋರದೆ ಇದ್ದರೂ ನೀನು ಕತೆ ಬರೆಯುವ ದೊಡ್ಡ ಮನುಷ್ಯ, ನಿನಗೋಸ್ಕರ ವಿಚಾರಿಸಬಹುದಾಗಿತ್ತು; ಆಗ ನಮಗದೆಲ್ಲಾ ಬೇಕಾಗಿರಲಿಲ್ಲ" ಎಂದು ರಾಮಸ್ವಾಮಿ ಉತ್ತರ ಕೊಟ್ಟ. ಆ ವೇಳೆಗೆ ಅಲ್ಲಿ ಒಬ್ಬ ವಯಸ್ಸಾದ

ಗೌಡ ಬಂದು ರಾಮುಸ್ವಾಮಿಯನ್ನು, ಏನು ಸ್ವಾಮಿ ಕೂತುಕೊಂಡೆ, ಎಂತ ಕೇಳಿದನು. ರಾಮುಸ್ವಾಮಿ "ಇವರು ನಮ್ಮ ನ್ಯಾಸ್ತಗಾರ್ರು. ಇವರಿಗೆ ವೆಂಕಟಶಾಮಿ ಕತೆ ಹೇಳಿದೆ" ಎಂದ. ಗೌಡ "ಓ ಹೇಳಿದ್ರೋ ಅಂಗಾದ್ರೆ? ನೋಡಿರ, ನಮ್ಮೂರ ನಾಯಿಂದ ನಮ್ಮೂರಿನ ಕಂಬಳಾನ ಬೇರೆಯವರು ದುಡಿಯೋಹಂಗೆ ಮಾಡಿಹೋದ" ಎಂದನು. ನಾನು "ಪಾಪ ಅವನು ಬದುಕಿದ್ದರೆ ಇನ್ನೂ ಏನು ಸುಖಪಡಬಹುದಾಗಿತ್ತೋ? ಚಿಕ್ಕಂದಿನಲ್ಲೇ ಹೋದ. ನಿಮಗೆ ಯಾರು ಕೆಲಸ ಮಾಡಿದರೆ ಏನು" ಎಂದೆ. ಗೌಡ "ಅದೆಲ್ಲಾ ಬೆಂಗಳೂರ ಮಾತು ಸ್ವಾಮಿ. ಹಳ್ಳೀ ಜನ ಹಂಗನ್ನೋಕಾಗ್ತದೆಯೇ. ನಮ್ಮೂರಿನ ಮಿರಾಸಿಗೆ ಬೇರೆ ಊರಿನೋರು ಹಚ್ಚಡ ಹರ್ದ್ರೋ ಹಂಗಾಯಿತು. ನಮ್ಮ ನಾಯಿಂದನಾದ್ರೆ ಯಾಕೋ ಎನ್ನಬಹುದು. ಈ ಬೇರೆ ಊರ್ನೋರ್ನ ಮಾತ್ನಾಡ್ಸೋಕಿಲ್ಲ" ಅಂದ. ನನಗೆ ವೆಂಕಟಶಾಮಿಯ ಕತೆ, ರಾಮುಸ್ವಾಮಿಯ ಔದಾಸೀನ್ಯ, ಗೌಡನ ಗ್ರಾಮ ಪ್ರೇಮ, ಮನಸ್ಸಿನಲ್ಲಿ ಸುರುಳಿಸುತ್ತಿದುವು. ಮೂವರೂ ಅಲ್ಲಿಂದ ಹೊರಟು ಬಂದೆವು.

ರಾಮುಸ್ವಾಮಿ ಹೇಳಿದ್ದನ್ನು ನಿಮಗೆ ಇಲ್ಲಿ ಹೇಳಿದ್ದೇನೆ. ಇದು ನಿಮಗೆ ಒಂದು ಕಥೆಯೋ ಅಲ್ಲವೋ ನಾನು ಕಾಣೆ. 'ವೆಂಕಟಶಾಮಿಯ ಆ ಒಂದು ತಿಂಗಳ ಓಡಿಯಾಟವನ್ನು ಮನಸ್ಸಿನಲ್ಲಿ ಊಹಿಸಿ ನಾನು ಸ್ವಲ್ಪ ಸಂತೋಷ ವನ್ನೂ ಹೆಚ್ಚಾಗಿ ನೋವನ್ನೂ ಅನುಭವಿಸಿದೇನೆ. ಇದನ್ನು ಕೇಳಿ ನಿಮಗೆ ಯಾವ ಭಾವ ಮನಸ್ಸಿನಲ್ಲಿ ತಲೆದೋರಿದೆಯೋ ನಾನರಿಯೆ. ಅದು ಬೇಸರ ಆಗಿರಲಾರದೆಂದು ಮಾತ್ರ ನಾನು ಆಸೆಯಿಂದ ಕೋರಿದೇನೆ. ಸುಮ್ಮನೆ ಕೇಳುವುದರಲ್ಲಿ ಯಾವ ಭಾವ ತಲೆದೋರಿದರೂ ನಾಯಿಂದರ ಆ ಹುಡುಗನೂ ದೊಂಬರ ಆ ಹುಡುಗಿಯೂ ಪರಸ್ಪರ ಪ್ರೇಮದಲ್ಲಿ, ಈ ದಾರಿಯಲ್ಲಿ, ಆ ಕೆರೆಯ ಬಳಿ, ಅಲ್ಲಿ ಕಾರೆಯ ಗಿಡದಲ್ಲಿ, ಇಲ್ಲಿ ಹೊಲದ ಬಳಿಯ ಚೌಕ ದಲ್ಲಿ, ಸುತ್ತಾಡಿದ ರೀತಿಯನ್ನು ನೀವು ಊಹಿಸುವುದಾದರೆ, ಹುಡುಗನಿಗೆ ಜ್ವರ ಬಂದು ಅವನ ಸಾವಿನಿಂದ ಆ ಪ್ರಣಯ ಮುಗಿಯಿತೆನ್ನುವುದನ್ನು ನೆನೆಯುವಿರಾದರೆ, ಅವನಿಗಾಗಿಯೂ ಅವನನ್ನು ಕಳೆದುಕೊಂಡ ಆ ಹುಡುಗಿ ಗಾಗಿಯೂ ನಿಮ್ಮ ಮನಸ್ಸು ಕರಗುವುದೆಂದು ನನ್ನ ನಂಬಿಕೆ.

# ಮಲೆನಾಡಿನ ಒಂದುಪಿಶಾಚ

೧

ನಾನೂ ರಾಮರಾಯರೂ ಒಂದು ಸಲ ಜೊತೆಯಾಗಿ ಪ್ರಯಾಣ ಮಾಡುತ್ತಿದ್ದಾಗ ಪಿಶಾಚಿಗಳನ್ನು ಕುರಿತ ಕತೆಗಳ ಮಾತು ಬಂದಿತು. ಆ ಕಥೆ ಈ ಕಥೆಯ ಪ್ರಾತನಾಡುತ್ತ ರಾಮರಾಯರು ಅವರ ಸ್ನೇಹಿತ ರೊಬ್ಬರು ತೀರ್ಥಹಳ್ಳಿಯ ಪ್ರಾಂತ್ಯದಲ್ಲಿದ್ದಾಗ ಕೇಳಿದ ಒಂದು ಕತೆಯನ್ನು ಹೇಳಿದರು. ಅದನ್ನು ನಿಮಗೆ ಹೇಳುತ್ತೇನೆ.

೨

ತೀರ್ಥಹಳ್ಳಿಯ ಆಚೆ ಮಲೆನಾಡಿನ ಗುಡ್ಡಗಳ ಮಧ್ಯೆ ಕೊನೆಯಿಲ್ಲದ ಕಾಡುಗಳ ಅಂತರಾಳದಲ್ಲಿ ಒಂದು ಹಳ್ಳಿ. ಅದು ಅಲ್ಲಿಯ ಹಳ್ಳಿಗಳಲ್ಲಿ ದೊಡ್ಡದೆನಿಸಿಕೊಳ್ಳುವಂಥದು. ಆ ಊರಿನಲ್ಲಿ ಒಂದು ಟಪಾಲಾಫೀಸು ಉಂಟು. ಆಫೀಸು ಮತ್ತು ಟಪಾಲು ಪೆಟ್ಟಿಗೆಯ ಕಾವಲಿಗೆ ಒಬ್ಬ ಪೋಸ್ಟುಮೇಸ್ಟರು ಇರುವನು. ದಿನವೊಂದಕ್ಕೆ ಬರುವುದು ಹೋಗುವುದು ಸರಾಸರಿ ಮೂರು ಕಾಗದ ಇರಲಾರದು. ಆದರೂ ಅದಕ್ಕಾಗಿ ವಿಶೇಷ ವಾದ ಏರ್ಪಾಡೂ ಬಹಳ ಖರ್ಚೂ ಹೆಚ್ಚಿನ ಬಂದೋಬಸ್ತೂ. ಅಂಚೆ ಇಲಾಖೆಯವರು ಇಂಥ ಸ್ಥಳಕ್ಕೆ ಕಳುಹಿಸುವುದಕ್ಕಾಗಿ ಪೋಸ್ಟುಮೇಸ್ಟರು ಗಳನ್ನು ಹಿಡಿಯುವುದಕ್ಕೆ ಕಷ್ಟಪಡುತ್ತಾರೆ. ಒಂದು ಸಲ ಅವರು ಈ ಹಳ್ಳಿಗೆ ಕೊಯಮತ್ತೂರಿನ ನರಸಿಂಹನ್ ಎಂಬಾತನನ್ನು ಕಳುಹಿಸಿ ಕೊಟ್ಟರು. ನರಸಿಂಹನ್ ಇನ್ನೂ ತರುಣ. ಇದು ದೂರದ ಸ್ಥಳವಾದರೂ ಸಂಬಳ ತಕ್ಕಮಟ್ಟಿಗೆ ಸಿಕ್ಕುವುದಲ್ಲದೆ ಒಂದು ಅಲೋಯೆನ್ಸ್ ಬೇರೆ ಸೇರಿದ್ದುದರಿಂದ ಈ ಸ್ಥಳಕ್ಕೆ ಹೋಗುವುದಕ್ಕೆ ಒಪ್ಪಿಕೊಂಡನು. ಅಲ್ಲಿ ಹೋಗಿ ಅನುಕೂಲ ಮಾಡಿಕೊಂಡು ಮರಳಿ ಬಂದು ಕರೆದುಕೊಂಡು ಹೋಗುತ್ತೇನೆಂದು ಹೆಂಡತಿಗೆ ಹೇಳಿ ಈ ಹಳ್ಳಿಗೆ ಬಂದು ಸೇರಿದನು.

ಇಂಥ ಊರಿಗೆ ಹೊಸ ಪೋಸ್ಟುಮೇಸ್ಟರು ಬರುವುದೆಂದರೆ ಬೆಂಗಳೂರಿಗೆ ವೈಸರಾಯರು ಬಂದಂತೆ. ಪೋಸ್ಟುಮೇಸ್ಟರು ಒಂದುರೀತಿಯಲ್ಲಿ ಚಕ್ರವರ್ತಿ ಜಾರ್ಜರ ಪ್ರತಿನಿಧಿ ಎಂದೇ ಹೇಳಬೇಕು. ಸಾಮಾನ್ಯವಾಗಿ ಗೌಡರೂ ಶಾನುಭೋಗರೂ ಮಹಾರಾಜಾ ಸರ್ಕಾರದ ಪ್ರತಿನಿಧಿಗಳೆಂಬಂತೆ ಮಾತ್ರ ಅಲ್ಲ. ಇನ್ನು ಒಂದು ವಿಶೇಷದ ಅರ್ಥದಲ್ಲಿ ಪೋಸ್ಟುಮೇಸ್ಟರು ಸಾರ್ವಭೌಮ ಸರ್ಕಾರದ ಪ್ರತಿನಿಧಿ. ಎಲ್ಲರನ್ನೂ ಹೆದರಿಸಬಲ್ಲ ಸ್ಥಳದ ಅಧಿಕಾರಿಗಳು ಪೋಸ್ಟುಮೇಷ್ಟರನ್ನು ಗಟ್ಟಿಯಾಗಿ ಮಾತನಾಡಿಸುವುದಕ್ಕೆ ಹಿಂತೆಗೆಯುತ್ತಾರೆ. ಪೋಸ್ಟುಮೇಸ್ಟರೂ ಕೂಡ ಬುದ್ಧಿವಂತನಾಗಿ ನಡೆದುಕೊಂಡರೆ ಜನರಿಗೆ ಬಹಳ ಬೇಕಾದ ಅಧಿಕಾರಿ ಎನಿಸಿಕೊಳ್ಳುವನು. ಅವನು ಊರಿನ ಪುಂಡರು ಪಟಿಂಗರನ್ನೂ ಸ್ವಲ್ಪ ಭಯದಲ್ಲಿಯೇ ಇರಿಸಬಹುದು. ಬರುವ ಕಾಗದವೆಲ್ಲಾ ಅವನ ಕೈ ಹಾದು ಹೋಗಬೇಕು. ಯಾವ ಸಮಯದಲ್ಲಿ ಯಾವ ಕಾಗದ ಬರುತ್ತದೋ ಅವನು ಅದರಲ್ಲಿ ಒಂದನ್ನು ಹಾರಿಸಿದರೆ ಇವರ ತಲೆ ಹೋಗುವುದು. ಅವನ ತಲೆ ಉಳಿಯುವಂತಿಲ್ಲ, ನಿಜ. ಆದರೆ ಇವರಿಗೆ ಭಯ ಇದ್ದೇ ಇರುತ್ತದೆ. ಈ ಎಲ್ಲಾ ಕಾರಣದಿಂದ ಹೊಸ ಪೋಸ್ಟುಮೇಸ್ಟರು ಬರುವುದೆನ್ನುವುದು ಇಂಥ ಹಳ್ಳಿಗಳಲ್ಲಿ ಸ್ವಲ್ಪ ವಿಜೃಂಭಣೆಯ ಸಂದರ್ಭವಾಗುತ್ತದೆ.

ನರಸಿಂಹನ್ ಈ ಹಳ್ಳಿಗೆ ಬಂದ ದಿವಸ ಊರೆಲ್ಲಾ ಅವನನ್ನು ನೋಡುವುದಕ್ಕೆ ಬಂದಿತು. ಹೆಂಗಸರು ಮಕ್ಕಳು ಅವರವರ ಬಾಗಿಲುಗಳಲ್ಲಿ ನಿಂತು ನೋಡಿದರು. ಕಾಯಿಲೆಯಲ್ಲಿದ್ದ ಗಂಡಸರು ಬಾಗಿಲ ಜಗಲಿಗಳ ಮೇಲೆ ನಿಂತು ನೋಡಿದರು. ಕಾಯಿಲೆ ಇಲ್ಲದಿದ್ದವರು ಪೋಸ್ಟಾಫೀಸಿನ ಹತ್ತಿರಕ್ಕೆ ಬಂದು ಅವನ ಗುರುತುಮಾಡಿಕೊಂಡರು. ಊರಿನ ಅನುಕೂಲದ ವಿಚಾರ ನರಸಿಂಹನ್ ಬಹಳ ಯೋಚಿಸುವಂತಿರಲಿಲ್ಲ. ಅವನ ಹಿಂದೆ ಇದ್ದ ಪೋಸ್ಟುಮೇಸ್ಟರು ಅಲ್ಲಿ ಒಂದು ಗುಡಿಸಲಂತಿದ್ದ ಮನೆಯಲ್ಲಿ ಆಫೀಸು ಮನೆ ಎರಡನ್ನೂ ಮಾಡಿದ್ದನು. ಅದರ ಮಾಲೀಕ ಅದರ ಬಗ್ಗೆ ಬಾಡಿಗೆ ತೆಗೆದುಕೊಳ್ಳುವುದಕ್ಕೆ ಮಾಲೀಕನಾಗಿದ್ದನೇ ಹೊರತು ಅದರ ಮೇಲೆ ಒಂದು ಕಾಸಿನ ಕೆಲಸವನ್ನೂ ಮಾಡಿಸುವವನಾಗಿರಲಿಲ್ಲ. ಹಿಂದೆ ಯಿದ್ದ ಪೋಸ್ಟುಮೇಸ್ಟರು ಯಾವುದೋ ಸಂದರ್ಭದಲ್ಲಿ ಈ ಮನೆಯನ್ನು

ಬಿಡಬೇಕೆಂದು ಯೋಚನೆ ಮಾಡಿದನು. ಅವನಿಗೆ ಬೇರೆ ಮನೆ ಸಿಕ್ಕಲಿಲ್ಲ. ಆತನು ಇದಾದ ಕೆಲದಿನದಲ್ಲಿಯೇ ವರ್ಗಕ್ಕೆ ಪ್ರಯತ್ನಮಾಡಿದನು. ಕೆಲವು ದಿನ ತಡೆಯಬೇಕೆಂದು ಅಪ್ಪಣೆ ಬಂದಿತು. ಆರು ತಿಂಗಳ ಮೇಲೆ ಪುನಃ ಪ್ರಯತ್ನಮಾಡಿದನು. ಅವನನ್ನು ಬೇರೆ ಒಂದೂರಿಗೆ ಹಾಕಿ ನರಸಿಂಹನ್ ಅನ್ನು ಅಲ್ಲಿಗೆ ಹಾಕಿದರು. ನರಸಿಂಹನ್‌ಗೆ ಊರ ಸ್ಥಿತಿಯನ್ನು ನೋಡಿದಾಗ, ಇಷ್ಟವಿದ್ದರೆ ಆ ಮನೆಯಲ್ಲಿ ಇರಬಹುದು ಇಷ್ಟವಿಲ್ಲದಿದ್ದರೆ ಬಯಲಲ್ಲಿರ ಬಹುದು, ಎಂದು ಕಂಡಿತು. ಅವನು ಆ ಮನೆಯಲ್ಲಿರುವುದಾಗಿ ಗೊತ್ತು ಮಾಡಿಕೊಂಡನು.

ಅಂದಿನ ಸಂಜೆ ಊರಿನ ಮುಖಂಡರೊಂದಿಗೆ ಕಷ್ಟಸುಖದ ಮಾತ ನಾಡುತ್ತ ನರಸಿಂಹನ್ ತಾನು ಒಂದು ವಾರದಲ್ಲಿ ಹೋಗಿ ಹೆಂಡತಿಯನ್ನು ಕರೆದು ತರುವ ಉದ್ದೇಶದಲ್ಲಿ ಇದೇನೆ ಎಂದು ಹೇಳಿದನು. ಮತ್ತು ತನ್ನ ಹೆಂಡತಿ ಗರ್ಭಿಣಿಯಾಗಿರುವುದರಿಂದ ಮನೆಗೆಲಸದಲ್ಲಿ ಸಹಾಯಕ್ಕೆ ಯಾರಾದರೂ ಒಬ್ಬ ಹೆಂಗಸನ್ನು ಗೊತ್ತುಮಾಡಿಕೊಳ್ಳಬೇಕೆಂದು ತಿಳಿಸಿ ದನು. ಕುಳಿತಿದ್ದವರಲ್ಲಿ ಒಬ್ಬನು ಸ್ವಲ್ಪ ಭಯಪಟ್ಟಂತೆ ಕಂಡು "ಆ! ಗರ್ಭಿಣಿಯೇ" ಎಂದು ಕೇಳಿದನು. ನರಸಿಂಹನ್ "ಹೌದು ಏಕೆ ಹಾಗೆ ಕೇಳುತ್ತೀರಿ?" ಎಂದನು. ಆ ಮನುಷ್ಯನು ಏನೋ ಯೋಚಿಸಿಕೊಂಡಂತೆ ಕಂಡು "ಏನೂ ಇಲ್ಲ. ಸುಮ್ಮನೆ ಕೇಳಿದೆ" ಎಂದನು. ಪಕ್ಕದಲ್ಲಿದ್ದ ಇನ್ನೊಬ್ಬನು "ಇಲ್ಲಿ ಹೆರಿಗೆಗೆ ಅನುಕೂಲ ಕಡಮೆ. ಊರಲ್ಲಿ ಆಸ್ಪತ್ರೆ ಇಲ್ಲ. ವೈದ್ಯರು ಇಲ್ಲ. ಮೂರು ಮೈಲಿ ದೂರ ಇನ್ನೊಂದು ಊರಿಗೆ ಹೋಗಬೇಕು. ಅಲ್ಲಿ ವೈದ್ಯರು ಮೂರು ತಿಂಗಳು ಸರಿಯಾಗಿ ಒಬ್ಬರಿದ್ದದ್ದಿಲ್ಲ. ಇರುವ ವೈದ್ಯರು ಬರುವುದಕ್ಕೆ ಹೋಗುವುದಕ್ಕೆ ಅನಾನುಕೂಲ. ಮಲೆನಾಡಿ ನಲ್ಲಿ ಹುಟ್ಟಿ ಬೆಳೆದ ಹೆಂಗಸರೇನೋ ಹೆರುತಾರೆ; ಪುಣ್ಯವಿದ್ದರೆ ಬದುಕು ತಾರೆ, ಇಲ್ಲದಿದ್ದರೆ ಸಾಯುತಾರೆ. ನಿಮ್ಮ ಹೆಂಡತಿ ಬಯಲು ಸೀಮೆಯ ಹೆಣ್ಣು. ಇಲ್ಲಿಗೆ ಬಂದು ತೊಂದರೆಪಡಬೇಕಾದೀತಲ್ಲ ಎಂದು ಅವರು ಹೇಳಿದರು" ಎಂದನು. ನರಸಿಂಹನ್ ಅದು ದೊಡ್ಡ ಊರೋ ಎಂದು ಕೇಳಿದನು. ಅದೂ ಇಷ್ಟೇ ಇದೆ ಎಂದರು. "ಆಸ್ಪತ್ರೆ ಇಟ್ಟ ಮಹರಾಯರೂ ಪೋಸ್ಟಾಫೀಸಿಟ್ಟ ಮಹರಾಯರೂ ದೊಡ್ಡ ಊರೆಂದು ಯಾವುದಾದರೂ

ಒಂದೂರಿನಲ್ಲಿ ಇರಿಸಬಾರದಾಗಿತ್ತೆ” ಎಂದು ನರಸಿಂಹನ್ ಕೇಳಿದನು. “ನಾವು ಅದನ್ನೇ ಹೇಳಿದೆವು. ಆದರೆ ಆ ಊರಿನವರು ಒಪ್ಪಲಿಲ್ಲ. ಎರಡೂ ತಮ್ಮಲ್ಲಿರಬೇಕೆಂದು ಹಟಮಾಡಿದರು. ಕೊನೆಗೆ ನಮ್ಮ ತಾಲ್ಲೂಕ್ ಸುಬೇದಾರರು ‘ಯಾರಿಗೂ ಜಗಳ ಬೇಡ. ಒಬ್ಬರಿಗೆ ಪೋಸ್ಟಾಫೀಸು, ಒಬ್ಬರಿಗೆ ಆಸ್ಪತ್ರೆ ಇರಲಿ’ ಎಂದು ಜಗಳ ಹರಿಸಿದರು. ಆ ಊರಿಗೆ ಆಸ್ಪತ್ರೆಯಾಯಿತು. ನಮಗೆ ಪೋಸ್ಟಾಫೀಸಾಯಿತು” ಎಂದು ಊರ ಮುಖಂಡರು ಹೇಳಿದರು. ನರಸಿಂಹನ್ “ಬಲತಾಯಿ ಹೆತ್ತ ತಾಯೊಂದಿಗೆ ಮಗುವನ್ನು ಕೊಯ್ದು ಹಂಚಿಕೊಳ್ಳುವುದಕ್ಕೆ ಒಪ್ಪಿಕೊಂಡಳು ಎಂತ ಕಥೆ ಒಂದಿದೆ. ಇದು ಅದರ ಸಮಾಚಾರವಾಯಿತು” ಎಂದನು. ಇಲ್ಲಿ ಅಂಥ ಅನ್ಯಾಯವೇನೂ ಆಗಲಿಲ್ಲವೆಂದು ನಮಗೆ ತೋರಬಹುದು. ಆದರೆ ನರಸಿಂಹನ್ ತನ್ನ ಅನನುಕೂಲದಲ್ಲಿ ನ್ಯಾಯವನ್ನು ಕುರಿತು ಅಷ್ಟು ಯೋಚನೆ ಮಾಡಲಿಲ್ಲ.

ಆ ದಿನ ರಾತ್ರಿ ಅವನು ತನ್ನ ಮನೆಯಲ್ಲಿ ಕುಳಿತಿರುವಾಗ, ಆ ಸಂಜೆ “ಗರ್ಭಿಣಿಯೇ ಹಾ” ಎಂದು ಹೇಳಿದ್ದ ಮನುಷ್ಯನು ಇವನು ಕುಳಿತಿದ್ದ ಸ್ಥಳಕ್ಕೆ ಬಂದನು; ಹತ್ತಿರ ಕುಳಿತು “ನಿಮಗೆ ಒಂದು ವಿಷಯ ಹೇಳ ಬೇಕೆಂದಿದ್ದೆ. ಹತ್ತು ಜನರೆದುರಿಗೆ ಏಕೆ ಎಂದು ಸುಮ್ಮನಾದೆ. ನೀವು ನಿಮ್ಮ ಹೆಂಡತಿಯನ್ನು ಇಲ್ಲಿಗೆ ಕರೆದುತರಬೇಡಿ” ಎಂದನು. ನರಸಿಂಹನ್ ಯಾಕೆ ಎಂದು ಕೇಳಿದನು. ಮುದುಕನು ಕೊಂಚಕ್ಕೆ ಉತ್ತರ ಹೇಳಲಿಲ್ಲ. ಬಹಳ ಬಲವಂತಮಾಡಿದ್ದರ ಮೇಲೆ “ನೀವು ಪರಸ್ಥಳದಿಂದ ಬಂದಿರು ವವರು. ನಿಮಗೆ ಸ್ಥಳದ ಈ ವಿವರವೆಲ್ಲ ಬೇಡ. ಊರಿನ ಮಾತು ಸಾವಿರ ಇರುತ್ತದೆ. ಮುಖ್ಯ ನಿಮ್ಮ ಮನೆಯವರು ನಿಮ್ಮ ಊರಿನಲ್ಲಿಯೇ ಹೆರಿಗೆ ತೀರಿಸಿಕೊಂಡು ಮಗುವಿನೊಂದಿಗೆ ಇಲ್ಲಿಗೆ ಬರಲಿ” ಎಂದನು. ನರಸಿಂಹನಿಗೆ ಇದು ಏನು ವಿಷಯವೋ ಎಂದು ಕುತೂಹಲ. ಆದರೆ ಅದನ್ನು ವಿವರ ವಾಗಿ ಕೇಳಲು ಇಷ್ಟವಿಲ್ಲ. ಅವನು ಕಷ್ಟಕ್ಕೆ ಸಿಕ್ಕಿದನು. ಅವನಿಗೆ ಹೆಂಡತಿಯ ಹೊರತು ಬೇರೆ ಜನವಿರಲಿಲ್ಲ. ಅವಳ ಹುಟ್ಟಿದ ಮನೆಯ ಜನವೂ ಯಾರೂ ಇಲ್ಲ. ಯಾವ ತೊಂದರೆ ಇದ್ದರೂ ಅವನು ಹೆಂಡತಿ ಯನ್ನು ಆ ಹಳ್ಳಿಗೆ ಕರೆದುತರಬೇಕು. ಆ ಹೆರಿಗೆ ಅಲ್ಲಿಯೇ ಆಗಬೇಕು.

ಇನ್ನು ಈ ಮನುಷ್ಯನ ಮಾತನ್ನು ವಿವರವಾಗಿ ಕೇಳಿ ಪ್ರಯೋಜನವೇನು? ಮನಸ್ಸಿಗೆ ಒಂದು ಭಯ ಬಂದಹಾಗಾಗುವುದಲ್ಲದೆ ಬೇರೆ ಯಾವ ಫಲವೂ ಕಾಣಲಿಲ್ಲ. ಹೀಗೆಂದುಕೊಂಡ ಒಡನೆಯೇ ನರಸಿಂಹನಿಗೆ ಇನ್ನೊಂದು ಯೋಚನೆ ತೋರಿತು. ತೊಂದರೆ ಏನೆನ್ನುವುದು ತಿಳಿದರೆ ಅದರ ನಿವಾರಣೆ ಯನ್ನು ಕುರಿತು ಯೋಚಿಸಬಹುದು; ಕೈಯಲ್ಲಾದ ಏರ್ಪಾಡು ಮಾಡ ಬಹುದು. ಹಾಗಿಲ್ಲದೆ ಆ ಬರುವ ತೊಂದರೆ ಎನ್ನುವುದು ಇದ್ದಕ್ಕಿದ್ದ ಹಾಗೆ ಬಂದು ಆಗ ಏನೂ ತೋಚದೆ ಪೇಚಾಡುವ ಹಾಗೆ ಆದರೆ ಇವನ ಎಚ್ಚರಿಕೆಯ ಮಾತು ವ್ಯರ್ಥವಾದಂತಾದೀತು. ಇದು ಮನಸ್ಸಿಗೆ ತೋರಿ ನರಸಿಂಹನ್ ಆ ಮನುಷ್ಯನನ್ನು ಕುರಿತು "ನೀವು ಹೇಗಿದ್ದರೂ ನನ್ನ ಒಳ್ಳೆಯದಕ್ಕಾಗಿ ನನಗೆ ಎಚ್ಚರಿಕೆ ಹೇಳಿದ್ದೀರಿ. ನಿಮ್ಮ ಮನಸ್ಸಿನ ಭಯವೇನು ನನಗೆ ತಿಳಿಸಿಬಿಡಿ. ನಾನು ಅವಶ್ಯಕವಾದ ಏರ್ಪಾಡನ್ನು ಮಾಡಿಕೊಳ್ಳುತ್ತೇನೆ" ಎಂದು ಹೇಳಿದನು.

ಆ ಮನುಷ್ಯನು ಬಹಳ ಹೊತ್ತು ಯೋಚಿಸಿ "ಸ್ವಾಮಿ ಈ ಊರಲ್ಲಿ ಒಂದು ಬಾಣಂತಿ ಪಿಶಾಚ ಇದೆ. ಯಾವ ಕಾಲದಲ್ಲಿ ಯಾವ ಕಾರಣ ದಿಂದ ಆ ಬಾಣಂತಿ ಜೀವ ಬಿಟ್ಟಳೋ ನನಗೆ ತಿಳಿಯದು. ನಮ್ಮೂರಲ್ಲಿ ಯಾವ ಹೆರಿಗೆಯಾಗಬೇಕಾದರೂ ಜನ ಸುಮ್ಮನೆ ಹೆದರುತ್ತಾರೆ. ಹೆರಿಗೆ ಯಾದ ಕ್ಷಣದಿಂದ ಹೊಲೆ ಕಳೆಯುವವರೆಗೆ ಒಂದು ಕ್ಷಣ ಮಾತ್ರ ಮನೆಯವರು ಅಜಾಗ್ರತೆಯಿಂದ ಇದ್ದರೆ ಆ ಪಿಶಾಚಿ ಹೊಲೆಯ ಮನೆಗೆ ನುಸುಳಿಬಿಡುತ್ತದೆ. ಮಗುವನ್ನು ಕೊಂದು ತಾಯನ್ನು ಮಾಯ ಮಾಡು ತ್ತದೆ. ತಾನು ಆ ಹೆಂಗಸಿನಂತೆ ಹೊಲೆಮನೆಯಲ್ಲಿ ಮಲಗುತ್ತದೆ. ಒಂದು ತಿಂಗಳೋ, ಎರಡು ತಿಂಗಳೋ ಆ ಗಂಡನೊಂದಿಗೆ ಸಂಸಾರಮಾಡುತ್ತಾ ಇದ್ದು ಎಂದೋ ಒಂದು ದಿನ ಹೊರಗೆ ಹೋದದ್ದು ಮರಳಿ ಬರುವುದಿಲ್ಲ. ಈ ಕಾರಣದಿಂದ ಅನೇಕರು ತಮ್ಮ ಹೆಂಗಸರನ್ನು ಈ ಊರಿನಲ್ಲಿ ಹೆರಿಗೆಗೆ ನಿಲ್ಲಿಸಿಕೊಳ್ಳುವುದಿಲ್ಲ. ಇದಕ್ಕಾಗಿಯೇ ನಿಮಗೆ ನಾನು ಆ ಎಚ್ಚರಿಕೆಯ ಮಾತನ್ನು ಹೇಳಿದ್ದು. ಇಲ್ಲಿಯ ಹೆಣ್ಣುಮಕ್ಕಳನ್ನೇ ಬೇರೆ ಕಡೆಗೆ ನಾವು ಕಳುಹಿಸುತ್ತಿರುವಾಗ ನೀವು ಎಲ್ಲಿಯೋ ಸುಖವಾಗಿರುವ ಹೆಂಡತಿಯನ್ನು ಇಲ್ಲಿಗೆ ಕರೆತರೋಣವೇಕೆ, ಆಕೆ ಇಲ್ಲಿ ಹೆರೋಣವೇಕೆ, ಏನಾದರೂ ಹೆಚ್ಚು

ಕಡಮೆಯಾಗಿ ನಿಮಗೆ ದುಃಖ ಬರೋಣವೇಕೆ? ಏನೋ ನಾನು ಮುದುಕ, ನೀವು ಚಿಕ್ಕ ವಯಸ್ಸಿನವರು, ಸುಖವಾಗಿರಲಿ ಎಂದಾಸೆಯಿಂದ ಇದನ್ನು ಹೇಳಿದೆ, ಕ್ಷಮಿಸಬೇಕು'' ಎಂದನು.

ನರಸಿಂಹನ್ ತಕ್ಕಮಟ್ಟಿಗೆ ಓದಿದ ಮನುಷ್ಯ. ಪಿಶಾಚ ಗಿಶಾಚ ವೆಂದರೆ ಅಷ್ಟೇನೂ ನಂಬುವವನಲ್ಲ. ಆದರೆ ನಮ್ಮಲ್ಲಿ ಅನೇಕರಿಗೆ ಪಿಶಾಚ ಇದೆ ಎಂಬ ನಂಬಿಕೆ ಇಲ್ಲದೆ ಇದ್ದರೂ ಪಿಶಾಚ ಇಲ್ಲ ಎನ್ನುವುದು ನಂಬಿಕೆ ಇಲ್ಲ. ಯಾರಾದರೂ ಏನಾದರೂ ಇಂಥ ಒಂದು ಮಾತನ್ನು ಹೇಳಿದರೆ ನಾವು, ಏನೋ ಯಾರು ಬಲ್ಲರು, ಎನ್ನುವ ಸ್ಥಿತಿಯಲ್ಲಿರುತ್ತೇವೆ. ಅಥವಾ ಪಿಶಾಚವೆನ್ನುವುದು ಇಲ್ಲವೆಂದೇ ನಂಬಿಕೆಯಿದ್ದರೂ ಅದು ತಿಳಿವಳಿಕೆಯ ವಿಷಯವಾಗಿರುತ್ತದೆ, ಹೃದ್ಗತವಾಗಿರುವುದಿಲ್ಲ. ಹೀಗಿರುವ ಜನರಿಗೆ ಇಂಥ ಮಾತನ್ನು ಕೇಳಿದಾಗ ನಂಬಿಕೆ ಇಲ್ಲದೆಯೇ ಮೈ ಜುಮ್ಮೆನ್ನುತ್ತದೆ. ನರಸಿಂಹನದು ಇದೇ ಸ್ಥಿತಿ. ಅವನು ಬಂದಿದ್ದ ಈ ಸ್ಥಳವೋ ಮಲೆನಾಡಿನ ಒಂದು ಹಳ್ಳಿ. ಇಲ್ಲಿ ಬೇಕಾದ ಜನವಿಲ್ಲ. ಇವರ ಹೊಲೆ ಮೈಲಿಗೆ ಏನೆನ್ನುವುದು ಅವನಿಗೆ ತಿಳಿಯದು. ಅಥವಾ ತಾನು ಇದನ್ನೆಲ್ಲಾ ನಂಬದೆ ಇದ್ದರೂ ತನ್ನ ಹೆಂಡತಿ ಇಲ್ಲಿಗೆ ಬಂದು ಈ ಕಥೆಯನ್ನೆಲ್ಲಾ ವರೂ ಕೇಳಿದರೆ ಅವಳ ಗತಿ ಏನು? ಇದನ್ನೆಲ್ಲಾ ಕುರಿತು ನರಸಿಂಹನ್ ಬಹಳ ಹೊತ್ತು ಯೋಚಿಸಿದನು; ಈ ಮನುಷ್ಯನನ್ನು ಹೊತ್ತಾಯಿತು, ತಾವು ಮನೆಗೆ ಹೋಗಿ, ಎಂದು ಕಳುಹಿಸಿಕೊಟ್ಟನು; ತಾನು ಒಂಟಿಯಾಗಿದ್ದೇನೆ ಎಂಬ ಒಂದು ಭಾವವನ್ನು ಅದುವರೆಗೆ ಅನುಭವಿಸದ ರೀತಿಯಲ್ಲಿ ಅನುಭವಿಸಿದನು; ಏನು ಮಾಡುವುದೆಂದು ನಾಳೆ ನೋಡೋಣ ಎಂದು ಮಲಗಿಕೊಂಡು ಬಹಳ ಹೊತ್ತು ನಿದ್ದೆಬಾರದೆ ಆಮೇಲೆ ನಿದ್ರಿಸಿದನು. ಆ ನಿದ್ದೆಯೂ ಅಷ್ಟು ಸುಖವಾಗಿರಲಿಲ್ಲ. ಏನೋ ಭೂತ ಏನೋ ಪ್ರೇತ; ಎಲ್ಲಿಯೋ ಬಲಿಯಾಗುವುದು, ಯಾವುದೋ ಕೊಲೆ. ಕನಸಿನಿಂದ ಎದ್ದು ನರಸಿಂಹನ್ ಉದಯದ ಬೆಳಕನ್ನು ನೋಡಿ ಸದ್ಯ ಬೆಳಗಾಯಿತಲ್ಲ ಎಂದುಕೊಂಡನು.

ಆ ದಿನ ನರಸಿಂಹನ್ ಹೆಂಡತಿಗೆ ಒಂದು ಕಾಗದ ಬರೆದನು. ಅದರಲ್ಲಿ, ಇಲ್ಲಿ ಹೆರಿಗೆಗೆ ಅನುಕೂಲವಿಲ್ಲ ನೀನು ಅಲ್ಲಿಯೇ ಇದ್ದು ಹೆರಿಗೆಯಾದಮೇಲೆ ಬರುವುದು ಒಳ್ಳೆಯದು, ಎಂದು ಹೇಳಿದನು. ಹೆಂಡತಿ '' ಅನುಕೂಲವಿಲ್ಲದ

ಆ ಊರಿನಲ್ಲಿ ನಿಮ್ಮನ್ನು ಕೇಳುವವರು ಯಾರು? ನಾನು ಹತ್ತಿರ ಇದ್ದು ನಿಮ್ಮ ಊಟ ಉಪಚಾರ ನೋಡಿಕೊಂಡರೆ ನೀವು ಹತ್ತಿರ ಇದ್ದು ನನ್ನ ಕಷ್ಟ ಸುಖ ನೋಡಿಕೊಳ್ಳಿ. ನನ್ನನ್ನು ಇಲ್ಲಿ ಯಾರೋ ವಿಚಾರಿಸಿಕೊಳ್ಳು ವುದಕ್ಕಿಂತ ಅಲ್ಲಿ ನೀವೇ ವಿಚಾರಿಸಿಕೊಳ್ಳುವುದು ಸುಖವೆಂದು ಕಾಣುತ್ತವೆ'' ಎಂದು ಉತ್ತರ ಬರೆಯಿಸಿದಳು. ಸತ್ಯವಾದ ಮಾತು. ನರಸಿಂಹನಿಗೆ ಹೆಂಡತಿಯ ವಿಷಯದಲ್ಲಿ ಬಹಳ ಮೆಚ್ಚಿಕೆಯಾಯಿತು. ಆದರೆ ಅವಳಿಗೆ ಈ ಬಾಣಂತಿ ಪಿಶಾಚಿಯ ಕಥೆಯನ್ನು ಹೇಗೆ ಹೇಳುವುದು? ಹೇಳಿದರೆ, ಅದರಂತೆ ತಾನು ನಡೆದೆನೆಂದರೆ, ಜನರು ತನ್ನನ್ನ ಏನೆಂದಾರು? ಹೇಳದೆ ಇದ್ದರೆ, ಹೆಂಡತಿ ಬೇರೆ ಊರಲ್ಲಿಯೇ ಹೆರಬೇಕೆನ್ನುವುದಕ್ಕೆ ಇನ್ನು ಯಾವ ಕಾರಣವನ್ನು ಹೇಳುವುದು? ಬಹಳ ಯೋಚನೆಮಾಡಿ ಕೊನೆಗೆ ಹೆಂಡತಿ ಯನ್ನು ಆ ಊರಿಗೆ ಕರೆಸಿಕೊಳ್ಳುವುದಾಗಿ ಗೊತ್ತುಮಾಡಿಕೊಂಡನು. ನಾಲ್ಕು ಹೊತ್ತೂ ಹೆರಿಗೆಯ ಮನೆಯ ಹತ್ತಿರ ಕಾವಲು ಇರಿಸುವುದು, ಬೇಕಾದ ಮಂತ್ರ ಮಾಯದ ಖರ್ಚು ಮಾಡುವುದು, ಹೆಂಡತಿಯ ಕಿವಿಗೆ ಪಿಶಾಚದ ಕಥೆ ಬೀಳದಂತೆ ನೋಡಿಕೊಳ್ಳುವುದು, ಎಂದು ದೃಢಮಾಡಿ ಕೊಂಡು ತಾನೇ ಹೋಗಿ ಅವಳನ್ನು ಕರೆದುತಂದನು. ಎಲ್ಲಕ್ಕೂ ಮೊದಲು ಈ ಬಾಣಂತಿ ಪಿಶಾಚಿಯ ಮನುಷ್ಯನನ್ನು ಕರೆದು "ಊರಿನ ಜನ ಯಾರೂ ನನ್ನ ಹೆಂಡತಿಗೆ ಈ ಕಥೆಯನ್ನು ಹೇಳದಂತೆ ನೋಡಿಕೊಳ್ಳಿ. ನಿಮಗೆ ಹಣ ಕೊಡುತ್ತೇನೆ'' ಎಂದು ಹೇಳಿದನು.

ಪುಟ್ಟಲಕ್ಷ್ಮಿ—ಇದು ನರಸಿಂಹನ ಹೆಂಡತಿಯ ಹೆಸರು—ಆ ಹಳ್ಳಿ ಯನ್ನು ನೋಡಿ ಬಹಳ ಆನಂದಪಟ್ಟಳು. "ಹಾಕಿದವರು ಹಾಕಿದರು. ನಿಮ್ಮನ್ನು ಎಂಥ ತೋಟದ ಮಧ್ಯೆ ಎಂಥ ಊರಿಗೆ ಹಾಕಿದರು ನೋಡಿ. ನನಗೆ ದೊಡ್ಡ ಊರು ಎಂದರೆ ಬೇಸರ. ಇಲ್ಲಿ ಸುಖವಾಗಿದೆ'' ಎಂದಳು. ನರಸಿಂಹನಿಗೆ ಬಹಳ ಸಂತೋಷ. ಮನೆಯ ಮುಂಭಾಗ ಆಫೀಸು. ಹಿಂಭಾಗ ವಾಸದ ಮನೆ. ಆಫೀಸಿನ ಕೆಲಸವೇನಿದ್ದರೂ ಅದನ್ನು ಮನೆ ಯಲ್ಲೇ ಮಾಡುತ್ತ ಅವನು ಹೆಂಡತಿಗೆ ಸದಾ ಜೊತೆಯಲ್ಲಿರುತ್ತಿದ್ದನು. ಊರಿನ ಒಬ್ಬ ಹೆಂಗಸನ್ನು ಕರೆದು ಕೈತುಂಬ ಹಣ ಕೊಡುವುದಾಗಿ ಹೇಳಿ ಅವಳು ಯಾವಾಗಲೂ ಮನೆಯಲ್ಲಿಯೇ ಇರಬೇಕೆಂದು ಏರ್ಪಡಿಸಿದನು.

ತಾನೂ ಅರವತ್ತು ಗಳಿಗೆಯೂ ಎಚ್ಚರದಿಂದಿರುತ್ತಿದ್ದನು. ಪಿಶಾಚದ ಕಥೆಯನ್ನು ಹೇಳಿದ ಮುದುಕನ ಮೂಲಕ ಒಬ್ಬ ಮಾಂತ್ರಿಕನಿಂದ ಒಂದು ರಕ್ಷೆಯನ್ನು ತರಿಸಿ ಅದನ್ನು ಹೆಂಡತಿ ಮಲಗುವ ಕಡೆ ಹಾಸಿಗೆಯ ಅಡಿಯಲ್ಲಿ ಸುಪ್ಪತ್ತಿಗೆಯ ಒಳಗೆ ಸೇರಿಸಿ ಹೊಲಿದನು.

ಹೆರಿಗೆಯ ದಿನ ಬಂದಿತು. ಒಂದು ದಿನ ಹೆರಿಗೆಯೂ ಆಯಿತು. ನರಸಿಂಹನ್ ಆ ಸಮಯದಲ್ಲಿ ಹೊರಗೆ ನಿಂತಿದ್ದನು. ಹೆರಿಗೆಯಾದ ಒಡನೆ ಮಗು ಅತ್ತಿತು. ನರಸಿಂಹನ್ "ಪುಟ್ಟಲಕ್ಷ್ಮಿ ಸೌಖ್ಯವಾಗಿದ್ದೀಯಾ" ಎಂದು ಕೇಳಿದನು. ಹೆಂಡತಿ ಗೊಣಗಿದ್ದು ಹೊರತು ಉತ್ತರವೇನೂ ಹೇಳಲಿಲ್ಲ. ಸೂಲಗಿತ್ತಿ "ಸೌಖ್ಯವಾಗಿದ್ದಾರೆ ಸ್ವಾಮಿ ಚಿಂತಿಸಬೇಡಿ" ಎಂದು ಧೈರ್ಯ ಹೇಳಿದಳು. ಸ್ವಲ್ಪ ಹೊತ್ತಿನಲ್ಲಿ ಪಕ್ಕದ ಊರಿನಿಂದ ಡಾಕ್ಟರು ಬಂದರು. ಬಾಣಂತಿಗೆ ತಕ್ಕ ಔಷಧದ ಏರ್ಪಾಡನ್ನು ಹೇಳಿ ಹೋದರು. ಸಂಜೆಗೆ ಪುಟ್ಟಲಕ್ಷ್ಮಿ ಒಳಗಡೆಯಿಂದ ಮೆಲ್ಲನೆ ಮಾತನಾಡಿ "ನಾನು ಸೌಖ್ಯವಾಗಿದ್ದೇನೆ. ನೀವು ಚಿಂತಿಸಬೇಡಿ. ಮಗುವೂ ಸುಖವಾಗಿದೆ" ಎಂದು ಹೇಳಿದಳು. ನರಸಿಂಹನ್ ಧೈರ್ಯಗೊಂಡು ಇನ್ನು ಯೋಚನೆಯಿಲ್ಲ ಎಂದುಕೊಂಡನು. ಆ ರಾತ್ರಿ ಸರಿಹೊತ್ತಿನಲ್ಲಿ ಕಾವಲಿನ ಹೆಂಗಸು ಹೆರಿಗೆಯ ಮನೆಯ ಬಾಗಿಲಿನ ಮುಂದೆ ಮಲಗಿದ್ದವಳು, ಹೋ ಎಂದು ಕೂಗಿಕೊಂಡು ಎದ್ದು, ಈ ಬಾಗಿಲು ತೆಗೆದವರು ಯಾರು, ಎಂದು ಕೇಳಿದಳು. ನರಸಿಂಹನ್ ಹತ್ತಿರದಲ್ಲೇ ಮಲಗಿದ್ದ. ದೀಪ ಆರಿರಲಿಲ್ಲ. ನೋಡಿದರೆ ಹಾಕಿದ ಬಾಗಿಲು ತೆಗೆದಿತ್ತು. ಒಳಗೆ ಯಾವ ಶಬ್ದವೂ ಕೇಳಿಸಲಿಲ್ಲ. ಅವನು ಮೆಲ್ಲನೆ ಪುಟ್ಟಲಕ್ಷ್ಮಿ ಎಂದು ಕರೆದನು. ಒಂದು ಧ್ವನಿ 'ಆ' ಯೆಂದು ಹೇಳಿತು. ಧ್ವನಿ ತನ್ನ ಹೆಂಡತಿಯ ಎಂದಿನ ಧ್ವನಿ ಅಲ್ಲವೆಂದು ನರಸಿಂಹನಿಗೆ ತೋರಿತು. ಆದರೆ ಆ ಸಂದೇಹವನ್ನು ತೋರಿಸದೆ ಅವನು ನಿದ್ದೆ ಬಂದಿತ್ತೆ ಎಂದು ಕೇಳಿದನು. ಹೌದು ಯಾಕೆ ಕೇಳುತ್ತೀರಿ ಎಂದು ಧ್ವನಿ ಕೇಳಿತು. ನರಸಿಂಹನಿಗೆ ಈಗಲೂ ಧ್ವನಿ ಒಂದು ಮಾದರಿಯಾಗಿಯೇ ಕೇಳಿಸಿತು. ಅವನು ಧೈರ್ಯಮಾಡಿ ಏಕೆ ಧ್ವನಿ ಹೀಗಿದೆ ಎಂದು ಕೇಳಿದನು. "ಹೇಗಿದೆ ಧ್ವನಿ? ಮಲಗಿಕೊಳ್ಳಿ. ಹೆತ್ತ ದಿವಸ ಎಂದಿನಂತೆಯೇ ಇರುತ್ತದೆಯೆ ಧ್ವನಿ" ಎಂದು ಉತ್ತರ ಬಂದಿತು.

ನರಸಿಂಹನು ಕಾವಲ ಹೆಂಗಸನ್ನು "ಬಾಗಿಲನ್ನು ಮುಂದಕ್ಕೆ ಎಳೆದು ಮಲಗಿಕೊಳ್ಳಿ, ಗಾಳಿಗೆ ತೆರೆದಿದೆ" ಎಂದು ಸಮಾಧಾನಪಡಿಸಿ ತಾನು ಮರಳಿ ಮಲಗಿಕೊಂಡನು.

ಮಾರನೆಯ ದಿನ ಏಳುವ ಹೊತ್ತಿಗೆ ಮಗು ತೀರಿಹೋಗಿತ್ತು. ಪುಟ್ಟಲಕ್ಷ್ಮಿ ತಾನು ಹೆತ್ತ ಮಗು ಹೀಗಾಯಿತೆ ಎಂದು ಬಹಳ ಗೋಳಾಡಿದಳು. ಕಾವಲ ಹೆಂಗಸು ಅದನ್ನು ತೆಗೆದುಕೊಂಡು ಹೋಗಿ ಊರಿನ ವಾಡಿಕೆಯ ಸ್ಥಳದಲ್ಲಿ ಹೂತು ಬಂದಳು. ಹತ್ತು ದಿನದ ಮೇಲೆ ಪುಟ್ಟಲಕ್ಷ್ಮಿ ಸ್ನಾನಮಾಡಿ ಹೊರಕ್ಕೆ ಬಂದಳು. ನರಸಿಂಹನ್ ಎಂದಿನಂತೆ ಅವಳೊಂದಿಗೆ ವಿಶ್ವಾಸದಿಂದ ನಡೆದುಕೊಳ್ಳುತ್ತ ಊರಿನ ಕಥೆಯನ್ನು ಮರೆತಂತೆಯೇ ಇದ್ದನು.

ಕೆಲವು ದಿನಗಳ ಮೇಲೆ ಒಂದು ರಾತ್ರಿ ಏನೋ ಎಚ್ಚರವಾಗಿ ನರಸಿಂಹನ್ ಪುಟ್ಟಲಕ್ಷ್ಮಿ ಎಂದನು. ಅವಳು ಉತ್ತರ ಕೊಡಲಿಲ್ಲ. ಅವಳಿದ್ದ ಕಡೆ ಕೈಹಾಕಿ ನೋಡಿದನು. ಅವಳಿರಲಿಲ್ಲ. ಎದ್ದು ದೀಪವನ್ನು ದೊಡ್ಡದುಮಾಡಿ ಪುಟ್ಟಲಕ್ಷ್ಮಿ ಎಂದು ಕೂಗುತ್ತ ಅಡಿಗೆ ಮನೆ ಸ್ನಾನದ ಮನೆ ಹಜಾರವನ್ನು ನೋಡಿದನು. ಅಷ್ಟು ಹೊತ್ತಿಗೆ ಬಾಗಿಲಕಡೆಯಿಂದ ಪುಟ್ಟಲಕ್ಷ್ಮಿ, ಇದೇನು ಹೀಗೆ ಓಡಾಡುತ್ತಿದೀರಿ, ಎಂದು ಕೇಳುತ್ತ ಒಳಗೆ ಬಂದಳು. ನರಸಿಂಹನ್, ನೀನು ಎಲ್ಲಿ ಹೋಗಿದ್ದೆ, ಎಂದನು. ಪುಟ್ಟಲಕ್ಷ್ಮಿ "ಇದೇನು ಹೆಂಡತಿಯ ಸೆರಗನ್ನು ಹಿಡಿದುಕೊಂಡೇ ಓಡಿಯಾಡುತ್ತೇನೆ ಎನ್ನುತ್ತೀರಿ. ಕೈಕಾಲು ತೊಳೆದುಕೊಳ್ಳುವುದಕ್ಕೆ ಹೋಗಬೇಡವೆ?" ಎಂದು ಹೇಳಿದಳು. ನರಸಿಂಹನ್ "ನೀನು ಹಿತ್ತಲ ಕಡೆಯಿಂದ ಬರಲಿಲ್ಲವಲ್ಲ, ಬೀದಿಗೆ ಹೋಗುವುದುಂಟೆ? ಇಲ್ಲಿ ಹುಲಿ ಚಿರತೆ ಉಂಟು" ಎಂದು ಹೇಳಿದನು. ಪುಟ್ಟಲಕ್ಷ್ಮಿ "ಆ ಭಯವೆಲ್ಲ ನಿಮಗೆ, ನನಗಿಲ್ಲ" ಎಂದು ಹಾಸ್ಯವಾಗಿ ನಕ್ಕಳು. "ಬನ್ನಿ ಸುಮ್ಮನೆ ಮಲಗಿಕೊಳ್ಳಿ" ಎಂದು ನರಸಿಂಹನನ್ನು ಒಳಗೆ ಕರೆದುಕೊಂಡು ಹೋದಳು. ಇದಾದ ಎಂಟು ದಿನಕ್ಕೆ ಸರಿಯಾಗಿ ಮತ್ತೆ ನರಸಿಂಹನಿಗೆ ಸರಿ ರಾತ್ರಿಯಲ್ಲಿ ಹೀಗೆಯೇ ಎಚ್ಚರಿಕೆ ಆಯಿತು. ಮತ್ತೆ ಅವನು ಪುಟ್ಟಲಕ್ಷ್ಮಿ ಎಂದು ಕೂಗಿದನು. ಅವಳು ಇರಲಿಲ್ಲ. ದೀಪವನ್ನು ದೊಡ್ಡದು ಮಾಡಿ ಮನೆಯೆಲ್ಲ ಹುಡುಕಿ

ದನು. ಅವಳು ಇರಲಿಲ್ಲ. ಆಗಲೂ ಬೀದಿಯ ಕಡೆಯಿಂದ ಬಂದಳು. ಎಲ್ಲಿ ಹೋಗಿದ್ದೆ ಎಂದು ಕೇಳಿದ್ದಕ್ಕೆ, ನೀವೇನು ನನಗೆ ಮನೆಯನ್ನು ಬಂದೀಖಾನೆ ಮಾಡುತ್ತಿದೀರಿ, ಎಂದಳು. ನರಸಿಂಹನ್ ಸ್ವಲ್ಪ ಅಸಮಾಧಾನಪಟ್ಟನು. ಬಂದು ಮಲಗಿಕೊಂಡನು. ಅವಳು ಬಂದು ತನ್ನ ಹಾಸಿಗೆಯಲ್ಲಿ ಮಲಗಿಕೊಂಡಳು.

ನರಸಿಂಹನ ಮನಸ್ಸಿನಲ್ಲಿ ಯಾವುದೋ ಒಂದು ಭೀತಿ ಮೂಡಿತು. ಅವನು ತನ್ನ ಹೆಂಡತಿಯ ನಡೆನುಡಿಯನ್ನು ವಿವರವಾಗಿ ನೋಡುವುದಕ್ಕೆ ಮೊದಲುಮಾಡಿದನು. ಹೆತ್ತ ದಿನದ ರಾತ್ರಿ ಒಳಗಿಂದ ಮಾತನಾಡಿದ ಧ್ವನಿ ಯಾವುದೋ ಒಂದು ರೀತಿ ಕಂಡಂತೆ ಅವನಿಗೆ ಈ ಪುಟ್ಟಲಕ್ಷ್ಮಿ ಯಾವುದೋ ವಿಧದಲ್ಲಿ ಮಾರ್ಪಟ್ಟಿದಾಳೆಂದು ತೋರಿತು. ಯಾವ ಲಕ್ಷಣದಿಂದ ಇದು ತೋರಿತೆಂದರೆ ಅವನು ಹೇಳುವಂತಿರಲಿಲ್ಲ. ಆದರೆ ಮಾರ್ಪಾಡು ಉಂಟೆಂದು ಮನಸ್ಸಿಗೆ ತೋರುತ್ತಿತ್ತು. ಅವನು ತನ್ನನ್ನು ಆಗಾಗ ಒಂದೇ ಸಮನೆ ನೋಡುತ್ತಿರುವುದನ್ನು ಕಂಡು ಪುಟ್ಟಲಕ್ಷ್ಮಿ "ಏನು ನನ್ನನ್ನ ಹೀಗೆ ನೋಡುತ್ತೀರಿ, ಎಂದೂ ಕಾಣದಹಾಗೆ" ಎಂದು ಕೇಳುವಳು. ನರಸಿಂಹನ್, ಸುಮ್ಮನೆ ನೋಡಿದೆ, ಎನ್ನುವನು. ಒಂದು ಸಲ ಹೀಗಾದಾಗ ಅವಳು "ನನ್ನನ್ನು ಏನೋ ಪರೀಕ್ಷೆಮಾಡುವಹಾಗೆ ನೋಡುತ್ತೀರಲ್ಲಾ" ಎಂದಳು. ನರಸಿಂಹನ್, ಹೌದು, ಎಂದು ಉತ್ತರಕೊಟ್ಟನು. ಪುಟ್ಟಲಕ್ಷ್ಮಿ "ನೋಡಿದರೆ ಎಲ್ಲಾ ತಿಳಿಯುತ್ತದೆಯೆ?" ಎಂದು ಸ್ವಲ್ಪ ವಿಕಟ ರೀತಿಯಿಂದ ನಕ್ಕಳು.

ನರಸಿಂಹನಿಗೆ ಮನಸ್ಸು ಅಶಾಂತವೇ ಆಯಿತು.

ಅದರ ಮಾರನೆಯ ದಿನ ಇವನು ನಡೆಯುವುದಕ್ಕೆ ಹೋದಾಗ ಪಿಶಾಚಿಯ ಕಥೆ ಹೇಳಿದ ಮುದುಕನೂ ಇವನ ಜೊತೆಗೆ ಬಂದನು. ಕ್ಷೇಮಸಮಾಚಾರ ಕೇಳುತ್ತ ಅಮ್ಮಾವರು ಸೌಖ್ಯವಾಗಿದಾರೆಯೆ ಎಂದು ಕೇಳಿದನು.

ನರಸಿಂಹನ್ : ಸೌಖ್ಯವಾಗಿದಾರೆ.

ಮುದುಕ: ಹೆತ್ತ ಮಾರನೆಯ ದಿನವೆ ಮಗು ಹೋಯಿತಲ್ಲವೆ?

ನರಸಿಂಹನ್: ಹೌದು.

ಮುದುಕ: ಅಮ್ಮಾವರು ಎಂದಿನಂತಿದಾರಷ್ಟೆ?

ನರಸಿಂಹನ್: ಏನು ಹೀಗೆ ಕೇಳುತ್ತೀರಿ?

ಮುದುಕ: ಸ್ವಾಮಿ ನನ್ನನ್ನು ಕ್ಷಮಿಸಬೇಕು. ನಾನು ಕಾಡಿನಲ್ಲಿ ಬೆಳೆದವನು. ನನಗೆ ನಯ ತಿಳಿಯದು. ನಮಗೇನು ನಂಬಿದ್ದೆಲ್ಲ ನಂಬಿಕೆಯೆ. ನನಗೇನೋ ಭಯ. ಹೆತ್ತ ದಿನ ಏನು ಹೊಲೆಯಾಯಿತು, ಅಜಾಗ್ರತೆಯಾಗಿದ್ದೀತೇ, . ಎಂದು ಶಂಕೆಯಿಂದ ಕೇಳಿದ್ದೇ ಹೊರತು ಇನ್ನೇನೂ ಇಲ್ಲ. ನೀವು ಜಾಗ್ರತೆಯಿಂದ ಇದ್ದು ಅಮ್ಮಾವರು ಸುರಕ್ಷಿತವಾಗಿದ್ದರೆ ಸಾಕು. ನನಗೆ ಏನು ಆಗಬೇಕು?

ನರಸಿಂಹನ್: ಹೌದು ನೀವೇನೋ ಕಥೆ ಹೇಳಿದಿರಲ್ಲ. ಪಿಶಾಚ ಹೋಗಿಬಿಟ್ಟು ಹೆಂಡತಿ ಆಗಿಬಿಡುತ್ತೆ ಅಂತ. ಅದು ಪಿಶಾಚ .ಅಂತ ಆ ಗಂಡನಿಗೆ ತಿಳಿಯೋದು ಹೇಗಂತೆ?

ಮುದುಕ: ಆ ವಿವರವೆಲ್ಲ ನನಗೆ ಅಷ್ಟಾಗಿ ಗೊತ್ತಿಲ್ಲ. ಇದು ಈಚೆಗೆ ನಡೆದ ವಿಷಯವಲ್ಲ ನೋಡಿದಿರಾ. ಎಂದಿನದೋ ಮಾತು. ಅದನ್ನು ನಾನು ಹೇಗೆ ಹೇಳಲಿ.

ನರಸಿಂಹನ್: ಅಲ್ಲ ಕಥೆಯಲ್ಲಿ ಏನೆಂದು ಹೇಳುತ್ತಾರೆ.

ಮುದುಕ: ಅಯ್ಯೋ ಕಥೆ ಮಾತು ಏನು ಸ್ವಾಮಿ? ಕಥೆಗೆ ಕಾಲಿಲ್ಲ. ಸಂಸಾರ ಮಾಡಿಕೊಂಡು ಹೆಂಡತಿ ಇದ್ದ ಹಾಗೇ ಇರುತ್ತಾಳಂತೆ. ಏನೋ ಸ್ವಲ್ಪ ವ್ಯತ್ಯಾಸ ಇದ್ದ ಹಾಗೆ ಕಾಣುತ್ತದಂತೆ. ಯಾವುದರಲ್ಲಿ ಅಂತ ಹೇಳೋ ಹಾಗಿಲ್ಲ. ಅದೇನೋ ವಾರಕ್ಕೆ ಒಂದು ಸಲ ಊರಹೊರಗೆ ಇರುವ ದೇವಾಲಯದಲ್ಲಿ ದೀಪ ಹಚ್ಚೋದಕ್ಕೆ ಹೋಗುತ್ತಾಳಂತೆ. ಗಂಡ ಎಚ್ಚರಗೊಂಡು ಎಲ್ಲಿ ಹೋಗಿದ್ದೆ ಅಂತ ಕೇಳೋಣ. ಪಿಶಾಚಿ ಎಲ್ಲೋ ಹಿತ್ತಿಲಿಗೆ ಹೋಗಿದ್ದೆ ಎನ್ನೋಣ. ಮನೆಯ ಹೆಂಗಸು, ಸಂದೇಹಪಡುವ ಹಾಗಿಲ್ಲ. ಬಿಡೋ ಹಾಗಿಲ್ಲ. ಕಥೆಗೆ ಏನು ಹೇಳಿ, ಹೇಳಿದ್ದೆಲ್ಲ ಕಥೆಯೆ.

ನರಸಿಂಹನ್ ಎದೆಗುಂದಿದನು. ತನ್ನ ಅನುಭವವನ್ನು ಈ ಮುದುಕನು ಹೀಗೆ ಹೇಳಬೇಕಾದರೆ ಈಗ ತನ್ನೊಡನೆ ಸಂಸಾರ ಮಾಡುತ್ತಿರುವುದು ತನ್ನ ಪುಟ್ಟಲಕ್ಷ್ಮಿ ಅಲ್ಲ; ಆ ಬಾಣಂತಿ ಪಿಶಾಚಿ ಇರಬೇಕು ಎಂದು ಅವನಿಗೆ ಖಂಡಿತವಾಯಿತು. ನಡೆಯನ್ನು ಮುಗಿಸಿಕೊಂಡು ಅವನು

ಮನೆಗೆ ಬಂದನು. ಆ ದಿನವೆಲ್ಲ ಏನೋ ಚಿಂತೆಯಲ್ಲಿ ಕಾಲವನ್ನು ಕಳೆದನು. ಮನೆಯಲ್ಲಿ ಪುಟ್ಟಲಕ್ಷ್ಮಿ ಎಂದಿನಂತೆ ಅಡಿಗೆ ಮಾಡಿದಳು; ಎಂದಿನಂತೆ ಬಡಿಸಿದಳು; ಎಂದಿನಂತೆ ಮಾತನಾಡಿದಳು. ನರಸಿಂಹನ್ ಇದು ಯಾವುದೂ ಬೇಡದವನಂತೆ ಇದ್ದನು. ರಾತ್ರಿ ಊಟವಾದಮೇಲೆ ಮಲಗಿಕೊಂಡರು. ನರಸಿಂಹನ್ ಎಂದಿಗಿಂತ ದೂರದಲ್ಲಿ ಹಾಸಿಗೆ ಹಾಕಿಕೊಂಡನು. ಪುಟ್ಟಲಕ್ಷ್ಮಿ ಇದೇನು ಎಂದಳು. ನರಸಿಂಹನ್ ಏನೂ ಕಾಣದಹಾಗೆ, ಏನು, ಎಂದನು. ಪುಟ್ಟಲಕ್ಷ್ಮಿ ತನ್ನ ಹಾಸಿಗೆಯನ್ನು ಇವನ ಹಾಸಿಗೆಯ ಬಳಿಗೆ ಸೆಳೆದಳು. "ನೀವು ದೂರ ಹೋದರೆ ನಾನು ಒಪ್ಪುತ್ತೇನೆಯೆ? ನಿಮಗೆ ನಾನು ಬೇಡದೆ ಇದ್ದರೂ ನನಗೆ ನೀವು ಬೇಕು" ಎಂದಳು.

ನರಸಿಂಹನಿಗೆ ಇಂಥ ಮಾತುಗಳಿಗೆಲ್ಲ ವಿಕಾರವಾದ ಅರ್ಥ ತೋರಿತು. ಇದು ಪಿಶಾಚಿಯೋ ಇಲ್ಲ ನನ್ನ ಪುಟ್ಟಲಕ್ಷ್ಮಿಯೋ ಕಂಡುಹಿಡಿಯಲೇ ಬೇಕು ಎಂದು ಅವನು ಗೊತ್ತುಮಾಡಿಕೊಂಡನು; ಇದು ತಿಳಿಯುವವರೆಗೆ ದೇವರೇ ಗತಿಯೆಂದು ಎಂದಿನಂತೆ ಇದ್ದುಬಿಡುವುದು, ಎಂದುಕೊಂಡನು.

ಇದಾದ ಕೆಲದಿನದಲ್ಲಿ ಮರಳಿ ಒಂದು ರಾತ್ರಿ ನರಸಿಂಹನಿಗೆ ಎಚ್ಚರವಾದಾಗ ಪುಟ್ಟಲಕ್ಷ್ಮಿ ಮನೆಯಲ್ಲಿ ಇರಲಿಲ್ಲ. ಅದು ಯಾವ ವಾರವೆಂದು ಅವನು ನೋಡಿಕೊಂಡನು. ಅದರ ಮೂರನೆಯ ವಾರ ಅದೇ ದಿನ ರಾತ್ರಿ ಮಲಗುವಾಗ ಬಾಗಿಲ ಅಗಳಿ ಹಾಕಿ ಅದರಡಿಗೆ ತೆಳ್ಳನೆಯ ಒಂದು ತೆಂಗಿನ ಕರಟವನ್ನಿಟ್ಟನು. ಅರ್ಧರಾತ್ರಿಯಲ್ಲಿ ಯಾರೋ ಬಾಗಿಲು ತೆರೆದಂತಾಗಲು ಕರಟ ಒಡೆದ ಶಬ್ದವಾಯಿತು. ನರಸಿಂಹನ್ ಎದ್ದು ಯಾರದು ಎಂದನು. ಪುಟ್ಟಲಕ್ಷ್ಮಿ ನಾನು ಹೊರಗೆ ಹೋಗಲು ಬಾಗಿಲು ತೆಗೆದೆ ಎಂದು ಹೇಳಿ ಹೊರಗೆ ಹೋಗಿ ಕೈಕಾಲು ತೊಳೆದುಕೊಂಡಂತೆ ಮಾಡಿ ಒಳಕ್ಕೆ ಬಂದಳು.

ಮುಂದಿನ ವಾರ ನರಸಿಂಹನ್ ಪುಟ್ಟಲಕ್ಷ್ಮಿಯ ಸೀರೆಯ ಒಂದು ನೂಲನ್ನು ಎಳೆದು ತನ್ನ ಬೆರಳಿಗೆ ಸುತ್ತಿಕೊಂಡನು. ರಾತ್ರಿ ಅವಳು ಎದ್ದರೆ ಹಾಸಿಗೆಯನ್ನು ಬಿಡುವಲ್ಲಿ ಆ ದಾರ ಎಳೆಯುತ್ತದೆ. ಆಗ ತನಗೆ ಎಚ್ಚರಿಕೆಯಾಗುತ್ತದೆ ಎಂದು ಅವನ ಅಭಿಪ್ರಾಯ. ಇವನು ದಾರವನ್ನು

ಎಳೆದು ಕಟ್ಟಿಕೊಂಡಾಗ ಪುಟ್ಟಲಕ್ಷ್ಮಿ ನಿದ್ದೆಯಲ್ಲಿದ್ದಾಳೆಂದು ಇವನು ಎಣಿಸಿದನು. ಆದರೆ ಇವನು ದಾರವನ್ನು ಸುತ್ತಿಕೊಂಡು ಮುಗಿಸಿ ತಾನು ಮಲಗಿಕೊಂಡಮೇಲೆ ಕಣ್ದೆರೆದು ನಗುತ್ತ "ಇದೇನು ಕಥೆಯಂತೆ ಮಾಡು ತ್ತಿದೀರಿ. ನಾನು ಎಲ್ಲಾದರೂ ತಪ್ಪಿಸಿಕೊಂಡು ಹೋಗುತ್ತೇನೆಂದು ಹೀಗೆ ಮಾಡುತ್ತೀರಾ" ಎಂದಳು. ನರಸಿಂಹನ್ ನಕ್ಕಂತೆ ಮಾಡಿ, ಇದು ನನ್ನ ನಿನ್ನ ಪ್ರೇಮದ ಅನಂತನದಾರ, ಎಂದು ಹೇಳಿ ಮಾತನ್ನು ಮರೆಯಿಸಿದನು.

ಆ ರಾತ್ರಿ ಪುಟ್ಟಲಕ್ಷ್ಮಿ ಎಲ್ಲಿಯೂ ಹೋಗಲಿಲ್ಲ. ಆಮೇಲೆ ಒಂದು ತಿಂಗಳು ಎತ್ತಲಾದರೂ ಹೋಗುವುದು ಎನ್ನುವ ಸಂದರ್ಭವೇ ಕಾಣಲಿಲ್ಲ. ನರಸಿಂಹನಿಗೆ ಪಿಶಾಚದ ಕಥೆಯೋ ಅನ್ಯಾಯದ ಕಥೆಯೆಂದು ತೋರಿ ಬಂದಿತು.

ಆಮೇಲೆ ಒಂದು ದಿನ ಅದೇ ವಾರ ರಾತ್ರಿಯಲ್ಲಿ ಪುಟ್ಟಲಕ್ಷ್ಮಿ ಹಾಸಿಗೆಯನ್ನು ಬಿಟ್ಟಾಗಲೇ ಇವನಿಗೆ ಎಚ್ಚರವಾಯಿತು. ಕಣ್ಣನ್ನು ತೀರಾ ತೆರೆಯದೆ ಏನು ಮಾಡುವಳೊ ಎಂದು ಇವನು ನೋಡುತ್ತಿದ್ದನು. ಪುಟ್ಟಲಕ್ಷ್ಮಿ ಇವನ ಕಡೆ ಎರಡು ನಿಮಿಷ ಒಂದೇ ಸಮನೆ ನೋಡಿದಳು. ಆಮೇಲೆ ಮುಖದ ಹತ್ತಿರ ಮುಖವನ್ನಿಟ್ಟು ನಿದ್ರಿಸುತ್ತಿದಾನೋ ಇಲ್ಲವೋ ಎಂದು ಪರೀಕ್ಷಿಸಿದಳು. ಆ ಮುಖ ನರಸಿಂಹನಿಗೆ ಏನೋ ರೀತಿಯಾಗಿ ಕಂಡಿತು. ಇದು ಪುಟ್ಟಲಕ್ಷ್ಮಿ ಅಲ್ಲ ಯಾವುದೋ ಕೆಟ್ಟ ಕನಸು ಎಂಬಂತೆ ಕಂಡಿತು. ಕ್ಷಣಮಾತ್ರ ಇವನನ್ನು ಹತ್ತಿರದಿಂದ ನೋಡಿ ಪುಟ್ಟಲಕ್ಷ್ಮಿ ಹಾಸಿಗೆಯನ್ನು ಬಿಟ್ಟು ಹೊರಟಳು. ಒಂದು ಕ್ಷಣದಲ್ಲಿ ಬಾಗಿಲನ್ನು ಮೆಲ್ಲಗೆ ತೆಗೆದ ಸದ್ದಾಯಿತು. ನರಸಿಂಹನಿಗೆ ಮೈಯೆಲ್ಲ ಬೆವರಿತು. ಮನಸ್ಸು ಉದ್ವೇಗಗೊಂಡಿತು. ಆದರೆ ಅವನಿಗೆ ಏನೆಂದು ಪರೀಕ್ಷಿಸಬೇಕೆಂದು ಹಠ ಬೆಳೆದಿದ್ದದ್ದರಿಂದ ಅವನು ಜೊತೆಗೆ ಹೋಗುವುದೇ ಸರಿಯೆಂದು ಹಾಸಿಗೆಯನ್ನು ಬಿಟ್ಟು ಎದ್ದನು. ಸದ್ದು ಮಾಡದೆ ಬೇಗ ಬೇಗ ಹೋಗಿ ಬಾಗಿಲನ್ನು ತೆಗೆದು ನೋಡಿದನು. ಪುಟ್ಟಲಕ್ಷ್ಮಿಯ ಆಕಾರ ಬೀದಿಯನ್ನು ಸೇರಿತ್ತು. ಇವನು, ದೇವರೇ ನೀನು ಕಾಪಾಡು, ಎನ್ನುತ್ತ ಅವಳ ಹಿಂದೆಯೇ ಹೋದನು. ಆ ಆಕಾರ ತೀವ್ರವಾಗಿ ಹೆಜ್ಜೆಯಿಡುತ್ತ ಊರ ದಕ್ಷಿಣಕ್ಕೆ ಹೊರಟಿತು. ಒಂದು ಸೀಳುದಾರಿ. ಅಲ್ಲಿ ಈ ಕಡೆಗೆ ಆ ಕಡೆಗೆ

ದೊಡ್ಡ ಮರಗಳು. ಕೊನೆಗೆ ಒಂದು ತಗ್ಗಿನಲ್ಲಿ ದೊಡ್ಡ ಮರದ ಅಡಿಯಲ್ಲಿ ಊರ ಭೂತದ ದೇವಾಲಯುವಿದೆ. ತಗ್ಗು ಹತ್ತಿರವಾದಹಾಗೆ ನರಸಿಂಹನಿಗೆ ಧೈರ್ಯ ಕುಗ್ಗುತ್ತ ಬಂದಿತು. ಆದರೆ ಹಿಂತಿರುಗುವುದು ಹೇಗೆ? ಅವನು ದೇವರನ್ನು ನೆನೆಯುತ್ತ ಮುಂದೆ ನಡೆದನು. ಸ್ವಲ್ಪ ಹೊತ್ತಿನಲ್ಲೆ ಅವನು ಗುಡಿಯ ಎದುರಿನಲ್ಲಿ ನಿಂತನು. ಒಳಗೆ ಭೂತದ ವಿಕಟಮೂರ್ತಿ. ಅದರ ಪಕ್ಕದಲ್ಲಿ ಒಂದು ದೀಪ. ಪುಟ್ಟಲಕ್ಷ್ಮಿಯ ಆಕೃತಿ ದೇವಾಲಯದ ಒಳಕ್ಕೆ ಹೋಯಿತು. ಅಲ್ಲಿ ಭೂತದ ಎದುರಿಗೆ ಮಂಡಿಯೂರಿ ನಮಸ್ಕಾರ ಮಾಡಿತು. ದೀಪದ ಮೇಲೆ ತನ್ನ ಬರಿಯ ಕೈಯನ್ನು ಹಿಡಿದು ಹಿಂಡಿದಂತೆ ಮಾಡಿತು. ಆ ಕೈಯಿಂದ ದೀಪದೊಳಕ್ಕೆ ಎಣ್ಣೆ ಸುರಿಯಿತು. ಆಮೇಲೆ ಆಕೃತಿ ತನ್ನ ನಾಲಗೆಯನ್ನು ನೀಡಿ ಆ ದೀಪದ ಬತ್ತಿಯನ್ನು ಮುಂದಕ್ಕೆ ತಳ್ಳಿ ಸರಿಪಡಿಸಿತು. ಇದಾದಮೇಲೆ ಮರಳಿ ಭೂತಕ್ಕೆ ಮಂಡಿಯೂರಿ ಎದ್ದು ಹೊರಕ್ಕೆ ಬಂದಿತು. ಆ ಆಕಾರ ಮೊದಲು ಮಂಡಿಯೂರಿದಾಗ ದೂರದಲ್ಲಿದ್ದ ನರಸಿಂಹನ್, ಇದು ಎದ್ದು ಎಣ್ಣೆಯನ್ನು ಹಿಂಡಿ ಬತ್ತಿಯನ್ನು ಸರಿಮಾಡಿ ಮರಳಿ ಮಂಡಿಯನ್ನು ಊರಿ ಎದ್ದು ತಿರುಗುವ ವೇಳೆಗೆ, ತನ್ನನ್ನು ಅರಿಯದೆ ಮೆಲ್ಲಮೆಲ್ಲನೆ ಗುಡಿಯ ಕಡೆಗೆ ಸರಿದು ಬಂದಿದ್ದನು. ನಿಜವಾಗಿಯೂ ಭಯಪಡುವ ಮನುಷ್ಯನಾದರೂ ಅವನಿಗೆ ಈ ಭೀಕರ ಸನ್ನಿವೇಶದಲ್ಲಿ ಆದದ್ದಾಗಲಿ ಎಂಬ ಒಂದು ನಿರಾಶೆಯ ಧೈರ್ಯ ಬಂದಿತ್ತು. ಇದು ಪಿಶಾಚಿ. ತನ್ನ ಮಗುವನ್ನು ಕೊಂದಿತ್ತು. ತನ್ನ ಹೆಂಡತಿಯನ್ನು ಕೊಂದಿತ್ತು. "ಇದನ್ನು ನಾನು ಬಿಡುವುದಿಲ್ಲ. ಹಿಡಿದು ಏಕೆ ಹೀಗೆ ಮಾಡಿದೆ ಎಂದು ಕೇಳುತ್ತೇನೆ" ಎಂದು ಅವನು ಮನಸ್ಸನ್ನು ಧೈರ್ಯ ಮಾಡಿಕೊಂಡು ಆ ಆಕೃತಿ ಬಾಗಿಲಿಗೆ ಬರುವ ವೇಳೆಗೆ ಅಡ್ಡಲಾಗಿ ನಿಂತನು. ಅದನ್ನು ಭದ್ರವಾಗಿ ಹಿಡಿದುಕೊಳ್ಳುವುದಕ್ಕೆ ಕೈಚಾಚಿ, ರಾಮಚಂದ್ರ ನನ್ನನ್ನು ಕಾಪಾಡು, ಎಂದು ಪಿಶಾಚವನ್ನು "ಯಾರು ನೀನು? ಏಕೆ ನನ್ನ ಮನೆಯನ್ನು ಹಾಳುಮಾಡಿದೆ?" ಎಂದು ಕೇಳಿ ಚೀರಿದನು. ಪುಟ್ಟಲಕ್ಷ್ಮಿಯ ಆಕಾರ ಇವನನ್ನು ಕಂಡು ಆಶ್ಚರ್ಯಪಟ್ಟಂತೆ ತೋರಿತು. "ಅಯ್ಯೋ ಕೊನೆಗೂ ನೀನು ನಿನ್ನ ಹಠವನ್ನು ಬಿಡಲಿಲ್ಲವೆ? ನನಗೆ ಆಸೆಯಿತ್ತು. ಒಳ್ಳೆಯ ಗಂಡ ಸಿಕ್ಕಿದನೆಂದುಕೊಂಡೆ. ಇನ್ನು ಕೊಂಚದಿನ ನೀನು

ಸುಮ್ಮನಿದ್ದಿದ್ದರೆ ನನ್ನ ಕರ್ಮ ಸವೆಯುತ್ತಿತ್ತು. ನನಗೆ ಪುಣ್ಯವಿಲ್ಲದೆ ಹೋಯಿತೆ'' ಎಂದು ಹೇಳಿದಂತೆ ತೋರಿತು. ಅದು ಮಾತನಾಡಿತೆಂದು ಹೇಳುವಂತಿರಲಿಲ್ಲ. ಹೇಳಿದ ಹಾಗೆ ಇವನ ಮನಸ್ಸಿಗೆ ತೋರಿತು. ಒಡನೆ ಅದರ ರೂಪು ವಿಕಾರವಾಯಿತು. ಏನೋ ಕಂಡಂತಾಗಿ ನರಸಿಂಹನ್ ರಾಮಾ ಎಂದು ಕೂಗುತ್ತ ಮೂರ್ಛೆ ಬಿದ್ದನು.

ಅವನು ಎದ್ದಾಗ ಹಗಲಾಗಿತ್ತು. ಹತ್ತಿರದಲ್ಲಿ ನಾಲ್ಕೈದು ಜನ ನಿಂತಿದ್ದರು. ಮಾತನಾಡುತ್ತಿದ್ದರು. ಯಾರೋ ಒಬ್ಬರು ''ಇದ್ಯಾಕೆ ಸ್ವಾಮಿ ಭೂತನ ಗುಡಿ ಹತ್ತಿರ ಬಂದಿದ್ದೀರಿ'' ಎಂದು ಕೇಳಿದರು. ಅಷ್ಟರಲ್ಲಿ ಇನ್ನು ಯಾರೋ ಬಂದು ''ಅದನ್ನೆಲ್ಲಾ ಆಮೇಲೆ ಕೇಳುವಿರಂತೆ, ಮೊದಲು ಅವರನ್ನು ಮನೆಗೆ ಕರೆದುಕೊಂಡು ನಡೆಯಿರಿ'' ಎಂದರು. ಈ ಮಾತನ್ನು ಹೇಳಿದವನು ಪಿಶಾಚದ ಕಥೆಯನ್ನು ಹೇಳಿದ್ದ ಮುದುಕ. ಎಲ್ಲರೂ ಸೇರಿ ನರಸಿಂಹನನ್ನು ಮನೆಗೆ ಕರೆತಂದರು. ಅವನಿಗೆ ಅಂದು ಜ್ವರ ಬಂದಿತು. ಬಹು ಹೆಚ್ಚಾಗಿ ಜ್ವರದಲ್ಲಿ ಸಿಕ್ಕಿ ಅವನು ಎಂಟು ದಿನದ ಮೇಲೆ ಎದ್ದನು. ತನಗೆ ಆದದ್ದನ್ನೆಲ್ಲಾ ನೆನೆದು ನಡುಗಿದನು.

ಇವನು ಜ್ವರದಲ್ಲಿ ಮಲಗಿದ ಸಮಾಚಾರ ತಿಳಿದೇ ಪೋಸ್ಟಾಫೀಸಿನ ಅಧಿಕಾರಿಗಳು ಆ ಊರಿಗೆ ಬೇರೊಬ್ಬ ಪೋಸ್ಟುಮೇಸ್ಟರನ್ನು ಕಳುಹಿಸಿದರು. ಇವನು ರಜಾಮುಗಿದಮೇಲೆ ಬೇರೊಂದು ಊರಿನಲ್ಲಿ ಸೇರುವಂತೆ ಅಪ್ಪಣೆ ಮಾಡಿದರು. ಜ್ವರ ನಿಂತು ಶಕ್ತಿ ಬಂದೊಡನೆಯೇ ನರಸಿಂಹನ್ ಆ ಊರನ್ನು ಬಿಟ್ಟು ಪ್ರಯಾಣಮಾಡಿದನು.

ಹೊರಡುವ ಮುಂದು ಪಿಶಾಚದ ಕತೆ ಹೇಳಿದ್ದ ಮುದುಕ ಇವನ ಬಳಿಗೆ ಬಂದು ''ಪಾಪ ನಮ್ಮೂರಿಗೆ ಬಂದು ತಮಗೆ ತೊಂದರೆ ಆಯಿತು'' ಎಂದನು. ನರಸಿಂಹನ್ ''ನೀವು ದೇವರ ಹಾಗೆ ನನಗೆ ಎಚ್ಚರಿಕೆ ಹೇಳಿದಿರಿ. ನಿಮ್ಮ ಮಾತನ್ನು ಕೇಳಿದ್ದರೆ, ನನಗೀಗ ಹೆಂಡತಿ ಮಗು ಇರುತ್ತಿದ್ದರು. ಕೇಳಲಿಲ್ಲ. ಹೀಗಾದೆ'' ಎಂದನು. ಅವನ ಕೈಗೆ ಎರಡು ರೂಪಾಯನ್ನು ಕೊಟ್ಟು ''ಬರುವ ಜನಕ್ಕೆ ನನ್ನ ಮಾತನ್ನು ಹೇಳಿ. ಹಿಂದಿನ ಕಥೆ ಎಂದು ಹೇಳಬೇಡಿ; ಇಂದಿನದೆಂದು ಹೇಳಿ. ಜನ ಎಚ್ಚರಿಕೆಯಿಂದ ಇರಲಿ'' ಎಂದು ಹೇಳಿದನು.

೩

ರಾಮರಾಯರು ನನಗೆ ಈ ಕಥೆಯನ್ನು ಹೇಳಿದರು. ಇದು ಮುಗಿಯುವ ಹೊತ್ತಿಗೆ ರಾತ್ರಿ ಸುಮಾರು ಹನ್ನೊಂದು ಗಂಟೆಯಾಯಿತು. ನಾನು ಸಹಜವಾಗಿ ಅಂಜುಬುರುಕ. ಈ ಕಥೆಯನ್ನು ಕೇಳಿ ನನಗೆ ನಿದ್ದೆ ಬರುವ ಸಂದರ್ಭ ಕಾಣಲಿಲ್ಲ. ನಾನು ರಾಯರನ್ನು, ರಾಯರೇ ಇದು ನಿಜವಾದ ಕಥೆಯೋ, ಎಂದು ಕೇಳಿದೆ. ಅವರು ಯಾಕೆ ಎಂದರು. ನಾನು, ಪಿಶಾಚ ದೀಪವನ್ನು ನಾಲಗೆಯಿಂದ ಸರಿಪಡಿಸುವುದು ಎನ್ನುವ ಮಾತು ನಮ್ಮಲ್ಲುಂಟೆ, ಎಂದು ಕೇಳಿದೆ. ಅವರು, ನನಗೆ ಗೊತ್ತಿಲ್ಲ, ಎಂದರು. ನಾನು "ಮಲೆನಾಡಿನ ಕಡೆ ನೀವಿದ್ದಿದೀರಲ್ಲ? ಅಲ್ಲಿ ಇದು ಜನರಲ್ಲಿ ನಂಬಿಕೆ ಇದೆಯೆ" ಎಂದೆ. ಅವರು "ಇರಬಹುದಪ್ಪ. ಒಂದೊಂದು ಊರಿಗೆ ಒಂದೊಂದು ಪಿಶಾಚಿ, ಒಂದೊಂದರದೂ ಒಂದೊಂದು ದಾರಿ" ಎಂದರು. ನಾನು "ನೀವು ಈ ಕಥೆಯನ್ನು ನಾಳೆ ಬೆಳಗ್ಗೆ ಹೇಳಿದ್ದರೆ ಚೆನ್ನಾಗಿತ್ತು. ಸಂಜೆಯ ಹೊತ್ತಿಗೆ ಇದರ ಅಮಲು ನನಗೆ ಮರೆಯುತ್ತಿತ್ತು. ಈಗ ರಾತ್ರಿ ಹೇಳಿಬಿಟ್ಟಿದೀರಿ. ನನಗೆ ನಿದ್ದೆ ಬರುವಂತಿಲ್ಲ" ಎಂದೆ. ರಾಯರು "ನೋಡಿ, ಇದು ಕಟ್ಟುಕಥೆ. ಇದು ನಿಜವಾಗಿ ನಡೆಯುವುದು ಉಂಟೆ? ಸಾಧ್ಯವೆ? ಆದರೆ ಏನು? ಹೇಳು ವವರು ಹೇಳಿದರೆ ಕೇಳುವವರು ನಂಬಿಬಿಡುತ್ತಾರೆ" ಎಂದರು. ನಾನು "ಕಟ್ಟಿದ ಕಥೆಯಿಂದರೂ ನನಗೆ ಒಡನೆಯೇ ನಿದ್ರೆ ಬರುವಂತಿಲ್ಲ" ಎಂದೆ. ರಾಮರಾಯರು ನಕ್ಕು ಇನ್ನೊಂದು ಮಗ್ಗುಲಿಗೆ ತಿರುಗಿಕೊಂಡರು. ಐದು ನಿಮಿಷದಲ್ಲಿ ಅವರು ನಿದ್ರಿಸುತ್ತಾ ಇರುವುದು ನನಗೆ ತಿಳಿಯಿತು. ನಾನು ನಿದ್ರಿಸಿದ್ದು ಆಮೇಲೆ ಎರಡು ಗಂಟೆಗೆ. ಇದನ್ನು ಓದುವ ನಿಮಗೆ ಹೇಳುತ್ತೇನೆ ಕೇಳಿ. ಇದು ಕಟ್ಟುಕಥೆ. ಇದರಲ್ಲಿ ನಿಜವಿಲ್ಲ. ಆದರೆ ಇದನ್ನು ರಾತ್ರಿ ಮಲಗುವ ಮೊದಲು ಓದಬೇಡಿ. ಹಾಗೆ ಓದಿಯೂ ನಿಮಗೆ ನಿದ್ರೆಗೆ ತೊಂದರೆಯಿಲ್ಲವೆನ್ನುವುದಾದರೆ ನೀವು ಪುಣ್ಯಶಾಲಿಗಳು. ಆಗ್ಯೆ ನಮ್ಮ ನಾಡಿನ ಜನರೆಲ್ಲ ನಿಮ್ಮಂತೆ ಪುಣ್ಯಶಾಲಿಗಳಾಗಬೇಕೆಂದು ಮಾತ್ರ ಪ್ರಾರ್ಥನೆಮಾಡಿ. ನಾವು ಬದುಕಿಕೊಳ್ಳುತ್ತೇವೆ.

# ಜೋಗ್ಯೋರ ಅಂಜಪ್ಪನ ಕೋಳೀಕತೆ

೧

ನಮ್ಮ ಊರಿನ ಹಳೇ ಮುದುಕರಲ್ಲಿ ಬಹಳ ಹಳಬ ಜೋಗ್ಯೋರ ಅಂಜಪ್ಪ. ಯಾವುದಾದರೂ ಮಾತಿಗೆ ಬಂದರೆ ಅಂಜಪ್ಪ, ತಾನು ಹೈದನಾಗಿದ್ದಾಗ ಅದು ಇದು ಆಯಿತು, ಎಂದು ಹೇಳುತ್ತಾನೆ. ಅಂಥ ಸಮಾಚಾರವನ್ನು ನೋಡಿದವರು ಇನ್ನು ಯಾರೂ ಈಗ ಜೀವಂತರಾಗಿಲ್ಲ. ಶಿಪಾಯಿ ದಂಗೆ ಆದ ಕಾಲಕ್ಕೆ ಅಂಜಪ್ಪ ಹುಡುಗನಂತೆ. ಈಗವನ ವಯಸ್ಸು ಕೇಳಿದರೆ ಅವನು ನೂರುವರುಷ ಇರಬೇಕು ಎನ್ನುತ್ತಾನೆ. ಈಗ ಹತ್ತುವರುಷದಿಂದ ಅವನಿಗೆ ನೂರು ವರುಷ ವಯಸ್ಸು. ಮುಖ್ಯವಾಗಿ ಈ ಕಾರಣದಿಂದ ಅಂಜಪ್ಪ ಎಲ್ಲಾ ಸಂದರ್ಭದಲ್ಲಿಯೂ ಎಂಥವರಿಗಾದರೂ ಬುದ್ಧಿ ಹೇಳುವ ಅಧಿಕಾರವನ್ನು ಪಡೆದಿದ್ದಾನೆ. ಈ ವಿಚಾರದಲ್ಲಿ ಇತರರಿಗೆ ಏನಾದರೂ ಸಂದೇಹವಿದ್ದರೂ ಅಂಜಪ್ಪನಿಗೆ ಲೇಶವಾದರೂ ಇಲ್ಲ. ಹೀಗೆ ಮಾಡು, ಹಾಗೆ ಮಾಡು, ಎಂದು ಅಂಜಪ್ಪ ಹೇಳಿದಾಗ ಯಾರಾದರೂ ಒಡನೆಯೇ ಒಪ್ಪದೇ ಇದ್ದರೆ ಅವನು "ಏನಯ್ಯ ಇದು? ನಿಮ್ಮಪ್ಪ ಮಗುವಾಗಿದ್ದಾಗ್ಗೆ ನನ್ನ ಗಡ್ಡ ನರೆತಿತ್ತು. ನನ್ಮಾತು ನಿನಗೆ ಹಗುರಾಯಿತೆ" ಎಂದು ಕೇಳುವನು. ಪ್ರಾಯಶಃ ವಿಸ್ತಾರವಾದ ಅವನ ಅನುಭವದ ಫಲವಾಗಿ ಅವನು ಕೊಡುವ ಬುದ್ಧಿವಾದ ಒಳ್ಳೆಯದಾಗಿಯೇ ಇರುತ್ತದೆ. ವಯಸ್ಸಿನಲ್ಲಿ ಜಾಂಬವಂತನಾಗಿದ್ದಹಾಗೆ ಅಂಜಪ್ಪ ಬುದ್ಧಿಯಲ್ಲಿ ಹನುಮಂತ.

ಮೂರು ದಿವಸದ ಹಿಂದೆ ಅಂಜಪ್ಪ ರಂಗಪ್ಪನ ಮನೆಗೆ ಬಂದಿದ್ದ. ರಂಗಪ್ಪನಿಗೆ ನಮ್ಮ ತಾಲ್ಲೂಕಿನಲ್ಲಿ ಬೆಂಚು ಮ್ಯಾಜಿಸ್ಟ್ರೇಟು ಕೆಲಸಕ್ಕೆ ನಿಯಮಿಸಿ ಈಗ ಕೆಲವು ದಿನಗಳ ಹಿಂದೆ ಆರ್ಡರು ಬಂದಿತು. ನಮ್ಮ ಊರಿನ ಜನಕ್ಕೆಲ್ಲಾ ಇದು ಬಹಳ ಸಂತೋಷ: ನಮ್ಮ ಶಾನುಭೋಗರು ಸಜಾಕೊಡುವ ಅಧಿಕಾರಾನ ಪಡೆದಿದ್ದಾರೆ ಎಂತ. ಹಳ್ಳಿಯ ಜನರಿಗೆ

ಈ ಸಜಾಕೊಡುವುದು ಎನ್ನುವುದು ಬಹು ದರ್ಪದ ಶಕ್ತಿ ಎಂದು ಭಾವನೆ. ಏನಿಲ್ಲ ಎಂದರೂ ಈ ಅಧಿಕಾರ ಬಂದವನು ಒಬ್ಬ ಸುಬೇದಾರರಿಗೆ ಸಮನಾದಹಾಗೆ ಲೆಕ್ಕ. ಪೂರ್ವದಲ್ಲಿ ಸುಬೇದಾರ್ರಿಗೆ ಮತ್ತು ಅವರಿಗೆ ಮೇಲ್ಪಟ್ಟವರಿಗೆ ಮಾತ್ರ ಈ ಅಧಿಕಾರವಿರುತ್ತಿತ್ತು. ಈಗ ಸರ್ಕಾರ ದವರು ಅದನ್ನು ಸುಬೇದಾರರಿಂದಲೂ ಕಿತ್ತುಕೊಂಡಿದಾರೆ ಎಂದು ಜನರ ಎಣಿಕೆ. ಆದ್ದರಿಂದ ಹಾಗೇನೇ ನೋಡಿದರೆ ಈ ಅಧಿಕಾರ ಬಂದ ಮನುಷ್ಯ ಸುಬೇದಾರರಿಗಿಂತ ಒಂದು ಗುಲುಗಂಜಿಯಷ್ಟು ಮೇಲಿನ ಹುದ್ದೆ ಪಡೆದ ಹಾಗೆಯೇ. ಗ್ರಾಮದ ಮುಖ್ಯ ವೃದ್ಧನಾದ ಅಂಜಪ್ಪ ತನ್ನೂರ ಶಾನು ಭೋಗರಿಗೆ ಬಂದ ಈ ಮರ್ಯಾದೆಯ ಸಮಾಚಾರವನ್ನು ಕೇಳಿ ಅವನನ್ನು ಮಾತನಾಡಿಸುವುದಕ್ಕೆ ಮತ್ತು ಸ್ವಲ್ಪ ಬುದ್ಧಿ ಹೇಳುವುದಕ್ಕೆ ಎಂದು ಬಂದ.

ಅಂಜಪ್ಪ ಬಂದದ್ದನ್ನು ನೋಡಿ ರಂಗಪ್ಪ "ಬಾ, ಅಂಜಪ್ಪ ಕುಳಿತುಕೋ" ಎಂದ.

ಅಂಜಪ್ಪ: ಏನಪ್ಪು ನಿನ್ಗೆ ಮೇಸ್ತ್ರೀಟು ಕೆಲಸ ಬಂತಂತಲ್ಲ. ಬಾಳಾ ಸಂತೋಸ.

ರಂಗಪ್ಪ: ಸಂತೋಸ ಏನೋ ಸರಿ ಅಂಜಪ್ಪ. ಆದರೇನು? ಬಿಟ್ಟಿ ದುಡಿಯೋದು. ದುಡ್ಡಿಲ್ಲ, ಕಾಸಿಲ್ಲ.

ಅಂಜಪ್ಪ: ದುಡ್ಡಿಲ್ಲೆ? ಯಾಕ ದುಡ್ಡಿಲ್ಲ?

ರಂಗಪ್ಪ: ಇದು ಬೆಂಚುಮೇಸ್ತ್ರೀಟು ಎಂತ ಮರ್ಯಾದೆಗೆ ಕೆಲ್ಸಾ ಮಾಡೋದು. ಇದಕ್ಕೆ ಸರ್ಕಾರದವರು ಸಂಬಳ ಕೊಡೋದಿಲ್ಲ.

ಅಂಜಪ್ಪ: ಸಂಬ್ಳಾ ಇಲ್ಲದೀರ ಇದ್ದರೂ ದುಡ್ಡು ಯಾಕಿಲ್ಲ? ಸಂಬ್ಳಾ ತಕ್ಕೊಳ್ಳೋರು ಸಂಬ್ಳಾನ ಮೇಲ್ಖರ್ಚಿನ ದುಡ್ಡು ಅಂತ ಮಾಡ್ತಿರ ಲಿಲ್ಲವಾ? ಸಂಬ್ಳಾ ಒಂದಾದರೆ ಸಂಪಾದನೆ ಹತ್ತು.

ರಂಗಪ್ಪ: ಅದೆಲ್ಲಾ ಪೂರ್ವಕಾಲದ ಮಾತು. ಈಗ ಲಂಚಾ ಗಿಂಚಾ ನಡೆಯೋದಿಲ್ಲ.

ಅಂಜಪ್ಪ: ನಡೆಯೋರಿಗೆ ನಡೀತದೆ. ಇಲ್ಲದೇ ಇದ್ದೋರಿಗೆ ಇಲ್ಲಾ ತಾನೆ. ಹೋಗ್ಲಿ, ಈಗ ನೀನು ಕೋಪ ಬಂದೆ ಸುಬೇದಾರ್ರ್ನ ನಿಲ್ಲಿಸಿ ಜುಲ್ಮಾನೆ ಹಾಕಬಹುದೋ ಇಲ್ಲೋ?

ರಂಗಪ್ಪ: ನೀನು ಮೇಸ್ತ್ರೀಟಾಗಿದ್ದರೆ ಹಾಗೆ ಮಾಡಬಹುದಾಗಿತ್ತು. ನಾನು ಶಾನುಭೋಗ ಸುಬೇದಾರ್‍ರಿಗೆ ಜುಲ್ಮಾನೆ ಹಾಕಿದರೆ ಖಾತೇ ಬರಲಿಲ್ಲ ಅಂತ ಅವರು ನನ್ನ ಕೆಲಸದಿಂದ ತೆಗೀತಾರೆ.

ಅಂಜಪ್ಪನಿಗೆ ಇದು ನ್ಯಾಯ ಎಂದು ತೋರಿತು. ಓ ಹೌದು ಎನ್ನುತ್ತಾ ಅವನು ಸಂಚಿಯನ್ನು ತೆಗೆದು ಅಡಕೆ ಎಲೆಯನ್ನು ಆರಿಸುವುದರಲ್ಲಿ ತೊಡಗಿದನು. ಅಂಜಪ್ಪನ ಸಂಚಿಯಲ್ಲಿ ಎಲೆಯೂ ಅಡಕೆಯೂ ಮೂರು ಪಾಲು ಅವನ ಹಾಗೆಯೇ ವಯಸ್ಸಾದುವು. ಅವನು ಆಗಾಗ ಎಲೆ ತೆಗೆದು ಕೊಳ್ಳುವುದಾದರೂ ಅಯ್ಯೋ ಇದು ಹೋಗುತ್ತದಲ್ಲಾ ಎಂದು ಬಹಳ ಬಾಡಿರುವ ಎಲೆಯನ್ನೇ ಹಾಕಿಕೊಳ್ಳುವನು. ಅದನ್ನು ಎಸೆಯುವುದಕ್ಕೆ ಇಷ್ಟವಿಲ್ಲ. ಬಾಡಿರುವ ಎಲೆ ಮುಗಿಯುವ ವೇಳೆಗೆ ಹೊಸದಾಗಿ ತೆಗೆದು ಕೊಂಡ ಎಲೆಯೂ ಬಾಡುತ್ತ ಬಂದಿರುವುದು. ಅಂತು ಸಂಚಿಯಲ್ಲಿ ನಾಲ್ಕು ಹಸುರು ಎಲೆ ಇದ್ದರೂ ಅವನು ಹಾಕಿಕೊಳ್ಳುವುದು ಬಾಡಿದ ಎಲೆಯನ್ನೇ. ಅವನ ಸಂಚಿಯ ಅಡಕೆಯೂ ಪ್ರಸಿದ್ಧ. ಅಡಕೆ ಎನ್ನುವುದು ಎಲೆಯೊಡನೆ ಅಗಿದು ನುಂಗುವ ಪದಾರ್ಥ ಎಂದು ತಿಳುವಳಿಕೆಯಿಲ್ಲದವರ ಭಾವನೆ. ಅಡಕೆಯ ಉದ್ದೇಶ ಮುಖ್ಯವಾಗಿ ಬಾಯಲ್ಲಿ ನೀರೂರಿಸುವುದು ಮಾತ್ರ, ತಾನು ನೀರಾಗುವುದಲ್ಲ. ಬಹಳ ಹೊತ್ತು ಬಾಯಲ್ಲಿಟ್ಟುಕೊಂಡು ನೀರೂರಿ ನೆನೆದಮೇಲೆ ಅದು ಎಲೆಯೊಂದಿಗೆ ಚೂರ್ಣವಾಗಬೇಕು. ಬಾಯಿಗೆ ಹಾಕಿಕೊಂಡು ಸ್ವಲ್ಪಹೊತ್ತಿಗೆ ಮೆದುವಾಗಿಬಿಟ್ಟರೆ ಅರವತ್ತು ಗಳಿಗೆಯೂ ಎಲೆ ಅಡಕೆ ಹಾಕೋದಕ್ಕೆ ಎಷ್ಟು ಅಡಕೆ ಆದರೆ ಸಾಕಾದೀತು? ಅಂಜಪ್ಪ ಬಾಡಿದ ಒಂದು ಎಲೆಯನ್ನೂ ಸಣ್ಣ ಒಂದು ಅಡಕೆಯನ್ನೂ ಬಾಯಿಗೆ ಹಾಕಿಕೊಂಡು ಸುಣ್ಣದಕಾಯಿಂದ ಸ್ವಲ್ಪ ಸುಣ್ಣವನ್ನು ತೆಗೆದುಕೊಂಡು "ಅದಿರಲಿ, ನಾನು ನಿನಗೆ ಒಂದು ಮಾತು ಹೇಳಬೇಕು ಅಂತ ಬಂದೆ" ಎಂದ.

ರಂಗಪ್ಪ: ಏನು ಮಾತು ಅಂಜಪ್ಪ? ಹೇಳು, ನೀನು ಅನುಭವಸ್ಥ. ನಮ್ಮಂತವರಿಗೆ ತಿಳಿಯಬೇಕಾದದ್ದು ನಿನಗೆ ನೂರು ಮಾತು ಗೊತ್ತಿದೆ.

ಅಂಜಪ್ಪ: ಅದಕಾಗಿಯೇ ನಾ ಬಂದದ್ದು. ನೀನು ಮೇಸ್ತ್ರೀಟಾಗಿದ್ದೀಯಲ್ಲಾ. ಜನರು ಎದುರಿಗೆ ಬಂದಾಗ ಇವರು ಸತ್ಯವಂತ್ರು, ಇವರು ಕಳ್ರು, ಅಂತ ಸರಿಯಾಗಿ ತಿಳಿದು ಶೀಕ್ಷೆ ಕೊಡಬೇಕು. ಈ ಪೋಲಿಸೋರೂ

ಲಾಯರೀಗಳೂ ಹೇಳೋ ಮಾತು ಕೇಳಿಬಿಟ್ಟು ಶೀಕ್ಷೆ ಕೊಡಬಾರದು. ಅದನ್ನ ನಿನಗೆ ಹೇಳೋಕೆ ಬಂದೆ.

ರಂಗಪ್ಪ: ಅದೇನೋ ಸರಿ. ಆದರೆ ಸತ್ಯವಂತ್ರು ಕಳ್ರು ಅನ್ನೋದು ಅವರ ಮಾತು, ಇವರ ಮಾತಿನಿಂದ ತಿಳಿಯಬೇಕು. ಮೇಸ್ಟ್ರೇಟು ಇನ್ನೇನು ಮಾಡೋಕೆ ಆಗ್ತದೆ.

ಅಂಜಪ್ಪ: ಮೇಸ್ಟ್ರೇಟು ಅಂದಮೇಲೆ ನಿಜ ಹೇಗಿರಬಹುದು ಎಂತ ಯೋಚನೆ ಮಾಡಬೇಕು. ಎದುರಿಗೆ ಬಂದಿರೋ ಮನುಷ್ಯನನ್ನ ಏನು ಅಂತ ಕೇಳಬೇಕು.

ರಂಗಪ್ಪ: ಅಂಜಪ್ಪಾ ನೀನು ಕೋಪಿಸಿಕೋಬೇಡ. ನಿನ್ನ ಒಂದು ಮಾತು ಕೇಳ್ತೀನೆ.

ಅಂಜಪ್ಪ: ಏನು ಕೇಳಪ್ನ, ಕೋಪ ಯಾಕೆ?

ರಂಗಪ್ಪ: ನಿನ್ಮೇಲೆ ಯಾವಾಗಲಾದರೂ ಮೇಸ್ಟ್ರೀಟ್ ಫಿರ್ಯಾದಾಗಿತ್ತೆ?

ಅಂಜಪ್ಪ: ಸೈ, ನನ್ನ ಪಂತಕಾರಿ, ಅದ್ನೇ ಅಣ್ಣ ನಾನು ಹೇಳೋಕೆ ಬಂದಿದ್ದು ನಿನ್ಗೆ. ಒಂದು ಕೋಳಿ ಕದ್ದೆ ಅಂತ ಫಿರ್ಯಾದು ಮಾಡಿದರು. ಕದೀಲಿಲ್ಲ ಅಂತ ನಾನು. ಕದ್ದ ಅಂತ ಅವರು. ಕೊನೆಗೆ ನಾನು ತಪ್ಪಿತಸ್ತ ಅಂತ ಮಾಡಿದರು. ಇಪ್ಪತ್ತು ರೂಪಾಯಿ ಜುಲ್ಮಾನೆ ಕೊಟ್ಟರೆ ಹಾಗೆಬಿಡುತ್ತೀವಣ್ಣ, ಆಗದಿದ್ದರೆ ಜೈಲು ಅಂದರು. ಜುಲ್ಮಾನೆ ಕೊಟ್ಟು ಮಾನವಾಗಿ ಬಂದಿ.

ರಂಗಪ್ಪ: ನೀನು ಕೋಳಿ ಕದ್ದೆ ಅಂತ ಅವರು ಹ್ಯಾಗೆ ಹೇಳಿದರು? ಕೋಳಿ ನಿನ್ನ ಹತ್ತಿರ ಇತ್ತೇನು?

ಅಂಜಪ್ಪ: ಇತ್ತು ನನ್ನಪ್ನ, ಹಾಳುಮುಂಡೇ ಕೋಳಿ ನನ್ನ ತಾವ ಇರೋವತ್ತಿಗೇ ಅಲ್ಲವಾ ನಾನು ಸಿಕ್ಕೊಂಡದ್ದು.

ರಂಗಪ್ಪ: ಇನ್ನು ನೀನು ಕದ್ದ ಹಂಗಾಯಿತಲ್ಲ.

ಅಂಜಪ್ಪ: ಅದ್ನೆ ಅಪ್ನ ನಾನು ಹೇಳೋದೂ. ಕೋಳಿ ನನ್ನ ತಾವಿತ್ತು. ಆದ್ರೆ ನಾನು ಅದನ ಕದೀಲಿಲ್ಲ.

ರಂಗಪ್ಪ "ಹಾಗಾದಮೇಲೆ ಏನು ಸಮಾಚಾರ ಸರಿಯಾಗಿ ಹೇಳಿಬಿಡು ಕೇಳೋಣಂತೆ" ಎಂದ. ಅಂಜಪ್ಪ ಹೇಳಿದ.

೨

ಇದು ನಡೆದದ್ದು ಸುಮಾರು ನಲವತ್ತು ವರುಷದ ಹಿಂದೆ ಇರ ಬಹುದು. ಆಗ್ಗೆ ಅಂಜಪ್ಪನಿಗೆ ಮಧ್ಯದ ವಯಸ್ಸು. ಆಗಿನ ದಿವಸಕ್ಕೆ ಅವನು ತನ್ನ ಕಸಬಿಗಾಗಿ ಊರು ಊರು ಸುತ್ತುತ್ತಾ ಇದ್ದ. ಜೋಗಿ ಯವರ ಕಸಬು ಅಂದರೆ ಸೊಗಸಾಗಿ ವೇಷ ಹಾಕಿಕೊಂಡು ಎಡಹೆಗಲಿಗೆ ಜೋಳಿಗೆ ಬಲಹೆಗಲಿಗೆ ಕಿಂದರಿ ತೂಗುಹಾಕಿಕೊಂಡು ತಾತನ ಕಾಲದಿಂದ ಬಂದ ಪದಗಳನ್ನ ಹಾಡುತ್ತಾ ಊರೆಲ್ಲ ಭಿಕ್ಷ ಎತ್ತುವುದು. ಅಂಜಪ್ಪನ ತಾತ ಮುತ್ತಾತನ ಕಾಲಕ್ಕೆ ಜೋಗಿಗಳು ಭಿಕ್ಷ ಎತ್ತುವುದು ಹೊರತು ನೆಲ ಉತ್ತದ್ದಿಲ್ಲ. ಈಚೆಗೆ ಕಾಲ ಕೆಟ್ಟುಹೋಗಿ ಜೋಗಿಗಳೂನೂ ಸಾಗುವಳೀ ಕೆಲಸ ಮಾಡುತ್ತಾ ಇದಾರೆ. ಅಂಜಪ್ಪ ಇದನ್ನು "ಬ್ಯಾಮಣರು ಪ್ಯಾಟೆ ಗಳಾಗೆ ಜೋಡಿನ ಅಂಗಡಿ ಇಟ್ಟಿರೋಹಂಗೆ" ಅಂತ ವರ್ಣಿಸುತಾನೆ. ಭಿಕ್ಷೆ ಬೇಡಬೇಕು ಅಂದರೆ ನೀಚವೃತ್ತಿ ಎಂದು ನಾವು ತಿಳಿಯುಬಹುದು. ಅಂಜಪ್ಪ ಈ ಮಾತನ್ನು ಒಪ್ಪುವವನಲ್ಲ. "ಜೋಗಿ ಅಂದ್ರೆ ಏನು ಸುಮ್ಮನೆ ಆಯಿತ? ಇಪ್ಪತ್ತು ವರ್ಸ ಅಪ್ನ ಜೊತೆಗೋ ಮಾವನ ಜೊತೆಗೋ ಕಿಂದ್ರಿ ಹೊತ್ತುಕೊಂಡು ತಿರುಗಿ, ಹಾಡೋ ಪದಾನ ಜೊತೆಗೆ ಹಾಡ್ತಾ, ಕಸಬು ಕಲಿಯೋದು ಅಂದ್ರೆ ಬಿಟ್ಟೀಯಾಯ್ತೇನಪ್ಪ? ಯಾವ ಹೈದಾ ಬೇಕಾದ್ರೂ ನೇಗಿಲ ಹಿಂದೆ ನಿಂತುಕೊಂಡು ಎತ್ತಿನ ಬಾಲಾ ತಿರುವಿ ಚೊ ಚೊ ಎನ್ನಬಹುದು. ಪದಾ ಕಲಿಯೋದ್ಕೆ ನಾಲ್ಗೆ ಬೇಡಾ? ಬುದ್ಧಿ ಬೇಡಾ? ಉಂ ಅಂದ್ರೆ ಬಂದುಬಿಡ್ತದೆಯಾ? ಲಕ್ಷ್ಮೀ ಅಂತಾ ಅನ್ನೋದಕ್ಕೆ ಎಲ್ಲಾರಿಗೂ ಬರ್ತದೆಯಾ? ಅನ್ನು ಅಂತ ಕೇಳು. ಕ್ಸಿಟ್ಮೀ ಕ್ಸಿಟ್ಮೀ ಅಂತ ಸೀನುತಾರೆ. ದ್ರೌಪದದೇವಿ ಅನ್ನೋಕೆ ಬಾಯಿ ತಿರುಗೋದು ಸುಲಬಾಯ್ತಾ? ನಾನು ಕಸಬು ಕಲ್ತೀ ಅನ್ನೋಕಾದ್ರೆ ನನಗೆ ಇಪ್ಪತ್ತೈದು ವರ್ಸ ಆಗಿತ್ತು. ಆಮೇಲೆ ನಮ್ಮಪ್ಪ 'ಈಗ ಪರವಾ ಇಲ್ಲ. ನೀನೊಬ್ಬನೇ ಹೋಗಬಹುದು' ಅಂತ ಬಿಟ್ಟ" ಎನ್ನುವನು. ಎಂದರೆ ಜೋಗಿಯಾಗ ಬೇಕಾದರೆ ಈಗ ನಾವು ಬಿ. ಎ. ಡಿಗ್ರಿ ಪಡೆಯುಬೇಕಾದರೆ ಹೇಗೋ ಹಾಗೆ ಕಷ್ಟ. ಅಂಜಪ್ಪ ನಮ್ಮ ಸುತ್ತಿನ ಅರವತ್ತು ಎಪ್ಪತ್ತು ಗ್ರಾಮಗಳಲ್ಲಿ ಓಡಿಯಾಡುತ್ತಿದ್ದನೆಂದು ನನಗೆ ತೋರುತ್ತದೆ. ಜೋಗಿಯಾದವನು ಮನೆ

ಬಿಟ್ಟು ಹೊರಡಬೇಕಾದರೆ ಎಲ್ಲಾ ಭಿಕ್ಷುಕರಹಾಗೆ ಹೊರಡುವುದಕ್ಕಿಲ್ಲ. ನಾಟಕದಲ್ಲಿ ರಾಜನ ಪಾತ್ರವನ್ನು ವಹಿಸುವವನು ಹೇಗೆ ಮುಖಕ್ಕೆ ಹುಬ್ಬಿಗೆ ಕೆನ್ನೆ ಮೀಸೆ ತುಟಿಗೆ ಬಣ್ಣಗಳನ್ನು ಹಾಕಿಕೊಳ್ಳುವನೋ ಹಾಗೆ ಹಾಡು ವುದಕ್ಕೆ ಹೋಗುವ ಜೋಗಿ ಸಂಪ್ರದಾಯದ ಪ್ರಕಾರ ಅಲಂಕಾರ ಮಾಡಿಕೊಳ್ಳಬೇಕು. ಜೋಗಿ ಶೈವನೂ ಅಲ್ಲ ವೈಷ್ಣವನೂ ಅಲ್ಲ; ಕ್ಷುದ್ರ ದೇವತೆಗಳನ್ನು ಪೂಜಿಸುವವನೂ ಅಲ್ಲ; ಇದಿಷ್ಟರಲ್ಲಿ ಯಾವುದನ್ನೂ ಬಿಟ್ಟವನೂ ಅಲ್ಲ. ಆದದ್ದರಿಂದ ಅವನ ಮುಖದ ಮೇಲೆ ವಿಭೂತಿ ಕುಂಕುಮ ಅರಿಸಿನ ಈ ಮೂರೂ ಬೆರೆತಿರುವುವು. ಜೊತೆಗೆ ಕಾಡಿಗೆ. ಜೋಗಿಯ ಕಣ್ಣು ಬಹು ಕ್ರೂರವಾದದ್ದು. ಅದರಿಂದ ಜನಕ್ಕೆ ಕೇಡಾಗದೆ ಇರುವುದಕ್ಕೆ ಅವನು ಕಣ್ಣಿಗೆ ಕಾಡಿಗೆ ಹಚ್ಚಿಕೊಂಡೇ ತಿರುಗುವನು. ಅದರಲ್ಲಿಯೂ ಆ ಪದಗಳನ್ನು ಹೇಳುವ ಹೊತ್ತಿನಲ್ಲಿ ಭೀಮ ಹನುಮಂತರ ಪಾತ್ರಗಳ ಮಾತನ್ನು ಹೇಳುವಾಗ ಕಣ್ಣಿಗೆ ಕಾಡಿಗೆ ಇರದೇ ಇದ್ದರೆ ಆ ತೀಕ್ಷ್ಣವಾದ ದೃಷ್ಟಿ ಏನಾದರೂ ಜನಕ್ಕೆ ಸೋಕಿದರೆ ಅವರು ಅಲ್ಲಿಯೇ ಮೂರ್ಛೆ ಹೋದಾರು. ಮುಖಕ್ಕೆ ಒಂದು ಅಲಂಕಾರವಿರುವ ಹಾಗೆ ಆ ಬಟ್ಟೆಯೂ ಒಂದು ರೀತಿಯದಾಗಿರಬೇಕು. ರುಮಾಲು ಮೂರು ಬಣ್ಣಕ್ಕೆ ಕಡಮೆ ಇಲ್ಲದೆ ಬಣ್ಣಗಳ ಚಿಂದಿಗಳಿಂದ ಮಾಡಿದ್ದಾಗಿರಬೇಕು. ಅಂಜಪ್ಪ ಪ್ರಾಯದಲ್ಲಿ ನೋಡುವುದಕ್ಕೆ ಚೆನ್ನಾಗಿದ್ದ. ಈ ವೇಷವನ್ನು ಹಾಕಿಕೊಂಡು ಅವನು ಪದ ಹೇಳುತ್ತಾ ಬಂದರೆ ಊರಿನ ಹೆಂಗಸರು ಮಕ್ಕಳು ಅವನನ್ನು ಸುಮ್ಮನೆ ಸುತ್ತಿಕೊಳ್ಳುವರು. ದೊಡ್ಡ ಗೌಡರ ಮನೇ ಮುಂದೆಯೆಲ್ಲಾ ಹೆಂಗಸರು ಅವನನ್ನು ಕೂರಿಸಿ ಪದವನ್ನು ಹೇಳಿಸಿ ಕಳುಹಿಸುವರು. "ನಾನು ಬಹಳಾ ಪದಾ ಹೇಳಿವ್ನಿ ಬಹಳಾ ಜನಕ್ಕೆ ಸಂತೋಸ ಪಡಿಸಿವ್ನಿ" ಎಂತ ಅಂಜಪ್ಪ ಆಗಾಗ ಹೇಳುತ್ತಾನೆ. ಈ ನಲವತ್ತು ವರ್ಷದ ಹಿಂದೆ ಅಂತ ಅನ್ನೋ ಕಾಲದಲ್ಲಿ ಇವನ ಜೋಗಿ ಕಸಬು ಬಹಳ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತು, ಇವನು ಬಹಳ ಜನಕ್ಕೆ ಬೇಕಾಗಿದ್ದನು.

ಇವನು ಹೋಗುತ್ತಿದ್ದ ಊರುಗಳಲ್ಲಿ ಕಾಳಾಪುರ ಒಂದು. ನಾನು ಊರಿನ ಹೆಸರನ್ನು ನಿಜವಾಗಿ ಹೇಳುತ್ತಿಲ್ಲ. ಕಾಳಾಪುರ ಎಂದು ಒಂದು ಊರು ಇದ್ದರೆ ನಾನು ಹೇಳುತ್ತಿರುವುದು ಆ ಊರನ್ನು ಅಲ್ಲವೆಂದು ತಿಳಿಯು

ಬೇಕು. ನಾನು ಹೇಳುವುದು ಒಂದು ಊಹೆಯ ಹೆಸರು. ಕಾಳಾಪುರ ತಕ್ಕಮಟ್ಟಿಗೆ ದೊಡ್ಡ ಊರು. ಆದದ್ದರಿಂದ ಅಂಜಪ್ಪ ಅಲ್ಲಿ ಹೋದಾಗ ಎರಡು ದಿವಸ ಮೂರು ದಿವಸ ಇದ್ದುಬಿಡುವುದೂ ಉಂಟು. ಅಂಜಪ್ಪ ನೋಡುವುದಕ್ಕೆ ಚೆನ್ನಾಗಿದ್ದನೆಂದು ಹೇಳಿದೆನಷ್ಟೆ. ಅದು ನಾವು ಜ್ಞಾಪಕ ದಲ್ಲಿಟ್ಟುಕೊಳ್ಳಬೇಕಾದ ಮಾತು. ಇದರ ಜೊತೆಗೆ ಇವನು ಅಲಂಕಾರ ಬೇರೆ ಮಾಡಿಕೊಂಡು ಹಳ್ಳಿಗೆ ಹೋದರೆ ಇವನ ರೂಪಕ್ಕೆ ಮೆಚ್ಚುವ ಹಳ್ಳಿಯ ಹೆಂಗಸರು ಇರುತ್ತಿದ್ದದ್ದು ನಾಟಕದಲ್ಲಿ ಸುಂದರನಾದ ನಟನನ್ನು ಮೆಚ್ಚುವ ಸ್ತ್ರೀಯರಿರುವಂತೆ ಸಹಜವಾದದ್ದೇ. ಸ್ವಲ್ಪ ವಯಸ್ಸಾದ ಹೆಂಗಸರಾದರೆ ಅವರ ಜೊತೆಗೆ ಕೂತು ಮಾತನಾಡುವುದಕ್ಕೆ ಅಂಜಪ್ಪ ಹಿಂತೆಗೆಯುತ್ತಿರಲಿಲ್ಲ. ಯಾಕೆಂದರೆ, ಇವನ ಸಂಗಡ ಮಾತನಾಡಿದ್ದ ಕ್ಕಾಗಿ ಅವರನ್ನು ಗದರಿಸುವವರು ಇರುತ್ತಿರಲಿಲ್ಲ. ಸ್ವಲ್ಪ ಚಿಕ್ಕವಯಸ್ಸಿನವ ರಾದರೆ ಅಂಜಪ್ಪ ಹಿಂತೆಗೆಯುತ್ತಿದ್ದ. ಮನೆಯ ಗಂಡಸರು ನೋಡಿದರು : "ಏನಯ್ಯ ಜೋಗಿ, ಭಿಕ್ಷ ತೆಗೆದುಕೊಂಡು ಹೋಗುವುದು ಬಿಟ್ಟು ಮನೆ ಹೆಂಗಸರ ಕೂಡ ಸರಸವಾಡುತ್ತಾ ಇದ್ದೀಯಾ? ನಡಿ ಆಚೆಗೆ" ಎನ್ನು ವರು. ಹೊರಗಿನವರು ಕಂಡರು : "ಏನು ಜೋಗಪ್ಪಾ ಪರವಾಯಿಲ್ಲ" ಎಂದು ನಗುವರು. ಭಿಕ್ಷೆಯಿಂದ ಜೀವಿಸುವ ಮನುಷ್ಯನಿಗೆ ಈ ಎರಡು ಮಾತೂ ಕಷ್ಟವೇ. ಕಾಳಾಪುರದಲ್ಲಿ ಒಂದು ಸಲ ಇವನು ಹೋಗಿದ್ದಾಗ ಆ ಊರಿನ ಗೌಡನ ಹೆಂಡತಿ ಇವನನ್ನು ಕೂರಿಸಿಕೊಂಡು ಪದ ಕೇಳಿದ ಳಂತೆ. ಗೌಡನಿಗೆ ಅವಳು ಮೂರನೆಯ ಹೆಂಡತಿ. ಪದ ಹೇಳಿದ ಮೇಲೆ ಅವಳು ಇವನಿಗೆ ಸ್ವಲ್ಪ ಎಲೆ ಅಡಕೆ ಕೊಟ್ಟಳು. ಇವನು ಹಾಕಿಕೊಂಡು ಸ್ವಲ್ಪ ಹೊತ್ತು ಕುಳಿತ. ಮಧ್ಯೆ ಗೌಡ ಬಂದು ಇವನ ಮೇಲೆ ಬಹಳ ಕೋಪಿಸಿಕೊಂಡ. ಅಂಜಪ್ಪ ಸಾಮಾನ್ಯವಾಗಿ ಬದಲು ಹೇಳುವವನಲ್ಲ. ಗೌಡ ಸ್ವಲ್ಪ ಕೆಟ್ಟ ಮಾತು ಹೇಳಿದ್ದರಿಂದ ಇವನಿಗೂ ರೇಗಿತು. "ನನ್ನ ಏನೋ ಮಾತನಾಡಿಬಿಟ್ಟರಿ, ಗೌಡರೇ. ನೀವು ನಿಮ್ಮ ಹೆಂಡಿರನ್ನ ಏನೆಂದು ತಿಳಿದುಕೊಂಡಿದ್ದೀರ? ನೀವು ಮಾನವಂತರಾದರೆ ನಿಮ್ಮ ಹೆಂಡರಿಗೆ ಹೇಳಿರ, ನನ್ಯಾಕೆ ಬಯ್ತೀರ" ಎಂದ. ಗೌಡ "ಎಚ್ಚರಿಕೆಯಿಂದ ಇರು ಜೋಗೀ, ಯಾವಾಗಲಾದರೂ ಬಲಿಹಾಕಿಬಿಟ್ಟೇನು" ಎಂದ. ಅಂಜಪ್ಪ

ತಾನೂ ಬದಲಿಗೆರಡು ಮಾತು ಹೇಳಿ ಜೋಳಿಗೆ ತೆಗೆದುಕೊಂಡು ಹೊರಟು ಹೋದ.

ಇದಾದಮೇಲೆ ಅಂಜಪ್ಪ ಕಾಳಾಪುರಕ್ಕೆ ಒಂದು ಸಲವೋ ಎರಡು ಸಲವೋ ಹೋಗಿದ್ದ. ಏನೂ ವಿಶೇಷ ನಡೆಯಲಿಲ್ಲ. ಮೂರನೆಯ ಸಲ ಹೋಗಿದ್ದಾಗ ಆ ಊರಿನ ಎಂಥದೋ ಕೇರಿಯಲ್ಲಿ ಒಂದು ಜಗಲಿಯ ಮೇಲೆ ಕೂತು ಪದ ಹೇಳುತ್ತಿರಬೇಕಾದರೆ ಪಕ್ಕದ ಮನೆ ಹೆಣ್ಣು ಒಬ್ಬಳು ಪದವನ್ನು ಕೇಳುತ್ತಾ ಅವರ ಬಾಗಿಲಲ್ಲಿ ನಿಂತುಕೊಂಡಳು. ಪದವನ್ನು ಮುಗಿಸಿ ಜೋಗಿ ಹೊರಡುವುದರಲ್ಲಿ ಇದ್ದನು. ಆಗ ಅವಳು ಅವನನ್ನು ಕರೆದು ಅವನಿಗೆ ಸ್ವಲ್ಪ ಭಿಕ್ಷ ಹಾಕಿದಳು. ಮಾರನೆಯ ದಿವಸ ಅಂಜಪ್ಪ ಅಲ್ಲಿಗೆ ಹೋಗಿ ಪದಹೇಳಿದ. ಆ ಹೆಣ್ಣು ಅವನನ್ನು ಕರೆದು ತನ್ನ ಮನೆಯ ಹತ್ತಿರ ಕೂರಿಸಿ ಪದ ಹೇಳಿಸಿ ಭಿಕ್ಷ ಹಾಕಿದಳು. ಅದು ಹಳ್ಳಿಗೆ ತಕ್ಕಮಟ್ಟಿಗೆ ದೊಡ್ಡ ಮನೆ. ಅಂಜಪ್ಪ ಅದು ಯಾರ ಮನೆ ಎಂದು ವಿಚಾರಿಸಿದ. ಆ ಹುಡುಗಿ ಯಾರ ಮಗಳೆಂದು ವಿಚಾರಿಸಿದ. ಯಾರದೋ ಮನೆ. ಅದರ ಹೆಸರು ನನಗೆ ಈಗ ಜ್ಞಾಪಕವಿಲ್ಲ. ಅವರು ಪುಣ್ಯವಂತರು. ಆ ಹುಡುಗಿಯ ಗಂಡ ಪೋಲೀ ಬಿದ್ದಿದ್ದ. ಹುಡುಗಿ ಅಷ್ಟೇನೂ ಒಳ್ಳೆಯವಳಲ್ಲವಂತೆ. ಅದು ಅಂಜಪ್ಪನಿಗೆ ಆಗ ತಿಳಿಯದು. ಮನೆಯಲ್ಲಿ ಆ ಹುಡುಗಿ, ಅವಳ ಗಂಡ, ಅವಳ ಅತ್ತೆ, ಮೂರೇ ಜನ. ಅವರು ಕೋಳಿ ಸಾಕುತ್ತಾ ಇದ್ದರು. ಕೋಳೀ ವ್ಯಾಪಾರವನ್ನೂ ಮಾಡುತ್ತಾ ಇದ್ದರಂತೆ. ಅಂಜಪ್ಪ ಆಮೇಲೆ ಕಾಳಾಪುರಕ್ಕೆ ಹೋದಾಗ ಪುನಃ ಅವರ ಮನೆಗೆ ಹೋದ. ಹುಡುಗಿ ಬಹಳ ಚೆನ್ನಾಗಿರುವಳು. ಅಂಜಪ್ಪನಿಗೆ ಕೆಟ್ಟ ಉದ್ದೇಶವೇನೂ ಇಲ್ಲ. ಆದರೆ ಅವಳು ಬಹಳ ಮೆಚ್ಚುವುದರಿಂದ ಅವಳಿಗೆ ಪದ ಹೇಳಬೇಕು, ಅವಳು ಸಂತೋಷಪಡುವುದನ್ನು ನೋಡಬೇಕು, ಎಂದು ಇವನಿಗೆ ಚಪಲ. ಕೇರಿಯ ಜನಕ್ಕೆ ಪದ ಹೇಳಿ ಅವರೆಲ್ಲಾ ಹೊರಟುಹೋದಮೇಲೆ ಅಂಜಪ್ಪ ಈ ಹುಡುಗಿಯ ಮನೆ ಬಾಗಿಲಿನ ಮುಂದೆ ಕುಳಿತು ಎಲೆ ಅಡಕೆ ಹಾಕಿಕೊಳ್ಳುತ್ತಿದ್ದ. ಸ್ವಲ್ಪ ಹೊತ್ತಿನ ಮೇಲೆ ಹುಡುಗಿ ಬಾಗಿಲ ಬಳಿ ಬಂದು "ಜೋಗ್ಯಪ್ಪ ನೀನು ಈ ಊರಿಂದ ಕೆಡೆದುಹೋಗುವಾಗ ಹೀಗೇ ಬಂದು ಹೋಗು" ಎಂದಳು. ಅಂಜಪ್ಪ "ಯಾಕಮ್ಮಾ ನಾನು ಈಗ ಹೊರಡು

ವನೆ" ಎಂದ. ಅವಳು "ನಿನ್ನ ಪದ ಕೇಳಿ ಬಹಳ ಸಂತೋಸ ಆಯ್ತು. ನಿನಗೇನಾದರೂ ಕೊಡೋಣಾಂತ ಬಹಳ ಸಲಾ ಅಂದುಕೊಂಡೆ. ಅಾದರೆ ನೀನು ಅದನ್ನು ತೆಕ್ಕೊಂಡು ಬೇಗನೆ ಹೊರಟುಬಿಡಬೇಕು. ನಮ್ಮತ್ತೆಗೆ ತಿಳಿದರೆ ತಂಟೆಮಾಡ್ತಾಳೆ" ಎಂದಳು. ಅಂಜಪ್ಪನಿಗೆ ತೆಗೆದುಕೊಳ್ಳುವುದಕ್ಕೆ ಭಯ. ಒಲ್ಲೆ ಎನ್ನುವುದಕ್ಕೆ ಇಷ್ಟವಿಲ್ಲ. ಆದರೆ ಇವನು ಏನು ಹೇಳು ವುದಕ್ಕೂ ಮುಂದಾಗಿ ಹುಡುಗಿ ಒಳಗೆ ಹೋಗಿ ಅಲ್ಲಿಂದ "ಜೋಗ್ಯಪ್ಪಾ ಇಲ್ಲಿ ಬಾ" ಎಂದಳು. ಇವನು ಒಳಗೆ ಹೋದ. ಹುಡುಗಿ ಒಂದು ಕೋಳಿ ಯನ್ನ ಇವನ ಜೋಳಿಗೆ ಒಳಕ್ಕೆ ಹಾಕಿದಳು. "ಹೊರಟ್ಹೋಗು, ಹೊರ ಟ್ಹೋಗು" ಎಂದಳು. ಏನು ಎತ್ತ ಎಂದು ಬಹಳ ಯೋಚನೆ ಮಾಡದೆ ಅಂಜಪ್ಪ ಹೊರಟುಬಂದ. ಈಗ ಯಾರಾದರೂ ಹಿಡಿದರೆ ಏನು ಗತಿ ಎಂತ ಅವನಿಗೆ ಎದೆ ಡವ ಡವ ಬಡಿದುಕೊಳ್ಳುತ್ತಿತ್ತು. ಹುಡುಗಿ ಒಳಗಿಂದ "ಭದ್ರ ಜೋಗ್ಯಪ್ಪಾ ನಾನು ಕೊಟ್ಟೆ ಎಂತ ಯಾರಿಗಾದರೂ ಹೇಳೀಯ" ಎಂದು ಹೇಳಿದಳು. ಅಂಜಪ್ಪ ಏನೂ ಮಾತಾಡದೆ ಬೇಗನೆ ಹೊರಟುಬಿಟ್ಟ. ಊರಿನ ಹೊರಗಡೆ ಅರ್ಧ ಮೈಲಿ ದೂರದಲ್ಲಿ ಒಂದು ಭಾವಿ. ಅಲ್ಲಿಯ ವರೆಗೆ ಒಂದೇಸಮ ನಡೆದು ಒಂದು ಮರದ ನೆರಳಲ್ಲಿ ಕುಳಿತುಕೊಂಡು ಈ ನಡೆದ ಸಮಾಚಾರವನ್ನು ನೆನೆಯುತ್ತಾ ಎಲೆ ಅಡಕೆ ಮೆಲ್ಲುತ್ತಿದ್ದ.

ಅಂಜಪ್ಪನಿಗೆ ಇದರ ಹಾಗೆ ಆ ಮೊದಲು ಆಗಿರಲಿಲ್ಲ. ಅವನಿಗೆ ತಿರುಗಿ ಹಾಗಾಗಬಾರದು ಎನ್ನಿಸಿತು. ಕೋಳಿ ಏನೋ ಒಳ್ಳೇ ಪದಾರ್ಥವೇ. ಅದನ್ನು ಜೋಗಿಗೆ ಸುಮ್ಮನೆ ಯಾರು ಕೊಡಬೇಕು? ಆದರೆ ಕಂಡಹಾಗೆ ಕೊಡೋ ಭಿಕ್ಷ ಒಂದು ಮಾದರಿ. ಹೀಗೆ ಮರೆಯಿಂದ ಕೊಡೋ ಭಿಕ್ಷೆ ಒಂದು ಮಾದರಿ. ಅದರಲ್ಲಿ ಮೋಸ ಇಲ್ಲ. ಇದರಲ್ಲಿ ಮೋಸ ಸೇರಿ ಹೋಯಿತು. ಅಂಜಪ್ಪನಿಗೆ ಆ ಹುಡುಗಿಯ ವಿಷಯದಲ್ಲಿ ಅಚ್ಚುಮೆಚ್ಚಾ ಗಿತ್ತು. ಎಂಥ ಒಳ್ಳೆಯ ಹುಡುಗಿ. ಎಂಥ ಚೆನ್ನಾದ ಹುಡುಗಿ. ಒಳ್ಳೇ ಮಾಗಿದ ನಿಂಬೇಹಣ್ಣಿನ ಹಾಗೆ ಇದ್ದಳು. ಇಂಥ ಹೆಂಡತೀನ ಮನೇಲಿಟ್ಟು ಕೊಂಡು ಅವೇಕೆ ಅವಳ ಗಂಡ ಪೋಲಿ ತಿರುಗುತ ಇದ್ದಾನೆ ಎಂದು ಅವನಿಗೆ ಯೋಚನೆ ಬಂತು. ಪ್ರಪಂಚವೇ ಹೀಗೆ. ಪುಣ್ಯವಂತರಾದರೆ ಪೋಲಾಟ. ಬಡವರಾದರೆ ಕಳ್ಳತನ.

ಅಂಜಪ್ಪ ಈ ವಿಷಯವನ್ನೆಲ್ಲಾ ಮನಸ್ಸಿನಲ್ಲಿ ತಿರುವಿಹಾಕುವುದರಲ್ಲಿ ತಾನು ಅಲ್ಲಿರುವುದು ಕ್ಷೇಮವಲ್ಲವೆನ್ನುವುದನ್ನು ಮರೆತನು. ಸ್ವಲ್ಪ ಹೊತ್ತಿನ ಮೇಲೆ ಯಾರೋ ಒಬ್ಬ ಊರಿನ ಕಡೆಯಿಂದ ಬಂದು ಇವನ ಬಳಿ ನಿಂತು "ಏನು ಜೋಗ್ಯಪ್ಪ ಕುಂತುಕೊಂಡೆ" ಎಂದನು. ಅಂಜಪ್ಪ "ಕುಂತು ಕೊಂಡೆ ಅಪ್ಪ" ಎಂದ. ಹಳ್ಳಿಯವನು "ಜೋಳಿಗೆ ತುಂಬಿತೋ" ಎಂದ. ಅಂಜಪ್ಪ "ಸಾಮಾನ್ಯ" ಎಂದ. ಹಳ್ಳಿಯವನು ಇದೇನು ರಾಗೀನೋ ಎಂತ ಜೋಳಿಗೆ ಬಾಯಿ ತೆರೆದು ಅದನ್ನು ಇಣಿಕಿ ನೋಡಿದ. ಅದರಲ್ಲಿ ಕೋಳಿ. ಬಂದವನು "ಇದೇನು ಜೋಗಪ್ಪ ಕೋಳಿ ಅದೆ" ಎಂದ. ಜೋಗಿಗೆ ಎದೆ ಝುಗ್ಗೆಂದಿತು. ಅವನು "ಹೌದಪ್ಪ ಅಲ್ಲೊಬ್ಬರ ಮನೆ ಯಲ್ಲಿ ಕೊಟ್ರು" ಎಂದ. ಇನ್ನು ಮಾತನಾಡುತ್ತಾ ಕುಳಿತರೆ ಯಾರು ಎತ್ತ ಎಂತ ಚರ್ಚೆ ಬರುವುದೆಂದು ಎದ್ದು ಜೋಳಿಗೆಯನ್ನು ಹೆಗಲ ಮೇಲೆ ಹಾಕಿಕೊಂಡು ಹೊರಡಲು ಸನ್ನದ್ಧನಾದ. ಈ ಹೊತ್ತಿಗೆ ಊರ ಕಡೆಯಿಂದ ಒಬ್ಬ ವಯಸ್ಸಾದ ಹೆಂಗಸು ಜೊತೆಯಲ್ಲಿ ಯಾವನೋ ಒಬ್ಬನನ್ನು ಕರೆದು ಕೊಂಡು ಬೇಗ ಬೇಗನೆ ಇವರ ಕಡೆಗೆ ಬರುತ್ತಿರುವುದು ಕಂಡಿತು. ಅವರ ಹಿಂದೆ ಸ್ವಲ್ಪ ದೂರದಲ್ಲಿ ಇವನಿಗೆ ಕೋಳಿಯನ್ನು ಕೊಟ್ಟ ಆ ಹೆಣ್ಣು ಬರು ತ್ತಿದ್ದಳು. ಅಂಜಪ್ಪನಿಗೆ ಮೊಣಕಾಲು ಹಂಜಿಯ ಹಾಗಾಯಿತು. ಮುಂದೆ ಇಡುವುದಕ್ಕೆ ಹೆಜ್ಜೆಯೇ ಬರಲಿಲ್ಲ. ಇದು ಯಾಕೋ ಅನಾಹುತಕ್ಕೆ ಬಂತು ಎಂದು ಅವನಿಗೆ ಒಳಗೇ ತಿಳಿದುಹೋಯಿತು. ಹಾಗೆಯೇ ಬರುತ್ತಿದ್ದವರ ಕಡೆ ನೋಡುತ್ತ ನಿಲ್ಲಲಾಗಿ ಆ ಹೆಣ್ಣು ದೂರದಿಂದಲೇ ಇವನಿಗೆ ತಾನು ಕೊಟ್ಟ ಮಾತನ್ನು ಹೇಳಬಾರದೆಂದು ಕೈಯಾಡಿಸುತ್ತ ಸನ್ನೆ ಮಾಡಿದಳು. ಆ ಮುದುಕಿ ಹತ್ತಿರಕ್ಕೆ ಬಂದು "ಇವನೇ ಏನೇ ಜೋಗಪ್ಪ" ಎಂದು ಕೇಳಿದಳು. ಅವಳ ಜೊತೆಗೆ ಬರುತ್ತಿದ್ದ ಮನುಷ್ಯ ಆ ಊರಿನ ತಳಾರಿ. ಹೌದು ಎಂದು ಅವನು ಹೇಳಿದ. ಮುದುಕಿ ಇವನನ್ನು "ಜೋಗಪ್ಪ ನಮ್ಮದೊಂದು ಕೋಳಿ. ಏನಾದರೂ ಕಂಡ್ಯಾ ನೀನು" ಎಂದು ಕೇಳಿದಳು. ಅಂಜಪ್ಪ "ಅದ್ಯಾವುದೋ ಹಾಳು ಕೋಳಿ ಜೋಳಿಗೆಯೊಳಕ್ಕೆ ಬಂದುಬಿಟ್ಟಿದೆ! ನನಗೆ ತಿಳಿಯಲೇ ಇಲ್ಲ. ಈಗ ಈ ಅಯ್ಯ ಹೇಳ್ದ" ಎಂದ. ಮೊದಲು ಬಂದಿದ್ದವನು "ಯಾರೋ ಕೊಟ್ರು ಅಂದಲ್ಲಪ್ಪೊ"

ಎಂದ. "ಅಯ್ಯೋ ನಮ್ಮಪ್ಪ ಜೋಗಿಗೆ ಒಂದು ಹಿಡಿ ಅಕ್ಕಿ ಹಾಕೋದು ಕಷ್ಟ. ಕೋಳಿ ಕೊಡೋಕೆ ಬರ್ತಾರಾ" ಎಂದ ಅಂಜಪ್ಪ. ತಳಾರಿ ಬಂದವನು ಜೋಳಿಗೇನ ತೆಗೆದ. ಒಳಗೆ ಕೋಳಿ ಮೂರ್ಛೆಯ ಸ್ಥಿತಿಯಲ್ಲಿ ಬಿದ್ದಿದೆ. ಮುದುಕಿ "ಪರವಾಯಿಲ್ಲ. ಪದ ಹೇಳ್ತಾನೆ ಅಂತ ಮನೆ ಹತ್ರ ಬಿಟ್ಟರೆ ಕೋಳಿ ಹಾರ್ಸೋಕೆ ಮೊದಲುಮಾಡಿದ" ಎಂದಳು. "ನಡೆ ಊರಿಗೆ ಗೌಡನಿಗೆ ಹೇಳೋಣ. ಚೆನ್ನಾಯ್ತು ಜೋಗಿತನ" ಎಂದು ಇವನನ್ನು ಚೆನ್ನಾಗಿ ಬೈದಳು. ಅಂಜಪ್ಪ "ಅಮ್ಮ ಕೋಳೀನ ನಾನು ಕದೀಲಿಲ್ಲ. ನಿನ್ನ ಕೋಳಿ ಆದರೆ ನೀನು ತಕ್ಕೊಂಡು ಹೋಗು. ನನ್ನ ತಂಟೆಗೆ ಬರಬೇಡ" ಎಂದ. "ಏನಯ್ಯ ಬಹಳ ಸಂಪನ್ನನಹಂಗೆ ಮಾತ ನಾಡ್ತೀಯ. ಕದಿಯದಹಂಗಿದ್ದರೆ ಕೋಳಿ ನಿನ್ನ ತಾವು ಹೆಂಗೆ ಬಂತು?" ಎಂದು ಮುದುಕಿ ಹುಡುಗಿಯ ಕಡೆ ತಿರುಗಿ "ಇದು ನಮ್ದಲ್ಲವೇನೇ ಕೋಳಿ" ಎಂದಳು. ಹುಡುಗಿ "ಏನೋ ನಮ್ಮದು ಅಲ್ಲ ಅನ್ನೋ ಹಂಗದೆ, ಹೌದು ಅನ್ನೋಹಂಗದೆ. ಜೋಗಪ್ಪ ಎಲ್ಲಾದರೂ ಕೊಂಡು ಕೊಂಡಿರಬಹುದು" ಎಂದಳು. ತಳಾರಿ "ಇದೆಲ್ಲಾ ಯಾವ ಮಾತು. ಊರ ಗೌಡನ ತಾವ ಹೋಗೋಣ. ಸಮಾಚಾರ ಎಲ್ಲಾ ಹೇಳೋಣ. ಅವನು ನ್ಯಾಯ ಅಂದದ್ದನ್ನು ಮಾಡ್ಲಿ" ಎಂದ. ಅಂಜಪ್ಪನಿಗೆ ತಪ್ಪಿಸಿ ಕೊಂಡು ಹೋಗುವುದಕ್ಕೆ ದಾರಿ ತೋರಲಿಲ್ಲ. ಗೌಡನಿಗೋ ತನ್ನಮೇಲೆ ಕೋಪ ಇದೆ ಅಂತ ಬಲ್ಲ. ಇದೇನೋ ಗ್ರಹಚಾರ ಬಂತು ಎಂತ ಅವನು ಜೋಳಿಗೇನೂ ಹೊತ್ತುಕೊಂಡು ಅವರ ಜೊತೆಗೆ ಮರಳಿ ಊರಿಗೆ ಹೋದ.

ಅಲ್ಲಿ ಆದದ್ದನ್ನೆಲ್ಲ ಹೇಳಿ ಪ್ರಯೋಜನವಿಲ್ಲ. ಊರಿನಲ್ಲಿ ಅದಕ್ಕೆ ಹಿಂದೆ ಕೋಳಿಗಳನ್ನು ಕಳೆದುಕೊಂಡಿದ್ದವರು, ಕಳೆದುಕೊಳ್ಳದೇ ಇದ್ದವರು, ಎಲ್ಲರೂ ಜೋಗಪ್ಪ ಹಿಂದೆ ಬಂದಿದ್ದ ದಿವಸ ತಮ್ಮದೊಂದು ಕೋಳಿ ಹೋದ ಹಾಗೆ ನೆನಪು ಎಂದರು. ಗೌಡ ಬಂದ; "ಏನೋ ಜೋಗಿ, ಇಷ್ಟು ದಿನ ಹೇಳಿದ್ದು ಪದ ಅಲ್ಲ. ಈಗ ಲಾಕಾಪಿಗೆ ಕಳಿಸ್ತೀನಿ. ಆಗ ಹೇಳು ಪದಾನ" ಎಂದ. ಪೋಲೀಸ್ ಸ್ಟೇಷನ್ ಬಹಳ ದೂರವಿರಲಿಲ್ಲ. ಅಲ್ಲಿಗೆ ಅಪರಾಧಿ ಯನ್ನು ದಾಗೀನಾ ಸಮೇತ ರಿಪೋರ್ಟಿನೊಂದಿಗೆ ಕಳುಹಿಸಿಕೊಟ್ಟದ್ದಾ ಯಿತು. ಅಲ್ಲಿ ಹೇಳಿಕೆ ಕೇಳಿಕೆಗಳೆಲ್ಲಾ ಆದವು. ಅಂಜಪ್ಪ ವಿಚಾರಣೆಯ

ದಿನ ಕೋರ್ಟಿಗೆ ಹಾಜರಾಗುತ್ತೇನೆ ಅಂತ ಜಾಮೀನಿನ ಮೇಲೆ ಊರಿಗೆ ಬಂದ.

ವಿಚಾರಣೆ ಆಯಿತು. ವಿಚಾರಣೆಗೆ ಏನಿದೆ? ಮುದುಕಿ ಮನೆಯಿಂದ ಕೋಳಿ ಹೋದದ್ದು ನಿಜ. ಆ ಕೋಳಿಯನ್ನು ಅವಳು ಗುರುತಿಸಿದ್ದಳು. ಅದು ಜೋಗ್ಯಪ್ಪನ ಹತ್ತಿರ ಇದ್ದದ್ದು ನಿಜ. ಅದನ್ನು ಮೂರು ಜನ ನೋಡಿದ್ದರು. ಮ್ಯಾಜಿಸ್ಟ್ರೇಟರು ಅಂಜಪ್ಪನನ್ನ ನೀನು ಏನು ಹೇಳತೀಯಾ ಎಂತ ಕೇಳಿದರು.

ಅಂಜಪ್ಪ: ಎಲ್ಲೋ ಬುದ್ಧಿ ನಾನು ಪದಾ ಹೇಳ್ತಾ ಇರಬೇಕಾದ್ರೆ ಕೋಳಿ ಬಂದು ಬೆಚ್ಚಗೆ ಅದೆ ಅಂತ ಚಳಿಗೆ ಒಳಗೆ ಸೇರಿಕೊಂಡಿರಬೇಕು. ನನಗೆ ತಿಳೀಲಿಲ್ಲ. ನಾನು ತಂದುಬಿಟ್ಟೆ.

ಮ್ಯಾಜಿಸ್ಟ್ರೇಟರು: ಏನು ಪುರಾಣ ಹೇಳ್ತೀ ನೀನು. ಕೋಳಿ ಬಂದು ನಿನ್ನ ಜೋಳಿಗೆ ಒಳಗೆ ಕುಳಿತುಕೊಳ್ಳುತ್ತದೆಯಾ? ಸತ್ಯಾ ಹೇಳು.

ಜೋಗಪ್ಪ: ಮಹಾಸ್ವಾಮಿ ಸತ್ಯ ಹೇಳ್ತೀನಿ. ನೀವು ಹೇಳಿದ ದೇವರ ಮೇಲೆ ಆಣೆ ಮಾಡ್ತೀನಿ. ನಾನು ಕೋಳೀ ಕದೀಲಿಲ್ಲ.

ಮ್ಯಾಜಿಸ್ಟ್ರೇಟರು: ನೀನು ಕೋಳೀ ಕದೀಲಿಲ್ಲ ಅನ್ನು. ಕೋಳಿ ಏನೋ ಜೋಳಿಗೆಗೆ ತಾನೇ ಬರಲಿಲ್ಲ. ಯಾರಾದರೂ ಕೊಟ್ರೇನೋ.

ಅಂಜಪ್ಪನಿಗೆ ಆ ಹುಡುಗಿ ಕೊಟ್ಟಳು ಎಂತ ಹೇಳಿಬಿಡಬೇಕು ಎಂತ ನಾಲಗೆಯ ಕೊನೆಗೆ ಬಂದಿತ್ತು. ಆದರೆ ಅವಳು ಯಾರಿಗೂ ಹೇಳಬೇಡ ಎಂತ ಹೇಳಿದ್ದದ್ದು, ಆಮೇಲೆ ತನಗೆ ಸನ್ನೆಮಾಡಿದ್ದದ್ದು, ಎಲ್ಲಾ ಜ್ಞಾಪಕ ಬಂತು. ಏನೋ ಪಾಪ, ಭ್ರಮೆಯಿಂದ ಒಂದು ಕೋಳಿ ಕೊಟ್ಟಳು, ಅವಳನ್ನು ಯಾಕೆ ಬಿಟ್ಟುಕೊಡಬೇಕು, ಎಂತ ಯೋಚನೆ ಬಂದು ಆ ಮಾತು ತಡೆಯಿತು. ಏನೂ ಹೇಳದೆ ಸುಮ್ಮನೆ ಇದ್ದನು. ಏನು ಹೇಳ್ತೀಯಾ ಎಂತ ಮ್ಯಾಜಿಸ್ಟ್ರೇಟರು ಪುನಃ ಕೇಳಿದರು.

ಅಂಜಪ್ಪ: ಏನು ಹೇಳ್ಲಿ ಬುದ್ಧಿ. ಧರ್ಮದ ದಣಿ. ನಿಜ ಏನು ಅಂತ ನಿಮಗೆ ದೇವರು ತಿಳಿಸಬೇಕು. ನಾನು ಕದಿಯಲಿಲ್ಲ.

ಮ್ಯಾಜಿಸ್ಟ್ರೇಟರು ಇವನಮೇಲೆ ಒಂದು ಚಾರ್ಜು ಅಂತ ಬರೆದು ನಿನ್ನ ಕಡೆ ಸಾಕ್ಷಿಗಳಿದ್ದಾರೆಯೋ ಅಂತ ಕೇಳಿದರು. ಅಂಜಪ್ಪ "ಅಯ್ಯೋ

ಮಾಸ್ವಾಮಿ. ನನಗ್ಯಾರು ಸಾಕ್ಷಿ. ದೇವರು ಸಾಕ್ಷಿ'' ಎಂದ. ಮ್ಯಾಜಿಸ್ಟ್ರೇಟರು ಕಳ್ಳನಾದರೂ ಎಷ್ಟು ನಯವಾಗಿ ಮಾತನಾಡ್ತಾನೆ ಎಂತ ಹೇಳಿ ಇಪ್ಪತ್ತು ರೂಪಾಯಿ ಜುಲ್ಮಾನೆ ತಪ್ಪಿದರೆ ಹದಿನೈದು ದಿನ ಸಜಾ ಎಂದು ಶಿಕ್ಷೆ ವಿಧಿಸಿದರು. ಅಂಜಪ್ಪ ಜುಲ್ಮಾನೆ ತೆತ್ತು ಪೆಚ್ಚು ಮುಖ ಹಾಕಿಕೊಂಡು ಊರಿಗೆ ಬಂದ.

೩

ಇದಾಗಿ ನಾನು ಹೇಳಿದಂತೆ ನಲವತ್ತು ವರ್ಷದ ಮೇಲೆ ಆಗಿದೆ. ಅಂಜಪ್ಪ ಇದನ್ನು ಹೇಳಿ ''ಸುಮ್ಮನೆ 'ಮೇಸ್ಟ್ರೇಟ್' ಅಂದ್ರೆ ಏನಾಯ್ತಪ್ಪ. ತಪ್ಪಿಗೆ ಶಿಕ್ಷೆಮಾಡುವುದು, ಸತ್ಯವಂತ್ನ ಕಾಪಾಡೋದು, ದೇವರ ಕೆಲ್ಸ. ಆ ಕೆಲ್ಸ ಮನುಷ್ಯನ ಕೈಗೆ ಬಂದಾಗ ಮನುಷ್ಯ ದೇವರ ಹಾಗೆ ನಡಕೋಬೇಕು. ಹೆಚ್ಚು ಕಡಮೆ ಆದೀತು ಎಂತ ಭಯದಲ್ಲಿರಬೇಕು. ಇಲ್ದೀರಾ ಇದ್ರೆ ಆ ಮೇಸ್ಟ್ರೇಟ್ರು ಬೇಡಿಹಾಕತೇನಂದರಲ್ಲಾ ಹಂಗೆ ಅನ್ಯಾಯ ಆದಾತು'' ಎಂದ.

ನಾನು: ನೀನು ಹೇಳೋದು ಸರಿ ಅಂಜಪ್ಪ. ಆದರೆ ಏನಾಯ್ತು ಅಂತ ನೀನು ಹೇಳ್ದೀರಾ ಇದ್ರೆ ಮೇಸ್ಟ್ರೇಟರಿಗೆ ತಿಳೀಬೇಕು ಹೇಗೆ?

ಅಂಜಪ್ಪ: ಹೇಳೋ ಅಷ್ಟಕ್ಕೆ ನ್ಯಾಯ ಮಾಡೋದಾದ್ರೆ ನಿಮ್ಮಂಥ ಬುದ್ಧಿವಂತ್ರು ಯಾಕೆ ಬೇಕು? ಸತ್ಯಾವು ಏನು ಎಂತ ತಿಳಕೊಳ್ಳೋದು ಮೇಸ್ಟ್ರೇಟ್ರ ಕೆಲ್ಸ.

ನಾನು: ಹುಡುಗಿ ಮರ್ಯಾದೆ ಉಳಿಸಬೇಕೂ ಅಂತ ನೀನೇ ಜುಲ್ಮಾನೆ ಕೊಟ್ಟ ಹಂಗಾಯ್ತು. ಒಳ್ಳೆಯದಾಯ್ತು ಬಿಡು.

ಅಂಜಪ್ಪ: ಅಯ್ಯೋ ಅದೇನ ಕೇಳ್ತೀಯಾ? ಅವಳು ಒಬ್ಬವನ ಕೂಡ ನ್ಯಾಸ್ತಮಾಡಿಕೊಂಡಿದ್ದಳಂತೆ. ಎರಡು ಮೂರು ಸಲ ಅವನಿಗೆ ಕೋಳಿ ಕೊಟ್ಟಿದ್ದಳಂತೆ. ಅವರತ್ತೆ ಕೋಳಿ ಏನಾದುವು, ಕೋಳಿ ಏನಾದುವು, ಎಂತ ಕೇಳ್ತಾ ಇದ್ಲಂತೆ. ಯಾರೋ ಕದ್ದಿರಬೇಕು ಅಂತ ಹುಡುಗಿ ಹೇಳ್ತಾ ಇದ್ಲು. ಆ ಅತ್ತೇಗೆ ನಂಬಕಾ ಇಲ್ಲ. ಒಂದು ಸಲ ಕೋಳಿ ಹೋದ ಹೊತ್ನ್ಯಾಗೆ ಇಂಥಾವರ ಕೈಯಾಗೆ ಇದೇ ಅಂತ

ತೋರಿಸಿಕೊಟ್ರೆ ತನ್ನ ಮೋಸ ಮುಚ್ತಾದೇ ಅಂತ ಇದೆಲ್ಲಾ ಹುಡುಗೀನೇ ಮಾಡಿದಳೂ ಅಂತ ನನಗೆ ಆಮೇಲೆ ತಿಳಿಯಿತು.

ರಂಗಪ್ಪ: ಏನು? ಹುಡುಗಿ ನಿನಗೆ ಕೋಳಿ ಕೊಟ್ಟು ಅತ್ತೆಗೆ ತಾನೇ ಹೇಳಿಬಿಟ್ಲೆ?

ಅಂಜಪ್ಪ: ಊಂ, ಹಂಗೇ ಆಯ್ತು ಅಂತನ್ನು. ಅತ್ತೆ ಬಂದ್ಲು, ಕೋಳಿ ಎಲ್ಲಿ ಅಂದ್ಲು. ಸೊಸೆ, ನನಗೆ ಗೊತ್ತಿಲ್ಲ, ಅಂದಳು. ಅತ್ತೆ, ಹಂಗಾದ್ರೆ ಏನಾಗಿರಬೇಕು, ಇಲ್ಲಿ ಯಾರಾದರೂ ಬಂದಿದ್ರಾ, ಅಂತ ಕೇಳಿದಳು. ಸೊಸೆ, ನನಗೆ ಗೊತ್ತಿಲ್ಲಾ, ಅಂದ್ಲು; ಆಮೇಲೆ, ಯಾರೋ ಜೋಗಪ್ಪ ಬಂದಿದ್ದ, ಅಂದ್ಲು. ಪಕ್ಕದ ಮನೆಯುವನು, ಹೌದು ಜೋಗಿ ಇತ್ಲಾಗಿಂದ ಬಹು ಬಿರ್ನೆ ಹೋಗ್ತಾ ಇದ್ದ, ಅಂದ. ಸರಿ, ಕಾಲ ಎಲ್ಲ ಸೇರ್ತು, ನಾನು ಸಿಕ್ಕಿಬಿದ್ದೆ.

ರಂಗಪ್ಪ "ಆಮೇಲೆ ಹೋಗಿ ಹುಡುಗೀನ ಹೀಗೆ ಮಾಡಬಹುದೇ ಅಂತ ಕೇಳಲಿಲ್ಲವೇ" ಅಂದ. ಅಂಜಪ್ಪ "ಅಪ್ನ, ನೀವೆಲ್ಲಾ ಹೈಕ್ಳು, ನಾನು ಮುದುಕ್ನಾದಿ. ನನ್ನ ಪ್ರಾಯದ ಮಾತು ಈಗ ಯಾಕ ಕೇಳೀಯಾ? ಹೋದ್ನಿ, ಕೇಳಿದ್ನಿ, ಎಲ್ಲಾ ಆಯಿತು" ಎಂದ. ನಾವು ವಿವರವನ್ನು ಕೇಳಲಿಲ್ಲ. ಕೊನೆಗೆ ರಂಗಪ್ಪ, "ಸರಿ ಬಿಡು. ನಿನ್ನ ನನ್ನ ಹತ್ತಿರೇನಾದರೂ ತಪ್ಪಿತಸ್ಥ ಅಂತ ತಂದ್ರೆ ಸತ್ಯ ಏನು ಅಂತ ಸರಿಯಾಗಿ ತಿಳಿದುಕೊಂಡು ನಿನ್ನ ಬಿಟ್ಟುಬಿಡ್ತೀನಿ" ಅಂದ. ಅಂಜಪ್ಪ "ಇನ್ನ ನಾನು ನರಮನುಸನ ಮುಂದೆ ಏನು ಬಂದೇನು, ಬಿಡಪ್ನು. ಇನ್ನು ನನ್ನ ಮೇಸ್ಟ್ರೀಟು ನಮ್ಮಪ್ಪ ತಿರುಪತಿ ವೆಂಕಟರಮಣಸ್ವಾಮಿ. ಹೋಗ್ಬೇಕು, ನಿಲ್ಲಬೇಕು; ಏನೋ ಅನ್ನೋ ಹೊತ್ಗೆ ತಪ್ಪಾಯ್ತು ಅಂತ ಕಾಲಿಗೆ ಬೀಳಬೇಕು. ನಮ್ಮಪ್ನು ಕಾಪಾಡ್ತಾನೆ" ಎಂದ. ನಾವು ಸುಮ್ಮನೆ ಇದ್ದೆವು. ಅಂಜಪ್ಪ ಇನ್ನೂ ಸ್ವಲ್ಪ ಹೊತ್ತು ಕುಳಿತಿದ್ದು "ಅಪ್ನಾ ನೀನು ಮೇಸ್ಟ್ರೀಟಾದ್ದಕ್ಕೆ ನನ್ಗೆ ಒಸಿ ಎಲೆ ಅಡಕೆ ಕೊಡಲೊಲ್ಲೆಯಾ?" ಅಂದ. ರಂಗಪ್ಪ ಹುಡುಗರನ್ನ ಕರೆದು ಅವನಿಗೆ ಸ್ವಲ್ಪ ಎಲೆ ಅಡಕೆ ಕೊಡಿಸಿದ. ಅಂಜಪ್ಪ ಅದನ್ನು ತೆಗೆದುಕೊಂಡು, "ನಾನು ಹೇಳಿದ್ದು ಜ್ಞಾಪಕ ಇರ್ಲಿ. ಇನ್ನ ಬರೋಣಾ" ಎಂದು ಹೇಳಿ ಹೊರಟುಹೋದ.

# ಪಂಡಿತನ ಮರಣಶಾಸನ

ಚಿಕ್ಕದೇವರಾಜ ಒಡೆಯರು ರಾಜಪದವಿಗೆ ಬಂದ ಒಡನೆ ವಿಶಾಲಾಕ್ಷ ಪಂಡಿತನು ಅವರ ಮುಖ್ಯ ಪ್ರಧಾನನಾದನು. ಒಡೆಯರಿಗೆ ಚಿಕ್ಕಂದು ಹಂಗಳದಲ್ಲಿ ತಂದೆಯ ಮನೆಯಲ್ಲಿ ಬೆಳೆಯುತ್ತಿರುವಾಗಣಿಂದ ಪಂಡಿತನ ಪರಿಚಯ. ಅವನು ಮತದಿಂದ ಜೈನ, ಜಾತಿಯಿಂದ ಬ್ರಾಹ್ಮಣ. ಆಗ ಅವನು ಚಾಮರಾಜನಗರದಲ್ಲಿ ಪಿತ್ರಾರ್ಜಿತವಾದ ಆಸ್ತಿಯಿಂದಲೂ ಜ್ಯೋತಿಷ್ಯದಿಂದಲೂ ಜೀವಿಸುತ್ತಿದ್ದನು. ಪಂಡಿತನಿಗೂ ಒಡೆಯರ ತಂದೆಗೂ ಬಾಲ್ಯದಿಂದ ಸ್ನೇಹ. ಪಂಡಿತನು ಯಾವಾಗಲೋ ಒಂದುಸಲ ಒಡೆಯರ ಜಾತಕವನ್ನೂ ಹಸ್ತದ ರೇಖೆಗಳನ್ನೂ ನೋಡಿ "ಅಣ್ಣಾಜಿ, ನೀನು ರಾಜನಾಗುತ್ತೀಯೆ" ಎಂದು ಹೇಳಿದನು. ಒಡೆಯರ ಮನೆಯವರು ಮೈಸೂರ ಅರಸರ ಅನುಬಂಧಿಗಳು ನಿಜ. ಆದರೆ ಈ ಬಾಲಕನಿಗೆ ದೊರೆತನ ಬರಬಹುದೆಂದು ಆಗ ಯಾರೂ ಊಹಿಸುವಂತಿರಲಿಲ್ಲ. ಪಂಡಿತನ ಮಾತಿನಿಂದ ಮನೆಯವರಿಗೆ ಸಂತೋಷವೇನೋ ಆಯಿತು. ಆದರೆ ಅದನ್ನು ಅವರು ನಂಬಲಿಲ್ಲ.

ವಿಶಾಲಾಕ್ಷ ಪಂಡಿತನು ಅವರಿಗೆ ಇನ್ನೇನನ್ನೂ ಹೇಳಲಿಲ್ಲ. ಹುಡುಗನನ್ನು ಹತ್ತಿರಕ್ಕೆ ಕರೆದುಕೊಂಡು, "ನೀನು ಚೆನ್ನಾಗಿ ಸಾಧನೆ ಮಾಡಬೇಕು. ಕುದುರೆ ಸವಾರಿ ಕಲಿಯಬೇಕು. ಕತ್ತಿಯ ಸಾಮು ಕಲಿಯಬೇಕು. ದೊರೆತನ ಬಂದರೆ ದೇಶವನ್ನು ಚೆನ್ನಾಗಿ ಆಳುತ್ತೇನೆಂದು ಮನಸ್ಸು ಮಾಡಬೇಕು. ದೊರೆಯಾದಾಗ್ಗೆ ನನ್ನನ್ನು ಮಂತ್ರಿಯನ್ನಾಗಿ ಇಟ್ಟುಕೊಳ್ಳಬೇಕು. ಏನು ಹೇಳುತ್ತೀಯಾ? ಅಣ್ಣಯ್ಯಾ?" ಎಂದು ಕೇಳುವನು. ಬಾಲಕನು ಅವನು ಹೇಳಿದ್ದಕ್ಕೆಲ್ಲಾ ಹೂಂ ಹೂಂ ಎಂದು ಹೇಳುತ್ತ ಕೊನೆಯ ಮಾತಿಗೂ ಹೂಂ ಎಂದನು. ಅವನಿಗೆ ಅದು ಒಂದು ಆಟದ ಮಾತು. ಆದರೆ ಕೆಲವು ವರ್ಷದ ಮೇಲೆ ಪಂಡಿತನ ಮಾತು ನಿಜವಾದರೂ ಆಗಬಹುದೆಂದು ಕಂಡಿತು. ಆದರೆ ಆಗ ದೊರೆತನ ಇವರ ದಾಯಾದಿಗೆ ಹೋಯಿತು. ಇದಾದ ಕೆಲವು ವರ್ಷದಲ್ಲೇ ಮರಳಿ

ಒದಗಿದ ಒಂದು ಸಂದರ್ಭದಲ್ಲಿ ಚಿಕ್ಕದೇವರಾಜನು ಅರಸಾದನು. ಆಗ ಅವನು ಹಿಂದಿನ ಮಾತನ್ನು ನೆನೆದು ವಿಶಾಲಾಕ್ಷ ಪಂಡಿತನನ್ನು ಮಂತ್ರಿಯಾಗಿ ಮಾಡಿಕೊಂಡನು.

ಚಿಕ್ಕದೇವರಾಜ ಒಡೆಯರು ರಾಜಕಾರ್ಯದಲ್ಲಿ ದಕ್ಷರೆಂದು ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಮೈಸೂರದೇಶಕ್ಕೆ ಮೊಗಲ ಸಾರ್ವಭೌಮನಿಂದ ಮರ್ಯಾದೆಯನ್ನು ಸಂಪಾದಿಸಿ ತಂದವರು ಇವರು. ರಾಷ್ಟ್ರದ ಕೆಲಸಕ್ಕೆ ಕೋಶ ತುಂಬಿರುವುದು ಅವಶ್ಯಕವೆಂದು ತಿಳಿದು ಇವರು ಬೊಕ್ಕಸಕ್ಕೆ ಹರಿದುಬರುವ ಪ್ರವಾಹ ಬತ್ತದೆ ಇರಬೇಕೆಂದು ಬಹಳ ಪ್ರಯತ್ನ ಮಾಡಿದರು. ಇವರ ದಿನದಲ್ಲಿ ಆ ಪ್ರವಾಹ ಒಂದು ಜೀವನದಿಯಾಯಿತು. ಒಡೆಯರು ಸಾಗುವಳಿಗೆ ಬೇಕಾದ ಅನುಕೂಲಗಳನ್ನೂ ಪ್ರಯಾಣದ ಸೌಕರ್ಯಗಳನ್ನೂ ಆಗಿನ ಕಾಲದ ಸಲಕರಣೆಗಳಿಗೆ ಮೀರಿದ ರೀತಿಯಿಂದ ಜನರಿಗೆ ಒದಗಿಸಿಕೊಟ್ಟರು. ಈ ಎಲ್ಲ ಕಾರ್ಯದಲ್ಲಿ ಅವರಿಗೆ ವಿಶಾಲಾಕ್ಷ ಪಂಡಿತನ ಮಂತ್ರವು ಮಾರ್ಗವನ್ನು ತೋರಿತು. ಯಾವ ಸಂದರ್ಭದಲ್ಲಿ ಏನುಮಾಡುವುದೆಂದು ಯೋಚಿಸುವಾಗಲೆಲ್ಲ ಅವನ ಕುಶಾಗ್ರ ಬುದ್ಧಿ ಅವರಿಗೆ ಸಹಾಯವಾಗಿ ನಿಂತಿತು. ಪಂಡಿತನಿಗೆ ಸಂಸಾರವಿರಲಿಲ್ಲ. ರಾಜ್ಯದ ಕೆಲಸ ಹೊರತು ಅವನಿಗೆ ಬೇರೆ ಹವ್ಯಾಸ ಇಲ್ಲ. ರಾಜನ ಮಂತ್ರ, ಅವನೊಂದಿಗೆ ಚದುರಂಗ, ಬಿಡುವಾದಾಗ ಓದು, ಇದೇ ಅವನ ಬದುಕು. ಬಾಲ್ಯದಿಂದ ತನಗೆ ವಿಶ್ವಾಸವನ್ನೂ ಪ್ರೇಮವನ್ನೂ ತೋರಿಸಿ ಈಗ ಹೀಗೆ ನೆರವಾದ ಕಾರಣದಿಂದ ಒಡೆಯರಿಗೆ ಪಂಡಿತನಲ್ಲಿ ವಿಶೇಷ ಗೌರವವೂ, ಹಿರಿದಾದ ಅಭಿಮಾನವೂ, ಅಚಲವಾದ ಪ್ರೇಮವೂ ಹುಟ್ಟಿದವು. ರಾಜನೂ ಮಂತ್ರಿಯೂ ತಮ್ಮ ತಮ್ಮಲ್ಲಿ ಅತಿಶಯವಾದ ಭಕ್ತಿ ವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದರು.

ರಾಜರ ಬಳಿಯಲ್ಲಿ ತಿರುಮಲಾರ್ಯನೆಂಬ ಮತ್ತೊಬ್ಬ ಪ್ರಧಾನನಿದ್ದನು. ಅವನ ಮನೆಯವರು ಹಿಂದಿನಿಂದ ಅರಮನೆಯ ಸೇವೆಯಲ್ಲಿ ಬೆಳೆದವರು. ತಿರುಮಲಾರ್ಯನೂ ಆಡಳಿತದಲ್ಲಿ ದಕ್ಷನು. ಪಂಡಿತನು ಚಾಮರಾಜನಗರದಿಂದ ಮುಖ್ಯ ಪ್ರಧಾನಪದವಿಗೆ ಬಾರದೆ ಇದ್ದಿದ್ದರೆ ಮುಖ್ಯ ಪ್ರಧಾನರಾಗಬಹುದಾಗಿದ್ದ ಜನರಲ್ಲಿ ತಿರುಮಲಾರ್ಯನೂ ಒಬ್ಬನು.

ವಿಶಾಲಾಕ್ಷ ಪಂಡಿತನು ಮುಖ್ಯ ಪ್ರಧಾನನಾಗಿ ಬಂದಾಗ ಇವನು ಮಂತ್ರಿ ಮಂಡಲದಲ್ಲಿ ಒಬ್ಬನಾಗಿ ಅವನಿಗೆ ಸಹಾಯಕನಾದನು. ಅರಮನೆಯ ಸೇವೆಯಲ್ಲಿ ಬೆಳೆದಿದ್ದ ನರಸಿಂಹ ಶಾಸ್ತ್ರಿಯೂ ಪದ್ಮರಸ ಪಂಡಿತನೂ ಈತನ ಜೊತೆಗೆ ಇತರ ಮಂತ್ರಿಗಳಾಗಿದ್ದರು.

ಒಡೆಯರು ದೊರೆತನಕ್ಕೆ ಬಂದಮೇಲೆ ಸೀಮೆಯಲ್ಲಿ ಕಂದಾಯದ ವಸೂಲಿ ಸ್ವಲ್ಪ ಕಟ್ಟುನಿಟ್ಟಾಗಿ ನಡೆದು ಒಂದೆರಡು ಸ್ಥಳಗಳಲ್ಲಿ ಜನರಿಗೆ ಹಿಂಸೆಯಾಗಿದ್ದಿತು. ಅದುವರೆಗೆ ಸ್ಥಳದ ಅಧಿಕಾರಿಗಳನ್ನು ಸರಿಪಡಿಸಿಕೊಂಡು ಹೇಗೋ ಪಾರಾಗುತ್ತಿದ್ದ ಜನರು ಕಂದಾಯ ಕೊಡದೆ ತಪ್ಪಿಸಿಕೊಳ್ಳುವ ಸಂಭವವಿಲ್ಲದೆ ಹೋಗಿ ಸುಂಮುಗೆಟ್ಟರು. ಒಡೆಯರ ಪ್ರಕೃತಿ ಖಂಡಿತವಾದುದೆಂದು ತಿಳಿಯದೆ ಕೆಲಜನರು ದಂಗೆ ಎದ್ದರು. ಆ ಸ್ಥಳಗಳಲ್ಲಿ ಜಂಗಮರು ದಂಗೆಕಾರರನ್ನು ಉತ್ತೇಜನಗೊಳಿಸಿದರಂತೆ. ಈ ಸಂದರ್ಭದಲ್ಲಿ ಮಹಾರಾಜರು ತಾವೇ ಸೈನ್ಯದೊಡನೆ ಹೋಗಿ ದಂಗೆಯನ್ನಡಗಿಸಿ ಮುಖಂಡರನ್ನು ಸೆರೆಹಿಡಿದರು. ದಂಗೆಯ ಜನರ ಪ್ರಾರ್ಥನೆಯನ್ನು ಕೇಳುವುದಕ್ಕೆಂದು ಒಂದು ಸಭೆಯನ್ನೇರ್ಪಡಿಸಿದರು. ಅನೇಕ ಜಂಗಮರಿಗೆ ಕ್ರೂರವಾದ ಶಿಕ್ಷೆಯನ್ನು ವಿಧಿಸಿದರು. ಈ ಶಿಕ್ಷೆಯನ್ನು ವಿಧಿಸುವುದರಲ್ಲಿ ರಾಜರಿಗಿಂತಲೂ ವಿಶಾಲಾಕ್ಷ ಪಂಡಿತನೇ ಕಠಿಣನಾಗಿದ್ದನು. ಅವನಿಗೆ ಆಗದವರು ಅವನು ಜೈನನಾದ್ದರಿಂದ ವೀರಶೈವರ ಮೇಲಣ ಪೂರ್ವದ ವೈರವನ್ನು ತೀರಿಸಿಕೊಳ್ಳುವುದಕ್ಕೆ ಹೀಗೆ ಮಾಡಿದನೆಂದು ಮಾತನ್ನು ಹರಡಿದರು. ರಾಜರು ಮಾಡಿದ ಏರ್ಪಾಡಿಗೆ ಎಲ್ಲ ಮಂತ್ರಿಗಳೂ ಒಪ್ಪಿದ್ದರು. ಆದರೆ ಮುಖ್ಯವಾಗಿ ವಿಶಾಲಾಕ್ಷ ಪಂಡಿತನ ಹೆಸರು ಕೆಟ್ಟಿತು. ಇವನು ಜಂಗಮರಿಗೆ ಶಿಕ್ಷೆ ಮಾಡಿಸಿದ್ದಕ್ಕಾಗಿ ವೀರಶೈವರು ಏನಾದರೂ ಮಾಡಿ ಹಗೆ ತೀರಿಸಿಕೊಳ್ಳಬೇಕೆಂದು ಇರುವುದಾಗಿ ವರ್ತಮಾನ ಹುಟ್ಟಿತು.

ವಿಶಾಲಾಕ್ಷ ಪಂಡಿತನು ಇದಕ್ಕೆಲ್ಲ ಹೆದರುವ ಚೇತನವಲ್ಲ. ಏನಾಗಬೇಕೊ ಅದು ಮೊದಲೇ ನಿರ್ಧಾರವಾಗಿದೆ ಎಂದು ಅವನಿಗೆ ನಿಶ್ಚಯ. ದೇವರು ಕಾಪಾಡುತ್ತಿದಾನೆ ಎಂಬ ದೃಢವಾದ ನಂಬಿಕೆ ಇರುವವನಂತೆ ಇಂಥ ಮನುಷ್ಯನು ನಿಶ್ಚಿಂತನಾಗಿರುತ್ತಾನೆ. ಬೇಕಾದವರು ಏನಾದರೊಂದು ಎಚ್ಚರದ ಮಾತನ್ನು ಹೇಳಿದಾಗ ವಿಶಾಲಾಕ್ಷ ಪಂಡಿತನು ಹಸನ್ಮುಖ

ದಿಂದ "ನಾವು ಏನೂ ಅನ್ಯಾಯಮಾಡಿಲ್ಲ. ಇದರಮೇಲೆ ಹಗೆಯಾದವನಿಗೆ ನಾವು ಏನು ಮಾಡುವಹಾಗಿದೇವೆ? ದೇವರು ನೋಡಿಕೊಳ್ಳುತ್ತಾನೆ, ಕಾಪಾಡುತ್ತಾನೆ" ಎಂದು ಹೇಳುವನು.

ರಾಜ್ಯದ ಆಡಳಿತದಲ್ಲಿ ಸಾಮಾನ್ಯವಾಗಿ ಪ್ರಧಾನನೂ ಉಳಿದ ಮಂತ್ರಿಗಳೂ ಮಿಳಿತವಾಗಿ ನಡೆಯುತ್ತಿದ್ದರು. ಜಾತಿ ಮತಗಳ ಜಗಳ ಬಂದಾಗ ನಾಲ್ವರೂ ಕುಳಿತು ಯೋಚನೆಮಾಡಿ ಏನಾದರೊಂದು ನಿರ್ಧಾರಕ್ಕೆ ಬರುವರು. ಒಂದೊಂದು ಸಂದರ್ಭದಲ್ಲಿ ವಿಶಾಲಾಕ್ಷ ಪಂಡಿತನು ತಾನೇ ಏನಾದರೊಂದು ನಿರ್ಧಾರಕ್ಕೆ ಬಂದು ಉಳಿದವರಿಗೆ ತಿಳಿಸುವುದೂ ಅದನ್ನು ರಾಜನಲ್ಲಿ ವಿಜ್ಞಾಪಿಸಿ ಆತನ ಅಪ್ಪಣೆಯನ್ನು ಪಡೆದು ಅದರಂತೆ ನಡೆಸುವುದೂ ಉಂಟು. ಒಂದು ಸಲ ಇಂಥ ಸಂದರ್ಭದಲ್ಲಿ ಇವನಿಗೂ ತಿರುಮಲಾರ್ಯನಿಗೂ ಮನಸ್ತಾಪ ಬಂದಿತು. ಬೇಲೂರು ಸೀಮೆಯ ಒಂದು ದೇವಾದಾಯದ ಉಂಬಳಿಯ ಗ್ರಾಮ ಬಹು ಕಾಲದಿಂದ ಬೇಲೂರಿನ ಚೆನ್ನಕೇಶವ ದೇವಾಲಯಕ್ಕೆ ನಡೆದಿತ್ತು. ಹಳೇಬೀಡಿನ ಪಾರ್ಶ್ವನಾಥ ದೇವಾಲಯದ ಜೈನರು ಬಹುಕಾಲದಿಂದ ಅದನ್ನು ತಮ್ಮ ದೇವಾಲಯದ ಉಂಬಳಿಯೆಂದೂ ಅದನ್ನು ತಮಗೆ ಕೊಡಿಸಿಕೊಡಬೇಕೆಂದೂ ಕೇಳುತ್ತಿದ್ದರಂತೆ. ಯಾವುದೋ ಕಾಲದಲ್ಲಿ ಆ ಗ್ರಾಮವನ್ನು ಜೈನದೇವಾಲಯದಿಂದ ಕಸಿದುಕೊಂಡು ವೈಷ್ಣವ ದೇವಾಲಯಕ್ಕೆ ಕೊಟ್ಟಿದ್ದರೆಂದು ಕಾಣುತ್ತದೆ. ಇವರಿವರ ವ್ಯವಹಾರ ಹೀಗೆಯೇ ನಡೆಯುತ್ತಿರಲಾಗಿ ವಿಶಾಲಾಕ್ಷ ಪಂಡಿತನು ಪ್ರಧಾನನಾದಾಗ ಜೈನರ ಜನಕ್ಕೆ ಸ್ವಲ್ಪ ಧೈರ್ಯ ಹೆಚ್ಚಿತು. ಇದರಮೇಲೆ ಹಳೇಬೀಡಿನ ಸೀಮೆಗೆ ಬುಚ್ಚಣ್ಣನೆಂಬ ಒಬ್ಬ ಜೈನ ಮತಸ್ಥನು ಸರ್ವಾಧಿಕಾರಿಯಾದನು. ಆಗ ವಿಷಯವನ್ನೆಲ್ಲಾ ವಿಚಾರಮಾಡಿ ಈ ಉಂಬಳಿ ಜೈನ ದೇವಾಲಯಕ್ಕೆ ನಡೆಯತಕ್ಕದ್ದೇ ಸರಿ ಎಂದು ರಾಜರಿಗೆ ಒಂದು ವಿಜ್ಞಾಪನಾ ಪತ್ರವನ್ನು ಕಳುಹಿಸಿ ಅವನು ಅವರ ಅಪ್ಪಣೆಯನ್ನು ಪಡೆದು ಗ್ರಾಮವನ್ನು ವೈಷ್ಣವರ ಕೈಯಿಂದ ತಪ್ಪಿಸಿದನು. ವಿಜ್ಞಾಪನಾ ಪತ್ರ ಬಂದಿದೆಯೆಂದು ತಿರುಮಲಾರ್ಯನಿಗೆ ತಿಳಿಯಿತು. ಆದರೆ ಅದರ ವಿಷಯದಲ್ಲಿ ನಡೆದ ಆಲೋಚನೆಗೆ ಪಂಡಿತನು ಅವನನ್ನು ಕರೆಯಲಿಲ್ಲ. ಇದು ತಿರುಮಲಾರ್ಯನಿಗೆ ಅಸಮಾಧಾನವನ್ನುಂಟುಮಾಡಿತು. ಗ್ರಾಮ

ವನ್ನು ಕಳೆದುಕೊಂಡ ಜನರು ರಾಜಧಾನಿಗೆ ಬಂದರು. ತಿರುಮಲಾರ್ಯ ನನ್ನು ಕಂಡು ತಾವು ರಾಜನಲ್ಲಿ ದೂರು ಹೇಳಿಕೊಳ್ಳುವುದಕ್ಕೆ ಅವಕಾಶ ಕೊಡಿಸಬೇಕೆಂದರು. ತಿರುಮಲಾರ್ಯನು ಈ ವಿಚಾರವನ್ನು ರಾಜನಲ್ಲಿ ಬಿನ್ನಹಮಾಡಿ ಆ ಜನರು ಪ್ರಭುವನ್ನು ಕಾಣುವುದಕ್ಕೆ ಒಂದು ದಿನ ಮಧ್ಯಾಹ್ನ ಬರುವಂತೆ ಏರ್ಪಾಡು ಮಾಡಿದನು.

ಆ ಮಧ್ಯಾಹ್ನ ಕಛೇರಿ ತೊಟ್ಟಿಯಲ್ಲಿ ಮಹಾರಾಜರು ಬಿಜಮಾಡಿ ಪೀಠದಲ್ಲಿ ಸುಖಾಸೀನರಾದರು. ಅವರ ಎರಡು ಕಡೆಗೆ ಇತ್ತ ವಿಶಾಲಾಕ್ಷ ಪಂಡಿತ ನರಸಿಂಹ ಶಾಸ್ತ್ರಿ ಅತ್ತ ತಿರುಮಲಾರ್ಯ ಪದ್ಮರಸ ಪಂಡಿತರು ಕುಳಿತಿದಾರೆ. ಎದುರಿನಲ್ಲಿ ನಾಲ್ವರು ಶ್ರೀವೈಷ್ಣವರು ತಮ್ಮ ವೃತ್ತಾಂತ ವನ್ನು ಅರಿಕೆಮಾಡಲು ನಿಂತಿದ್ದಾರೆ. ರಾಜರು ವಿಶಾಲಾಕ್ಷ ಪಂಡಿತನನ್ನು ಕುರಿತು "ಇವರ ದೂರು ಏನು, ತಾವು ಬಲ್ಲಿರಾ ಪಂಡಿತರೆ?" ಎಂದು ಕೇಳಿದರು.

ವಿಶಾಲಾಕ್ಷ: ಇರುಳಾಪುರ ಗ್ರಾಮದ ವಿಚಾರ ಮಹಾಸ್ವಾಮಿ ಯವರಲ್ಲಿ ಏನೋ ಬಿನ್ನವಿಸಬೇಕೆಂದು ಬಂದಿದಾರೆಂದು ತಿಳಿಯಿತು. ಉಳಿದ ವಿವರ ತಿಳಿಯಲಿಲ್ಲ. ಹೇಳಿದರೆ ಮಹಾಸ್ವಾಮಿಯವರಿಗೆ ಶ್ರುತ ವಾಗುತ್ತೆ. ನಮಗೂ ತಿಳಿಯುತ್ತೆ.

ರಾಜ: ಹೇಳಲಿ.

ತಿರುಮಲಾರ್ಯನು ಆ ನಿಂತಿದ ಜನರಿಗೆ "ಮಹಾಸನ್ನಿಧಿಯಲ್ಲಿ ಅರಿಕೆ ಮಾಡಿ" ಎಂದನು. ಆ ನಾಲ್ವರಲ್ಲಿ ಮುಖಂಡನು "ಮಹಾಸ್ವಾಮಿ, ಇರುಳಾಪುರ ಗ್ರಾಮ ಅನಾದಿಕಾಲದಿಂದ ನಮ್ಮ ದೇವಾಲಯಕ್ಕೆ ನಡೆದು ಬಂದಿದೆ. ಬುಚ್ಚಣ್ಣನೆಂಬ ಜೈನ ಸರ್ವಾಧಿಕಾರಿ ಬಂದು ನಮಗೆ ಕಿರುಕುಳ ಕೊಡುವುದಕ್ಕೆ ಆರಂಭಿಸಿದರು. ಜೈನರು ಕೆಲಜನರನ್ನು ಎತ್ತಿಕಟ್ಟಿ ಅದು ಹಳೇಬೀಡಿನ ಪಾರ್ಶ್ವನಾಥ ದೇವಾಲಯಕ್ಕೆ ದತ್ತಿಯಾದ ಗ್ರಾಮವೆಂದು ಅವರಿಂದ ಒಂದು ವಿಜ್ಞಾಪನಾ ಪತ್ರವನ್ನು ತೆಗೆದುಕೊಂಡು ಬಂದು ವಿಚಾರಣೆ ಮಾಡಿದಂತೆ ಮಾಡಿ ಆ ಗ್ರಾಮ ಇನ್ನುಮುಂದೆ ಪಾರ್ಶ್ವನಾಥ ದೇವಾಲಯಕ್ಕೆ ನಡೆಯತಕ್ಕದೆಂದು ನಿರ್ಧರಿಸಿ ಅದೇ ಪ್ರಕಾರ ಮಹಾ ಸನ್ನಿಧಿಯಿಂದ ಅಪ್ಪಣೆಯನ್ನು ಪಡೆದಿದ್ದಾರೆ. ನಾವು ಚೆನ್ನಕೇಶವಸ್ವಾಮಿಯ

ಆಲಯದ ನೌಕರರು. ಆ ಗ್ರಾಮದ ವರಮಾನದಿಂದ ದೇವರಿಗೆ ಸೇವೆಗಳು ನಡೆಯಬೇಕು; ನಾವು ಜೀವಿಸಬೇಕು. ಅದು ತಪ್ಪಿದರೆ ದೇವಾಲಯಕ್ಕೆ ಬರುತ್ತಿದ್ದ ಮುಖ್ಯ ವರಮಾನ ತಪ್ಪುತ್ತೆ. ನಮ್ಮ ಅನ್ನ ಇನ್ನೊಬ್ಬರ ಕೈಸೇರುತ್ತೆ. ದೈವಸ್ವ ಬ್ರಹ್ಮಸ್ವದ ಅಪಹಾರ ರಾಜ್ಯಕ್ಕೆ ಒಳ್ಳೆಯದಲ್ಲ. ಪ್ರಭುವಿಗೂ ಅದು ಅಮಂಗಳ. ಈ ಕಾರಣದಿಂದ ಸತ್ಯವನ್ನು ಮಹಾಸ್ವಾಮಿಯವರಲ್ಲಿ ಬಿನ್ನಹಮಾಡಿ ಸನ್ನಿಧಿಯಿಂದ ಹಿಂದೆ ಆದ ತೀರ್ಮಾನವನ್ನು ತಿದ್ದುಪಡಿಮಾಡಿಸಿ ದೇವರ ಸೇವೆ ಎಂದಿನಂತೆ ನಡೆಯುವುದಕ್ಕೂ ನಮ್ಮ ಅನ್ನ ಎಂದಿನಂತೆ ನಮಗೆ ಉಳಿಯುವುದಕ್ಕೂ ಅಪ್ಪಣೆಯನ್ನು ಪಡೆಯೋಣವೆಂದು ಇಲ್ಲಿಗೆ ಬಂದಿದ್ದೇವೆ. ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಗ್ರಾಮ ಎಂದಿನಂತೆ ಬೇಲೂರಿನ ದೇವಾಲಯಕ್ಕೆ ನಡೆಯುವ ಏರ್ಪಾಡನ್ನು ಮಾಡಿಸಬೇಕು ಮಹಾಸ್ವಾಮಿ'' ಎಂದನು. ರಾಜರು ''ಇದು ಯಾವಾಗ ಆಯಿತು ಪಂಡಿತರೇ'' ಎಂದು ಕೇಳಿದರು. ವಿಶಾಲಾಕ್ಷ ಪಂಡಿತನು ''ಈಗ ಮೂರು ತಿಂಗಳ ಹಿಂದೆ ಒಂದು ದಿನ ಈ ವಿಷಯವನ್ನು ಮಹಾಸ್ವಾಮಿಯವರಲ್ಲಿ ಅರಿಕೆ ಮಾಡಿದೆ. ಆಗ ಮಹಾಸ್ವಾಮಿಯವರು ಮಾಡಿದ ಅಪ್ಪಣೆಯಂತೆ ಸ್ಥಳದ ಅಧಿಕಾರಿಗಳಿಗೆ ತಿಳಿಸಿದ್ದಾಯಿತು. ಈ ವಿಷಯ ವಿಚಾರವಾದಾಗ ಶಾಸ್ತ್ರಿಗಳೂ ಪದ್ಮರಸ ಪಂಡಿತರೂ ಇದ್ದರು'' ಎಂದನು. ರಾಜರು ''ಅಂದು ತಿರುಮಲಾರ್ಯರು ಏಕೆ ಬಂದಿರಲಿಲ್ಲ'' ಎಂದು ಕೇಳಿದರು. ವಿಶಾಲಾಕ್ಷನು ''ಆಗ ಮೂರು ದಿನ ದೇಹದಲ್ಲಿ ಆಲಸ್ಯವೆಂದು ಬರಲಿಲ್ಲ'' ಎಂದನು. ರಾಜರು ''ಸರಿ ಇನ್ನು ಇದಕ್ಕೆ ಏನು ಮಾಡುವುದಕ್ಕಾಗುತ್ತದೆ? ವಿಚಾರ ಮಾಡಿ ನಿರ್ಧರಿಸಿದ ಮೇಲೆ ನಿರ್ಧಾರ ನಿಲ್ಲಬೇಕು'' ಎಂದರು. ಎದುರಲ್ಲಿದ್ದ ಅರ್ಥಿಗಳು ''ಮಹಾಸ್ವಾಮಿಯವರ ಸನ್ನಿಧಾನದಲ್ಲಿ ಹಾಗೆ ಅಪ್ಪಣೆಯಾದರೆ ನಾವು ಬಡವರು ಕೆಟ್ಟುಹೋಗುತ್ತೇವೆ'' ಎಂದರು. ರಾಜರು ''ಇಲ್ಲವೆ ನೀವು ಕೆಡಬೇಕು, ಇಲ್ಲವೆ ಅವರು ಕೆಡಬೇಕು. ಒಂದು ಗ್ರಾಮವನ್ನು ಇಬ್ಬರೂ ಅನುಭವಿಸುವಂತಿಲ್ಲ'' ಎಂದರು. ತಿರುಮಲಾರ್ಯನು ''ಅವರು ವಿಜ್ಞಾಪಿಸುತ್ತಿರುವ ವಿಚಾರ ಮಹಾಸ್ವಾಮಿಯವರಿಗೆ ವೇದ್ಯವಾಗಬೇಕು. ಒಂದು ದೇವಾಲಯಕ್ಕೆ ನಡೆಯುತ್ತಿದ್ದ ಸ್ವತ್ತನ್ನು ಆ ದೇವಾಲಯದಿಂದ ಕಿತ್ತು ಇನ್ನೊಂದು ದೇವಾಲಯಕ್ಕೆ ಕೊಟ್ಟಿದೆ ಎಂದು ಅರಿಕೆ ಮಾಡು

ತ್ತಿದಾರೆ. ತಮ್ಮ ಅನ್ನವನ್ನು ಕಿತ್ತು ಇನ್ನೊಬ್ಬರಿಗೆ ಕೊಟ್ಟಹಾಗಾಯಿತು. ಅದು ಬೇಡ, ಎಂದು ಅವರ ಬಿನ್ನಪ'' ಎಂದನು. ವಿಶಾಲಾಕ್ಷ ಪಂಡಿತನು ''ಅದನ್ನೆಲ್ಲಾ ನೋಡಿ ಆಯಿತು ತಿರುಮಲಾರ್ಯರೆ. ಈಗ ನೂರು ವರ್ಷದ ಹಿಂದೆ ಅದು ಪಾರ್ಶ್ವನಾಥ ದೇವಾಲಯಕ್ಕೆ ನಡೆಯುತ್ತಿದ್ದ ಗ್ರಾಮ. ಆಗ ಯಾರೋ ಶ್ರೀವೈಷ್ಣವ ಅಧಿಕಾರಿ ಅದನ್ನು ಆ ದೇವಾಲಯದಿಂದ ತಪ್ಪಿಸಿ ಬೇಲೂರು ದೇವಾಲಯಕ್ಕೆ ಮಾಡಿಸಿದನಂತೆ. ಅದು ಪಾರ್ಶ್ವನಾಥನಿಗೆ ನಡೆಯುತ್ತಿದ್ದ ವಿಷಯವನ್ನು ಬಾಲ್ಯದಲ್ಲಿ ಕೇಳಿದ ಜನರು ಈಗಲೂ ಇದ್ದಾರೆ. ಬಸತಿಯ ಲೆಕ್ಕದಲ್ಲಿ ಈ ಗ್ರಾಮದ ವರಮಾನ ಬಂದದ್ದಕ್ಕೆ ದಾಖಲೆ ಇದೆ. ಬೇಲೂರಿನಲ್ಲಿ ಅದಕ್ಕೆ ಮೊದಲು ಈ ಗ್ರಾಮದ ವರಮಾನ ಬರುತ್ತಿದ್ದದ್ದಕ್ಕೆ ಬರಹದ ಪ್ರಮಾಣ ಇಲ್ಲ. ಇದನ್ನೆಲ್ಲಾ ಪರಾಂಬರಿಸಿದ ಮೇಲೆಯೇ ಸನ್ನಿಧಾನದಲ್ಲಿ ಈಗಿನ ಅಪ್ಪಣೆಯಾದದ್ದು'' ಎಂದು ಹೇಳಿ ಅಭ್ಯರ್ಥಿಗಳನ್ನು ಕುರಿತು, ''ನಿಮ್ಮ ದೇವಸ್ಥಾನದ ಲೆಕ್ಕದಲ್ಲಿ ನೂರು ವರ್ಷಕ್ಕೆ ಹಿಂದೆ ಈ ಗ್ರಾಮದ ವರಮಾನ ಬಂದದ್ದಕ್ಕೆ ಪ್ರಮಾಣ ಇದೆಯೇ'' ಎಂದು ಕೇಳಿದನು. ಅವರು ''ಇದೆ ಮಹಾಸ್ವಾಮಿ, ತೋರಿಸಿಕೊಡುತ್ತೇವೆ'' ಎಂದರು. ವಿಶಾಲಾಕ್ಷ ಪಂಡಿತನು ''ಸರಿ, ಬುದ್ಧಿವಂತರಿಗೆ ಪ್ರಮಾಣ ತರುವುದಕ್ಕೂ ಮಾಡುವುದಕ್ಕೂ ಏನು ಕಷ್ಟ?'' ಎಂದನು. ತಿರುಮಲಾರ್ಯನು ''ಪಂಡಿತರೆ, ಈ ಬಡಪಾಪಿಗಳ ಅನ್ನವನ್ನು ಕಸುಕೊಂಡದ್ದಲ್ಲದೆ, ಅವರು ಇಲ್ಲದ ಪ್ರಮಾಣವನ್ನು ಸೃಷ್ಟಿಮಾಡುವರೆಂದು ಬೇರೆ ಹೇಳುತ್ತಿದ್ದೀರಿ. ತಾವು ದೊಡ್ಡವರು, ಇಂಥ ಮಾತನ್ನು ಏಕೆ ಹೇಳಬೇಕು?'' ಎಂದನು. ಪಂಡಿತನು ''ನಾನು ಇವರ ವಿಷಯದಲ್ಲಿ ಅನ್ಯಾಯ ಹೇಳುತ್ತಿಲ್ಲ. ಅನೇಕ ಕಡೆ ಹೀಗಾಗಿರುವುದು ನಿಜ. ನೀವೂ ನಾವೂ ಈ ವಿಷಯ ಎಷ್ಟೋ ಸಲ ಮಾತನಾಡಿಲ್ಲವೆ? ಶ್ರೀವೈಷ್ಣವರು ಪ್ರಬಲರಾಗಿದ್ದಾಗ ಅನೇಕ ಜೈನ ದೇವಾಲಯಗಳಿಂದ ಆಸ್ತಿಯನ್ನು ಕಿತ್ತುಕೊಂಡು ಶ್ರೀವೈಷ್ಣವ ದೇವಾಲಯಗಳಿಗೆ ಕೊಟ್ಟರೆಂದು ನೀವೇ ಹೇಳಿದ್ದೀರಿ, ನಾನೇ ಕೇಳಿದ್ದೇನೆ'' ಎಂದನು. ತಿರುಮಲಾರ್ಯನು ಅರಸನನ್ನು ಕುರಿತು ''ಮಹಾಸ್ವಾಮಿ, ಇದು ನನ್ನ ಮತ್ತು ಪಂಡಿತರ ಚರ್ಚೆಯಾಗಬಾರದು. ರಾಜ್ಯದಲ್ಲಿ ಧರ್ಮವನ್ನು ಮಹಾಸನ್ನಿಧಾನ ನಡೆಸುತ್ತಿದೆ. ಎಂದೋ ಯಾರೋ ಜೈನರಿಂದ ಸ್ವತ್ತನ್ನು

ಕಿತ್ತು ಶ್ರೀವೈಷ್ಣವರಿಗೆ ಕೊಟ್ಟರು ಎಂಬ ಕಾರಣದಿಂದ ಈ ದಿವಸ ಶ್ರೀವೈಷ್ಣವರಿಂದ ಸ್ವತ್ತನ್ನು ಕಿತ್ತು ಜೈನರಿಗೆ ಕೊಡುವುದು ಸರಿಯಾದೀತೆ? ಇಷ್ಟಕ್ಕೆ ಅಂದು ಕಿತ್ತು ಕೊಟ್ಟರೆನ್ನುವ ಮಾತನ್ನು ನಾವೆಲ್ಲ ಗತಾನುಗತವಾಗಿ ಕೇಳಿದ್ದೇವೆಯೇ ಹೊರತು ಅಂದು ನಡೆದ ವಿಚಾರ ನಮಗೆ ಹೇಗೆ ನಿಜವಾಗಿ ತಿಳಿಯಬೇಕು? ನಾವು ಕಾಣದ ಯಾವುದೋ ಒಂದು ಅನ್ಯಾಯವನ್ನು ಸರಿಪಡಿಸುವುದಕ್ಕೆ ಕಂಡಹಾಗೆ ಇಂದು ಒಂದು ಅನ್ಯಾಯವನ್ನು ಮಾಡಬಹುದೆ?'' ಎಂದನು. ಪದ್ಮರಸ ಪಂಡಿತನು ''ಕಾಣದ ಅನ್ಯಾಯ ಯಾವುದು ಮಹಾಸ್ವಾಮಿ? ಇವರು ಶ್ರೀವೈಷ್ಣವ ಎಂದು ಹೇಳಿದ ದೇವಾಲಯವನ್ನು ನೋಡಿದರೆಯೇ ಅದು ಹಿಂದೆ ಜೈನ ದೇವಾಲಯವಾಗಿತ್ತೆಂದು ಸ್ಪಷ್ಟವಾಗುತ್ತದೆ. ಶ್ರೀವೈಷ್ಣವರು ಜೈನರ ಸ್ವತ್ತನ್ನು ಕಿತ್ತುಕೊಂಡದ್ದು ಮಾತ್ರವಲ್ಲ, ಜೈನ ದೇವಾಲಯಗಳಲ್ಲಿ ವಿಷ್ಣುಮೂರ್ತಿಯನ್ನು ಪ್ರತಿಷ್ಠೆಮಾಡಿ ಅವನ್ನು ವೈಷ್ಣವ ದೇವಾಲಯಗಳನ್ನಾಗಿ ಮಾಡಿದರು. ಜಿನಮೂರ್ತಿಗಳನ್ನು ಬೀದಿಗೆ ಹಾಕಿದರು'' ಎಂದನು. ರಾಜರು ''ಬಟ್ಟೆಯಿಲ್ಲದ ದೇವರು, ಇವನಿಗೆ ಮನೇ ತಾನೇ ಏತಕ್ಕೆ ಎಂತಲೇನೋ'' ಎಂದು ನಕ್ಕರು. ತಿರುಮಲಾರ್ಯನು ''ಮಹಾಸ್ವಾಮಿ, ಯಾರೋ ನಾಲ್ಕು ಜನ ಪಾಪಿಗಳು ತಮ್ಮ ಕಷ್ಟವನ್ನು ಸಾನ್ನಿಧ್ಯದಲ್ಲಿ ಬಿನ್ನವಿಸಲು ಬಂದಿರುವಾಗ ಅವರ ಅರಿಕೆಯನ್ನು ಕೇಳಿ ಏನಾದರೊಂದು ಪರಿಹಾರವಿದೆಯೆ ಇಲ್ಲವೆ ಎನ್ನುವುದನ್ನು ಯೋಚಿಸದೆ ನಮ್ಮ ಪಂಡಿತರು ಸಿದ್ಧಾಂತಗಳ ವಿವಾದವನ್ನಾರಂಭಿಸಿದರು. ಇವರು ಹೇಳುವ ಮಾತು ನಿಜವೇ ಆದರೂ, ಈ ಅಶನಾರ್ಥಿಗಳ ಅರಿಕೆಗೂ ಅದಕ್ಕೂ ಸಂಬಂಧವಿಲ್ಲ. ಇದರ ಮೇಲೆ ಇಂಥ ಮಾತಿನಲ್ಲಿ ವಿವೇಚನೆಯೂ ಕಡಮೆ. ಯಾವ ವೈಷ್ಣವ ದೇವಾಲಯ ಹಿಂದೆ ಜೈನ ದೇವಾಲಯವಾಗಿತ್ತು, ಯಾವುದನ್ನು ಕಂಡು ಇವರು ಇಂಥ ಮಾತನ್ನಾಡುತ್ತಾರೆ?'' ಎಂದನು. ಪದ್ಮರಸ ಪಂಡಿತನು ''ನಿಮ್ಮ ಮುಖ್ಯವಾದ ಊರು ಮಂಡ್ಯದ ಜನಾರ್ದನ ದೇವಾಲಯ ಪೂರ್ವದಲ್ಲಿ ಜೈನ ದೇವಾಲಯವಾಗಿತ್ತೆಂದು ನಿಮ್ಮವರು ಹೇಳುವುದಿಲ್ಲವೆ?'' ಎಂದು ಕೇಳಿದನು. ತಿರುಮಲಾರ್ಯನು ''ನಮ್ಮವರು ಹೇಳುತ್ತಾರೆ. ಅವರಿಗೆ ಯಾವುದನ್ನು ಹೇಳಿದರೆ ಗೌರವ, ಯಾವುದನ್ನು ಹೇಳಿದರೆ ಗೌರವವಿಲ್ಲ,

ಎಂಬ ಜ್ಞಾನವಿಲ್ಲ. ಅವರು ಇಂಥ ಮಾತನ್ನಾಡಿದರೆ ನಿಮ್ಮಂಥ ಬಲ್ಲವರು ನಿಜವೆಂದು ನಂಬಬಹುದೆ? ಹೇಳುವ ಆ ಮೂಢನಿಗೆ ಅದು ಒಂದು ಹೆಮ್ಮೆ. ಜೈನ ದೇವಾಲಯವನ್ನು ವೈಷ್ಣವ ದೇವಾಲಯ ಮಾಡಿದರೆನ್ನುವುದೇನು? ದಿನ ಒಂದಕ್ಕೆ ಐನೂರು ಜನ ಜೈನರನ್ನು ನಮ್ಮ ಆಚಾರ್ಯರು ಕಲ್ಲುಗಾಣಕ್ಕೆ ಹಾಕಿಸಿದರೆಂದು ನಮ್ಮವರು ಜಂಬ ಹೊಡೆಯುತ್ತಾರೆ. ಆಚಾರ್ಯರನ್ನು ಕರುಣೈಕಸಿಂಧು ಎಂದು ಹೇಳುವವರೂ ಇವರೆ. ಐನೂರು ಜನ ಜೈನರನ್ನು ಕಲ್ಲುಗಾಣಕ್ಕೆ ಹಾಕಿಸಿದರು ಎಂದು ಅವರ ಕೀರ್ತಿಯನ್ನು ಹೊಗಳುವವರೂ ಇವರೆ. ಬುದ್ಧಿ ಇಲ್ಲದ ಇವರ ಮಾತಿಗೆ ನಾವು ಬಹಳ ತೂಕ ಕಟ್ಟಬಾರದು" ಎಂದನು. ವಿಶಾಲಾಕ್ಷ ಪಂಡಿತನು "ಮಾತು ಎತ್ತಲೋ ಹೋಗುತ್ತಿರುವುದು ನಿಜ. ಈ ಗ್ರಾಮದ ವಿಚಾರದಲ್ಲಿ ನಾನು ನಿಷ್ಪಕ್ಷಪಾತದಿಂದ ಆಲೋಚನೆಯನ್ನು ಮಾಡಿದೆನು. ಅದು ಹಿಂದೆ ಜೈನ ದೇವಾಲಯಕ್ಕೆ ನಡೆಯುತ್ತಿದ್ದದ್ದು ನನ್ನ ಮನಸ್ಸಿಗೆ ಸ್ಪಷ್ಟವಾಯಿತು. ಅದರ ಮೇಲೆಯೇ ಸರ್ವಾಧಿಕಾರಿಯ ವರದಿಯನ್ನು ಮಹಾಸ್ವಾಮಿಯವರಲ್ಲಿ ಅರ್ಪಿಸಿ ಅಂದು ಆ ತೀರ್ಪನ್ನು ಪಡೆದದ್ದು" ಎಂದನು. ತಿರುಮಲಾರ್ಯನು "ತಾವು ಯಾವ ಪ್ರಮಾಣಗಳನ್ನು ನೋಡಿ ಆ ನಿರ್ಧಾರಕ್ಕೆ ಬಂದಿರೋ ಆ ಪ್ರಮಾಣಗಳನ್ನು ನೋಡಿದರೆ ನಾನೂ ಅದೇ ನಿರ್ಧಾರಕ್ಕೆ ಬರಬೇಕಲ್ಲವೆ" ಎಂದನು. ವಿಶಾಲಾಕ್ಷನು "ಅದನ್ನು ಹೇಗೆ ಹೇಳುವುದು? ಅದು ಅವರವರ ಮನೋಧರ್ಮ" ಎಂದನು. ತಿರುಮಲಾರ್ಯನು "ಇದೇನು ಕೇವಲ ಜ್ಞಾನವೆ ಪಂಡಿತರೆ" ಎಂದು ಕೇಳಿದನು. ಪಂಡಿತನು "ನನಗೆ ನಿಮಗಿಂತ ಸ್ವಲ್ಪ ಹೆಚ್ಚು ವಯಸ್ಸಾಗಿದೆ ತಿರುಮಲಾರ್ಯರೆ. ನಿಮ್ಮಲ್ಲಿ ನನಗೆ ಬಹಳ ವಿಶ್ವಾಸವಿದೆ. ಎಲ್ಲವನ್ನೂ ಮರೆತು ನೀವು ನನ್ನಲ್ಲಿ ಮರ್ಯಾದೆಯಿಲ್ಲದ ಮಾತನ್ನು ಆಡುತ್ತೀರಿ" ಎಂದನು. ರಾಜರಿಗೆ ಈ ಕೋಪಕ್ಕೆ ಕಾರಣ ಒಡನೆ ತಿಳಿಯಲಿಲ್ಲ. "ನೀವು ಕೇಳಿದ್ದು ಏನು ತಿರುಮಲಾರ್ಯರೆ" ಎಂದರು. ತಿರುಮಲಾರ್ಯನು, "ನಮ್ಮ ಪಂಡಿತರ ಮತದ ಪ್ರಕಾರ ಕೇವಲ ಜ್ಞಾನವೆನ್ನುವುದು ಜೀವಕ್ಕೆ ಸಹಜವಾಗಿರುವ ಜ್ಞಾನ. ಅರ್ಹಂತ ಅವಸ್ಥೆಯಲ್ಲಿರುವ ಜೀವ ಪದಾರ್ಥವನ್ನು ನೋಡದೆಯೇ ಅದರ ಸ್ವಭಾವವನ್ನು ತಿಳಿಯುತ್ತದೆಯಂತೆ. ಪ್ರಮಾಣವಿಲ್ಲದೆ ನಿರ್ಧಾರಕ್ಕೆ ಬರುವುದನ್ನು ನಾನು

ಕೇವಲ ಜ್ಞಾನವೆಂದೆ. ಅದರಿಂದ ಹಿರಿಯರಿಗೆ ಕೋಪ ಬಂದಿದೆ" ಎಂದನು. ರಾಜನಿಗೆ ಸ್ವಲ್ಪ ನಗು, ಸ್ವಲ್ಪ ವಿಸ್ಮಯ. "ಪಂಡಿತರೆ, ಇದಕ್ಕೆ ಕೋಪ ವೇಕೆ? ವಿಶಿಷ್ಟಾದ್ವೈತವನ್ನು ನೀವೂ ಒಂದು ಮಾತು ಹೇಳಿದರಾಯಿತು" ಎಂದರು. ತಿರುಮಲಾರ್ಯನು "ಎಷ್ಟೋ ಸಲ ಹೇಳಿದ್ದಾರೆ ಮಹಾ ಸ್ವಾಮಿ. ನಮ್ಮ ಮತ ಅಡ್ಡಗೋಡೆಯ ಮೇಲಿನ ದೀಪವಂತೆ. ದ್ವೈತವೆಂದು ಹೇಳುವುದಕ್ಕೆ ಧೈರ್ಯ ಸಾಲದು. ಅದ್ವೈತವೆಂದು ಹೇಳುವುದಕ್ಕೂ ಧೈರ್ಯ ಸಾಲದು. ಆದ್ದರಿಂದ ವಿಶಿಷ್ಟಾದ್ವೈತವೆಂದು ಎರಡು ಕಡೆಗೂ ಮುಖವಿಟ್ಟುಕೊಂಡು ನಡೆಯುವವರಂತೆ ನಾವು" ಎಂದನು. ಪದ್ಮರಸ ಪಂಡಿತನು "ಅದು ಸರಸದ ಮಾತು. ನೀವೂ ಜೈನ ಮತವನ್ನು ಪರಿಹಾಸ್ಯ ಮಾಡಿದ್ದೀರಿ. ಆದರೆ ಈ ಹೊತ್ತಿನ ಮಾತು ನಿಷ್ಠುರದ ಮಾತು" ಎಂದನು. ಇವರಿವರ ಜಗಳವನ್ನು ಹೇಗೆ ಹರಿಸುವುದೆಂದು ರಾಜರು ಯೋಚನೆ ಮಾಡುತ್ತಾ ಇದ್ದರು. ಮಧ್ಯೆ ಯಾವುದಾದರೊಂದು ಮಾತಿನಲ್ಲಿ ಇವರನ್ನು ಸಮಾಧಾನವಾಗಿ ಸ್ವಲ್ಪಹೊತ್ತು ನಡೆಸಿದರೆ ಆಮೇಲೆ ವಿವಾದವನ್ನು ಹೇಗಾದರೂ ಸರಿಪಡಿಸಬಹುದೆಂದು ಅವರ ಮನಸ್ಸಿನಲ್ಲಿ ಒಂದು ಪ್ರತ್ಯಾಶೆ. ಆದ್ದರಿಂದ ಅವರು ಪದ್ಮರಸನನ್ನು ಕುರಿತು "ತಿರುಮಲಾರ್ಯರು ಜೈನ ಮತವನ್ನು ಇನ್ನೇನೆಂದು ಹೇಳಿದ್ದಾರೆ?" ಎಂದು ಕೇಳಿದರು. ಪದ್ಮರಸನು "ನಮ್ಮ ಮತದ ಮೂಲಸೂತ್ರ ಮಹಾಸ್ವಾಮಿಗೆ ತಿಳಿದಹಾಗೆ ಸ್ಯಾದ್ವಾದ. ಸ್ಯಾತ್ ಎನ್ನುವುದನ್ನು ತೆಗೆದುಕೊಂಡು ಇವರು, ವಿಶಿಷ್ಟಾದ್ವೈತಕ್ಕಿಂತಲೂ ಹೇಡಿಯ ಮತ ನಿಮ್ಮ ಮತ, ಏನು ಹೇಳಿದರೂ 'ಇರಬಹುದು' ಎನ್ನುತ್ತೀರಿ, ನಿಮ್ಮ ತಂದೆ ಹೆಂಗಸು ಎಂದರೆ ಅಲ್ಲ ಎಂದು ಹೇಳುವುದಕ್ಕೆ ನಿಮ್ಮ ಮತದಲ್ಲಿ ಅವಕಾಶವಿಲ್ಲ, ಎಂದು ಹೇಳಿದ್ದಾರೆ" ಎಂದನು. ವಿಶಾಲಾಕ್ಷ ಪಂಡಿತನು "ಇಂಥ ಮಾತು ಸರಸದ ಹಾಗೆ ಇರುತ್ತದೆ. ಆದರೆ ಬಹುವೇಳೆ ನಿಜವಾದ ಅಸೂಯೆಯನ್ನೇ ಸೂಚಿಸುತ್ತದೆ. ನಮ್ಮವರೇ ಮತ ಕೆಟ್ಟು ಶ್ರೀವೈಷ್ಣವ ರಾದರು, ಅವರ ವಂಶದವರು ತಮ್ಮ ತಾತಂದಿರ ಮತವನ್ನು ಹಳಿಯು ತ್ತಿದಾರೆ" ಎಂದನು. ತಿರುಮಲಾರ್ಯನಿಗೆ ಬಹು ಕೋಪ ಬಂದಿತು. ಅವನು ಎದ್ದುನಿಂತನು. "ಮಹಾಸ್ವಾಮಿ, ಪಂಡಿತರು ಮಹಾಸನ್ನಿಧಿ ಯಲ್ಲಿ ನನ್ನನ್ನು ಜೈನವಂಶಜನೆಂದು ಹೇಳಿಬಿಟ್ಟರು. ಇದಕ್ಕಿಂತ ಹೀನಾಯ

ವಾದ ಮಾತನ್ನು ನಾನು ಈ ಜನ್ಮದಲ್ಲಿ ಕೇಳುವುದು ಸಾಧ್ಯವಿಲ್ಲ. ಅಪ್ಪಣೆ ಯಾಗಬೇಕು. ನಾನು ಮರಳಿ ಸನ್ನಿಧಿಯ ಸೇವೆಗೆ ಬರುತ್ತೇನೆ. ಇನ್ನು ಇಲ್ಲಿ ಈ ಪಾಷಂಡ ವಾಕ್ಯವನ್ನು ಕೇಳುತ್ತಾ ಇರಲಾರೆ. ಭಗವದಪಚಾರ ವಾಯಿತು. ಭಾಗವತಾಪಚಾರವಾಯಿತು. ಆಚಾರ್ಯರ ಅಪಚಾರ ವಾಯಿತು. ಇನ್ನು ಇಲ್ಲಿ ಯಾವ ಪ್ರಯೋಜನಕ್ಕಾಗಿ ನಾನು ಕುಳಿತಿರಲಿ" ಎಂದು ಕೈಮುಗಿದು ಹೊರಡುವುದಕ್ಕೆ ಸಿದ್ಧನಾದನು. ವಿಶಾಲಾಕ್ಷ ಪಂಡಿತನು "ನೀವು ಜೈನ ವಂಶಜರೆಂದು ನಾನು ಹೇಳಿದೆನೆ, ಏಕೆ ಕೋಪ ಮಾಡುತ್ತೀರಿ? ಕುಳ್ಳಿರಿ" ಎಂದು ತಿರುಮಲಾರ್ಯನಿಗೆ ಹೇಳಿ ಅವನು ಮರಳಿ ಕುಳಿತಮೇಲೆ ರಾಜರನ್ನು ಕುರಿತು "ವಿಷಯವೇನೋ ಮಹಾ ಸ್ವಾಮಿಯವರು ಪುನಃ ಆಲೋಚಿಸಬೇಕಾದದ್ದೇ. ನಮ್ಮ ಶ್ರೀವೈಷ್ಣವ ಪ್ರಜೆಗಳು ಗ್ರಾಮ ಹೋಯಿತೆಂಬ ದುಃಖದಲ್ಲಿ ಈಗ ಎಂಟು ದಿವಸದ ಹಿಂದೆ ಒಂದು ಸಂಜೆ ಸರ್ವಾಧಿಕಾರಿ ಬುಚ್ಚಣ್ಣನನ್ನು ಒಬ್ಬನೇ ಸಿಕ್ಕಿದಾಗ ಹಿಡಿದು ಕೊಂಡು ಹೊಡೆದರಂತೆ. ಇಷ್ಟೆಲ್ಲ ಗಲಭೆ ಆಗುವುದೆಂದು ನಮಗೆ ತೋಚ ಲಿಲ್ಲ" ಎಂದು ಹೇಳಿದನು. ಅರ್ಥಿಗಳ ಮುಖಂಡನು "ಮಹಾಸ್ವಾಮಿ ನಾವು ಯಾರೂ ಜನರನ್ನು ಹೊಡೆಯುವಂಥವರಲ್ಲ. ಹುಡುಗರು ಕೆಲವರು ಹೀಗೆ ಮಾಡುತ್ತೇವೆ ಹಾಗೆ ಮಾಡುತ್ತೇವೆ ಎಂದು ಪುಂಡಾಟಮಾಡಿದರು. ದೊಡ್ಡವರು ಅಡಗಿಸಿದೆವು. ಕೆಲವು ದಿವಸದ ಮೇಲೆ ಸರ್ವಾಧಿಕಾರಿಗಳಿಗೆ ಏಟು ಬಿದ್ದದ್ದುಂಟು. ಅವರು ನಡತೆಯಲ್ಲಿ ತಪ್ಪು ಮಾಡುವುದುಂಟು. ಯಾರೋ ಸಂಸಾರಿಗಳನ್ನು ಕೆಡಿಸಿದರೆಂದು ಜನ ಆಡಿಕೊಳ್ಳುತ್ತಿದ್ದರು. ಅವರ ಕಡೆಯವರು ಹೊಡೆದರೆಂದೇ ನಮಗೆ ವರ್ತಮಾನ ಬಂದಿದೆ. ನಮ್ಮ ಹುಡುಗರು ಪುಂಡುಮಾತನ್ನು ಹೇಳಿದಮಾತ್ರಕ್ಕೆ ಹೋಗಿ ತಮ್ಮ ಅಧಿಕಾರಿ ಗಳನ್ನು ಹೊಡೆಯುವರೆ? ಏಕೆ, ಮೈಸೂರಿಗೆ ಬಂದು ನಮ್ಮ ಪ್ರಧಾನ ರವರನ್ನು ಹೊಡೆಯುತ್ತೇವೆಂದು ಒಬ್ಬರಿಬ್ಬರು ಹೇಳಿದರು. ಈ ಮಾತಿಗೆ ಏನಾಗಬೇಕು" ಎಂದನು. ವಿಶಾಲಾಕ್ಷ ಪಂಡಿತನು "ಸರಿ ಎಲ್ಲವೂ ಒಂದಕ್ಕೊಂದು ಹೊಂದಿಕೊಂಡಹಾಗಿದೆ. ಅಂದು ಕಂದಾಯದ ಮಾತಿಗೆ ಜಂಗಮ ಮೇಲೆ ಎದ್ದ. ಈಗ ಜಮೀನಿನ ಮಾತಿಗೆ ಶ್ರೀವೈಷ್ಣವ ಮೇಲೆ ಏಳುತಾನೆ. ಇಷ್ಟೆ ಅಲ್ಲವೆ" ಎಂದನು. ತಿರುಮಲಾರ್ಯನಿಗೆ ಮರಳಿ

ಬಹು ಕೋಪ ಬಂದಿತು. "ಮಹಾಸನ್ನಿಧಿಯಲ್ಲಿ ಎಂತಹ ಮಾತನಾಡುತ್ತಿದ್ದೀರಿ ಪಂಡಿತರೆ. ದಂಗೆ ಎದ್ದ ಜಂಗಮನಿಗೂ ಸನ್ನಿಧಿಯಲ್ಲಿ ಕೈಯೊಡ್ಡಿ ಬೇಡುವ ವೈಷ್ಣವನಿಗೂ ಎಲ್ಲಿಯ ಸಾಮ್ಯ" ಎಂದು ಹೇಳಿ ರಾಜರನ್ನು ಕುರಿತು "ಮಹಾಸ್ವಾಮಿ, ಭೂಮಿಯನ್ನು ಕಳೆದುಕೊಂಡ ಈ ಬ್ರಾಹ್ಮಣರು ಸನ್ನಿಧಿಯಲ್ಲಿ ಅರಿಕೆ ಮಾಡಬೇಕಾದ ವಿಷಯವಿದೆ ಎಂದು ಹೇಳಿದ್ದರಿಂದ ಅವಕಾಶವನ್ನು ಏರ್ಪಡಿಸಿದೆನು. ಮಹಾಸ್ವಾಮಿಯವರು ಅವರು ಹೇಳುವ ನಾಲ್ಕು ಮಾತನ್ನು ಲಾಲಿಸೋಣವಾಯಿತು. ಇನ್ನು ಮಹಾಚಿತ್ತಕ್ಕೆ ಯಾವುದು ಸೂಕ್ತವೆಂದು ತೋರುವುದೋ ಅದನ್ನು ಅಪ್ಪಣೆ ಮಾಡೋಣವಾಗಲಿ. ನನಗೆ ಇಲ್ಲಿ ನಡೆದಿರುವ ಮಾತಿನಿಂದ ಬಹಳ ಅಸಮಾಧಾನವಾಗಿದೆ. ನಾನು ಇಲ್ಲೇ ಇದ್ದರೆ ನಾಲ್ಕು ಕೆಟ್ಟ ಮಾತನ್ನು ಆಡಿ ನಾಲ್ಕು ಕೆಟ್ಟ ಮಾತನ್ನು ಕೇಳುವ ಸಂದರ್ಭ ಒದಗಬಹುದು. ನನಗೆ ಅದು ಇಷ್ಟವಿಲ್ಲ. ನಾಳೆ ಬಂದು ಮರಳಿ ಸನ್ನಿಧಿಯ ಸೇವೆ ಮಾಡುತ್ತೇನೆ" ಎಂದು ಕೈಮುಗಿದು ಹೊರಟುಹೋದನು. ರಾಜರು ಅರ್ಥಿಗಳನ್ನು ಕುರಿತು "ಒಳ್ಳೆಯದು, ನೋಡೋಣ. ಆದರೆ ಪ್ರಾಯಶಃ ನಿಮಗೆ ಪುನಃ ಈ ಗ್ರಾಮವನ್ನು ಕೊಡುವುದಕ್ಕಾಗುವುದಿಲ್ಲ. ಬೇರೆ ಭೂಮಿಯನ್ನು ಕೊಡಿಸಿ ಕೊಡುವುದಕ್ಕೆ ಏರ್ಪಾಡು ಮಾಡುತ್ತೇವೆ" ಎಂದು ಹೇಳಿ ಕಳುಹಿಸಿ ಆಮೇಲೆ ಶಾಸ್ತ್ರಿಗಳನ್ನೂ ಪದ್ಮರಸನನ್ನೂ ಮನೆಗೆ ಹೋಗಬಹುದೆಂದು ಬೀಳ್ಕೊಟ್ಟರು. ವಿಶಾಲಾಕ್ಷ ಪಂಡಿತನನ್ನು ಸಜ್ಜೆಯೊಳಕ್ಕೆ ಕರೆದುಕೊಂಡುಹೋಗಿ ಅಲ್ಲಿ ಅವನೊಂದಿಗೆ ಚದುರಂಗವಾಡಲು ಕುಳಿತರು.

ಚದುರಂಗದ ಆಟ ಮುಗಿಯುವುದು ರಾತ್ರಿ ನಾಲ್ಕು ಗಳಿಗೆಯಾಯಿತು. ಆಮೇಲೆ ವಿಶಾಲಾಕ್ಷ ಪಂಡಿತನು ಮನೆಗೆ ಹೋಗಬೇಕು. ಅರಸರು ಸೇವಕನನ್ನು ಕರೆದು ಪಂಜಿನವನು ಇದಾನೆಯೋ ಎಂದು ಕೇಳಿದರು.

ಸೇವಕನು "ಇದಾನೆ ಬುದ್ಧಿ" ಎಂದನು.

ಅರಸರು "ಜೊತೆಗೆ ವೈಗಾವಲು ಹೋಗಲಿ" ಎಂದರು.

ವಿಶಾಲಾಕ್ಷ ಪಂಡಿತನು "ಅದೇನೂ ಬೇಕಿಲ್ಲ ಪ್ರಭು. ಅಪ್ಪಣೆಯಾದರೆ ಬರುತ್ತೇನೆ" ಎಂದನು.

ಅರಸರು "ಇದ್ದರೆ ತಪ್ಪೇನು. ನಿಮಗೆ ಆಗದ ಜನ ಅನೇಕರು ಇದ್ದಾರೆ. ಇನ್ನು ಈ ಇರುಳಾಪುರದ ವೈಷ್ಣವರು ಬೇರೆ" ಎಂದರು.

ವಿಶಾಲಾಕ್ಷ ಪಂಡಿತನು "ಪಾಪ ಇವರು ಮೇಲೆ ಬೀಳುವ ಜನರಲ್ಲ. ಏನೋ ಅನ್ನುತ್ತಾರೆ, ಕೋಪ ಬಂದಾಗ. ಅಷ್ಟೇ ಹೊರತು ಮನಸ್ಸಿನಲ್ಲಿ ಕ್ರೋಧ ಬೆಳೆಸುವುದಿಲ್ಲ. ಕೈಯಲ್ಲಿದ್ದ ಅನ್ನ ತಪ್ಪಿತಲ್ಲಾ ಎಂದು ದುಃಖ ಪಡುತ್ತಿದಾರೆ. ನಾಳೆ ಮಹಾಸ್ವಾಮಿಯವರು ಇನ್ನೊಂದು ಗ್ರಾಮವನ್ನು ಕೊಟ್ಟರಾಯಿತು. ಇವರೂ ಪ್ರಜೆಗಳೆ, ಅವರೂ ಪ್ರಜೆಗಳೆ. ಯಾರು ಹಸಿದರೂ ತಮ್ಮ ಮಕ್ಕಳು ಹಸಿದಂತೆ" ಎಂದನು.

ರಾಜರು: "ಹಾಗಾದರೆ ಆ ಗ್ರಾಮವನ್ನು ಅವರಿಂದ ಏಕೆ ಕಿತ್ತು ಕೊಂಡಿರಿ?"

ಪಂಡಿತ: "ಜೈನನ ಕೈಯಲ್ಲಿದ್ದ ಅನ್ನವನ್ನು ಕಿತ್ತು ಹಿಂದೆ ಯಾರೋ ವೈಷ್ಣವನಿಗೆ ಕೊಟ್ಟಿದ್ದರು. ಇದು ಅನ್ಯಾಯ ಎಂದು ಮಹಾಸ್ವಾಮಿ ಯವರು ಅದನ್ನು ಮತ್ತೆ ಜೈನನಿಗೆ ಕೊಡೋಣವಾಯಿತು."

ರಾಜರು ನಕ್ಕರು. ಪಂಡಿತನು ಮನೆಗೆ ಹೊರಟನು.

ಅರಸರು ಒಳಗೆ ಹೋಗಿ ಅಂಗರೇಕನ್ನು ಕಳೆದು ಮಡಿವಸ್ತ್ರಗಳನ್ನು ಧರಿಸುತ್ತಿರುವಾಗಲೇ ಸೇವಕನೊಬ್ಬನು ಬಂದು ಭಯದಿಂದ ನಡುಗುವ ಧ್ವನಿಯಿಂದ "ಮಹಾಸ್ವಾಮಿ, ಪಂಡಿತರನ್ನು ಕೊಲೆಗಾರರು ಬಡಿದರಂತೆ" ಎಂದು ಹೇಳಿದನು.

ಅರಸರು "ಆಹಾ, ಎಲ್ಲಿ, ಏನಾಯಿತು?" ಎಂದು ಕೇಳಿದರು. ವಿಶಾಲಾಕ್ಷ ಪಂಡಿತನ ಮನೆ ಕೋಟೆಯ ಉತ್ತರದ ಬಾಗಿಲ ಕಡೆಯ ಬೀದಿಯ ಒಂದು ಮಹಡಿ. ಅಲ್ಲಿಗೆ ಹೋಗಬೇಕಾದರೆ ಒಂದು ಸಣ್ಣ ದಾರಿ ಯಲ್ಲಿ ನಡೆಯಬೇಕು. ಮನೆಮನೆಯ ಬಳಿಯಲ್ಲಿ ಅಲ್ಲಲ್ಲಿ ಸಂದಿಗಳು. ಆ ಸಣ್ಣ ದಾರಿಯಲ್ಲಿ ನಡೆಯುತ್ತಿರುವಾಗ ಮುಂದೆ ಪಂಜಿನವನು ಹಿಂದೆ ಕಾವಲವನು ಇದ್ದಂತೆಯೇ ಒಂದು ಬರೀ ಮನೆಯ ಜಗಲಿಯಿಂದ ಯಾರೋ ಧುಮುಕಿ ಪಂಡಿತನಮೇಲೆ ಬಿದ್ದು ತಲೆಗೆ ಬೆನ್ನಿಗೆ ಚೆನ್ನಾಗಿ ಹೊಡೆದುಬಿಟ್ಟರು. ಹೋ ಎಂದು ಕೂಗಿಕೊಂಡು ಪಂಡಿತನು ಕೆಳಗೆ ಬಿದ್ದನು. ಕಾವಲಿ ನವನು ಅಪ್ರತಿಭನಾದನು. ಎಚ್ಚತ್ತು ಅತ್ತ ಇತ್ತ ನೋಡುವಲ್ಲಿ ಕೊಲೆ

ಗಾರರು ಓಡಿದ್ದರು. ಕೂಗನ್ನು ಕೇಳಿ ಪಕ್ಕದ ಮನೆಗಳ ಜನ ಬಂದರು. ಪಂಡಿತನ ತಲೆಯಿಂದ ರಕ್ತ ಸುರಿಯುತ್ತಿತ್ತು. ಅವನ ಬೆನ್ನು ಎದೆಗೂಡು ಮುರಿದುಹೋಗಿತ್ತು. ಅವನು ಕಾವಲವನನ್ನು ಕುರಿತು "ಅರಸರಿಗೆ ತಿಳಿಸು, ನನ್ನನ್ನು ಮನೆಗೆ ಕರೆದುಕೊಂಡು ಹೋಗು" ಎಂದು ಹೇಳಿದನು. ಕಾವಲವನು ಅರಮನೆಗೆ ವರ್ತಮಾನವನ್ನು ಕಳುಹಿಸಿ ಪಂಡಿತನನ್ನು ಅವನ ಮನೆಗೆ ಹೊರಿಸಿಕೊಂಡು ಹೋಗಿದ್ದನು.

ಅರಸರಿಗೆ ಪಂಡಿತನ ವಿಷಯದಲ್ಲಿ ಬಹು ಗೌರವ ಬಹು ಪ್ರೇಮ ಎಂದು ಹೇಳಿದೆ. ಅವರಿಗೆ ಒಡನೆಯೇ ಆ ಕೊಲೆಗಾರರನ್ನು ಹಿಡಿಸಿ ಬಲಿಹಾಕಬೇಕೆಂದು ತೋರಿತು. ಪಂಡಿತನನ್ನು ನೋಡಬೇಕೆಂದು ತೀವ್ರವಾದ ಆಸೆಯಾಯಿತು. ಮುರಳಿ ಅಂಗರೇಕನ್ನು ಹಾಕಿಕೊಂಡು ಸೇವಕರನ್ನು ಕುರಿತು, ಊಳಿಗದವರನ್ನು ಕರೆ, ವೈದ್ಯರಿಗೆ ಹೇಳಿಕಳುಹಿಸು, ಪಂಡಿತರ ಮನೆಗೆ ನಡೆಯಿರಿ, ಎಂದರು. ಅದಾದ ಹತ್ತು ನಿಮಿಷದಲ್ಲಿ ಅರಸರು ವಿಶಾಲಾಕ್ಷ ಪಂಡಿತನ ಮನೆಗೆ ಬಂದು ಅವನು ಮಲಗಿದ್ದ ಮಂಚದ ಪಕ್ಕದಲ್ಲಿ ಕುಳಿತುಕೊಂಡರು.

ಒಡೆಯನನ್ನು ನೋಡಿ ಪಂಡಿತನು ಏಳಲು ಯತ್ನಮಾಡಿದನು. ಆಗಲಿಲ್ಲ. ಅರಸರು "ಚೆನ್ನಾಯಿತು. ಪೆಟ್ಟು ತಿಂದು ಬಿದ್ದಿರುವಾಗಲೂ ನಮಗೆ ಮರ್ಯಾದೆ ಮಾಡಬೇಕೆ?" ಎಂದು ಅವನನ್ನು ಮೆಲ್ಲಗೆ ಮುಟ್ಟಿ ಮಲಗಿರೆಂದು ಸೂಚಿಸಿ "ಹೇಗಿದೆ, ಏನಾಗಿದೆ" ಎಂದು ಕೇಳಿದರು. ಪಂಡಿತನು ಮೆಲ್ಲಮೆಲ್ಲನೆ "ನನ್ನ ಇಹಲೋಕದ ಯಾತ್ರೆ ಮುಗಿಯಿತು. ನಾನು ಹೋಗಿಬರುತ್ತೇನೆ. ಅರಮನೆಯಲ್ಲಿ ಕಂಡದ್ದೇ ಕಡೆಯ ದರ್ಶನವೋ ಎಂದುಕೊಂಡೆ. ಮಹಾಪ್ರಭು ಕರುಣಿಸಿ ಇಲ್ಲಿಗೆ ಬಿಜಯ್ಗೈದಿರಿ. ಇನ್ನೊಮ್ಮೆ ನೋಡಿ ಸಂತೋಷಪಟ್ಟೆ" ಎಂದನು. ರಾಜರಿಗೆ ಕಣ್ಣಲ್ಲಿ ನೀರು ತುಂಬಿತು. ಪಂಡಿತನು ಬಹಳ ನೋವೆಂದು ಸನ್ನೆಯಿಂದ ತೋರಿಸಿದನು. ರಾಜರು ಮೆಲ್ಲನೆ "ಯಾರು ಹೊಡೆದರೊ? ತಿರುಮಲಾರ್ಯರ ಕಡೆಯವರೋ?" ಎಂದರು. ಪಂಡಿತನು ಅಗಲವಾಗಿ ಕಣ್ಣು ತೆರೆದು "ಅಯ್ಯೋ ಉಂಟೆ". ಎಂದನು. ರಾಜನು ಸುಮ್ಮನಾದನು. ಪಂಡಿತನು ಒಂದು ಕ್ಷಣಬಿಟ್ಟು "ಆ ಮಾತು ಹಾಗಿರಲಿ. ನಿಮ್ಮ ಬಾಲ್ಯದಾರಭ್ಯ ನಿಮ್ಮ ಏಳ್ಗೆಯನ್ನು

ಬಯಸಿದೆ. ಸೇವೆ ಮಾಡಿದೆ. ನೀವೂ ನನ್ನನ್ನು ನೋಡಿಕೊಂಡಿರಿ. ರಾಜ್ಯಲಕ್ಷ್ಮಿ ನಿಮ್ಮನ್ನು ವರಿಸಿದ್ದಾಳೆ. ನೀವು ಅವಳನ್ನು ನಡೆಸಿಕೊಳ್ಳುತ್ತೀರಿ. ಆದರೆ ರಾಜರು ಎಲ್ಲಾ ಕೆಲಸವನ್ನೂ ನೋಡುವುದಕ್ಕಾಗುವುದಿಲ್ಲ. ಒಳ್ಳೆಯ ಪ್ರಧಾನನಿರಬೇಕು. ನನ್ನುಸಿರಿದ್ದಿದ್ದರೆ ಈ ದೊರೆತನವನ್ನು ಇನ್ನೂ ಬೆಳಗಿಸಬೇಕೆಂದು ಆಸೆಯಿತ್ತು. ಆದರೆ ನನ್ನ ಸೇವಾಪ್ರಾಪ್ತಿ ಇಷ್ಟೇ ಇದ್ದದ್ದು. ಇದಕ್ಕೆ ಚಿಂತಿಸಿ ಫಲವಿಲ್ಲ. ತಾವು ದಯವಿಟ್ಟು ನನ್ನ ಒಂದು ಮಾತನ್ನು ನಡೆಯಿಸಿಕೊಡುತ್ತೇನೆಂದರೆ ನಾನು ಸಮಾಧಾನವಾಗಿ ಹೋಗುತ್ತೇನೆ" ಎಂದನು. ಅರಸರಿಗೆ ಕಂಠ ಕಟ್ಟಿತ್ತು. ತಡೆಯ ಧ್ವನಿಯಿಂದ ಅವರು "ಅಗತ್ಯ ನಡೆಸುತ್ತೇನೆ ಹೇಳಿ" ಎಂದರು.

ಪಂಡಿತನು ಒಂದು ಕ್ಷಣ ಮಾತನಾಡಲಿಲ್ಲ.

ಅರಸರು "ಏನು ಹೇಳಿ" ಎಂದರು.

ಪಂಡಿತನು "ಮಹಾಸ್ವಾಮಿ ದೊರೆಯಾದಾಗ ನಾನು ಪ್ರಧಾನನಾಗಿ ಬಂದದ್ದು ಅನೇಕರಿಗೆ ಅಸಮಾಧಾನ ಉಂಟುಮಾಡಿತು. ಈಗ ನಾನು ಕಣ್ಣುಮುಚ್ಚಿಕೊಂಡರೆ ದೊಡ್ಡವರೆನ್ನುವವರು ನಾನು ಪ್ರಧಾನನಾಗುತ್ತೇನೆ ತಾನು ಪ್ರಧಾನನಾಗುತ್ತೇನೆ ಎಂದು ಬರುತ್ತಾರೆ. ಒಡೆಯರು ಸಿಕ್ಕಿದವರನ್ನು ಪ್ರಧಾನನಾಗಿ ಮಾಡಿಕೊಳ್ಳಬಾರದು. ಸರಿಯಾದವನನ್ನು ಅಧಿಕಾರಕ್ಕೆ ಇಟ್ಟುಕೊಳ್ಳಬೇಕು. ಮಾತು ಕೊಟ್ಟರೆ ಹೆಸರು ಹೇಳುತ್ತೇನೆ" ಎಂದನು.

ಅರಸರು "ಇಂಥವನಿಗೆ ಎಂದು ಹೇಳಿ. ಆಮೇಲೆ ಉತ್ತರ ಹೇಳುತ್ತೇನೆ" ಎಂದರು. ಪಂಡಿತನು ಮತ್ತೆ ಉಸಿರು ತೆಗೆದುಕೊಂಡು "ಸದ್ಯದಲ್ಲಿ ನಿಮ್ಮ ಸೇವೆ ಮಾಡುತ್ತಿರುವ ಅರಸುಮನೆತನದವರಲ್ಲಿ ಅಂಥಾ ದಕ್ಷರು ಯಾರೂ ಇಲ್ಲ. ದ್ರೋಹವಿಲ್ಲದೆ ಸೇವೆ ಮಾಡುತ್ತಾರೆ; ಆದರೆ ಪ್ರಧಾನನಲ್ಲಿ ಅಷ್ಟು ಸಾಲದು. ಉಳಿದ ನಮ್ಮ ಅಮಾತ್ಯರೂ ಅಷ್ಟೇ. ಎಲ್ಲಾ ವಿಧದಿಂದಲೂ ಈ ಕೆಲಸಕ್ಕೆ ಅರ್ಹರಾದವರು...." ಒಂದು ಕ್ಷಣ ಬಿಟ್ಟು "ತಿರುಮಲಾರ್ಯರು".

ಅರಸರಿಗೆ ಆಶ್ಚರ್ಯವಾಯಿತು. "ಇಂದಿನ ಮಧ್ಯಾಹ್ನ ಅವರೂ ನೀವೂ ವ್ಯವಹಾರಮಾಡಿದಿರಿ. ಇದೇನು ಈಗ ನೀವು ಹೇಳುವ ಮಾತು?"

"ಮಧ್ಯಾಹ್ನದ ವ್ಯವಹಾರ ಬೇರೆ ವಿಷಯ. ನನಗೆ ನ್ಯಾಯವೆಂದು ತೋರಿದ್ದನ್ನು ನಾನು ಹೇಳಿದೆ. ಅವರಿಗೆ ನ್ಯಾಯವೆಂದು ತೋರಿದ್ದನ್ನು ಆತ ಹೇಳಿದರು. ಆದರೆ ನಾನಾಗಲಿ ಅವರಾಗಲಿ ಅನ್ಯಾಯವೆಂದು ತೋರಿದ್ದನ್ನು ಹೇಳಲಿಲ್ಲ. ಮುಂದಕ್ಕಾದರೂ ನ್ಯಾಯವನ್ನು ನಡೆಸಿ ಕೊಂಡು ಪ್ರಭುವಿನ ಚಿತ್ತಕ್ಕೆ ಕ್ಲೇಶವಿಲ್ಲದಂತೆ ವರ್ತಿಸಬೇಕಾದರೆ ಆತನೇ ಸರಿ. ನನಗೆ ಈ ಮಾತನ್ನು ಕೊಟ್ಟರೆ ನಾನು ಶಾಂತನಾಗಿ ದೇಹವನ್ನು ಬಿಡುತ್ತೇನೆ."

"ಪಂಡಿತರೇ, ನೀವು ಪದ್ಮರಸರನ್ನು ಪ್ರಧಾನನನ್ನಾಗಿ ಮಾಡ ಹೇಳುವಿರೋ ಎಂದಿದ್ದೆ."

"ಪದ್ಮರಸರೂ ಸತ್ಯವಂತರು. ಅವರು ತಿರುಮಲಾರ್ಯರಿಗೆ ಸಹಾಯವಾಗಿ ನಿಲ್ಲಲಿ. ಮುಖ್ಯ ಪ್ರಧಾನರಾಗಿ ನಿರ್ವಹಿಸಲಾರರು."

"ನಿಮ್ಮ ಔದಾರ್ಯ ಬಹು ದೊಡ್ಡದು. ನಿಮ್ಮ ಜೀವ ಹಿರಿಯ ದೆಂದು ನಾನು ಬಲ್ಲೆ. ಆದರೆ ಅದೆಷ್ಟು ಹಿರಿಯದೆಂದು ಈಗಲೇ ತಿಳಿದದ್ದು."

"ಸಂತೋಷ. ಇದನ್ನು ನಡೆಸಿಕೊಡೋಣಾಗುತ್ತದೆ. ಇನ್ನು ಆತನಿಗೆ ಒಂದು ಮಾತು ಹೇಳಿಕಳುಹಿಸಿದರೆ ಅವರನ್ನೂ ಒಮ್ಮೆ ನೋಡು ತ್ತೇನೆ. ತೂತು ಬಿದ್ದ ಪಾತ್ರೆಯಿಂದ ನೀರು ಸುರಿಯುವಂತೆ ಈ ದೇಹದಿಂದ ಜೀವ ಹರಿದುಹೋಗುತ್ತಿದೆ."

ಹತ್ತಿರ ಇದ್ದವರು ತಿರುಮಲಾರ್ಯರಿಗೆ ಹೇಳಿಕಳುಹಿಸುವುದಕ್ಕೆ ಹೋಗುವಷ್ಟರಲ್ಲಿಯೇ ಬಾಗಿಲಲ್ಲಿ ಆತನ ಧ್ವನಿ ಕೇಳಿತು. "ಹೇಗಿದೆ? ಎಲ್ಲಿ ಪೆಟ್ಟುಬಿದ್ದಿದೆ?" ಎಂದು ಕೇಳುತ್ತ "ಪ್ರಭುಗಳು ದಯಮಾಡಿಸಿ ದ್ದಾರೆ" ಎಂದು ತಿಳಿದು ಧ್ವನಿಯನ್ನು ತಗ್ಗಿಸಿ ತಿರುಮಲಾರ್ಯನು ಆತುರ ದಿಂದ ಕೋಣೆಯೊಳಕ್ಕೆ ಬಂದನು. "ಮಹಾಸ್ವಾಮಿಯವರಿಗೆ ನಮಸ್ಕಾರ" ಎಂದು ಹೇಳಿ ಮಂಚದಬಳಿ ಬಂದು ಪಂಡಿತನನ್ನು ಕುರಿತು "ಇದೇನು ನಮ್ಮ ದುರದೃಷ್ಟ! ಆ ಪಾಪಿಗಳು ನಿಮ್ಮನ್ನು ಹೊಡೆಯುವ ಮಾತನ್ನು ಯಾವ ಕೆಟ್ಟಗಳಿಗೆಯಲ್ಲಿ ಆಡಿದರೋ ಇಂದೇ ಹೀಗಾಯಿತಲ್ಲ. ಹೇಗಿದೆ, ಎಲ್ಲಿ ಪೆಟ್ಟುಬಿತ್ತು?" ಎಂದು ಮೆಲ್ಲಗೆ ಕೇಳಿದನು. ಪಂಡಿತನು ತಿರುಮ

ಲಾರ್ಯನಿಗೆ ತನ್ನ ಮಂಚದ ಎಡಗಡೆಗೆ ಬರುವಂತೆ ಸನ್ನೆಮಾಡಿ ಆತನ ಕೈಯನ್ನು ತೆಗೆದು ತನ್ನ ಕಣ್ಣಿಗೆ ಒತ್ತಿಕೊಂಡನು. ತಲೆಯನ್ನು ಹಿಡಿದು ಸೆಳೆದುಕೊಂಡು "ಇನ್ನು ನನಗೆ ಆಯುಸ್ಸು ಬಹಳ ಹೊತ್ತಿಲ್ಲ. ರಾಜರಲ್ಲಿ ಬಿನ್ನವಿಸಿಕೊಂಡಿದ್ದೇನೆ. ನೀವು ಪ್ರಧಾನರಾಗಬೇಕು. ಪ್ರಭುಗಳಿಗೆ ಏನಾಗುವುದೋ ಎಂದೇ ನನಗೆ ಒಂದು ಹೆದರಿಕೆಯಿತ್ತು. ಈ ಶನಿ ನನ ಮೇಲೆ ಬಂದು ಹೋಗಿದೆ. ಇನ್ನು ಅವರನ್ನು ಭದ್ರವಾಗಿ ನೋಡಿಕೊಳ್ಳಿ. ನಾನು ಹೋಗಿಬರುತ್ತೇನೆ" ಎಂದನು. ತಿರುಮಲಾರ್ಯನಿಗೆ ಮಾತು ತೋರಲಿಲ್ಲ. "ನಿಮ್ಮ ಮನಸ್ಸು ಏನೆಂದು ಹೇಳಬೇಕೆನಿಸುತ್ತದೆ. ಮಧ್ಯಾಹ್ನ ನಾನು ನಿಮಗೆ ಕೋಪ ಬರುವಂತೆ ಮಾಡಿದೆ. ನಿಮ್ಮನ್ನು ನಾನೇ ಹೊಡೆಸಿದೆನೆಂದರೂ ಜನ ನಂಬಬಹುದು." ಪಂಡಿತನು ತನ್ನ ಕೈಯಿಂದ ತಿರುಮಲಾರ್ಯನ ಬಾಯನ್ನು ಮುಚ್ಚಿದನು. "ತಪ್ಪುಮಾತು, ಕೆಟ್ಟ ಮಾತು. ಜೀವಂತರಾಗಿರುವವರು ಕ್ರೋಧವನ್ನಿಟ್ಟುಕೊಳ್ಳಬಹುದು. ನನಗೇನು ಬೇಕು? ನಿಮ್ಮ ಗುಣವನ್ನು ನಾನು ಕಾಣೆನೆ? ಒಂದು ಕೆಟ್ಟ ಚಾಳಿ ಇಲ್ಲ. ನಾನು ಪ್ರಭುಗಳಲ್ಲಿ ಎಷ್ಟೋಸಲ ಹೇಳಿದ್ದೇನೆ: 'ನನಗೆ ಚದುರಂಗ ಒಂದು ವ್ಯಸನವಿದೆ. ತಿರುಮಲಾರ್ಯರಿಗೆ ಅದೂ ಇಲ್ಲ. ಬಿಡುವಾದಾಗ ಪ್ರಬಂಧಗಳನ್ನು ಓದುತ್ತಿರುತ್ತಾರೆ' ಎಂದು. ನನಗೆ ಮಾತು ಕೊಡಿ" ಎಂದನು. ತಿರುಮಲಾರ್ಯನು "ನಾನು ಪ್ರಭುಗಳ ಅಪ್ಪಣೆ ಯಾವುದನ್ನೂ ಮೀರುವವನಲ್ಲ" ಎಂದನು. ವಿಶಾಲಾಕ್ಷ ಪಂಡಿತನು ಸ್ವಲ್ಪ ನಕ್ಕು ಹಾಸಿಗೆಯಲ್ಲಿ ಹಾಯಾಗಿ ಮಲಗಿದನು. ಈ ಮೊದಲೇ ವೈದ್ಯನು ಬಂದು ರಕ್ತ ಸೋರದಂತೆ ಗಾಯಗಳನ್ನು ಕಟ್ಟಿ ನಾಡಿ ಸ್ತಿಮಿತ ವಾಗುವಂತೆ ಯಾವುದೋ ಒಂದು ಔಷಧವನ್ನು ಕೊಡುತ್ತಿದ್ದನು. ಅದರಿಂದೆಲ್ಲ ಪ್ರಯೋಜನವಾಗಲಿಲ್ಲ. ರಾಜರು "ಇನ್ನೇನಾದರೂ ಅಪೇಕ್ಷೆ ಇದೆಯೆ? ನಿಮ್ಮ ಆಚಾರ್ಯರನ್ನೋ ಮಠದವರನ್ನೋ ಕರೆಸುತ್ತೀರಾ" ಎಂದರು. ಪಂಡಿತನು "ನನಗೆ ಮಠದಿಂದ ಆಗುವುದು ಏನು? ಈ ಜೀವ ಎತ್ತಲಿಂದ ಬಂದಿತ್ತೋ ಅತ್ತ ಹೋಗುತ್ತದೆ. ಅದರ ದಾರಿಯನ್ನು ತಿದ್ದು ವುದಕ್ಕೆ ಯಾರಿಗೆ ಯೋಗ್ಯತೆ ಇದೆ" ಎಂದು ಹೇಳಿದನು. ಸುಖವಾಗಿ ಕೈ ಕಾಲುಗಳನ್ನು ಚಾಚಿಕೊಂಡು ಮಲಗಿ ಕಣ್ಣನ್ನು ಮುಚ್ಚಿಕೊಂಡನು.

ಒಂದೆರಡು ನಿಮಿಷದಲ್ಲಿ ಅವನ ಜೀವ ಹೋಯಿತು. ಅರಸರು "ನಾವು ಬಹಳ ಮಾತನಾಡಿಸಿದೆವು. ಇಲ್ಲದಿದ್ದರೆ ಇನ್ನೂ ಸ್ವಲ್ಪ ಹೊತ್ತು ಉಸಿರಿರ ಬಹುದಾಗಿತ್ತು. ಪಂಡಿತರು ನನಗೆ ಸೋದರ ಮಾವನಂತೆ ಇದ್ದುಬಿಟ್ಟರು. ಇವರನ್ನು ಕಳೆದುಕೊಂಡೆನು. ಅವರು ಹೊತ್ತಿದ್ದ ಭಾರವನ್ನು ನಿಮಗೆ ಬಿಟ್ಟಿದ್ದಾರೆ, ತಿರುಮಲಾರ್ಯರೆ! ಹೇಳಿದರೊ?" ಎಂದರು. ತಿರುಮಲಾರ್ಯನು "ಹೇಳಿದರು, ಪ್ರಭುವಿನ ಇಚ್ಛೆಯಂತೆ ನಡೆದುಕೊಳ್ಳುತ್ತೇನೆ ಎಂದು ನಾನು ಹೇಳಿದೆ" ಎಂದನು. ಮಾತನಾಡದೆ ಇಬ್ಬರೂ ಬೀದಿಯ ಬಾಗಿಲಿಗೆ ಬಂದರು. ಅರಸರು ಮೆಲ್ಲನೆ ತಿರುಮಲಾರ್ಯನ ಕಿವಿಯಲ್ಲಿ "ಇದು ಏನಪ್ಪ! ಈತ ಹೋಗುವ ಹೊತ್ತಿನಲ್ಲಿ ನಾಸ್ತಿಕನಾದನೆ?" ಎಂದರು. ತಿರುಮಲಾರ್ಯನು "ಮಹಾಸ್ವಾಮಿ, ಅನೇಕರು ಮಾತಿನಲ್ಲಿ ಆಸ್ತಿಕರು, ನಡತೆಯಲ್ಲಿ ನಾಸ್ತಿಕರು. ವಿಶಾಲಾಕ್ಷ ಪಂಡಿತರು ಮಾತಿನಲ್ಲಿ ನಾಸ್ತಿಕರಂತೆ ಇದ್ದರೂ ಅವರ ಬಾಳೆಲ್ಲ ದೇವರಿದಾನೆಂದು ಹೇಳುತ್ತಿತ್ತು. ಅವರಂತಹ ಆಸ್ತಿಕರು ಇನ್ನೆಲ್ಲಿ?" ಎಂದನು.

ತಿರುಮಲಾರ್ಯನು ವಿಶಾಲಾಕ್ಷ ಪಂಡಿತನ ಉತ್ತರಕ್ರಿಯೆಗಳ ಮೇಲ್ವಿಚಾರಣೆಯನ್ನೆಲ್ಲ ನೋಡಿಕೊಂಡನು. ಮಹಾರಾಜರು ಆತನನ್ನು ಪ್ರಧಾನನನ್ನಾಗಿ ಮಾಡಿಕೊಂಡು ಪಂಡಿತನ ಮರಣ ಶಾಸನವನ್ನು ನಡೆಯಿಸಿದರು. ತಿರುಮಲಾರ್ಯನನ್ನು ಮೊದಲಿಂದ ಬಲ್ಲಕಾರಣ ಉಳಿದ ಮಂತ್ರಿಗಳಾಗಲಿ ಅರಸುಮನೆತನಗಳ ಹಿರಿಯರಾಗಲಿ ತಾವು ಪ್ರಧಾನರಾಗಲಿಲ್ಲವೇ ಎಂದು ಕರುಬಲಿಲ್ಲ.

ಇರುಳಾಪುರದ ವಿಚಾರ ಪಂಡಿತ ಮಾಡಿದ ನಿರ್ಧಾರವನ್ನು ತಿರುಮಲಾರ್ಯನು ತಪ್ಪಿಸಲಿಲ್ಲ. ಆ ಗ್ರಾಮಕ್ಕೆ ಪ್ರತಿಯಾಗಿ ಬೇಲೂರು ದೇವಾಲಯಕ್ಕೆ ಬೇರೆ ಉಂಬಳಿಯನ್ನು ಕೊಡಿಸಿದನು.

1102–54. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಸಿ. ವಾಸುದೇವರಾಯರವರು ಮುದ್ರಿಸಿರುವರು.

ಸಣ್ಣ ಕತೆಗಳು ೫
ಮೊದಲನೆಯ ಮುದ್ರಣ ೧೯೩೬
ಎರಡನೆಯ ಮುದ್ರಣ ೧೯೪೫
ಸಣ್ಣ ಕತೆಗಳು ೬
ಮೊದಲನೆಯ ಮುದ್ರಣ ೧೯೪೦
ಎರಡನೆಯ ಮುದ್ರಣ ೧೯೪೬

ಎರಡು ರೂಪಾಯಿ

ಮೂರನೆಯ ಮುದ್ರಣ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೯

# ಮೊದಲನೆಯ ಮುದ್ರಣದ ಮುನ್ನುಡಿ

ಈ ಪುಸ್ತಕದ ನಾಲ್ಕು ಕತೆಯಲ್ಲಿ ಎರಡು "ಪ್ರಬುದ್ಧ ಕರ್ಣಾಟಕ" ದಲ್ಲಿ, ಒಂದು "ಜಯಕರ್ನಾಟಕ" ದಲ್ಲಿ, ಒಂದು "ಕಥಾಕುಂಜ" ದಲ್ಲಿ ಈ ಮೊದಲೇ ಪ್ರಕಟವಾದುವು. ತಮ್ಮ ಪತ್ರಿಕೆಗಳಲ್ಲಿ ಇವಕ್ಕೆ ಅವಕಾಶ ವನ್ನು ಕೊಟ್ಟಿದ್ದಕ್ಕಾಗಿ ನಾನು ಆ ಪತ್ರಿಕೆಗಳ ಕರ್ತರಿಗೆ ವಂದನೆಗಳನ್ನು ಸೂಚಿಸುತ್ತೇನೆ.

ಪ್ಯಾದೇಮಾತಿನ ರಾಮಣ್ಣ ನಿಜವಾಗಿಯೂ ಇದ್ದ ಯಾರೋ ಒಬ್ಬ ಸುಬೇದಾರರ ಕತೆಯನ್ನು ಹೇಳುತ್ತಿದಾರೆಂದಾಗಲಿ ಡೂಬಾಯಿ ಪಾದ್ರಿಯ ಪತ್ರ ಆ ಮಹನೀಯನ ನಿಜವಾದ ಒಂದು ಲೇಖನವೆಂದಾಗಲಿ ಯಾರೂ ಭಾವಿಸಲಾರರೆಂದು ನಾನು ನಂಬಿದೇನೆ. ಇಂಥ ಭ್ರಮೆ, ಚಿತ್ರದ ಹುಲಿಯ ಕಡೆಗೆ ತುಪಾಕಿಯನ್ನು ಎತ್ತುವ ಬೇಟೆಕಾರನ ಉದ್ಯಮದಂತೆ, ಕತೆಯನ್ನು ಕುರಿತ ಪ್ರಶಸ್ತಿ ಮಾತ್ರವಾದೀತು. ಹಾಗೆಯೇ ಈ ಕತೆಗಳ ಮಾತುಗಳು ಗ್ರಂಥಕರ್ತನ ಅಭಿಪ್ರಾಯಗಳನ್ನು ಒಳಗೊಂಡಿವೆಯೆಂದೂ ತಿಳಿಯಲಾಗದು. ಅದರಲ್ಲಿಯೂ ನರಸಿಂಹ ಡೂಬಾಯಿ ಇವರು ಮತ ಗಳನ್ನು ಕುರಿತು ಹೇಳುವ ಮಾತು ಅವರ ಜೀವನದ ಸಂದರ್ಭಗಳಿಂದ ಬಂದವೆಂಬುದನ್ನು ನೆನಪಿನಲ್ಲಿಡುವುದು ಆವಶ್ಯಕ.

ಪ್ಯಾದೇಮಾತು ಎನ್ನುವುದು ನಮ್ಮ ಸೀಮೆಯ ಚದುರಂಗದಿಂದ ಬಂದಿರುವ ಶಬ್ದ. ಒಂದು ಪಕ್ಷದ ರಾಜನು ಪ್ರತಿಪಕ್ಷದ ಕಾಲಾಳಿಗೆ ಸಿಕ್ಕುವುದೇ ಈ ಆಟದ ಕೊನೆ. ಆನೆಯ ಸೈನಿಕನಿಗೋ ಕುದುರೆಯ ಸೈನಿಕನಿಗೋ ಸಿಕ್ಕಿ ಸೋಲದೆ ಕಾಲಾಳಿಗೆ ಸಿಕ್ಕಿ ಸೋಲುವುದು ಬಹಳ ಅವಮಾನವೆಂದು ಈ ಆಟದ ಭಾವನೆ.

ಬೆಂಗಳೂರು, ಧಾತು ಸಂ||<br>ವೈಶಾಖ ಬಹುಳ ತೃತೀಯ

ಶ್ರೀನಿವಾಸ.

# ವಿಷಯ ಸೂಚಿ

ಪುಟ

# ಮೊಸರಿನ ಮಂಗಮ್ಮ

ಮಂಗಮ್ಮ ನಮಗೆ ಬಹು ವರ್ಷದಿಂದ ವರ್ತನೆಯಾಗಿ ಮೊಸರು ತಂದುಕೊಡುತ್ತಾಳೆ. ಈ ವರ್ತನೆ ಬೆಂಗಳೂರಿನ ತರಹ. ಬೇರೆ ಊರುಗಳಲ್ಲಿ ವರ್ತನೆ ಎಂದರೆ ದಿನವೂ ತಪ್ಪದೆ ಬಂದು ಮೊಸರನ್ನು ಕೊಟ್ಟು ತಿಂಗಳ ಕೊನೆಗೆ ದುಡ್ಡು ತೆಗೆದುಕೊಳ್ಳುವುದಕ್ಕೆ ಹೆಸರು. ಬೆಂಗಳೂರಲ್ಲಿ ಸುಮಾರು ಇಂತಹ ವರ್ತನೆ ಇಲ್ಲ ಅಂತ ಕಾಣುತ್ತದೆ. ಮಂಗಮ್ಮ ಸಾಮಾನ್ಯವಾಗಿ ನಮ್ಮ ಕೇರಿಯ ಕಡೆ ಬಂದಾಗ ನಮ್ಮ ಮನೆಗೂ ಬರುವುದು, ಮೊಸರು ತಕ್ಕೋತೀರಾ ಅವ್ವಾ ಒಳ್ಳೇ ಮೊಸರು ತಂದಿದೀನಿ ಅಂತ ಹೇಳುವುದು, ನಮಗೆ ಬೇಕಾಗಿದ್ದರೆ ನಾವು ತೆಗೆದುಕೊಳ್ಳುವುದು, ಆ ಹೊತ್ತಿನ ವ್ಯಾಪಾರ ಹೇಗಿದೆಯೋ ಹಾಗೆ ಅವಳಿಗೆ ಆಗಲೇ ದುಡ್ಡು ಕೊಟ್ಟುಬಿಡುವುದು ಅಥವಾ ಮಾರನೆ ದಿವಸ ಕೊಡುವುದು, ಇದು ನಮ್ಮ ಅವಳ ವರ್ತನೆಯ ರೀತಿ. ಅವಳ ಊರು ಆವಲೂರ ಪಕ್ಕದಲ್ಲಿ ಯಾವುದೋ ಒಂದು ಹಳ್ಳಿ. ವೆಂಕಟಾಪುರವೋ ಎಂಥದೋ ಹೆಸರಿನ ಗ್ರಾಮ. ಬರುತ್ತಾ ನಮ್ಮ ಮನೆ ಕಡೇನೇ ಬರಬೇಕು. ಹೋಗುತ್ತಾ ನಮ್ಮ ಮನೆ ಕಡೇನೇ ಹೋಗಬೇಕು. ನಾನು ಸ್ವಲ್ಪ ಒಳ್ಳೆ ಮಾತಾಡುತೇನೆ ಅಂತ ಮಂಗಮ್ಮ ಒಂದೊಂದು ದಿನ, ಹಳ್ಳಿಯಿಂದ ಬಂದಹಾಗೆ ಒಂದು ಸಲ, ಮೊಸರೆಲ್ಲಾ ಮಾರಿ ಆದಮೇಲೆ ಹೋಗುತ್ತಾ ಒಂದು ಸಲ, ಬರುವುದುಂಟು. ಬಂದು ನಮ್ಮ ಅಂಗಳದಲ್ಲಿ ಸ್ವಲ್ಪಹೊತ್ತು ಕುಳಿತಿದ್ದು ನಮ್ಮನ್ನೆಲ್ಲ ಸ್ವಲ್ಪ ಮಾತನಾಡಿಸಿ, ಎಲೇನೋ ಅಡಿಕೇನೋ ಬಾಯಲ್ಲಿ ಹಾಕಿಕೊಂಡು, ಬೇಕಾದರೆ ಎಲೇನೋ ಅಡಿಕೇನೋ ಕೇಳಿ ತಕ್ಕೊಂಡು, ಆಮೇಲೆ ಊರಿಗೆ ಹೋಗುತ್ತಾಳೆ. ಇಂಥ ಸಂದರ್ಭದಲ್ಲಿ ನನಗೆ ಸ್ವಲ್ಪ ಬಿಡುವಾಗಿದ್ದರೆ ಅವಳು ತನ್ನ ಕಷ್ಟಸುಖವನ್ನೆಲ್ಲ ಹೇಳುತ್ತಾಳೆ; ನನ್ನನ್ನೂ ಏನಾದರೂ ಹೇಳು ಅಂತ ಕೇಳುತ್ತಾಳೆ. ನನಗೆ ಕಷ್ಟ ಏನಿದೆ? ಸದ್ಯ ದೇವರು ಎಲ್ಲಾ ಚೆನ್ನಾಗಿ ಇಟ್ಟಿದ್ದಾನೆ. ಏನೋ ಮನೇಮಾತು, ಬೆಕ್ಕು ಬಂದು ಹಾಲು ಕುಡೀತು ಅಂತಲೋ ಇಲಿ ಬಂದು ಕುಂಬಳಕಾಯಿ ತಿಂದಿತು ಅಂತಲೋ ಏನಾದರೂ ಒಂದು ಮಾತು ನಾನು ಹೇಳಿದರೆ, ಅಯ್ಯೋ ಈ ಪರಪಂಚವೇ

ಹೀಗೆ ಅಂತ ಅವಳ ಅನುಭವದ ತತ್ವವನ್ನು ಹೇಳಿ, ಪ್ರಪಂಚಾನ ಸರಿಯಾಗಿ ನಡೆಸಿಕೊಳ್ಳುವುದು ಹೇಗೆ ಅಂತ ಹೇಳಿಕೊಡುತ್ತಾಳೆ. ಒಟ್ಟಿನಲ್ಲಿ ಮಂಗಮ್ಮ ನನಗೆ ಬಹಳ ಬೇಕಾದವಳು; ನನಗೂ ಅವಳಿಗೂ ಬಹಳ ಸಲಿಗೆ.

ಈಗ ಸುಮಾರು ಒಂದು ತಿಂಗಳ ಹಿಂದೆ ಮಂಗಮ್ಮ ಬೆಳಗಾಗ "ಮೊಸರು ತಕ್ಕೊಳ್ಳುತೀರಾ ಅಮ್ಮಯ್ಯ" ಅಂತ ಬಂದಾಗ ನಾನು ಎಲ್ಲೋ ಒಳಗಿದ್ದೆ. ನಮ್ಮ ಹುಡುಗ "ಊ, ತಕೋತಾರೆ" ಅಂತ ಅವಳಿಗೆ ಹೇಳಿದ; ಹೋಗಿ ಹತ್ತಿರ ನಿಂತುಕೊಂಡು "ಕೊಡು ಮೊಸರು" ಅಂತ ಕೈಹಿಡಿದ. ಮಂಗಮ್ಮ ಗಡಿಗೆಯಿಂದ ಒಳ್ಳೇ ಗರಣೆ ಅಷ್ಟು ತೆಗೆದು ಅವನ ಕೈಗೆ ಹಾಕಿದಳು; "ಜಾಗ್ರತೆ ಬರಹೇಳು ಅಮ್ಮನ್ನ. ನಾನು ಹೋಗ ಬೇಕು" ಅಂತ ಹೇಳಿದಳು. ಅಷ್ಟುಹೊತ್ತಿಗೆ ನಾನು ಬಂದೆ. ಮಂಗಮ್ಮ "ಅವ್ವಾ ಬಂಗಾರದಂತ ಮಗನ್ನ ಹೆತ್ತುಕೊಂಡಿದೀಯಾ. ನಿನ್ನ ಗುಣ ಹೆಂಗೋ ಆ ಮೊಗಾನೂ ಹಂಗೇ ಐತೆ. ಆದರೆ ಇದೆಲ್ಲಾ ಏನವ್ವ? ಹುಡುಗ ಬೆಳೆಯೋ ತಂಕಾನೆ. ಬೆಳೆದಮೇಲೆ ಯಾವಳೋ ಬರ್‍ತಾಳೆ. ಈಗ ಅಮ್ಮ ಅಮ್ಮ ಅಂತ ಇರೋ ಮಗ ಆಗ ಅಮ್ಮನ್ನ ನೀನು ಇದ್ದೀಯಾ ಸತ್ಯಾ ಅಂತ ಕೇಳೋಲ್ಲ" ಅಂದಳು. ನಾನು "ಯಾಕೆ ಮಂಗಮ್ಮ, ಏನಾಯಿತು. ಮಗ ನೀ ಹೇಳಿದ ಮಾತು ಕೇಳಲಿಲ್ಲವೇ" ಎಂದೆ. "ಸರಿ ಬಿಡು ನನ್ನತಾಯಿ. ಕೈ ಹಿಡಿದ ಗಂಡನೇ ನನ್ನ ಮಾತು ಕೇಳಲಿಲ್ಲ, ಇನ್ನು ಮಗ ಏನು ಕೇಳಿ ಯಾನು?" "ಗಂಡ ನಿನ್ನ ಮಾತು ಕೇಳಲಿಲ್ಲವೇ ಮಂಗಮ್ಮ?" "ಅಯ್ಯೋ! ನನ್ನ ತಾಯಿ! ನಾನು ಒಳ್ಳೇ ಶಾಲೆ ಉಡಲಿಲ್ಲ. ಇನ್ಯಾವಳೋ ಉಟ್ಕೊಂಡ್ಳು. ಶಾಲೆಗೆ ಬೆರಗಾಗಿ ಹೋದ ಅವಳ ತಾವ. ಏನೋ ಹೆಂಗಾದರೂ ಇರ್‍ಲಿ. ನನ್ನ ಮನೆ ನನ್ನ ಹೆಂಡ್ರು ಅಂತ ಗಂಡಸಿರೋದೇ ಚೆಂದ ಅಂತ ನಾನು ಸುಮ್ಗಿದ್ದೆ. ಆದರೇನವ್ವ, ಅಮೃತ ಮಾರಿದಿನಿ; ಗಂಡನ್ನೀಗಿಕೊಂಡಿನಿ. ಏನೋ ನನ್ನ ಪ್ರಾಪ್ತಿ ಆಸೇ ಇತ್ತು ಅವ್ವ. ನೀನು ಮಾತ್ರ ನೋಡು, ಗಂಡ ಮನೆಗೆ ಬರೋಹೊತ್ತಿಗೆ ಒಳ್ಳೇ ಶಾಲೆ ಉಟ್ಕೊಂಡು ಓಡಾಡು. ಗಂಡಸರ ಮನಸು ಬಹಳ ಚಪಲ ತಾಯಿ. ಅವರ ಕಣ್ಣಿಗೆ ಚೆಂದಾಗಿರೋ ಹಂಗೆ ಶಾಲೇನೋ ರವಿಕೇನೋ ಏನಾದರೂ ಒಂದು ಹೆಂಗಸು ಹಾಕಿ ಕೊಳ್ಳುತಾ ಇರಬೇಕು; ಹೂವು ಗಂಧ ತೋರಿದ್ದನ್ನ ತಕ್ಕೊಂಡು ಅವರ

ಮನಸ್ಸಿಗೆ ಸಮಾಧಾನ ಇರೋಹಂಗೆ ಇಟ್ಕೊಬೇಕು ತಾಯಿ. ನೀನು ಈಗ ಉಟ್ಟಿದೀಯಲ್ಲ ಇಂತಾ ಶಾಲೆ ಏನೋ ಕೆಲ್ಸಮಾಡೋವಾಗ, ನಿನ್ನ ಪಾಡಿಗೆ ನೀನು ಮನೇಗೆ ಇರೋವಾಗ ಆಗಬಹುದು. ಬೈಗಿನ ಹೊತ್ತಿಗೆ ಒಂದು ಒಳ್ಳೇ ಶಾಲೆ ಉಟ್ಕೊಬೇಕು''. ನನಗೆ ಸ್ವಲ್ಪ ನಗು ಬಂತು; ಆದರೆ ಇವಳ ಅನುಭವದಿಂದ ಬಂದ ಮಾತಿನ ಬುದ್ಧಿ ಎಷ್ಟು ದೊಡ್ಡ ದೆಂದು ತೋರಿತು; ಆ ಮಾತನ್ನು ತಂದ ಅವಳ ಅನುಭವದಿಂದ ಅವಳು ನೊಂದಿದ್ದಳೆಂದು ತಿಳಿದು ಸ್ವಲ್ಪ ವ್ಯಥೆಯೂ ಆಯಿತು. ನಾನು ''ಹೌದು ಮಂಗಮ್ಮ, ನೀ ಹೇಳೋ ಮಾತು ನಿಜ'' ಅಂತ ಹೇಳಿದೆ. ಆಮೇಲೆ ಮಂಗಮ್ಮ ಹೇಳಿದಳು: ''ನೋಡು ತಾಯಿ, ಗಂಡ್ಸನ್ನ ಸರಿಯಾಗಿಟ್ಕೊಬೇಕಾದರೆ ನಾಲ್ಕು ಉಪಾಯ. ಅವ್ರು ಇವ್ರು ಹೇಳ್ತಾರೆ ನಾರು ಬೇರು ಇಕ್ಕು ಅಂತ. ಮದ್ದಿಕ್ಕಿ ಮಸಣಕ್ಕೆ ಕಳುಹಿಸು ಅಂತ ಗಾದೆ ಐತೆ. ಇಂತಾವರ ಮಾತನೆಲ್ಲಾ ಕೇಳಬಾರದು. ಆಗಾಗ ಬಾಯಿಗೆ ರುಚಿಯಾಗಿ ಏನಾದರೂ ಒಂದು ಮಾಡಿಕೊಡೋದು, ಕಣ್ಣಿಗೆ ಚೆಂದಾಗಿ ಶಿಂಗಾರಮಾಡಿಕೊಂಡು ಕಷ್ಟ ಇರಲಿ ನಿಷ್ಠೂರ ಇರಲಿ ನಗತಾ ಮಾತ್ನಾಡಿಸೋದು, ಮನೇಗೆ ಬೇಕಾದ್ನ ತುಂಬಾ ತರ್ಸಿಕೊಂಡುಬಿಟ್ಟು ಆಗಾಗ ಕೇಳ್ದೀರ ಇರೋದು, ಮೂರು ಕಾಸು ಆರು ಕಾಸು ಸೇರಿಸಿಕೊಂಡು ಏನಾದರೂ ಸಂದರ್ಭ ಬಿದ್ದಾಗ ಒಂದು ರೂಪಾಯಿ ಕೊಡೋದು, ಇದೂ ಕಾಣವ್ವ ನಾರುಬೇರು. ಮನೆ ಹೆಂಗ್ಸು ಇದ್ನ ಮಾಡಿದರೆ ಗಂಡ ಅನ್ನೋನು ಮನೇ ನಾಯಿಹಂಗೆ ಇರ್ತಾನವ್ವ. ಇದ್ನ ಮಾಡ್ಲಿಲ್ಲ ಅನ್ನು ಬೀದೀಲಿ ಅಲೀತಾನೆ''! ನನಗೆ ಮಂಗಮ್ಮನ ಮಾತಿನ ಚಮತ್ಕಾರದಿಂದ ಆಶ್ಚರ್ಯವಾಯಿತು; ಇನ್ನೆರಡು ಮಾತನಾಡಿ ಅವಳನ್ನು ಅಂದು ಕಳುಹಿಸಿಕೊಟ್ಟೆನು.

ಈಗ ಹದಿನೈದು ದಿನದ ಹಿಂದೆ ಮಂಗಮ್ಮ ಮನೆಗೆ ಬಂದಾಗ ಬಹಳ ಬೇಸರಪಟ್ಟಿದ್ದಳು ಅಂತ ಕಂಡಿತು. ನಾನು ''ಯಾಕೆ ಮಂಗಮ್ಮ, ಹೀಗಿದ್ದೀಯಾ'' ಅಂತ ಕೇಳಿದೆ. ''ಏನು ಹೇಳೋದವ್ವ, ನನ್ನ ಜನ್ಮ ಯಾರಿಗೂ ಬ್ಯಾಡದೀರ ಹೋಯಿತು'' ಎಂದು ಹೇಳಿ, ಮಂಗಮ್ಮ ಸೆರಗಿನಿಂದ ಕಣ್ಣನ್ನು ಒರಸಿಕೊಂಡಳು. ನಾನು ''ಯಾಕಮ್ಮ, ಏನಾಯ್ತು, ಮಗ ಏನಾದರೂ ಅಂದ್ನೆ'' ಅಂತ ಕೇಳಿದೆ. ''ಊ ಅಂದ ಕಾಣವ್ವ.

ಅವನ ಹೆಂಡ್ರು ಅರಿಯದ ಕುನ್ನಿಮೊಗ ಐತಲ್ಲ ಅದು ಏನೋ ಮಾಡ್ತು ಅಂತ ಅದನ್ನ ಹೊಡದಲು. ‘ ‘ಯಾಕೇ ಗಯ್ಯಾಳಿ, ರಕ್ಕಸೀ ಹಂಗೆ ಅರಿಯದ ಕಂದನ್ನ ಹೊಡೀತಾ ಇದ್ದೀಯಾ’ ಅಂದೆ. ನನಗೆ ಎದುರು ಬಿದ್ಲು, ತಾರುಮಾರು ನನ್ನ ಬೈದ್ಲು. ‘ಇದೇನೆ ಇದು, ನಿನ್ನ ಗಂಡನ್ನ ಹೆತ್ತ ತಾಯಿ ನಾನು, ನನ್ನ ಇಷ್ಟು ಮಾತು ಅಂತೀಯಾ, ಆಗಲಿ ಅವನೇ ಬರಲಿ ಕೇಳೋಣ’ ಅಂತ ಹೇಳಿದೆ. ಸರದಾರ ಮನೆಗೆ ಬಂದ. ‘ನೋಡಪ್ಪಾ, ಹುಡುಗನ್ನ ಸುಮ್ಮನೆ ಬಡೀತಾಳೆ. ಬ್ಯಾಡ ಅಂದ್ರೆ ನನ್ನ ಬೈತಾಳಲ್ಲೋ. ನೀನು ಹೆಂಡ್ತಿಗೆ ಒಸಿ ಬುದ್ಧಿಹೇಳು’ ಅಂದೆ.‘ ಅವಳು ‘ಏನ್ನ ನನಗೆ ಬುದ್ಧಿ ಹೇಳೋದು? ಹೈದ ತಂಟೆಮಾಡಿದ್ರೆ ಬ್ಯಾಡ ಅನ್ನೋಕೆ ನನಗೆ ಯದಿಕ್ಕಾರಿ ಇಲ್ಲೋ? ನೀನು ಗಂಡನ್ನ ಹೆತ್ತಂಗೆ ನಾನು ಈ ಮೊಗಾನ್ನೂ ಹೆರಲಿಲ್ಲವೊ? ಯಾತರದದು ಬುದ್ಧಿ ನನಗೆ ಹೇಳಬೇಕಾಗಿರೋದು’ ಅಂದ್ಲು. ಎಷ್ಟಾದರೂ ಅವಳು ಹೆಂಡ್ರು ಕಾಣವ್ವ, ನಾನು ತಾಯಿ. ಅವಳ್ನಂದ್ರೆ ಬದಲಿಗೆ ಅಂತಾಳೆ, ನನ್ನ ಅಂದ್ರೆ ನಾನೇನು ಮಾಡೋಹಂಗಿದ್ದೀನಿ? ‘ಅವನು ‘ಹೌದಮ್ಮ, ಅವಳ ಹೆತ್ತ ಮಗೂನ ಅವಳು ಹೊಡೀತಾಳೆ, ನೀನ್ಯಾಕೆ ಅವಳ ತಂಟೆಗೆ ಹೋಗ್ತೀಯಾ, ನನ್ನ ದಂಡಿಸು’ ಅಂದ.” ‘ಹಂಗಾದ್ರೆ ನಾನು ಮಾಡಿದ್ದು ತಪ್ಪಾಯ್ತೇನೋ’ ಅಂದೆ. ‘ತಪ್ಪೋ ಸರಿಯೋ, ಹೆತ್ತೋಳು ಮಗನ್ನ ದಂಡಿಸಕೂಡದು ಅನ್ನೋಕೆ ಆಗ್ತದೆಯಾ’ ಅಂದ. ನಂಗೆ ಕೋಪ ಬಂತವ್ವ. ಮಾತು ತಪ್ಪಿ ಬಾಯಾಗ ಬಂತು. ‘ಏನೊ ಇದು? ಹೆಂಡ್ರು ನಿನ್ಗ ಹಾಕಿರೋ ಮಂಕು ಬೂದೀಲಿ ನಿನ್ಗ ಅವಳು ಕಂದನ್ನ ಬಡಿದರೂ ಸರಿಯೆ ನನ್ನ ಬೈದರೂ ಸರಿಯೆ ಆಗದೆ. ಚೆನ್ನಾಗಿ ಹೋಯ್ತಪ್ಪ, ನಾಳೆ ಅವಳು ತಾಯಿನಾ ಆಚೆಗೆ ಕಳಿಸು ಅಂದ್ರೂ ನೀನು ಕಳಿಸೋನೆ’ ಅಂದೆ.’ ಮಗ ‘ಇನ್ನೇನು ಮಾಡೋಕಾಗ್ತದವ್ವ, ಹೆಂಡ್ತಿ ಇದ್ರೆ ನಾನಿರೋದಿಲ್ಲ ನಾನಿದ್ರೆ ಹೆಂಡ್ತಿ ಇರೋದು ಬೇಡ ಅಂದ್ರೆ, ದಿಕ್ಕಿಲ್ಲದ ಹೆಂಗ್ಸು ಅವಳ್ನ ಏನುಮಾಡೋದು?’ ಅಂದ. ‘ನನಗ್ಯಾರಪ್ಪ ದಿಕ್ಕು’ ಅಂದೆ. ‘ನಿನ್ಗೇನವ್ವ, ದನ ಅದೆ, ಕರ ಅದೆ, ದುಡ್ಡು ಅದೆ, ಕಾಸದೆ, ನಿನ್ನ ನಾನು ಸಾಕಬೇಕಾದ್ದೇನು’ ಅಂದ. ‘ಹಂಗಾದರೆ ನನ್ನ ಬೇರೆ ಹೋಗು ಅಂತೀಯೇನೋ’ ಅಂತ ಕೇಳಿದೆ.

'ನಿನ್ನಿಷ್ಟ, ಹೋಗಬೇಕು ಅಂದರೆ ನಾನು ಬ್ಯಾಡ ಅನ್ನೋಲ್ಲ ಅವ್ವ, ನಿಮ್ಮ ಪಂಚಾಯ್ತಿ ಸಾಕು ನನಗೆ' ಅಂತ ಅವ ಅಂದ. 'ಆಗ್ಲಪ್ಪ, ಹಂಗಾದ್ರೆ ಈವತ್ತು ಮದ್ಯಾನದಿಂದ ನಾನು ಬ್ಯಾರೆ ಇರ್ತೀನಿ. ನೀನೂ ನಿನ್ನ ಹೆಂಡ್ರೂ ಸುಕವಾಗಿರ್ರಾ' ಅಂತ ಹೇಳ್ಬಿಟ್ಟು ಇದೋ ಮೊಸರು ತಕ್ಕೊಂಡು ಬಂದಿದ್ದೀನವ್ವ.'' ಇದನ್ನೆಲ್ಲಾ ಹೇಳಿ ಮಂಗಮ್ಮ ಸುಮ್ಮನೆ ಅತ್ತಳು. ನಾನು ಸಮಾಧಾನ ಮಾಡಿದೆ. "ಸರಿ, ಇದೆಲ್ಲಾ ಏನು ದೊಡ್ಡ ಮಾತು? ಹೋಗತೀಯ, ಎಂದಿನ ಹಾಗೆ ಮನೆಯಾಗೆ ಇದ್ದುಬಿಡ್ತೀಯ; ಎಲ್ಲಾ ತಾನೇ ಸರಿಹೋಗ್ತದೆ, ಬಿಡು ಮಂಗಮ್ಮ''. ಹೀಗೆ ಧೈರ್ಯ ಹೇಳಿ, ಮೊಸರನ್ನ ತೆಗೆದುಕೊಂಡು ಅವಳನ್ನ ಕೊಟ್ಟುಕಳುಹಿದೆ.

ಮಾರನೆ ದಿನ ಮಂಗಮ್ಮ ಬಂದಾಗ ಹಿಂದಿನ ದಿನದಷ್ಟು ವ್ಯಸನ ವಿರಲಿಲ್ಲ. ಆದರೆ ಮನಸ್ಸು ಎಂದಿನಂತೆ ಹಗುರವಾಗಿಯೂ ಇರಲಿಲ್ಲ. "ಜಗಳ ಸಮಾಧಾನ ಆಯಿತೋ ಇಲ್ಲೋ ಮಂಗಮ್ಮ'' ಅಂದೆ. ಮಂಗಮ್ಮ "ಎಂತ ಸಮಾದಾನ ಅವ್ವ? ಆ ಸೊಸಿ ತಾಯಿ ಮಗನಿಗೆ ಸಮಾದಾನ ಆಗೋಕೆ ಬಿಟ್ಟಾಳ? ನೆನ್ನೆ ಮೊಸರು ಮಾರಿ ಮನೆಗೆ ಹೋದ್ರೆ ನನ್ನ ಮಡಕೆ ಕುಡಿಕೆ ಎಲ್ಲಾನೂ ಒಂದು ಪಕ್ಕಕ್ಕೆ ಇಟ್ಟಿದಾಳೆ. ಒಂದು ಗುಡಾಣದಾಗೆ ರಾಗಿ, ಒಂದರಾಗೆ ಅಕ್ಕಿ, ಒಂದಿಷ್ಟು ಉಪ್ಪು, ಮೆಣಸೀ ಕಾಯಿ ಎಲ್ಲಾನೂ. ತಾನೂ ತನ್ನ ಗಂಡ್ನೂ ಉಂಡದ್ದಾಯಿತು ಅಂತ ಕಾಲು ಚಾಚಿಕೊಂಡು ಕುಳಿತದಾಳೆ. ಹೆಂಗವ್ವ ಜಗಳ ಸಮಾದಾನ ಆಗೋದು. ನಾನು ಒಂದಿಷ್ಟು ಹಿಟ್ಟು ಬೇಯಿಸಿಕೊಂಡು ತಿಂದೆ ಕಾಣವ್ವ. ಬಾಯಾಗ ಹೇಳಿದ್ದಾಯಿತು. ಅವರಿಷ್ಟೇ ಸಾಕು ಅಂದರು. ಮದುವೆಯಾದಮೇಲೆ ಮಗ ನಮ್ಮೋನೆ ತಾಯಿ? ಸರಿ, ಅವನಿಗೆ ಬ್ಯಾಡದೆ ಇದ್ದ ಮ್ಯಾಲೆ ನಾನ್ಯಾಕೆ ಮೇಗೆ ಬಿದ್ದು ಹೋಗಬೇಕು. ಬ್ಯಾರೇನೇ ಇದ್ದೀನಿ ಕಾಣವ್ವ. ದಿನಾ ಆ ಮಗುವೆ ಒಂದಷ್ಟು ಮೊಸರು ಕೊಟ್ಟು ಆಮೇಲೆ ಮಾರೋಕೆ ಬರ್ತಾ ಇದ್ದಿ. ಹೊತೀನೆ ಆ ಹೊತ್ತಿಗೆ ಸರಿಯಾಗಿ ಅವಳು ಅವನ್ನ ಎಲ್ಲೋ ಕರಕೊಂಡು ಹೋಗಿದ್ಲು. ಆ ಹುಡುಗನ್ನ ನಾನು ಮಾತ್ನಾಡಿಸಕೂಡದು ಅಂತ ಮಾಡುತಾಳೆ ನೋಡು, ನಾ ಬಲ್ಲಿನಿ'' ಅಂದಳು. ಎಷ್ಟು ಸಣ್ಣ ಮಾತು ಏನು ರಾಮಾಯಣವಾಗಿ ಕೂತುಕೊಂಡಿತು ಅಂತ ನನಗಾಶ್ಚರ್ಯ

ವಾಯಿತು. ಆದರೆ ಇದಕ್ಕೆ ನಾನೇನೂ ಮಾಡುವ ಹಾಗಿಲ್ಲ. ಇನ್ನು ಯಾವುದೋ ಒಂದೆರಡು ಮಾತನ್ನಾಡಿ ಮಂಗಮ್ಮನನ್ನ ಕಳುಹಿಸಿಕೊಟ್ಟೆ.

ಆಮೇಲೆ ಒಂದೆರಡು ದಿನ ಈ ಮಾತನ್ನು ಎತ್ತಲಿಲ್ಲ. ಮಂಗಮ್ಮ ಬೇರೆಯೇ ಇದ್ದಾಳೆಂದು ತೋರಿತು. ಆಮೇಲೆ ಒಂದು ದಿನ ಮಂಗಮ್ಮ "ಅವ್ವಾ, ನೀನು ಹಾಕ್ಕೊಳ್ತೀಯಲ್ಲ ಆ ಮುಕಮಲ್ ಬಟ್ಟೆ, ಅದು ಗಜಕ್ಕೆ ಏನು ಬೆಲೀ ಅವ್ವ" ಎಂದಳು. "ಯಾಕೆ, ಮಂಗಮ್ಮ" ಅಂದೆ. "ಇಷ್ಟು ದಿನಾನೂ ಮಗಗೆ ಮೊಮ್ಮಗಗೆ ಅಂತ ಕಾಸಿಗೆ ಕಾಸು ಸೇರಿಸಿದ್ನಿ ಕಾಣವ್ವ. ಇನ್ಯಾಕೆ ಸೇರಿಸೋದು. ನಾನೂ ಒಂದು ಮುಕಮಲ್ ಜಾಕೀಟು ಹೊಲಿಸಿಕೊಂಡು ಓಡಾಡ್ತೀನಿ" ಎಂದಳು. "ಅದರ ಜಾಕೀಟು ಏಳೆಂಟು ರೂಪಾಯಿ ಆಗಬಹುದು ಮಂಗಮ್ಮ" ಅಂದೆ. ಆ ದಿನ ಹೋದವಳು ಮಂಗಮ್ಮ ದರ್ಜಿ ಅಂಗಡೀಲಿ ಮುಕಮಲ್ ಬಟ್ಟೆ ವ್ಯಾಪಾರ ಮಾಡಿದ್ದಾಳೆ. ಹೊಲಿಯೋದಕ್ಕೆ ಹಾಕಿದ್ದಾಳೆ. ಮಾರನೆ ದಿವಸ ಊರಿಗೆ ಹೋಗುತಾ ಅದನ್ನ ಹಾಕಿಕೊಂಡೇ ಬಂದಿದ್ದಾಳೆ. "ನೋಡಿದಾವ್ವ, ನನ್ನ ಸಿಂಗಾರಾನ? ಯಜಮಾನ್ನಿದ್ದಾಗ ಒಂದು ಒಳ್ಳೇ ಶಾಲೆ ತಕ್ಕೊಳಲಿಲ್ಲ. ಅವನು ಯಾವೊಳ್ನೋ ನೋಡಿಕೊಂಡು ಹೋದ. ಮಗನಿಗೆ ಕಾಸಿರಲಿ ಅಂತ ಕೂಡಿಸಿಟ್ಟೆ. ಈ ಮಗನ ಸುದ್ದಿ ಹಿಂಗಾಯಿತು. ನೋಡು ನನ ಸಿಂಗಾರಾನ" ಎಂದಳು.

ಮಗನನ್ನು ಬಿಟ್ಟ ದುಃಖದಲ್ಲಿ ಮಂಗಮ್ಮನಿಗೆ ಸ್ವಲ್ಪ ಬುದ್ಧಿ ಭ್ರಮಿಸಿದೆ ಎಂದು ನನಗೆ ತೋರಿತು. ಬಹಳ ಕೋಪ ಬಂದಾಗ ಯಾರಿಗಾದರೂ ಹೀಗಾಗುತ್ತದೆ. ನಾನು ಏನೂ ಹೇಳಲಿಲ್ಲ. ಆದರೆ ಈ ಜಾಕೀಟಿನಿಂದ ಅವಳಿಗೆ ಇತರರೊಂದಿಗೂ ಜಗಳ ಬಂದಿತು. ಅವರ ಊರಿನ ಒಬ್ಬ ಹುಡುಗ ಬೆಂಗಳೂರಿನಲ್ಲಿ ಓದುತ್ತಾ ಇದ್ದಾನಂತೆ. ಅವನು ಫರಂಗಿಯುವರ ಹಾಗೆ ಅಥವಾ ನಮ್ಮವರು ವಿದ್ಯಾವಂತರು ಎನ್ನುವವರು ಈಗ ಹಾಕಿಕೊಳ್ಳುವ ಹಾಗೆ ಟೈ, ಕಾಲರ್, ಹಾಕಿಕೊಳ್ಳುವ ನಾಜೂಕುವಂತ. ಅವನು ಮಂಗಮ್ಮನ್ನ ಕಂಡಾಗ, "ಏನವ್ವಾ ಪೂರಾ ಮುಕಮಲ್ ಜಾಕೆಟ್ ಹಾಕಿಬಿಟ್ಟೆ" ಅಂದನಂತೆ. ಮಂಗಮ್ಮ "ಯಾಕೋ ಹೈದ ಬಹಳ ಉಚಾಯಿಸಿ ಮಾತ್ನಾಡ್ತೀಯಾ, ನೀನು ಆ ಕುತ್ತಿಗ್ಗೆ ಉರ್ಲು ಹಾಕ್ಕೋಬಹುದಂತೆ, ನಾನು ಜಾಕೀಟು ಯಾಕೆ ಹಾಕ್ಕೋಬಾರದು"

ಎಂದಳಂತೆ. ಇವರಿವರಿಗೆ ಮಾತು ನಡೆಯಿತು. ಹತ್ತಿರದ ನಾಲ್ಕು ಜನ ನಕ್ಕರು.

ಮಾರನೆಯ ದಿನ ಮಂಗಮ್ಮ ನನಗೆ ಇದನ್ನು ಹೇಳಿದಳು. ಇತರರು ಹೀಗೆ ಹೇಳುವುದಲ್ಲದೆ ಆ ಸೊಸೆಯಾದವಳು ಮಂಗಮ್ಮ ಕೇಳುವ ಹಾಗೆ ಇತರರೊಂದಿಗೆ "ಸೊಸೆಗೆ ಒಂದು ರವಿಕೆ ಹೊಲಿಸಲಾರದೆ, ಅತ್ತೆ ಬೇರೆ ಸಂಸಾರ ಆಗಿ, ಜಾಕೀಟು ಹಾಕಿರೋದ ನೋಡಿ" ಅಂದಳಂತೆ. ಮಂಗಮ್ಮ ಸೊಸೆಗೆ ಮದುವೆಯಲ್ಲಿ ಓಲೆ, ಕಡಗ, ಚಳತುಂಬು, ಜಿಮಿಕೆ, ನಾಗರ, ಕಂಠಿ, ಡಾಬು, ಇದಿಷ್ಟನ್ನು ಕೊಟ್ಟಿದ್ದಳು. ಆಮೇಲೆ ವರುಷಕ್ಕೆ ಒಂದು ಏನಾದರೂ ಒಡವೆ ತೆಗೆದುಕೊಟ್ಟಿದ್ದಳು. ಅದೆಲ್ಲಾ ಸೊಸೆಗೆ ಜ್ಞಾಪಕವೇ ಇಲ್ಲ." ಮಂಗಮ್ಮ ಈ ಮಾತು ಕೇಳುತ್ತಾ ಒಂದೆರಡು ಸಲ ಸುಮ್ಮನೆ ಇದ್ದಳು. ಆಮೇಲೆ ಅವಳಿಗೆ ತಡೆಯಲಿಲ್ಲ. ಒಂದು ರಾತ್ರಿ ಹೋಗಿ ಮಗನ್ನ "ನಿನ್ನ ಹೆಂಡರು ನನ್ನ ಬಹಳ ಮಾತಂತಾಳೆ. ನಾನೇನೋ ಜಾಕೀಟ ಹಾಕಿಕೊಂಡೆ ಅಂತ. ತನಗೆ ಏನೂ ತಕ್ಕೊಡಲಿಲ್ಲವಂತೆ. ನಾನು ಕೊಟ್ಟಿದ್ದೆಲ್ಲಾ ಸುಳ್ಳೇ? ಕಡಗ, ಓಲೆ, ಕಂಠಿ, ನಾಗರ, ಡಾಬು, ನಾನು ಕೊಟ್ಟೋವು ಅಲ್ಲೆ" ಎಂದಳಂತೆ. ಸೊಸೆ ಗಂಡನನ್ನ ಮಾತನಾಡೋಕೆ ಬಿಡಲಿಲ್ಲ. "ಗಂಡ ಇಲ್ಲದ ಮುದುಕಿ ನೀನು ಈಗ ಓಲೇನೂ ಡಾಬೂನೂ ಹಾಕೋತೀಯಾ? ತಕ್ಕೊಂಡು ಹೋಗು ಹಾಕ್ಕೋ" ಎಂದಳು. ಆ ಗಂಡನು ಅವಳಿಗೆ "ಯಾಕೆ ಹೆಣ್ಣೆ, ಇಷ್ಟು ಮಾತು" ಎಂದು, ತಾಯನ್ನು ಕುರಿತು "ಅವ್ವಾ, ನಿಮ್ಮ ಜಗಳ ನನಗೆ ಬೇಕಿಲ್ಲ. ನಿನ್ನ ಓಲೆ ಒಡವೆ ಬೇಕು ಎಂದರೆ ತಕ್ಕೊಂಡು ಹೋಗು" ಎಂದನಂತೆ. ಮಂಗಮ್ಮ ಹೇಳಿದಳು: "ನೋಡವ್ವ, ಬೀದಿಯೋರ ಕೂಡ ಇಂಥ ಮಾತು ಆಡಬ್ಯಾಡ ಎಂತ ಹೆಂಡರಿಗೆ ಹೇಳವೊಲ್ಲ. ಬೇಕಾದರೆ ಒಡವೆ ತಕ್ಕೊಂಡು ಹೋಗು ಅಂತ ನನ್ನ ಮೇಲೇ ತಪ್ಪು ಹಾಕಿದ ತಾಯಿ. ಯಾಕೆ ಈ ಜನ್ಮ ಇನ್ನು." ಅದನ್ನೆಲ್ಲ ಕೇಳಿ ನನಗೆ ಬಹಳ ವ್ಯಸನವಾಯಿತು. ಇವಳೋ ಮುದುಕಿ. ಅವನು ಒಬ್ಬ ಮಗ. ಅವನ ಹೆಂಡತಿ ಗಂಡನ್ನ ಗಂಡನ ತಾಯನ್ನ ಚೆನ್ನಾಗಿ ನೋಡಿಕೊಳ್ಳಬಾರದೆ? ಇಷ್ಟಕ್ಕೆ ಈ ರಂಪೆಲ್ಲ ಯಾಕೆ? ಮೊಮ್ಮಗನ್ನ ಹೊಡೆಯಬೇಡ ಅಂತ ಮುದುಕಿ ಹೇಳಿದ್ದಕ್ಕೆ. ಇದೇಕೆ

ಇವರೆಲ್ಲ ಹೀಗೆ ಮಾಡುತಾರೋ ಎಂದು ನಾನು ಯೋಚಿಸಿದೆ. ಆಮೇಲೆ ನನಗೆ ತೋರಿತು. ಎಲ್ಲಿ ನೋಡಿದರೂ ಜಗಳದ ಕಾರಣ ಹೀಗೆಯೇ ಇರುವುದು. ಒಬ್ಬರೊಬ್ಬರಿಗೆ ಆಗದ ಕಾರಣದಿಂದ ಸಣ್ಣ ವಿಷಯ ದೊಡ್ಡದಾಗುತ್ತದೆ; ಎಲ್ಲಿಲ್ಲದ ಜಗಳ ಹುಟ್ಟುತ್ತದೆ; ಅದಕ್ಕೆ ಸೇರಿದವರಿಗೆಲ್ಲ ಮಿತಿಯಿಲ್ಲದೆ ನೋವು.

ಇದಾದ ಕೆಲದಿನದ ಮೇಲೆ ಮಂಗಮ್ಮ ನನ್ನನ್ನು "ಅವ್ವಾ ನೀವು ಸತ್ಯವಂತರು. ನಂದು ಒಸಿ ಹಣ ಐತೆ ಅದನ್ನ ಎಲ್ಲಿಯಾದರೂ ಈ ಬಾಂಕಿ ಅಂತಾರಲ್ಲ ಅಂತಾಕಡೆ ಇರಿಸಿಕೊಂಡಿರವ್ವ. ಅದಕ್ಕೆ ಅವರಿವರು ಕಣ್ಣು ಹಾಕುತಿದ್ದಾರೆ" ಎಂದಳು. ಏನಾಯಿತು ಎಂದು ನಾನು ವಿಚಾರಿಸಿದೆ. "ನಿನ್ನೆ ನೋಡವ್ವಾ, ನಮ್ಮೂರೋನು ರಂಗಪ್ಪ ಅಂತ ಇದಾನೆ. ಅವನು ಸ್ವಲ್ಪ ಜೂಜುಗೀಜು ಆಡೋದುಂಟು. ಸೋಕೀ ಮನುಷ. ನಾನು ಮೊಸರು ತಕ್ಕೊಂಡು ಬರತಿರಬೇಕಾದರೆ ದಾರಿಯಲ್ಲಿ ಅದೆಲ್ಲಿಂದಲೊ ಬಂದ, 'ಏನು ಮಂಗಮ್ಮ, ಚಂದಾಗಿದೀಯಾ' ಅಂದ. 'ಏನು ಚಂದ ರಂಗಪ್ಪ ನೀನು ಕಾಣದ ಚಂದ' ಅಂದೆ. ಅವ ಇದ್ದೋನು 'ಹೌದು ಬಿಡವ್ವ, ನೀ ಹೇಳೋದು ನಿಜಾನೆ. ಈಗಿನ ನಡತೀಲಿ ಯಾರಿಗೆ ಚಂದ ಎಂತಾದ್ದು; ಈಗಿನ ಹುಡುಗರು ಉಚಾಯಿಸಿ ಮಾತಾಡೋದೆ, ನಮ್ಮಂತ ವಯಿಸಾದೋರು, ಎಲಾ ಹಿಂಗಾಯಿತಲ್ಲ ಅನ್ನೋದೆ. ಇನ್ನೇನು ಮಾಡೋದು ಮಂಗಮ್ಮ' ಅಂದ." ಹಂಗೇ ನಡಕೊಂಡು ಬಂದಿವಿ. ದಾರೀಲಿ ತೋಪು ಬಾವಿ ಐತೆ ಏಳು. ಅಲ್ಲಿ ಬರಬೇಕಾದರೆ ನನಗೆ ಬಯ, ಇವ ಏನು ಮಾಡ್ಯಾನೋ ಅಂತ. ಈ ಸಂಚಿಯಾಗೆ ಅಷ್ಟು ದುಡ್ಡೈತೆ ಏಳು. ಅದಕಾಗಿ ಅವನು ಅಲ್ಲೀಗುಂಟ ಬಂದವನೇ 'ಒಸಿ ಸುಣ್ಣ ಕೊಡುತೀಯಾವ್ವ' ಎಂದ. ಕೊಟ್ಟೆ. ತಕೊಂಡುಹೋದ. ಈ ಹೊತ್ತು ನಾನು ಬರುತಿರಬೇಕಾದರೆ ಅಲ್ಲೇ ಬಂದು ಜೊತೆಗೆ ಸೇರಿದ ಕಾಣವ್ವ. ಆ ಮಾತು ಈ ಮಾತು ಹೇಳಿದೋನೆ ನಡುವೆ 'ಮಂಗಮ್ಮ, ನನಗೆ ಒಸಿ ಸಮಯಾಗೈತೆ ಒಂದು ಸ್ವಲ್ಪ ಸಾಲ ಕೊಟ್ಟೀಯಾವ್ವ. ಈ ಸಲದ ರಾಗಿ ಮಾರತಾನೇ ಹಿಂದಕ್ಕೆ ಕೊಟ್ಟುಬಿಡತೀನಿ' ಅಂದ. 'ನನ್ನ ತಾವು ದುಡ್ಡೆಲ್ಲೀದಪ್ಪ' ಎಂದೆ. 'ಬಿಡು ಮಂಗಮ್ಮ, ನಮಗೆ ತಿಳೀದ. ದುಡ್ಡು ಅಲ್ಲಿ ಇಲ್ಲಿ ಹೂತಿಟ್ಟು ಬರೋದೇನವ್ವ. ನನಗೆ ಸಾಲ ಕೊಡು, ನಾನು ಬದುಕಿಕೋತೀನಿ.

ನಿನಗೂ ಬಡ್ಡಿ ಬರ್ತದೆ' ಎಂದ.' ಸ್ವಲ್ಪ ಹೊತ್ತು ಬಿಟ್ಟುಕೊಂಡು 'ನಿನ್ನ ಮಗನೂ ನೀನೂ ಜೊತೆಗೆ ಇದ್ದಿದ್ದರೆ ನಾನು ನಿನ್ನ ಕೇಳುತಾ ಇರಲಿಲ್ಲ. ಏನೋ ಸೊಸೆಗೆ ಚೀಕು ಬಾಕು ಮಾಡಿಸೋವ ಅಂತಿರುತೀಯಾ ಎಂತ ನಾ ಬಲ್ಲೆ. ಈಗ ಅದೇನೂ ಇಲ್ಲವಲ್ಲ ಅಂತ ಕೇಳಿದಿ' ಎಂದ. ಹೆಂಗಸು ಒಂಟಿ ಆದಳು ಅಂದರೆ ಜನ ನೋಡು ತಾಯಿ ಅವಳಮೇಲೆ ಕಣ್ಣು ಹಾಕುತಾರೆ'' ಎಂದಳು. ನಾನು ''ನಮ್ಮ ಯಜಮಾನರನ್ನು ಕೇಳಿ ಹೇಳುತೇನೆ'' ಎಂದೆ.

ನಾನು ಯಜಮಾನರ ಸಂಗಡ ಈ ವಿಷಯ ಪ್ರಸ್ತಾಪ ಮಾಡಿರಲಿಲ್ಲ: ಮಾರನೆಯ ದಿನ ಮಂಗಮ್ಮ ಮೊಸರು ಕೊಟ್ಟವಳೆ ಮಡಿಲಿನಿಂದ ಒಂದು ಸಂಚಿ ತೆಗೆದಳು, ''ಅವ್ವಾ, ಒಳಗೆ ಹೋಗೋನೆ, ಎಣಿಸಿಕೊಳ್ಳುವಿಯಂತೆ'' ಎಂದಳು. ನಾನು ''ನಮ್ಮ ಯಜಮಾನರನ್ನು ಇನ್ನೂ ಕೇಳಿಲ್ಲ, ಇರಲಿ ಇನ್ನೊಂದುಸಲ ತರುವೆಯಂತೆ'' ಎಂದೆ. ಮಂಗಮ್ಮ ''ಅವ್ವಾ, ನನಗೆ ಬಹಳ ಬಯವಾಗ್ತದೆ ಕಾಣವ್ವಾ. ರಂಗಪ್ಪ ಈವೊತ್ತೂ ಬಂದ. ತೋಪಿನ ತಾವು 'ಕೂತುಕೋ ಮಂಗಮ್ಮ ಹೋಗುವಿಯಂತೆ ಏನು ಅವಸರ' ಅಂದ. ನನ್ನ ತಾವು ಈ ದುಡ್ಡು ಬೇರೆ, ನನ್ನೆದೆ ಡವ ಡವ ಬಡುಕೋತಿತ್ತು. ನಿಲ್ಲೋದಿಲ್ಲ ಅಂದರೆ ಹಿಡಿದು ನಿಲ್ಲಿಸಿದರೆ ಏನು ಮಾಡೋದು ಅಂತ ಕೂತೆ. ಮನೆ ಮಾತಾಡಿದ. ಮಠದ ಮಾತಾಡಿದ. ಆಮೇಲೆ ನನ್ನ ಕೈಹಿಡಿದು ಕೊಂಡು 'ಮಂಗಮ್ಮ, ನೀನು ಎಷ್ಟು ಚೆನ್ನಾಗಿದೀಯಾ ಅಂತೀಯಾ' ಅಂದ. ಕೇಳಿದಾ ತಾಯಿ, ಒಳ್ಳೇ ಪರಾಯದಾಗೇ ಯಜಮಾನನಾದೋನು ಈ ಕೈಹಿಡಿಯೋದ ಬಿಟ್ಟ. ಇನ್ನೊಬ್ಬ ಹಿಡೀಲಿಲ್ಲವ್ವ ಇದನ್ನ. ಇವ ಈವೊತ್ತು ಹಿಡಿದ. ನಾನು ಕೈಬಿಡಿಸಿಕೊಂಡು, 'ಏನು ರಂಗಪ್ಪಾ, ಬಹಳ ಸರಸವಾಡುತೀಯಾ, ನನ್ನ ಚಂದ ಹೇಳೋಕೆ ನೀನೇನು ಮಾಡಿಕೊಂಡ ಗಂಡನಾ, ಬಿಡು' ಅಂತ ಬೇಗನೇ ಎದ್ದು ಬಂದುಬಿಟ್ಟೇ ತಾಯಿ. ನಿನ್ನೇ ರೂಪಾಯಿ ಕೇಳಿದ, ಈವೊತ್ತು ಮಾನ ಕೇಳಿದ. ಹಸೇಮೇಲೆ ಜೊತೇಗೆ ಕುಂತು ಬಾಸಿಂಗ ಕಟ್ಟಿಕೊಂಡು ಸೇಸೆ ಹಾಕಿಸಿಕೊಂಡು ಕೈಹಿಡಿದ ಅಂದ ಜೀವ ಎತ್ತಲೋ ಹೋಯಿತವ್ವ. ಒಳ್ಳೇ ಪರಾಯದಾಗೆ ಗಂಡ ಬೇಡ ಅಂದ. ಇನ್ನೊಬ್ಬಳಾಗಿದ್ದರೆ, ಮಾಡಿಕೊಂಡ ಗಂಡ ಒಲ್ಲ ಕೂಡಿಕೊ ಬಾರೊ ನಲ್ಲ

ಅಂತ ಕುಣಿದಿರೋಳು. ಅಂದರೆ ನಾನು ನನ್ನ ಮರಿಯಾದೆ ಬಿಡಲಿಲ್ಲವ್ವ. ಈಗ ಈ ಪೋಲಿ ಬಂದು ದಾರೆ ಎರೆಸಿಕೊಂಡ ಕೈಗಿಂತ ಹೆಚ್ಚಾಗಿ ನನ್ನ ಕೈಹಿಡೀತಾನೆ ನೋಡಿದಾವ್ವಾ" ಎಂದಳು."

ನನಗೆ ಇವಳ ಕತೆ ಏಕೋ ಬಹಳ ಕಷ್ಟಕ್ಕೆ ಬಂದಿತೆಂದು ತೋರಿತು. "ಇದೇನೆಲ್ಲ ಫಜೀತಿ ಮಂಗಮ್ಮ, ಸುಮ್ಮನೆ ಹೋಗಿ, ಆದದ್ದಾಯಿತು ಅಂತ ಮಗನ ಹತ್ತಿರ ಇದ್ದುಬಿಡೋದು ತಾನೆ" ಎಂದೆ.

"ನಾನು ಇದ್ದೇನವ್ವ, ಅವಳು ಇರಗೊಡಿಸಿದರಲ್ಲವಾ."

"ಮಗನಿಗೆ ಇದೆಲ್ಲ ಹೇಳು."

"ಅಯ್ಯೋ ನನ್ನವ್ವಾ, ರಂಪುಮಾಡಿ ನನ್ನ ಜಾತಿಯಿಂದ ಓಡಿಸಿಯಾಳು ಆ ಸೊಸೆ. ನನಗೆ ಹೊತ್ತಾಯಿತವ್ವ. ನಾನು ಬರುತೀನಿ, ಯಜಮಾನರ ಕೇಳಿ ನಾಳೆ ಹೇಳು" ಎಂದು ಮಂಗಮ್ಮ ಹೊರಟುಹೋದಳು.

ತಿರುಗಿ ಒಂದು ಗಂಟೆಯ ಹೊತ್ತಿಗೆ ಬಂದಳು. "ಅವ್ವಾ, ಈಹೊತ್ತು ಒಂದು ಕೆಲಸ ಆಯಿತೇ" ಎಂದಳು.

"ಏನಾಯಿತು?"

"ಮೊಗಾಗೆ ಇರಲಿ ಅಂತ ಒಂದಷ್ಟು ಮಿಟಾಯಿ ತಕ್ಕೊಂಡು ಹೆಡಿಗ್ಯಾಗೆ ಇಟ್ಟುಕೊಂಡೀ ತಾಯಿ." ಮಂಗಮ್ಮ ಮೊದಲು ಮಗು ತನ್ನ ಹತ್ತಿರ ಬರದಂತೆ ಮಾಡಿದರೆಂದು ಹೇಳದ್ದಳಲ್ಲ: ಈಗ ಮೊಗಾಗೆ ಎಂದರೆ ಯಾವ ಮಗುವಿಗೆಂದು ನನಗೆ ಅರ್ಥವಾಗಲಿಲ್ಲ. "ಯಾವ ಮಗುವಿಗೆ" ಎಂತ ನಾನು ಕೇಳಿದೆ. "ಇನ್ಯಾವ ಮೊಗಾವ್ವ, ನಮ್ಮೊಗಾನೇ." "ನಿನ್ನ ಹತ್ತಿರ ಬರೋದಿಲ್ಲಾ ಅಂತ ನೀ ಹೇಳಿದೆ." "ಹೋಗಬೇಡಾಂತ ಅವರ ಅವ್ವ ಹೇಳ್ತಾಳೆ. ಆದರೆ ಮೊಗ ಬರದೀರ ಇರ್ತಾದಾವ್ವ. ಅವರು ಕಾಣದಂತೆ ಯಾವಾಗಲೋ ಬರ್ತದೆ, ಒಸಿ ಹಾಲು ಕುಡೀತದೆ, ಒಸಿ ಮೊಸರು ತಾ ಅನ್ನುತದೆ. ಏನಾದರೂ ಕೊಟ್ರೆ ಕುಣಿದಾಡ್ತದೆ. ರಂಪು ಮಾಡಿದ್ರೆ ನಿಮ್ಮಮ್ಮಿಗೆ ಕೇಳ್ತದೆ ನೋಡು ಅಂದರೆ ಬಾಯಿಮುಚ್ಚಿಕೋತದೆ. ಮಕ್ಕಳ ಆಟಾನೇ ಆಟ ಕಾಣವ್ವ. ಅದಕ್ಕಿರಲಿ ಅಂತ ಒಂದೀಸು ಮಿಟಾಯಿ ತಕ್ಕೊಂಡು ಹೆಡಿಗೀಲಿಟ್ಟುಕೊಂಡಿ. ಈ ಸಂಕರಪುರದಾಗೆ ಬರುತಿರಬೇಕಾದರೆ ಅಲ್ಲಿ ಒಂದು ಯಾವುದೋ ಮಾವಿನಮರ ಇದೆಲ್ಲ, ಅಲ್ಲಿ ಕೂತಿದ್ದ ಒಂದು ಕಾಗೆ

ರಪ್ಪನೆ ಬಂದು ಮಿಟಾಯಿ ಪೊಟ್ನಾನ್ನೆತ್ತಿಕೊಂಡು ಹೋಗಿಬಿಡ್ತವ್ವ. ಈವತ್ತು ಹಿಂಗಾಗಿಬಿಡ್ತಲ್ಲ." ನಾನು "ಒಂದು ಮಿಟಾಯಿ ಪೊಟ್ನ ಹೋದರೆ ಏನಾ ಯಿತು? ತಿರಿಗಿ ಅಷ್ಟು ಮಿಟಾಯಿ ತಕ್ಕೊಂಡ್ರಾಯಿತು" ಎಂದೆ. ಮಂಗಮ್ಮ "ಅದಲ್ಲಾವ್ವ, ಕಾಗೆ ಬಂದು ಮನುಷರ್ನ ಮುಟ್ಟಬಾರದು ಅಂತಾರೆ, ಅದಕ್ಕಂದಿ" ಅಂದಳು. "ಮುಟ್ಟಿದರೆ ಏನಂತೆ" ಎಂದೆ. "ಜೀವಕೆ ಊನ ಅಂತಾರೆ. ನನಗೇನಾದರೂ ಕಡೆಗಾಲ ಬಂತೊ ಅಂತ ಹಂಗೆ ಬಯ ಆಯ್ತು ಅನ್ನ. ಆಮೇಲಂದುಕೊಂಡೆ, ಸಂತೋಸಾನೆ ಆಯ್ತು. ಯಾರಿಗೂ ಬ್ಯಾಡದ ಜಲ್ಮ. ನಮ್ಮಪ್ನ ಪಾದದಾಗೆ ಸೇರಿಬಿಡಲೇಳು ಅಂತ ಅಂದುಕೊಂಡೆ. ಅಂತು ಈವತ್ತು ಹಿಂಗಾಯ್ತು." ನಾನು "ಏನು ತಿಕ್ಕಲು ಮಾತ ಹೇಳ್ತೀಯಾ ನೀನು. ಕಾಗೆಗೆ ಸಿಕ್ಕೋ ಹಾಗೆ ಮಿಟಾಯಿ ಇಟ್ಟುಕೊಂಡು ದಾರೀಲಿ ಬರೋದು, ಅದು ಬಂದು ತಕ್ಕೊಂಡ್ರೆ ಜೀವಕ್ಕೆ ಊನ ಅನ್ನೋದು, ಇದು ಯಾವ ಬುದ್ಧಿಮಾತು, ಹೋಗು, ಸುಮ್ಮನೆ ಮನೆಗೆ ಹೋಗು" ಅಂದೆ. "ಅಂಗಾದರೆ, ಬಯ ಇಲ್ಲ ಅಂತೀಯಾ." "ಭಯಾನೂ ಇಲ್ಲ, ಗಿಯಾನೂ ಇಲ್ಲ. ಜಗಳ ಆಡಿದಷ್ಟೂ ಆಯುಸ್ಸು ಹೆಚ್ಚು. ತಿರಿಗಿ ಆ ಸಮಾಚಾರ ಯೋಚನೆಮಾಡದೆ ನಗುತಾ ಮನೆಗೆ ಹೋಗು."

ಮಂಗಮ್ಮ ಹೊರಟುಹೋದಳು. ನಾನು ಇವಳ ಮನಸ್ಸಿನ ಸ್ಥಿತಿ ಯನ್ನು ಕುರಿತು ಯೋಚಿಸಿ ಆಶ್ಚರ್ಯಪಟ್ಟೆ. ಮಗ ಬೇಕು, ಸೊಸೆ ಬೇಕು, ಮೊಮ್ಮಗ ಬೇಕು; ಆದರೆ ತಾನು ಯಜಮಾನಿ ಅಂತ ತನಗೆ ಎಲ್ಲರೂ ಗೌರವ ತೋರಿಸಬೇಕು. ಮನುಷ್ಯನಾದವನಿಗೆ ಈ ಚಪಲ ತಪ್ಪಿದ್ದಲ್ಲ. ಜೀವನದಲ್ಲಿ ಏನೋ ಬೇಸರ. ಆದರೂ ಸಾಯುವುದಕ್ಕೆ ಇಷ್ಟವಿಲ್ಲ. ಆದರೆ ಆ ಇಷ್ಟ ಇಲ್ಲ ಅಂತ ತೋರಿಸಿಕೊಳ್ಳುವುದಕ್ಕೆ ಇಷ್ಟ ಇಲ್ಲ. ಹಳ್ಳಿಯ ಜನ, ತಿಳಿಯದ ಜನ, ಮುಚ್ಚುಮರೆ ಅರಿಯದವರು ಎಂತ ನಾವು ಹೇಳುವ ಇಂಥವರ ಮನಸ್ಸಿನ ಸ್ಥಿತಿಯೇ ಹೀಗೆ ಪರದೆಯ ಹಿಂದೆ ಪರದೆ, ನೆರಿಗೆಯ ಹಿಂದೆ ನೆರಿಗೆ, ಮಡಿಕೆಯ ಮರೆಯಲ್ಲಿ ಮಡಿಕೆ, ಇದು ಏನು ನಾಟಕದ ಸೂತ್ರ ಎಂತ ಎಂದುಕೊಂಡೆ.

ಮಂಗಮ್ಮ ತಿರಿಗಿ ಬಂದಾಗ ಇನ್ನೊಂದು ಸಮಾಚಾರ ಹೇಳಿದಳು. ಆ ಮೊಮ್ಮಗ ಅಮ್ಮನ್ನ ಅಪ್ಪನ್ನ ಬಿಟ್ಟುಬಿಟ್ಟು ಇವಳ ಹತ್ತಿರಲೇ ಬಂದು

ಬಿಟ್ಟಿತಂತೆ. ಅವಳಿಗೆ ಬಹಳ ಸಂತೋಷ. ಆ ಹುಡುಗನ ಧೈರ್ಯ ನೋಡು ಅಂತ. "ಏನವ್ವ, ಚಿಳ್ಳೆ ಒಂದು ಚೋಟುದ್ದ ಐತೆ ಹೈದ. ಅಮ್ಮನ್ನ ಬಿಟ್ಟು ಬರೋದು ಅಂದ್ರೆ ಏನವ್ವ? ನಿನ್ನೆ ಮದ್ಯಾನ ನನ್ನ ಮನೆಗೆ ಬಂದ ಹುಡುಗ ತಿರಿಗಿ ಅಮ್ನ ಹತ್ತಿರಕ್ಕೆ ಹೋಗೋದಿಲ್ಲ ಅಂದುಬಿಡ್ತು. ಇಷ್ಟು ದಿನ ಮುಚ್ಚುಮರೇಲಿ ಬರ್ತಾ ಇದ್ದದ್ದು ಯಾವಾಗ ಮನೆಗೆ ಹೋಗಲ್ಲೋ ಅವರ ಅಮ್ಮ ಬಂದು ರಾದ್ಧಾಂತ ಮಾಡಿದಳು. ಬಾ ನಿನಗೆ ಹೊಡೀತೀನಿ ಅಂದ್ಳು. ಹೈದ ನಾನು ಬರೊಲ್ಲ ಅಂತ ನನ್ನ ಕಾಲ್ಹಿಡುಕೊಂಡು ನಿಂತುಬಿಡ್ತವ್ವ. ಹೋಗೋ ಅಂತ ಇನ್ನಿಲ್ಲದೆ ಹೇಳ್ದೆ. ಅವರಪ್ನ ಬಂದು ಕೇಳ್ದ. ಹೋಗಲ್ಲ. ನನ್ನ ತಾವೇ ನಿಂತುಬಿಡ್ತು ತಾಯಿ. ಹತ್ತುದಿನ ಬೇರೆ ಮನೇಲಿ ಒಬ್ಬಳೇ ಮಲಗಿ ಯಾವಾಗಲಾದರೂ ಒಸಿ ಭಯಪಡುತಾ ಇದ್ದಿ. ನಿನ್ನೆ ಈ ಹೈದ ಜೊತೆಗಿದ್ದ ಅಂದದ್ದೆ ಏನೋ ಧೈರ್ಯ ಬಂದುಬಿಡ್ತವ್ವ. ಏನಂದರೂ ಗಂಡಸು ನೋಡವ್ವ. ದೇವರು ನೋಡಿ ಅವನಿಗೆ ಬುದ್ಧಿಕೊಟ್ಟದ್ದು. ಬೆಳೆದ ಮಗ ಬೇಡ ಅಂದ್ರೆ ಈ ಚಿಳ್ಳೆ ಮೊಮ್ಮಗ ನಾನಿದ್ದೀನಿ ಸುಮ್ಗಿರು ಅಂತ ಬಂದುಬಿಟ್ಟಲ್ಲವ್ವ! ರಾಮಾಣ್ಯ ಮಾಡಿದಳು ಸೊಸಿ ರಾತ್ರಿಯೆಲ್ಲ. ಜಪ್ಪಯ್ಯ ಅಂದ್ರೂನು ಇದು ಹೋಗಲಿಲ್ಲ. ಬೆಳಗಾಗ ನಾ ಇಲ್ಲಿ ಬರಬೇಕಾದ್ರೆ ನೀನು ಒಂಟಿಯಾಗಿರ್ತೀಯೋ ಅಂತ ಅವರಮ್ಮನ ಮನೆಬಾಕಿಲು ತಾವು ಕರಕೊಂಡು ಹೋಗಿ ನಿಲ್ಲಿಸಿದೆ. ಒಳಗೆ ಹೋತು. ನಾ ಇತ್ತಾಗೆ ಬಂದಿ." "ಅವಳು ಮಗೂನ ಹೊಡೆದರೆ ಏನುಮಾಡ್ತೀಯ" ಅಂತ ನಾನು ಕೇಳಿದೆ. "ಮಗ ಒಪ್ಪೊತ್ತಾದರೂ ಮನೆಗೆ ಬರ್ತಾನಲ್ಲ ಎಂತ ಸಂತೋಸ ಇಲ್ಲವೇ ತಾಯಿ ಅವಳಿಗೆ? ಹತ್ತಿರಲೇ ಇದ್ರೆ ಹೊಡೆಯೋಣ ಅನ್ನಿಸತದೆ. ಈಗ ನೋಡವ್ವ, ನನ್ಗೆ ಒಂದೇ ಮನೇಗೆ ಇದ್ದಾಗ ನನ್ನ ಸೊಸಿ ಎಂತಾ ಚೆಲುವಿ ಅಂತ ತಿಳೀತಿರಲಿಲ್ಲ. ಈಗ ನೋಡ್ತೀನಿ ದೂರದಿಂದ. ಏನೋ ಮುಖ ಗಂಟುಹಾಕಿಕೊಂಡಾಗ ಹೇಗೋ ಇರ್ತದೆ ಅನ್ನು. ಮಿಕ್ಕಾದ ಹಂಗೆ ಒಳ್ಳೆ ಚೆಲುವಿ. ಅದಕ್ಕೇ ನನ್ನ ಹೈದ ಮರುಳಾಗಿರೋದು." ಅವನ್ನೂ ಹಂಗೆ. ಆಗ ಏಸೊತ್ತಿಗೆ ಮನೆಗೆ ಬಂದ್ನು ಏಸೊತ್ತಿಗೆ ಹೊಲಕೆ ಹೋದ್ನು ನೋಡ್ತಿರಲಿಲ್ಲ. ಈಗ ನನ್ನ ಮನೆ ಬಾಗಿಲಾಗ ಕೂತು, ಇದ್ಯಾಕೆ ಇನ್ನೂ ಬರಲಿಲ್ಲ, ಇದ್ಯಾಕೆ ಇಷ್ಟುಬೇಗ ಹೊರಟುಬಿಟ್ಟ, ಅಂತ ನೋಡುತಾ ಇದೀನವ್ವ. ಅವಳಿಗೂ ಹಂಗೇ ಅಲ್ಲವೆ,

ಹೊಡೆದರೆ ನಾಳೆ ಬೆಳಗಾಗ ನಾನು ಮೊಸರು ಮಾರೋಕೆ ಹೊರಟಾಗ ನನ್ನ ಜೊತೆಗೆ ಬಂದುಬಿಡ್ತಾನೆ. ತಿಂಗಳು ದಿನ ಹೊತ್ತು ನೋವುಪಟ್ಟು ಹೆತ್ತ ಮಗನ್ನ ಬಿಟ್ಟುಕೊಟ್ಟಾಳ ತಾಯಿ?" ಇವಳ ಯೋಚನೆ ಎಷ್ಟು ದೂರ ಓಡುತ್ತದೆ ಎಂದು ನನಗೆ ಆಶ್ಚರ್ಯವಾಯಿತು. ಇಷ್ಟರಲ್ಲಿ ಇವರ ಜಗಳ ಸುಮುಖವಾಗಿ ಕೊನೆಗಾಣುತ್ತದೆಂದು ನನ್ನ ಮನಸ್ಸಿಗೆ ತೋರಿತು.

ಆದದ್ದೂ ಹೀಗೆಯೇ. ಎರಡುದಿನ ಹುಡುಗ ತಾಯಿಮನೆಗೆ ಹೋದವನು ಮೂರನೆಯ ದಿನ ಪಾಟೀ ಜೊತೆಗೆ ಬೆಂಗಳೂರಿಗೆ ಬರುತ್ತೇನೆಂದು ಹಠಮಾಡಿದ. ಮುದುಕಿ ಮೊಸರಿನ ಹೆಡಿಗೆ ತಲೇಮೇಲಿಟ್ಟುಕೊಂಡು ಮೊಮ್ಮಗನ್ನ ಕಂಕುಳಲ್ಲಿಟ್ಟುಕೊಂಡು ಮೂರುಮೈಲಿ ಬರೋದು ನಿಜವಾದ ಮಾತೆ? ಏನು ಮಾಡೋದೆಂದು ಅವಳಿಗೆ ತೋರಲಿಲ್ಲ. ಮಗನೂ ಸೊಸೆಯೂ ಕೂಡ ಬಂದು "ಏನೋ ಅತವಾ ನಾವು ತಪ್ಪು ಮಾಡಿದಿವಿ, ನೀನು ಕೋಪಿಸಿಕೊಂಡ್ರೆ ಹ್ಯಾಗವ್ವ" ಎಂದರು. ಊರಿನ ಜನವೂ ನಾಲ್ಕು ಜನ ಬಂದು ಇವಳಿಗೆ ಸಮಾಧಾನ ಹೇಳಿದರು. ದೊಡ್ಡಸ್ತಿಕೆ ಕಳಕೊಳ್ಳದ ಹಾಗೆ ಮಂಗಮ್ಮ ತನ್ನಿಷ್ಟದಂತೆ ಸೊಸೆಯ ಜೊತೆಗೆ ಸೇರಿಕೊಂಡಳು. ಆದರೆ ಈ ಮೊಮ್ಮಗ ಅಜ್ಜಿಯ ಜೊತೆಗೆ ಇರಬೇಕು ಅಂತ ಅನ್ನೋದನ್ನ ಹಠಮಾಡಿಬಿಟ್ಟ. ಅದರಮೇಲೆ ಹೊಸ ಒಂದು ಏರ್ಪಾಡಾಯಿತು. ಮೊದಲಿಂದಲೂ ಹಾಲು ಮೊಸರಿನ ವ್ಯಾಪಾರ ಮಂಗಮ್ಮನ ಕೈಯಲ್ಲಿತ್ತು. ಸೊಸೆ ಬಂದಮೇಲೆ ಕೂಡ ಮಂಗಮ್ಮ ಈ ಕೆಲಸ ತನ್ನ ಕೈಲೇ ಇಟ್ಟುಕೊಂಡಿದ್ದಳು. ಹೆಸರಿಗೆ, ಮನೆ ಸೊಸೆ ಅಂದಮೇಲೆ ಹಿಟ್ಟು ಸಟ್ಟುಗ ನಿನ್ನದು ಅಂತ ಕಾರಣ. ನಿಜವಾಗಿ, ಮೊಸರು ಮಾರಿದರೆ ಕೈಲಿಷ್ಟು ಕಾಸು ಓಡಾಡುತ್ತದೆ ಅನ್ನುವುದು. ಈಗ ಈ ಮೊಮ್ಮಗನಾದೋನು ಅಜ್ಜೀ ಜೊತೆಗೆ ಇರಬೇಕು ಅಂತ ಯಾವಾಗ ಹಠ ಮಾಡಿದ, ಸೊಸೆ "ಏನು ಬಿಸಿಲಲ್ಲಿ ಸುಮ್ಮನೆ ಹೋಗೋದು ಬರೋದು, ವಯಸ್ಸಾದಮೇಲೆ ಎಷ್ಟು ದಿನ ಈ ಕೆಲ್ಸ ಮಾಡೋಕಾಗತದೆ. ಹಿಟ್ಟು ಸಟ್ಟುಗ ನೋಡಿಕೊಂಡು ನೀನು ಯಜಮಾನ್ತಿ ಮನೇಲಿರು, ನಾನು ಹೋಗಿ ಮೊಸರು ಮಾರಿಕೊಂಡು ಬರ್ತೀನಿ" ಅಂದಳು. ಮಂಗಮ್ಮ "ಆಗಲಿ" ಅಂದಳು. "ಎಂದಾದರೂ ನಾನು ಹೋಗಿ ಬರ್ತೀನಿ, ದಿನಾ ನೀನು ಹೋಗು" ಎಂದು ಈ ಕೆಲಸವನ್ನು

ಸೊಸೆಗೆ ಒಪ್ಪಿಸಿದಳು. ಒಂದು ದಿನ ಅತ್ತೆ ಸೊಸೆ ಇಬ್ಬರೂ ಬಂದರು. ಒಬ್ಬಳ ಕೈಲಿ ಮಗು; ಇನ್ನೊಬ್ಬಳ ತಲೇಮೇಲೆ ಮೊಸರಿನ ಹೆಡಿಗೆ. "ಇವಳೇ ಕಾಣವ್ವ ನನ್ನ ಸೊಸಿ. ಪಾಪ ಮುದುಕಿ ಯಾಕೆ ಅವಳೇ ಬೇಸಿಕೊಳ್ಳಬೇಕು ಅಂತ ತಿರುಗಿ ಕರಕೊಂಡಾಳೆ ಮನೇ ಒಳಾಕ್ಕೆ. ಸುಮ್ಮನೆ ಬಿಸಿಲಾಗ ಓಡ್ಯಾಡಬೇಡ ಅಂದ್ಲು. ಆಗಲಿ ಅಂದಿದೀನಿ. ಇನ್ನುಮೇಲೆ ಅವಳೇ ಮೊಸರು ತರ್ತಾಳವ್ವ" ಅಂತ ಹೇಳಿ," ಮಂಗಮ್ಮ ನಮ್ಮನ್ನು ಸೊಸೆಗೆ ಒಪ್ಪಿಸಿದಳು. ನಾನು ಅತ್ತೆಯನ್ನೂ ಸೊಸೆಯನ್ನೂ ಮಾತನಾಡಿಸಿ ಸಮಾಧಾನವಾಗಿ ನಡಕೋಬೇಕು ಎಂತ ಬುದ್ಧಿವಾದ ಹೇಳಿ, ಎರಡು ಎಲೆ ಅಡಿಕೆ ಕೊಟ್ಟು ಕಳುಹಿಸಿದೆ. ಈಚೆಗೆ ಆ ಸೊಸೆ ಮೊಸರು ತರುತ್ತಾ ಇದ್ದಾಳೆ.

ಅತ್ತೆಯ ಪರವಾಗಿ ಇಷ್ಟೆಲ್ಲಾ ಮಾತು ಆಯಿತಲ್ಲ. ಈ ಸೊಸೆಯ ಪರವಾಗಿ ಏನಿರಬಹುದು ಅಂತ ನಾನು ಒಂದು ದಿನ "ಎಲೆ ನಂಜಮ್ಮ, ನೀನು ಒಳ್ಳೆ ತಿಳಿದೋಳ ಹಂಗಿದ್ದೀಯಲ್ಲ, ಅತ್ತೇನ ಮನೇಬಿಟ್ಟು ಓಡಿಸಬಹುದೇನೆ" ಅಂದೆ. ನಂಜಮ್ಮ ಅದಕ್ಕೆ "ಅತ್ತೇನ ಓಡಿಸೋಕೆ ನಾನೇನು ರಾಚ್ಚಸೀನಾವ್ವ? ಅಲ್ರವ್ವಾ, ಅತ್ತೆಯಾದೋಳು ಯಾವ ಮಾತಿಗೂನೂ ನಾನೇ ಅಂದುಬಿಟ್ಟು ಆ ಮಗನಾದೋನ್ನ ಮನೆಗಂಡ್ಸು ಅಂತ ನೋಡ್ದೀರಾ ಅವ ಮುಟ್ಠಾಳ ಆಗಿಬಿಟ್ರೆ, ಅವ ಗಂಡನಾಗೋದೇನು, ನಾನು ಹೆಂಡ್ರಾಗೋದೇನು, ನಾನು ಸಂಸಾರ ಮಾಡೋದೇನು? ಏನೋ ಒಳ್ಳೆಯದಾಯಿತು, ಅತ್ತೆ ಹೆತ್ತಳು ಅತ್ತೆ ಸಾಕಿದಳು, ಗಂಡನ್ನ ಬೇಕಾದರೆ ಅವಳೇ ಸ್ವತಂತ್ರ ಅಂತ ಇಟ್ಟುಕೊಳ್ಳಲಿ ಅಂದೆ. ನನ್ನ ಮೊಗಾನ್ನ ನಾನು ಹೊಡೀಕೂಡ್ದು ಅಂತ ಮಾಡಿಬಿಟ್ರೆ ಅತ್ತೆ, ಇದು ಯಾತರ ಸೊಸೀತನ ಅವ್ವಾ" ಎಂದಳು. "ಮಗ ನಿನ್ನೋನು ಅನ್ನೋದಕ್ಕೆ ಅವನ್ನ ಹೊಡೆಯೋದೆ ಗುರ್ತೇನೆ?" "ಹೊಡೆಯೋದೊ ಆಡಿಸೋದೊ, ಹೊಡೆದಾಗ ಯಾಕೆ ಹೊಡಿತೀಯ ಅನ್ನೋರು ಆಡಿಸಿದಾಗ ಯಾಕೆ ಆಡಿಸುತೀಯಾ ಅನಬಹುದು. ಇದ್ಕೆಲ್ಲ ಯಾರವ್ವ ಯುವಹರಣೆ ಹೇಳೋದು. ನನ್ನ ಮಗ್ನು ಅಂದ್ರೆ ನನ್ನ ಮಗ್ನು. ನನ್ನ ಗಂಡ್ನು ಅಂದ್ರೆ ನನ್ನ ಗಂಡ್ನು. ಸೊಸಿ ಅಂತ ಬಂದೋಳು ಒಂದು ಮಾತು ಅಂದ್ರೆ ಅನಿ ಒಂದು ಏಟು ಹೊಡ್ದರೆ ಹೊಡೀಲಿ ಅಂತ ಅನ್ನಿದ್ದೀರಾ ಇದ್ರೆ ನಾನು ಸಂಸಾರ ಮಾಡೋದು ಯಾಕೆ?" ನನಗೆ ಮಂಗಮ್ಮ

ಮಾತನಾಡಿದಾಗ ಆ ಮಾತು ಸರಿ ಎಂದು ತೋರಿದಹಾಗೆ ಇವಳು ಮಾತ ನಾಡಿದಾಗ ಇದೂ ಸರಿ ಅಂತ ತೋರಿತು." "ಹಾಗಾದರೆ, ಈಗ ನಿನಗೆ ಮನೇಲಿ ಸ್ವಲ್ಪ ಸ್ವತಂತ್ರ ಬಂತೋ?" "ಈಗ ಮೊದಲಿಗನ್ನಾ ಮೇಲು ತಾಯಿ. ಹೆಂಗಾದರೂ ಸರಿಸಿಕೊಂಡು ಹೋಗ್ಬೇಕು. ಸರಿಸಿಕೊಳ್ದೀರಾ ಜಗಳ ಮಾಡಿದ್ರೆ ನಮ್ಮತ್ತೇ ಕಾಸನ್ನೆಲ್ಲ ಇನ್ಯಾರಾದರೂ ಬಾಯಿಗೆ ಹಾಕ್ಕೋತಾರೆ." ನಮ್ಮೂರಾಗ ರಂಗಪ್ಪ ಅಂತ ಇದ್ದಾನೆ. ನಮ್ಮ ಅತ್ತೆ ಬೇರೆ ಇದ್ದಾಗ ಅವನು ಅವಳ್ನ ಸಾಲ ಕೇಳಿದ್ನಂತೆ. ಇವಳು ಕೊಡ್ತೀನಿ ಅಂದಳಂತೆ. ಅದ್ನ ಅವ ಹೇಳಿದ. ಆದರಮೇಲೆ ನಾನು ಮೊಗಾನ್ನ ಕರೆದು ಎಲೋ 'ನೀನು ಪಾಟೀ ಹತ್ತಿರ ಹೋಗು. ಮಿಟಾಯಿ, ತಿಂಡಿ ಕೊಡ್ತಾಳೆ. ನಮ್ಮ ಮನ್ಯಾಕ್ಕೆ ಬರಬೇಡ, ತಿರಿಗಿ ನಾನೇ ಕರಿಯೋವರೆಗೆ ಇಲ್ಲಿ ಬರಕೂಡದು' ಅಂತ ಕಳ್ಸಿಕೊಟ್ಟೆ!" ಜಗಳ ಹೆಂಗಾದರೂ ತೀರಿದರೆ ಸಾಕು ಅಂತ ಇದೆಲ್ಲ ಸರಿಮಾಡಿದೆ ತಾಯಿ." "ಹಂಗಾದರೆ ಅಜ್ಜಿ ಹತ್ತಿರಕ್ಕೆ ಮಗು ತಾನೇ ಹೋಗಲಿಲ್ಲವೇ?" "ಮೊಗಾನೇ ಹೋಯ್ತು ತಾಯಿ, ನಾನು ಕಳ್ಸಿಕೊಟ್ಟೆ." "ಹೀಗೆ ಮಾಡ್ತೀನಿ ಎಂತ ನಿನ್ನ ಗಂಡನಿಗೆ ಹೇಳಿದೇನು?" "ಅಯ್ಯೊ ಇದ್ನೆಲ್ಲ ಹೇಳೋರುಂಟೆ ಅವ್ವ. ಗಂಡಸರಿಗಿದೇನು ತಿಳೀತದೆ."

ಮಂಗಮ್ಮನಿಗಿಂತ ನಂಜಮ್ಮ ಬುದ್ಧಿಯಲ್ಲೇನೂ ಕಡಮೆ ಇಲ್ಲ. ಆ ಮನೆಯಲ್ಲಿ ಈಗ ಅತ್ತೆಗೆ ಸೊಸೆಗೆ ಸ್ವಾತಂತ್ರ್ಯದ ಸ್ಪರ್ಧೆ ನಡೆಯುತ್ತಿದೆ. ಅದರ ಮೂರ್ತಸ್ವರೂಪ ಆ ತಾಯಿ ಮಗ ಈ ಹೆಂಡತಿಯ ಗಂಡ. ಅವನನ್ನು ಬಿಟ್ಟುಕೊಡಕೂಡದೆಂದು ತಾಯ ಮನೋಗತ. ಅವನನ್ನು ಹಿಡಿಯಲೇ ಬೇಕೆಂದು ಈ ಸೊಸೆಯ ವ್ರತ. ಇದು ಎಲ್ಲಾ ಕಡೆಯಲ್ಲಿಯೂ ನಡೆಯುತ್ತಿರುವ ವ್ಯಾಪಾರ. ಇದರ ಗೆಲು ಸೋಲು ಹೀಗೆಯೇ ಎಂದು ಹೇಳುವಂತಿಲ್ಲ. ನೀರೊಳಗಿರುತ್ತ ಮಗುವಿನ ಕಾಲು ಹಿಡಿದಿರುವ ಮೊಸಳೆಯ ಹಾಗೆ ಸೊಸೆ. ಮೇಲೆ ನಿಂತು ಮಗುವಿನ ತೋಳನ್ನು ಹಿಡಿದುಕೊಂಡು ಅದನ್ನು ಉಳಿಸುತ್ತೇನೆ ಎನ್ನುವವಳು ತಾಯಿ. ಮಧ್ಯೆ ಆ ಮಗುವಿನ ಪಾಡು ತಾನೇ ಸ್ವಲ್ಪ ಕಷ್ಟ. ಹಳ್ಳಿಯಲ್ಲಾದರೆ ಮೊಸರು ಮಾರುವ ಮಂಗಮ್ಮನ ಮನೇಲಿ, ಪಟ್ಟಣದಲ್ಲಿ ಮೊಸರು ಕೊಳ್ಳುವ ತಂಗಮ್ಮನ ಮನೇಲಿ: ನಡೆಯುತ್ತಾ ಇದೆ ಈ ವ್ಯಾಪಾರ; ಕೊನೆಯ ಅಂಕ ಕಾಣದ ನಾಟಕ.

# ಸುಬೇದಾರರಿಗೆ ಪ್ಯಾದೇಮಾತು

## ೧

ಈಗ ಕೆಲವು ದಿವಸಗಳ ಹಿಂದೆ ನಾನು ಕೆಲಸದಿಂದ ವಿಶ್ರಾಂತನಾದ ಮೇಲೆ ನನ್ನ ಸ್ವಂತ ಕೆಲಸದಮೇಲೆ....ಪುರಕ್ಕೆ ಹೋಗಿದ್ದೆ. ಈ ಕತೆಯಲ್ಲಿ ಬರುವ ಜನರನ್ನು ಹುಡುಕಿಸುವುದಕ್ಕೆ ಅವಕಾಶವಿಲ್ಲದಿರಲೆಂದು ಊರ ಹೆಸರನ್ನು ಮರೆಸಿದೇನೆ. ನಾನು ಹಿಂದೆ ಆ ಡಿಸ್ಟ್ರಿಕ್ಟಿನಲ್ಲಿ ಕೆಲಸ ಮಾಡಿದ್ದೆ. ಈ ಸಲ ಹೋದಾಗ ಒಂದು ಸಂಜೆ ಬಂಗಲೆಯ ಬಳಿ ಶತಪಥ ಸುತ್ತುತ್ತಿದ್ದೆ. ಆಗ ಅಲ್ಲಿ ನಾನು ಹಿಂದೆ ನೋಡಿದ್ದ ಒಬ್ಬ ಮನುಷ್ಯ ಬಂದರು. ಆತನ ನಿಜವಾದ ಹೆಸರನ್ನು ನಾನು ಹೇಳುವುದಿಲ್ಲ. ಅದು ರಾಮಣ್ಣ ಎಂದು ಇಟ್ಟುಕೊಳ್ಳಿ. ನಾನು ಹಿಂದೆ ಈ ಡಿಸ್ಟ್ರಿಕ್ಟಿನಲ್ಲಿದ್ದಾಗ ಈ ರಾಮಣ್ಣನವರ ಒಂದು ವ್ಯವಹಾರ ನನ್ನ ಗಮನಕ್ಕೆ ಬಂದಿತ್ತು. ರಾಮಣ್ಣ ಬಹು ನಾರು ಮನುಷ್ಯ; ಕೊಂಚಕ್ಕೆ ಸೋತೆನೆಂದು ಒಪ್ಪುವವರಲ್ಲ. ಆ ವ್ಯವಹಾರ ಅದು ಎಷ್ಟು ಕೋರ್ಟಿಗೆ ಹೋಯಿತೋ ಎಲ್ಲೆಲ್ಲಿ ಏನೇನಾಯಿತೊ ರಾಮಣ್ಣ ಒಬ್ಬರಿಗೆ ಹೊರತು ಇನ್ನು ಯಾವ ಮನುಷ್ಯನಿಗೂ ಸಂಪೂರ್ಣವಾಗಿ ಗೊತ್ತಿಲ್ಲ. ನಾನು ಶತಪಥ ನಡೆಯುವ ಕಡೆ ರಾಮಣ್ಣ ಬಂದಾಗ ನಾನು ಆ ಕಡೆ ನೋಡಿದೆ. ರಾಮಣ್ಣ, ನಮಸ್ಕಾರ ಮಹಾಸ್ವಾಮಿ, ಎಂದರು. ನಾನು, ರಾಮಣ್ಣನವರಲ್ಲವೇನ್ರಿ, ಎಂದೆ. ಅವರು, ಹೌದು ಮಹಾಸ್ವಾಮಿ, ಎಂದರು. ನಾನು, ನನ್ನ ಜ್ಞಾಪಕ ಇದೆಯೇನ್ರಿ ನಿಮಗೆ, ಎಂದು ಕೇಳಿದೆ. ರಾಮಣ್ಣ, ಅಯ್ಯೋ ಮಹಾಸ್ವಾಮಿ ತಮ್ಮ ಜ್ಞಾಪಕ ಇಲ್ಲದ ಹಾಗೆ ನನಗೆ ಬಂದ ಪದವಿ ಏನು, ಎಂದರು. ನಾನು ಯಾರು ಹೇಳಿ ಯಾವಾಗ ನೋಡಿದ್ದೀರಿ, ಎಂದು ನಾನು ಕೇಳಿದೆ. ರಾಮಣ್ಣ, ಇದೇನು ಮಹಾಸ್ವಾಮಿ ತಾವೂನೂ ನಮ್ಮ ಡಿಸ್ಟ್ರಿಕ್ಟಿನಲ್ಲಿ ಫಾರ್ ಡೆಪ್ಯುಟಿ ಕಮಿಷನರ್ ಆಗಿದ್ದರಲ್ಲ ನಮ್ಮ ಆ ಅಯ್ಯಂಗಾರ್ರು, ಅವರೂ ನನ್ನ ಜಮೀನು ನೋಡೋಕೆ ಬಂದಿರಲ್ಲವೆ? ಎಂದರು. ನಾನು, ಹೌದು ಎಂದು ಹೇಳಿ, ನಿಮ್ಮದೊಂದು ವ್ಯವಹಾರವಿತ್ತಲ್ಲ ಅದು ಏನಾಯಿತು, ಎಂದೆ. ರಾಮಣ್ಣನವರು "ಅಯ್ಯೋ ಮಹಾಸ್ವಾಮಿ ಅದರ ಮಾತು

ಏನು ಹೇಳುವುದು. ಸುಬೇದಾರರು ಒಂದು ರೀತಿ ಮಾಡಿದರು. ಸಬ್-ಡಿವಿಜನ್‌ರು ಇನ್ನೊಂದು ರೀತಿ ಮಾಡಿದರು. ಡೆಪ್ಯುಟಿ ಕಮಿಷನ್‌ರು ಅದೇ ಸರಿ ಎಂದರು. ರೆವಿನ್ಯೂ ಕಮಿಷನ್‌ರು ಅದಕ್ಕೇನೊ ಒಂದು ಕೊಕ್ಕೆ ಇಟ್ಟರು. ಸರ್ಕಾರಕ್ಕೆ ಹೋದರೆ ಅಲ್ಲಿ ಅವರು ಪಾಯಿಂಟಾ ಪ್ಯಾಗಟ್ಟಿಗೆ ನಾವು ಅಪ್ಪೀಲು ಹಿಡಿಯುವುದಿಲ್ಲ" ಎಂದರು. ರಾಮಣ್ಣನವರ ಮಾತು ನನಗೆ ಅರ್ಥವಾಗಲಿಲ್ಲ. "ಏನ್ರಿ ಅದು ಪಾಯಿಂಟಾ ಪ್ಯಾಗಟ್" ಎಂದೆ. "ಪಾಯಿಂಟಾ ಪ್ಯಾಗಟ್ ಅಂದ್ರೆ ಮಹಾಸ್ವಾಮಿ ವಿದ್ಯಮಾನದ ಪಾಯಿಂಟು ಪಾಯಿಂಟಾ ಲಾ ಅನ್ನೋದು ಇನ್ನೊಂದು ತರಹಾ ಪಾಯಿಂಟು. ಪಾಯಿಂಟಾ ಪ್ಯಾಗಟ್ಟು ಹಿಡಿಯೋಲ್ಲ ಅಂದರೋ ಇಲ್ಲವೋ, ನಾನು ಸರ್ಕಾರಕ್ಕೆ 'ಸರೀ ಮಹಾಸ್ವಾಮಿಗಳೆ, ವಿದ್ಯಮಾನದ ಪಾಯಿಂಟೇ ತಲಕೆಳಗಾಗಿರುವುದು. ನಮ್ಮ ಸುಬೇದಾರರು ಅದರಲ್ಲೇ ನನಗೆ ಅನ್ಯಾಯ ಮಾಡಿದರು. ಅದನ್ನೇ ಸರಿಮಾಡೋಲ್ಲ ಎಂದರೆ ನನಗೆ ಏನು ಗತಿ' ಅಂತ ಗಟ್ಟಿಯಾಗಿ ಕೂಗಿ ಹೇಳಿದೆ ಮಹಾಸ್ವಾಮಿ. ಮೆಲ್ಲಗೆ ಹೇಳಿದ್ರೆ ಅಪೀಲು ಹಿಡೀತಿರಲಿಲ್ಲ ಅಂತ ಕಾಣುತ್ತೆ; ಕೂಗಿಕೊಂಡೆನೋ ಇಲ್ಲವೋ ಹಿಡಿಯಿತು. ಕೊನೆಗೆ ಏನೋ ನನ್ನ ಕಡೆಗೇ ಫೈಸಲಾಯಿತು" ಎಂದರು. ನಾನು, "ಹೋಗಲಿ, ಕೊನೆಗೆ ನಿಮ್ಮ ಹಾಗಾಯಿತಲ್ಲ. ಈಗ ಎಲ್ಲಿ ಆ ಸುಬೇದಾರರು" ಎಂದೆ. ರಾಮಣ್ಣ "ಎತ್ತ ಹೋದರೋ! ಪಿಂಚನ್ ಆಗಿ ಎಲ್ಲೋ ಇರಬೇಕು ಅಂತ ಕಾಣುತ್ತೆ. ಆದರೆ, ಮಹಾಸ್ವಾಮಿ, ಇಲ್ಲಿರಬೇಕಾದರೇನೆ ಪೂರಾ ಫಜೀತಿಗೆ ಸಿಕ್ಕಿಕೊಂಡರು ಮಹಾಸ್ವಾಮಿ, ಅವರು. ಅದೇ ಒಂದು ಕಥೆ" ಎಂದರು. ನಾನು, ಏನು ಕಥೆ, ಎಂದೆ. ಅವರು ನಾಲ್ಕೈದು ವಿಷಯವನ್ನು ಹೇಳಿದರು. ಅದರಲ್ಲಿ ಒಂದನ್ನು ಕುರಿತು ಅವರು, ಸುಬೇದಾರ್‍ರಿಗೆ ಪ್ಯಾದೇ ಮಾತಾಗಿ ಹೋಯಿತು ಮಹಾಸ್ವಾಮಿ, ಎಂದರು. ಈ ಸುಬೇದಾರರ ಪ್ಯಾದೇ ಮಾತಿನ ಕಥೆಯನ್ನು ಸುಮಾರು ರಾಮಣ್ಣ ಹೇಳಿದಂತೆ ಇಲ್ಲಿ ಹೇಳುತ್ತೇನೆ.

೨

ಆ ಸುಬೇದಾರ್‍ರು ಮಹಾಸ್ವಾಮಿ ಸ್ವಲ್ಪ ಪೂರ್ವದ ತರಹ. ನಿಮಗೂ ತಿಳಿದಿತ್ತಲ್ಲ ನನ್ನ ಕೇಸಿನಲ್ಲಿ ಇನ್ನೊಂದು ಕಡೆಯಿಂದ ಸ್ವಲ್ಪ ಸಂಭಾವನೆ

ತಕೊಂಡು ಏನೇನೋ ಬರದು ಹಾಕಿದ್ದು. ಅವರಿಗೆ ಹೆಂಗಸರು ಅಂದರೂ ಸ್ವಲ್ಪ ಕಣ್ಣೆ. ಇಂಥಾದ್ದೆಲ್ಲ ಏನು ಮಹಾಸ್ವಾಮಿ ಜನಕ್ಕೆ ತಿಳಿಯೋದೆ ತಡ; ಪಟಿಂಗರು ಕರಟಕ ದಮನಕರ ಹಾಗೆ ಹತ್ತಿರ ಸೇರುತಾರೆ. ಒಂದೆರಡು ವರುಷ ಹೀಗೆ ನಡೆಯಿತು ಎನ್ನಿ. ಇದರಲ್ಲಿ ಅವರಿಗೆ ಸಹಾಯ ಒಬ್ಬ ಅಡಿಗೆ ಯುವನು ಸೇರಿದ. ಅವರು ಎಲ್ಲಿ ಹೋದರೂ ಅವರ ಜತೆಗೆ ಇರುತಾಯಿದ್ದ ಮಹಾಸ್ವಾಮಿ, ನಿಮಗೆ ಜ್ಞಾಪಕ ಇರಬಹುದು. ಇಂಥ ಕೆಲಸ ಮಾಡುವವರಿಗೆ ಇಂಥ ಲಫಂಗರು ಸಿಕ್ಕಿದರೆ ಬಹಳ ಅನುಕೂಲ ಮಹಾಸ್ವಾಮಿ. ಈ ಪೋಲಿ ಇವರಿಗೆ ಸಿಕ್ಕಿದ್ದು ರಾಮದೇವರಿಗೆ ಹನುಮಂತ ಸಿಕ್ಕಿದಹಾಗೆ ಆಗಿಹೋಯಿತು.

ಈ ಸೇವಕನಿಗೆ ಹೆಂಡತಿ ಮಕ್ಕಳು ಇರಲಿಲ್ಲ. ಅವನು ಯಾವ ಊರಿನಿಂದ ಬಂದನೋ ಅದೂ ನನಗೆ ಗೊತ್ತಿಲ್ಲ. ಬಂದಾಗಲೇನೋ ಸುಮ್ಮನೆ ಅಡಿಗೆಯವನು ಅಂತ್ಲೆ ಬಂದ. ಸುಬೇದಾರ್ರಿಗೆ ಇದಕ್ಕೆ ಮೊದಲು ಸಿಕ್ಕಿದ್ದ ಅಡಿಗೆಯವರು ಕ್ಯಾಂಪಿನಲ್ಲಿ ಖರ್ಚಾಗದೆ ಇರುವಹಾಗೆ ನೋಡಿಕೊಳ್ಳುತಾ ಇದ್ದರು. ಅಲ್ಪಸ್ವಲ್ಪ ಏನಾದರೂ ಮನೆಗೆ ಬರೋದು. ಈ ಮನುಷ್ಯ ಏನು ಮಾಡಿದ, ಕ್ಯಾಂಪಿನಲ್ಲಿ ಬರುವ ಸಾಮಾನು ಕ್ಯಾಂಪಿನಲ್ಲಿ ಖರ್ಚಾಗಿ ಹೋದರೆ ಏನು ಪ್ರಯೋಜನ ಅಂತ ಅದರಲ್ಲಿ ಮೊದಲು ಮನೆಗೆ ಬೇಕಾದ ಸಾಮಾನುಗಳನ್ನು ಕಳುಹಿಸಿಕೊಟ್ಟುಬಿಟ್ಟು ಉಳಿದದ್ದನ್ನು ಕ್ಯಾಂಪಿನಲ್ಲಿ ಉಪಯೋಗಿಸುವುದಕ್ಕೆ ಮೊದಲುಮಾಡಿದ. ಇದು ಯಾರಿಗೆ ತೋರಬೇಕು? ಗ್ರಾಮದ ಗೌಡ ಶಾನುಭೋಗ ಸುಬೇದಾರರನ್ನು ಹಸಿದುಕೊಂಡಿರುವುದಕ್ಕೆ ಬಿಡೋಕಾಗುತ್ತೆಯೆ? ಇಷ್ಟಕ್ಕೆ ಸುಬೇದಾರ್ರಿಗೆ ಕೆಟ್ಟ ಹೆಸರಿಲ್ಲ. ಯಾಕೆ? ಕ್ಯಾಂಪಿನ ಸಾಮಾನು ಮನೆಗೆ ಕಳುಹಿಸಿದ್ದು ಅವರಲ್ಲ. ಎಲ್ಲ ಅಡಿಗೆಯವನ ತಪ್ಪು. ಇನ್ನು ಅಂಥ ಕಷ್ಟವಾದರೆ, ಮಹಾಸ್ವಾಮಿ ನಿಮ್ಮ ಅಡಿಗೆಯವನು ಹೀಗೆ ಮಾಡುತಾ ಇದಾನೆ, ಅಂತ ಅವರ ಹತ್ತಿರಹೋಗಿ ಹೇಳಬೇಕು. ಇದೇನು ದೊಡ್ಡ ವಿಚಾರ? ಇಷ್ಟಕ್ಕೆ ಶಾನುಭೋಗರಿಗೆ ಪಟೇಲರಿಗೆ ಏನು ಖರ್ಚು? ಗ್ರಾಮದ ಚಂದಾ ಹಣದಲ್ಲಿ ಎಲ್ಲಾ ಹೋಗುತ್ತೆ. ಶಾನುಭೋಗರ ಕತೆ ಕೇಳಿದ್ದೀರಲ್ಲಾ ಸ್ವಾಮಿ....'' ''ಯಾವ ಕತೆ?'' ''ಜಮಾಬಂದಿ ಜುಲ್ಮಾನೆ ಕತೆ ಮಹಾಸ್ವಾಮಿ.'' ''ಏನಾಯ್ತು ಹೇಳಿ.'' ''ಯಾವುದೋ ಜಮಾಬಂದೀಲಿ ಮಹಾಸ್ವಾಮಿ, ಡೆಪ್ಯುಟಿ ಕಮಿಷನರಿಗೆ ಶಾನುಭೋಗರ

ಮೇಲೆ ಬಹಳ ಕೋಪ ಬಂತಂತೆ. ನಿನಗೆ ಹತ್ತುರೂಪಾಯಿ ಜುಲ್ಮಾನೆ ಹಾಕಿದ್ದೇವೆ ಅಂದ್ರು. ಶ್ಯಾನುಭೋಗ ಆಗ ಸುಮ್ಮನಿದ್ದುಬಿಟ್ಟ. ಜಮಾಬಂದಿ ಮುಗಿದಮೇಲೆ ಸಾಹೇಬರ ಎದುರಿಗೆ ನಿಂತುಕೊಂಡು ಕೈಮುಗಿದ. ಏನಯ್ಯ ಅದು ಎಂದರು. 'ಮಹಾಸ್ವಾಮಿ, ತಾವು ನನಗೆ ಹತ್ತುರೂಪಾಯಿ ಜುಲ್ಮಾನೆ ಹಾಕಿರೋಣಾಗಿದೆ. ನಮ್ಮ ಗ್ರಾಮ ಬಡ ಗ್ರಾಮ, ಇಷ್ಟು ದೊಡ್ಡ ಜುಲ್ಮಾನೆ ತಡೆಯಲಾರದು' ಅಂದನಂತೆ. ಡೆಪ್ಯುಟಿ ಕಮಿಷನರು ಜುಲ್ಮಾನೆ ಹಾಕಿದರೆ ಶಾನುಭೋಗ ಕೊಡತಾನೆಯೆ? ಗ್ರಾಮದ ಜನ ಕೊಡತಾರೆ. ಸುಬೇದಾರ್ರ ಕ್ಯಾಂಪು ಖರ್ಚೂ ಅಷ್ಟೇ.

ಸರಿ, ಲಫಂಗ ತಮಗೆ ಉಳಿತಾಯ ಮಾಡಿದ್ದನ್ನ ಸುಬೇದಾರ್ರು ನೋಡಿದರು. ಅವರ ಸಂತೋಷಕ್ಕೆ ಪಾರವೇ ಇಲ್ಲ. ಮನೇಲಿ ಅಮ್ಮಾ ಅವರಿಗೂ ಬಹಳ ಸಂತೋಷ. ಈಗ ಬಂದಿರುವವನು ಮನೇ ಅಡಿಗೆಯವನೇ ಮನೇದೇವರೇ ಅಂತ ಅನ್ನೋ ಹಾಗಾಯಿತು ಸುಬೇದಾರ್ರಿಗೆ ಅಮ್ಮಾ ಅವರಿಗೆ. ವ್ಯವಹಾರ ಯಾವುದು ಬಂದರೂ ಕೂಡ ಈ ಅಚ್ಚನ್ನ ಭಕ್ತನೇ ಎರಡೂ ಕಡೆಯವರ ಸಂಗಡ ಮಾತನಾಡಿ ಯಾವಕಡೆ ಪ್ರಯೋಜನ ಹೆಚ್ಚು ಅನ್ನೋದನ್ನು ನೋಡಿಕೊಂಡು ಯಜಮಾನ್ರಿಗೆ ತಿಳಿಸತಾ ಇದ್ದ. ಅವರು ಒಪ್ಪಿಕೊಂಡಮೇಲೆ ಹಣವೂ ಅವನ ಮುಖಾಂತರವೇ ಬಂದುಬಿಡೋದು. ಸುಬೇದಾರ್ರ ಸೇವಿಂಗ್ಸ್ ಲೆಕ್ಕದಲ್ಲಿ ದುಡ್ಡು ಸೇರತಾ ಬಂತು. ಅಡಿಗೆಯವನೂ ಸ್ವಲ್ಪ ದುಡ್ಡು ಮಾಡಿದ ಮಹಾಸ್ವಾಮಿ. ಅವನು ಸೇವಿಂಗ್ಸ್‌ನಲ್ಲಿಟ್ಟನೋ ಇಲ್ಲವೋ ನನಗೆ ಗೊತ್ತಿಲ್ಲ. ಅಂದರೆ ಅವನು ನೋಡಿ ಸ್ವಾಮಿ, ಆ ಕಾಲಕ್ಕೇನೆ ಕೈಗೆ ಬಂಗಾರದ ಸರಿಗೆ ರಿಸ್ಟ್‌ವಾಚ್ ಹಾಕಿಕೊಂಡಿದ್ದ. ಸುಬೇದಾರ್ರ ಕೈ ರಿಸ್ಟ್ ವಾಚ್‌ಗೆ ಕೂಡ ಬಂಗಾರದ ಸರಿಗೆ ಇಲ್ಲ. ಇವನು ಮಡಿ ಕೆಲಸ ಮಾಡೋನಾದ್ದರಿಂದ ತೊಗಲಿನ ಪಟ್ಟಿ ಹಾಕ್ಕೊಳ್ಳೋದಕ್ಕೆ ಆಗೋದಿಲ್ಲವಲ್ಲ. ಅದಕ್ಕೋಸ್ಕರ ಬಂಗಾರದ ಸರಿಗೆ ಮಾಡಿಸಿಕೊಂಡು ವಾಚ್‌ಗೆ ಹಾಕಿಕೊಂಡಿರೋನು. ಅಡಿಗೆ ಮಾಡೋನಿಗೆ ವಾಚ್ ಯಾಕಪ್ಪ ಎಂದ್ರೆ ಪುಣ್ಯವಂತ ಎಂದು ಪ್ರಪಂಚಕ್ಕೆಲ್ಲ ತಿಳಿಯೋದಕ್ಕೆ. ಸುಬೇದಾರ್ರಿಗೆ ಇತರ ಸರಪರಾಯಿ ಮಾಡೋದಕ್ಕೂಡ ಇವನೇ ಸಹಾಯವಾದ. ಈ ಸುಬೇದಾರ್ರು ಈ ಲಫಂಗ ಹತ್ತಿರ ಸೇರೋದಕ್ಕೆ

ಮೊದಲು ಈ ಕೆಲ್ಸ ಮಾಡಿರಲಿಲ್ಲ ಎಂತ ಕಾಣುತ್ತೆ. ಇವನಿಂದ ದಾರಿ ಕೆಟ್ರು. ಇದರ ಜವಾಬ್ದಾರಿ ಎಲ್ಲ ಸೇವಕನದು; ಸುಖ ಎಲ್ಲ ಸುಬೇದಾರ್ರದು. ಅವರು ಯಾಕೆ ಬೇಡ ಅನ್ನಬೇಕು? ಕೊಂಚದಿನ ಹೋದ ಮೇಲೆ ಇವನು ಶಬರೀ ಸೇವೆ ಆರಂಭಿಸಿಬಿಟ್ಟ ಮಹಾಸ್ವಾಮಿ. ಶಬರೀ ಸೇವೆ ಅಂದರೆ ಅರ್ಥವಾಗಲಿಲ್ಲವೇನೊ? ಶಬರಿ ಮಾಡಿದ್ದು ಕೇಳಿಲ್ಲವೆ. ಹಣ್ಣು ಚೆನ್ನಾಗಿದೆಯೋ ಇಲ್ಲವೋ ಅಂತ ರುಚಿನೋಡಿ ದೇವರಿಗೆ ಕೊಟ್ಲಂತೆ ಸ್ವಾಮಿ. ನಮ್ಮ ಲಫಂಗ ಸುಬೇದಾರ್ರಿಗೆ ಸುಖವನ್ನು ಒದಗಿಸಬೇಕಾದರೆ ಹೀಗೇ ಮಾಡಿದ. ಪಾಪ ಅವರು ಏನು ಮಾಡೋಹಾಗಿದ್ದಾರೆ? ಅಥವಾ ಅವರಿಗೆ ಇವನ ಆಟ ಎಲ್ಲ ಹ್ಯಾಗೆ ತಿಳಿಯಬೇಕು? ಹೀಗಾಗಿ ತಾಲ್ಲೂಕಿನಲ್ಲಿ ಎಲ್ಲಾದಕ್ಕೂ ಅಧಿಕಾರಿ ಸುಬೇದಾರ್ರು ಹೇಗೋ ಹಾಗೆ ಸುಬೇದಾರ್ರಿಗೆ ಅಧಿಕಾರಿ ಅಡಿಗೆಯವ ಅಂತ ಆಗಿಹೋಯಿತು, ಮಹಾಸ್ವಾಮಿ. ಇದು ಏನು ಹೇಳ್ತೀರಿ!

ಹೀಗಿರಬೇಕಾದರೆ ಇವ ಎಲ್ಲೋ ಅಲ್ಲಿ ಇಲ್ಲಿ ಹೋಗಿ ಇವನಿಗೆ ಒಂದು ಕೆಟ್ಟರೋಗ ಬಂತು. ಸೇವಕ ಮಲಗಿದ. ಸುಬೇದಾರ್ರ ಮನೇಲಿ ಸಂಸಾರ ಅಷ್ಟೇನೂ ದೊಡ್ಡದಲ್ಲ. ಆಯಿತು ನಾಲ್ಕು ದಿನ ಅಲ್ಲವೆ ಅಂತ ಸುಬೇದಾರ್ರ ಹೆಂಡತಿ ತಾವೇ ಅಡಿಗೆ ಮಾಡಿದರು; ಈ ಸೇವಕನಿಗೆ ಸೇವೆ ಮಾಡಿದರು. ಭೂಪ ನೋಡಿ ಮಹಾಸ್ವಾಮಿ, ಏನಾದರೂ ಸಂಕೋಚ ಪಟ್ಟಿರಬೇಕಲ್ಲ! ಮನೆ ಯಜಮಾನನ ಹಾಗೆ ಸೇವೆ ಮಾಡಿಸಿಕೊಂಡ. ಮನೆ ಜವಾನ್ರೆಲ್ಲ ಹೇಳಿದರು ಸ್ವಾಮಿ. ರೋಗ ವಾಸಿಯಾಯಿತು. ಇವನು ಎದ್ದು ಅಡಿಗೆ ಮಾಡಬಹುದಾಗಿತ್ತು; ಆದರೆ ಏಳಲಿಲ್ಲ. ಅಮ್ಮಾವರು "ಇನ್ನು ನೀನೇ ನೋಡಿಕೋತೀಯಾಪ್ಪ ಅಡಿಗೇನಾ" ಅಂತ ಒಂದು ದಿನ ಕೇಳಿದರೆ "ಏನಮ್ಮ ಇಂಥಾ ಅವಸರಪಡ್ತೀರಿ. ವರ್ಷದ ದಿನ ನಾನು ದುಡಿಯಲಿಲ್ಲವೆ. ಒಂದು ಹತ್ತುದಿನ ನನ್ನ ಕೂರಿಸಿ ಅನ್ನ ಹಾಕಿದರೆ ಪಾಪ ಬರುತ್ತೆಯೆ?" ಎಂತ ಕೇಳಿದನಂತೆ. ಈ ವೇಳೆಗೇನೆ ಸುಬೇದಾರ್ರಿಗೆ ಸ್ವಲ್ಪ ಬುದ್ಧಿ ಬಂದಿತ್ತು ಅಂತ ಕಾಣುತ್ತೆ. ಆದರೆ ಇವನ್ನ ಬಿಟ್ಟು ಕಳುಹಿಸೋದಕ್ಕೆ ಇಷ್ಟ ಇಲ್ಲ. ಕೆಲವು ದಿನದ ಮೇಲೆ ತಿರುಗಿ ಮನೆ ಕೆಲಸ ಪ್ರಯಾಣದ ಕೆಲಸ ಇವನೇ ಮತ್ತು ಆರಂಭಿಸಿದ.

ಹೀಗೆ ಇರುತ್ತಿರಬೇಕಾದರೆ ಈ ಲಫಂಗ ಊರಿನಲ್ಲಿ ಒಬ್ಬ ಸೂಳೆ ಮನೆಗೆ ಹೋಗಿ ಬರುವುದಕ್ಕೆ ಮೊದಲುಮಾಡಿದ. ಆ ಸೂಳೆ ಹತ್ತಿರ ಆ ಊರಿನ ಒಬ್ಬ ಸಾಹುಕಾರ ಹೋಗುತಾ ಇದ್ದ. ಅವಳು ಆ ಸಾಹುಕಾರನ್ನ ಇರು ಅನ್ನೋದೆ, ಈ ಅಡಿಗೆಯವನನ್ನ ಇರು ಅನ್ನೋದೆ ಎಂತ ಸ್ವಲ್ಪ ದಿನ ನೋಡಿದಳು. ಆಮೇಲೆ ಇವನನ್ನೆ ಇರು ಎಂತ ಹೇಳಿ ಸಾಹುಕಾರನ್ನ ಬೇಡ ಎಂದಳು. ಅವನು ವಯಸ್ಸಾದ ಮನುಷ್ಯ. ಇವನು ಪ್ರಾಯದವನು. ದುಡ್ಡು ಇವನದೇನು ಕಡಮೆಯಿಲ್ಲ. ಸಾಹುಕಾರನಿಗೆ ಇದರಿಂದ ಕೋಪಬಂತು. ಕೋಪದ ಹೊತ್ತಿನಲ್ಲಿ ಬುದ್ಧಿ ತಪ್ಪಿ ಅವನು ನಾಲ್ಕು ಜನ ಪುಂಡರನ್ನ ಕಳುಹಿಸಿ ಆ ಸೂಳೆಯ ಮನೆಯನ್ನು ನುಗ್ಗಿಸಿ ಅವಳನ್ನು ಹೊಡೆಸಿದ. ನಮ್ಮ ಲಫಂಗ ಅವಳಿಗೆ ಹೇಳಿ ಸುಬೇದಾರ್ರ ಕೋರ್ಟಿನಲ್ಲಿ ಫಿರ್ಯಾದು ಹಾಕಿಸಿದ. ಅದರಲ್ಲಿ ಸಾಹುಕಾರನೂ ಒಬ್ಬ ಅಪರಾಧಿ. ಸಾಹುಕಾರನಿಗೆ ಮೊದಲು ಏನು ಮಾಡುವುದು ಅಂತ ತೋಚಲಿಲ್ಲ. ಸುಬೇದಾರ್ರ ಅಡಿಗೆಯವನು ಈ ಜಗಳದಲ್ಲಿ ಸೇರಿದ್ದಾನೆ. ಸುಬೇದಾರ್ರು ಈ ಫಿರ್ಯಾದು ವಿಚಾರಣೆ ಮಾಡಬಾರದು ಅಂತ ಮೇಲಕ್ಕೆ ಬರೆದು ಫಿರ್ಯಾದನ್ನ ಬೇರೆ ಕೋರ್ಟಿಗೆ ಹಾಕಿಸಬೇಕು ಅಂತ ಒಂದು ಯೋಚನೆ ತೋರಿತು. ಆಮೇಲೆ "ನ್ಯಾಯ ಆದರೆ ತನಗೆ ಶಿಕ್ಷೆ ತಪ್ಪಿದ್ದಲ್ಲ. ಈ ಕೋರ್ಟಿನಲ್ಲಾದರೂ, ಇನ್ನೊಂದು ಕೋರ್ಟಿನಲ್ಲಾದರೂ ಅನ್ಯಾಯ ಆದರೇನೆ ತಾನು ಬದುಕಿಕೊಳ್ಳಬೇಕು. ಯಾವುದೋ ಕೋರ್ಟಿಗೆ ಹೋಗಿ ಇನ್ಯಾರೋ ಮ್ಯಾಜಿಸ್ಟ್ರೇಟರ ಹತ್ತಿರ ಸಿಕ್ಕಿಕೊಂಡು ಒದ್ದಾಡುವುದಕ್ಕಿಂತ ಇಲ್ಲಿಯೇ ಏನಾದರೂ ಮಾಡಿಕೊಂಡು ಬದುಕಿಕೊಳ್ಳಬೇಕು" ಅಂತ ಅವನಿಗೆ ತೋರಿತು. ಬೇರೆ ಕೋರ್ಟಿಗೆ ಹೋಯಿತು ಅನ್ನಿ. ಅಲ್ಲಿ ಯಾವ ಯುಧಿಷ್ಠಿರ ಬಂದು ನ್ಯಾಯಾನೇ ಮಾಡ್ತೇನೆ ಎಂದು ಕೂತಿರ್ತಾನೋ? ದುಡ್ಡು ತಕ್ಕೊ ಮಹರಾಯ ಅಂದ್ರೆ ಪೋಲಿಸನೋರ್ನ ಕರೆದರೆ ಏನು ಮಾಡೋದು? ಇಲ್ಲಿ ನಮ್ಮ ಸುಬೇದಾರ್ರು ನೋಟು ಅಂದ್ರೆ ಕೈಯಲ್ಲಿ ಮುಟ್ಟೋಕೆ ಆಶೆಪಡೋರು. ಅಲ್ಲದೆ, ಈ ತಂಟೆ ಆರಂಭಿಸಿದವನು ಅವರ ಅಡಿಗೆಯವನು. ಅವನಿಗೆ ಅವರು ಒಂದು ಮಾತು ಹೇಳಿದರೆ ಸೂಳೆ ಫಿರ್ಯಾದನ್ನ ವಾಪಸು ತೆಗೆದುಕೊಂಡ್ರೂ ತೆಗೆದುಕೊಳ್ಳಬಹುದು.

ಹೀಗೆಂದು ತೋರಿ ಅವನು ಸುಬೇದಾರ್ರ ಹತ್ತಿರಕ್ಕೆ ಯಾವುದೋ ಬೇರೆ ಕೆಲಸಕ್ಕೆ ಹೋದ ಹಾಗೆ ಒಂದು ದಿವಸ ಹೋಗಿ ಈ ಮಾತನ್ನ ಎತ್ತಿದ. ಸುಬೇದಾರ್ರು ಒಪ್ಪಿಕೊಂಡ್ರು. ಅಡಿಗೆಯವನನ್ನ ಕರೆದರು. ಏನೋ ಇದು, ಊರಿನ ಸೂಳೇರ ಜಗಳಕ್ಕೆಲ್ಲ ಹೋಗ್ತೀಯಂತೆ, ಎಂದು ಕೇಳಿದರು. ಅವರು ಇಷ್ಟು ಖಂಡಿತವಾಗಿ ಕೇಳಬಾರದಾಗಿತ್ತು. ಅಡಿಗೆಯವ ಪ್ರತಿಯಾಗಿ, "ಯಾರು ಸ್ವಾಮಿ ಸೂಳೇ ಜಗಳಕ್ಕೆ ಹೋದೋರು, ಸಂಸಾರಿ ಹೆಂಗಸು ಎಷ್ಟು ಸತ್ಯವಂತಳೋ ಈ ಸೂಳೇ ಅನ್ನೋ ಹೆಂಗ್ಸೂ ಅಷ್ಟು ಸತ್ಯವಂತಳು. ಈ ಸಾಹುಕಾರನ ಮೇಲೆ ಇಷ್ಟವಿದ್ದಾಗ ಅವನ್ನ ಮನೆಗೆ ಬಿಡತಾ ಇದ್ದಳು. ಈಗ ನನ್ನನ್ನ ಬಿಡ್ತಾ ಇದ್ದಾಳೆ. ಇನ್ನೊಬ್ಬನ್ನ ಬಿಡೋದಿಲ್ಲ ಅಂತಾಳೆ. ಮದುವೆಯಾದ ಹೆಂಡ್ತೀರೆಲ್ಲ ಇಷ್ಟುಮಟ್ಟಿಗೆ ಇದ್ದರೆ ಬಹಳಾ ಆಯಿತು" ಎಂದ. ಸುಬೇದಾರ್ರಿಗೆ ಏನು ಹೇಳುವುದು ತೋಚಲಿಲ್ಲ; ಸುಮ್ಮನಾದರು. ಇವನನ್ನ ಆಮೇಲೆ ಒಪ್ಪಿಸುವುದೆಂದು ಆ ಮಾತನ್ನು ಆಗ ಅಲ್ಲಿಗೇ ನಿಲ್ಲಿಸಿದರು.

ಸಾಹುಕಾರನಿಂದ ಬರುವ ಪ್ರಯೋಜನ ಬಂತು. ಅದು ಸೇವಿಂಗ್ಸ್ ಬ್ಯಾಂಕಿನ ಲೆಕ್ಕಕ್ಕೆ ಹೋಯ್ತು. ಫಿರ್ಯಾದಿನ ವಿಚಾರಣೆ ಯಾವುದೋ ಒಂದು ನೆಪದಿಂದ ಮೊದಲು ಒಂದು ತಿಂಗಳು, ಆಮೇಲೆ ಒಂದು ತಿಂಗಳು, ಮತ್ತೆ ಒಂದು ತಿಂಗಳು, ಮರಳಿ ಒಂದು ತಿಂಗಳು, ಹೀಗೆ ನಾಲ್ಕು ತಿಂಗಳು ಮುಂದಕ್ಕೆ ಹೋಯಿತು. ಸುಬೇದಾರರಿಗೆ ಏನು ಚಪಲ ಎಂದರೆ, ಸ್ವಲ್ಪ ದಿನ ಕಳೆದರೆ ತನ್ನ ಸೇವಕ ಒಪ್ಪಿಕೊಳ್ಳಬಹುದು; ಇಲ್ಲ ಫಿರ್ಯಾದಿ ಫಿರ್ಯಾದನ್ನು ಹಿಂದಕ್ಕೆ ತೆಗೆದುಕೊಳ್ಳಬಹುದು; ಅಥವಾ ತಾನೇ ಏನೋ ವಿಚಾರಣೆ ಮಾಡಿದಹಾಗೆ ಮಾಡಿ ಫಿರ್ಯಾದು ಊರ್ಜಿತವಾಗಲಿಲ್ಲವೆಂದು ಅಪರಾಧಿಗಳನ್ನು ಬಿಟ್ಟುಬಿಡಬಹುದು ಎಂತ. ಆದರೆ ಅವರಿಗೆ ತನ್ನ ಸೇವಕ ಎಂತಹ ಮನುಷ್ಯನೆಂದು ಮತ್ತು ತಮ್ಮ ನಡತೆಯಿಂದ ಅವನ ಗಡಸುತನ ಹೇಗೆ ಬೆಳೆದಿತ್ತೆಂದು ತಿಳಿದಿರಲಿಲ್ಲ.

ಲಫಂಗ ಕೇಸು ಮುಂದಕ್ಕೆ ಹೋದಹಾಗೆಲ್ಲಾ "ಆದದ್ದಾಗಲಿ ಈ ಅಪರಾಧಿಗೆ ನಾನು ಶಿಕ್ಷೇನೇ ಮಾಡಿಸ್ತೇನೆ. ನಮ್ಮ ಮ್ಯಾಜಿಸ್ಟ್ರೇಟರು ಶಿಕ್ಷೆಮಾಡಿದ್ರೆ ಸಂತೋಷ. ಮಾಡಲಿಲ್ಲವೆ ಅಪೀಲ ಹೋಗ್ತೇವೆ.

ಈ ಸಾಹುಕಾರನ ಸಾಹುಕಾರಿ ಈ ಸುಬೇದಾರ್ರ ಸುಬೇದಾರಿ ನನ್ನ ಮುಂದೆ ನಡೆಯೋದಿಲ್ಲ ಅಂತ ತೋರಿಸ್ತೇನೆ" ಎಂತ ಹಠ ಹಿಡಿದ. ಮಧ್ಯೆ ಸುಬೇದಾರರ ಮನೆಯಲ್ಲಿ ಅಡಿಗೆ ಮಾಡುವುದನ್ನು ಬಿಟ್ಟು ಪೇಟೆಯಲ್ಲಿ ಒಂದು ಹೋಟಲು ಅಂಗಡಿಯನ್ನು ಇಟ್ಟ. ಆಮೇಲೆ ಒಂದು ದಿವಸ ಬಂದು ಸುಬೇದಾರ್ರ ಹೆಂಡತಿಗೆ "ಅಮ್ಮ, ನಾನು ನಿಮ್ಮ ಮನೇಲಿ ಅನ್ನ ತಿಂದಿದ್ದೇನೆ. ನಿಮಗೆ ಕೆಟ್ಟದು ಮಾಡುವುದಕ್ಕೆ ನನಗೆ ಇಷ್ಟವಿಲ್ಲ. ನನಗೆ ಈಗ ಮರ್ಯಾದೇ ಮಾತು ಬಂದಿದೆ. ಸುಬೇದಾರ್ರಿಗೆ ಒಂದು ಮರ್ಯಾದೆ ಇರೋ ಹಾಗೆ ಅಡಿಗೆಯವನಿಗೆ ಒಂದು ಮರ್ಯಾದೆ ಇದೆ. ನಾನು ಅದನ್ನು ಬಿಡೋವಕ್ಕೆ ಆಗೋದಿಲ್ಲ. ಸುಬೇದಾರ್ರು ಒಂದು ಕೇಸಿನಲ್ಲಿ ಆ ಸಾಹುಕಾರನಿಂದ ರೂಪಾಯಿ ತಕೊಂಡು ಬ್ಯಾಂಕಿನಲ್ಲಿಟ್ಟುಕೊಂಡುಬಿಟ್ಟರು. ಅದು ನೊಣ ಸೇರಿದ ತುತ್ತು. ಹೊಟ್ಟೇಲಿ ನಿಲ್ಲೋದಿಲ್ಲಾಮ್ಮ. ಅದನ್ನು ಹಿಂದಕ್ಕೆ ಕೊಟ್ಟುಬಿಟ್ಟು ನ್ಯಾಯ ಯಾವುದೋ ಅದನ್ನ ಮಾಡಿಬಿಡಹೇಳಿ. ಬೇಕಾದರೆ ಅದಕ್ಕೆ ನಾಲ್ಕರಷ್ಟು ದುಡ್ಡು ಇವರಿಗೆ ಬರೋ ಹಾಗೆ ನಾನು ಮಾಡ್ತೇನೆ. ಅದನ್ನೇನಾದರೂ ದಕ್ಕಿಸಿಕೋಬೇಕು ಅಂತ ಇವರು ಫಿರ್ಯಾದು ವಜಾ ಮಾಡಿದರೆ ನಾನು ಖಂಡಿತ ಮೇಲಕ್ಕೆ ಅರ್ಜಿ ಬರೀಬೇಕು. ಅನ್ನಾ ಹಾಕಿದೋರು ಅಂದಮಾತ್ರಕ್ಕೆ ಈ ಅವಮಾನ ಸಹಿಸಿಕೊಂಡಿರೋದಕ್ಕಾಗೋದಿಲ್ಲ. ಇಗೋ, ನಾನು ಬಲ್ಲೆ ತಾಯಿ, ಇವರ ಬ್ಯಾಂಕಿಗೆ ದುಡ್ಡು ಎಂದು ಸೇರಿತು ಎಂತ. ಮೇಲ್ನೋರನ್ನ ಇದನ್ನ ಬಂದು ನೋಡಿ ಅಂತ ಹೇಳ್ತೇನೆ. ವಿಚಾರಿಸಲಿ ನೋಡೋಣ ಏನಾಗುತ್ತೋ" ಎಂತ ಹೇಳಿದ. ಅಲ್ಲಿಂದ ಹೊರಟುಬಂದ. ಆಕೆ ಈ ಸಮಾಚಾರವನ್ನು ಗಂಡನಿಗೆ ಹೇಳಿ "ಇಂಥ ಅಯೋಗ್ಯರನ್ನೆಲ್ಲ ಮೇಲೆ ಹಾಕಿಕೊಂಡರೆ ಹ್ಯಾಗಾಗುತ್ತೆ. ಇದ್ಯಾಕೆ ನೀವು ಹೋಗಿ ಇಂಥ ಸಂದರ್ಭದಲ್ಲಿ ದುಡ್ಡು ತಕ್ಕೊಂಡ್ರಿ. ಇಷ್ಟುಬೇಗ ತಕ್ಕೊಳ್ಳೋದೆ. ಅಥವಾ ತಕ್ಕೊಂಡ್ರೆ ಮನೇಲಿಟ್ಟರಬಾರದಾಗಿತ್ತೆ. ನನ್ನ ಕೈಲಿ ಕೊಡಬಾರದಾಗಿತ್ತೆ" ಎಂದರು.

ಸುಬೇದಾರ್ರಿಗೆ ಇದು ನಿಜವೆಂದು ತೋರಿತು. ಈ ಲಫಂಗನ ಕೈಗೆ ಸಿಕ್ಕಿಕೊಂಡದ್ದು ತಪ್ಪಾಯಿತೆಂದು ಅವರ ಮನಸ್ಸಿಗೆ ಸ್ಪಷ್ಟವಾಯಿತು. ಎರಡು ಮೂರು ದಿನ ಯೋಚನೆಮಾಡಿ ಅವರು ಲಫಂಗನಿಗೆ ಹೇಳಿ ಕಳುಹಿಸಿ

"ಅಪ್ಪ, ನೀನು ಎಷ್ಟಾದರೂ ಬುದ್ಧಿವಂತ. ವಯಸ್ಸಿನಲ್ಲಿ ಚಿಕ್ಕವನಾದರೂ ತಿಳಿದವನು. ನಮಗೆ ಎಷ್ಟೋ ಸಹಾಯ ಮಾಡಿದ್ದೀಯಾ. ನೀನು ನೀರು ಹೊಯ್ದು ಬೆಳಸಿದ ಗಿಡಾನ ನೀನು ಯಾಕೆ ಕೆಡಿಸಬೇಕು. ನನ್ನಿಂದ ನಿನಗೂ ಸ್ವಲ್ಪ ಪ್ರಯೋಜನವಾಗಿದೆ. ಎಲ್ಲಾನೂ ಯೋಚನೆ ಮಾಡಿ ಈಗ ಏನು ಮಾಡುವುದು ಎಂತ ಹೇಳು. ಅದರ ಪ್ರಕಾರ ಮಾಡಿಬಿಡೋಣ" ಎಂದರು. ಲಫಂಗ "ಅದೆಲ್ಲ ಸರಿ ಸ್ವಾಮಿ, ನೀವು ದುಡ್ಡು ತೆಗೆದು ಕೊಳ್ಳೋವಾಗ ನನ್ನನ್ನ ಒಂದು ಮಾತು ಕೇಳಿದ್ದರೆ ನಾನು ಏನಾದರೂ ಮಾಡಬಹುದಾಗಿತ್ತು. ಈಗ ನಾನೇನು ಮಾಡಲಿ? ಆ ರೂಪಾಯನ್ನ ಅವರಿಗೆ ಹಿಂದಕ್ಕೆ ಕೊಟ್ಟುಬಿಡಿ. ಅವರು ಹೆಂಗಸಿನ ಹತ್ತಿರ ಬಂದು ತಪ್ಪಾಯಿತು ಎಂತ ಒಪ್ಪಿಕೊಳ್ಳಹೇಳಿ. ತಾವು ಸುಬೇದಾರ್‍ರು. ತಮ್ಮ ಮಾತು ಅವರು ತೆಗೆದುಹಾಕೋದಿಲ್ಲ. ನಾನು ಬೇಕಾದ್ರೆ ಆ ರೂಪಾಯಿ ತಂದು ನಿಮಗೆ ಕೊಟ್ಟುಬಿಡ್ತೇನೆ. ಇಲ್ಲ ಮೂರು ತಿಂಗಳು ನಿಮ್ಮ ಜೊತೆಗೆ ಕರೆದುಕೊಂಡುಹೋಗಿ; ಅದನ್ನ ಸಂಪಾದಿಸಿಕೊಡುತ್ತೇನೆ" ಎಂತ ಹೇಳಿದ. ಸುಬೇದಾರ್‍ರು ಏನೇನೊ ಹೇಳಿದರು. ಇವನು ಕೇಳಲಿಲ್ಲ. ಕೊನೆಗೆ ಸೇವಿಂಗ್ಸ್ ಬ್ಯಾಂಕಿನಿಂದ ದುಡ್ಡು ತೆಗೆದರೆ ಊರಿಗೆಲ್ಲಾ ತಿಳೀತ ದಲ್ಲಪ್ಪಾ ಎಂದರು. ಲಫಂಗ "ನನಗೆ ಒಂದು ಪ್ರೋನೋಟು ಕೊಡಿ ಆ ದುಡ್ಡು ನಾನು ಕೊಡುತ್ತೇನೆ. ಅವರಿಗೆ ಕೊಟ್ಟು ತೀರಿಸಿಬಿಡಿ" ಎಂದ. ಸುಬೇದಾರರು "ನನ್ನ ಜುಟ್ಟು ನಿನ್ನ ಕೈಲಿ ಕೊಟ್ಟು ಒದ್ದಾಡಲಿ" ಎಂದರು. ಲಫಂಗ "ಸ್ವಾಮಿ, ನಿಮ್ಮನ್ನ ಕೆಡಿಸಬೇಕು ಅಂತಿದ್ರೆ ಇದುವರೆಗೆ ನನಗೆ ತಿಳಿದಿರುವ ವಿಷಯ ಸಾಲದೆ? ಈ ಪ್ರೋನೋಟನಿಂದ ನೀವು ನನ್ನ ಕೈಗೆ ಸಿಕ್ಕುತೀರಾ? ನಾನು ದಿನಾ ಅಗ್ನಿಯನ್ನ ಮುಟ್ಟೋ ಮನುಷ್ಯ ಸ್ವಾಮಿ. ನನ್ನ ಹತ್ತಿರ ಮೋಸ ಇಲ್ಲ. ಅದರಮೇಲೆ ನಿಮ್ಮ ಇಷ್ಟ" ಎಂದ. ಸುಬೇದಾರರು ಅವನಿಗೆ ಒಂದು ಪ್ರೋನೋಟನ್ನು ಬರೆದುಕೊಟ್ಟರು. ಸಾಹುಕಾರನಿಗೆ ಹಣವನ್ನು ಹಿಂದಕ್ಕೆ ಕೊಟ್ಟು, ಈ ಕೇಸು ನೀವು ಹೊರಗೆ ಫೈಸಲ್ ಮಾಡಿಕೊಂಡ್ರೆ ಅನುಕೂಲ ಎಂದು ಹೇಳಿದರು. ಸಾಹುಕಾರನ ಹಣೇಲಿ ಬರೆದಿತ್ತು ಮಹಾಸ್ವಾಮಿ, ಸೂಳೀ ಕಾಲಿಗೆ ಬಿದ್ದು ಮಾಫ್‌ಮಾಡು ಅಂತ ಕೇಳಿಕೊಳ್ಳುವುದಕ್ಕೆ. ಕೇಳಿಕೊಂಡ ಸ್ವಾಮಿ. ಆಯಿತು. ಇದಾದ ಎಂಟು

ದಿವಸಕ್ಕೆ ಸುಬೇದಾರ್ರು ಮೂರು ತಿಂಗಳು ರಜಾಕ್ಕೆ ಬರಕೊಂಡ್ರು. ರಜಾ ಮುಗಿಯುವ ವೇಳೆಗೆ ಅವರಿಗೆ ಇನ್ನೆಲ್ಲಿಗೋ ವರ್ಗವಾಯಿತು. ಅಲ್ಲಿಗೆ ಹೋದಮೇಲೆ ಲಫಂಗನಿಗೆ ಆ ಹಣ ಕೊಟ್ಟು ತೀರಿಸಿದರಂತೆ. ಅಂತೂ ಇಲ್ಲಿ ಫಜೀತಿಗೆ ಸಿಕ್ಕಿಕೊಂಡು ಅವರಿಗೆ ಸ್ವಲ್ಪ ಬುದ್ಧಿಬಂತು ಎಂತ ಕಾಣುತ್ತೆ. ಆ ತಾಲ್ಲೂಕಿನಲ್ಲಿ ತಕ್ಕಮಟ್ಟಿಗೆ ಸತ್ಯವಂತರಾಗಿದ್ದರು ಎಂತ ಕೇಳಿದೆ.

೩

ರಾಮಣ್ಣನವರ ಕಥೆ ಮುಗಿದಮೇಲೆ ನಾನು ಅವರನ್ನು ಲಫಂಗ ಈಗ ಇಲ್ಲಿ ಇದಾನೆಯೋ ಎಂದು ಕೇಳಿದೆ. "ಇರೋಹಾಗೆ ಕಾಣಲಿಲ್ಲ ಸ್ವಾಮಿ; ಅವನು ಅಂಗಡಿ ಹಾಕಿದ ಕಡೆಯೇನೋ ಅಂಗಡಿ ಇದೆ. ಆದರೆ ಅವನು ಅದನ್ನು ಬಿಟ್ಟು ಈಗ ಮೂರು ನಾಲ್ಕು ವರ್ಷ ಆಗಿರಬೇಕು. ಎತ್ತಲೋ ಅವರ ಊರಿಗೆ ಹೋದ ಅಂತ ಕಾಣುತ್ತೆ." "ಆ ಹೆಂಗಸನ್ನ ಬಿಟ್ಟುಬಿಟ್ಟ?" "ಸರಿ ಮಹಾಸ್ವಾಮಿ ಸೂಳೇಗೇ ಸೂಳೇಗಾರನಿಗೆ ಈ ಕಟ್ಟುಪಾಡೇನು ಬಂತು? ತಾಲೀನೇ, ಬಾಷಿಂಗಾನೇ? ಇವನ ಪಾಡಿಗೆ ಇವನು ಹೋದ, ಆ ಸಾಹುಕಾರ ತಿರಿಗಿ ಅವಳ ಹತ್ತಿರ ಓಡಿಯಾಡುತಾ ಇದ್ದಾನೆ." ರಾಮಣ್ಣನವರು ಹೇಳಿದ ಮಾತಿನಲ್ಲಿ ಎಷ್ಟು ನಿಜವೋ ಎಷ್ಟು ಸುಳ್ಳೋ ನನಗೆ ಗೊತ್ತಿಲ್ಲ. ಅವರು ಹೇಳಿದ ಕೆಲವು ಮಾತಾದರೂ ಊಹಿಸಿರುವ ಮಾತಾಗಿರಬೇಕು. ಅಡಿಗೆಯವನಿಗೆ ಸುಬೇದಾರರಿಗೆ ನಡೆದ ಎಲ್ಲಾ ಮಾತು ಇವರಿಗೆ ತಿಳಿಯಬೇಕು ಹೇಗೆ? ಆದರೆ ಸ್ಥೂಲವಾಗಿ ಅವರು ಹೇಳಿದ ವಿಷಯ ಸರಿ ಇರಬಹುದು ಎಂತ ಕಾಣುತ್ತದೆ. ತಮಗೆ ಅಪಕಾರಮಾಡಿದ ಅಧಿಕಾರಿ ಎನ್ನುವ ಕಾರಣದಿಂದ ಅವರು ಅಲ್ಲಲ್ಲಿ ಮಾತನ್ನು ಸ್ವಲ್ಪ ಅತಿಮಾಡಿರಬೇಕು. ಇದು ಇಂಥವರಲ್ಲಿ ವಾಡಿಕೆ. ಆಮೇಲೆ ನಾನು "ನೀವು ಹೇಳೋಮಾತು ಕೇಳಿದರೆ ಸುಬೇದಾರ್ರು ಅನ್ನೊ ಹೆಸರಿಗೇನೆ ಮರ್ಯಾದೆ ಕಡಮೆ ಆಗೋಹಾಗಿದೆಯಲ್ಲಪ್ಪ" ಎಂದೆ. ಅವರು "ಅಯ್ಯೋ ಉಂಟೆ ಮಹಾಸ್ವಾಮಿ, ಮನುಷ್ಯ ಕೆಟ್ಟವನಾದರೆ ಸುಬೇದಾರಿ ಏನುಮಾಡಿತು. ಒಬ್ಬ ಕಾನಸ್ಟೇಬಲ್ ಇರುತಾನೆ. ಸಾಚಾ

ಮಾತನಾಡುತಾನೆ, ದೊಡ್ಡ ಮನುಷ್ಯ ಅನ್ನಿಸಿಕೊಳ್ಳುತ್ತಾನೆ. ಒಬ್ಬ ಕಲೆಕ್ಟರಿರುತಾರೆ. ಲುಚ್ಛ ಕೆಲಸ ಮಾಡುತಾರೆ, ಕೆಟ್ಟವರು ಅನ್ನಿಸಿಕೊಳ್ಳುತಾರೆ. ಕೆಲಸ ಏನು ಮಾಡುತ್ತೆ? ಮನುಷ್ಯನ ಯೋಗ್ಯತೆ ಮಾಡುತ್ತೆ, ಒಳ್ಳೆದನ್ನ ಕೆಟ್ಟದನ್ನ" ಎಂದರು. ನಾನು "ಈಚೆಗೆ ನಿಮ್ಮ ತಾಲ್ಲೂಕಿನಲ್ಲಿ ಅಂಥ ಸುಬೇದಾರ್ರು ಬರಲಿಲ್ಲವಲ್ಲ" ಎಂದೆ. ರಾಮಣ್ಣನವರು "ಸ್ವಾಮಿ, ಬರುತಾರೆ ಹೊಸಬ್ರು. ಆ ಸುಬೇದಾರ್ರಿಗೆ ಲಂಚ ತೆಗೆದುಕೊಳ್ಳುವುದಕ್ಕೆ ಹೆದರಿಕೆ ಇರಲಿಲ್ಲ. ಈಗಿನ ಸುಬೇದಾರ್ರು ಸಂಬಳ ತಗೊಳ್ಳೋದಕ್ಕೇ ಹೆದರುತಾರೆ. ಕಾಲವೂ ನಾಜೋಕಾಯಿತು, ಸ್ವಾಮಿ. ಕಲಿಕಾಲ, ತಣ್ಣೀರು ಆರಿಸಿಕೊಂಡು ಕುಡಿಯಬೇಕು ಈಗ" ಎಂದರು. ನನಗೆ ನಗು ಬಂದಿತು. ಸ್ವಲ್ಪಹೊತ್ತು ಆ ಮಾತು ಈ ಮಾತು ಆಡುತ್ತಿದ್ದು ರಾಮಣ್ಣನವರು "ಅಪ್ಪಣೆಯಾದರೆ ನಾನು ಬರುತೇನೆ ಸ್ವಾಮಿ" ಎಂದರು. ನಾನು, ಸಂತೋಷ ರಾಮಣ್ಣನವರೇ, ಎಂದು ಒಂದು ಕ್ಷಣ ಬಿಟ್ಟು "ನಿಮಗೆ ಒಂದು ಮಾತು ಹೇಳಬೇಕೆಂದು ತೋರುತ್ತೆ, ಹೇಳಲೆ" ಎಂದೆ. ರಾಮಣ್ಣನವರು "ಅಪ್ಪಣೆಯಾಗಲಿ" ಅಂದರು. ನಾನು "ನೀವು ನನಗೆ ಹೇಳಿದ ಮಾತನ್ನೆಲ್ಲಾ ಸಿಕ್ಕಿದಹಾಗೆ ಎಲ್ಲರಿಗೂ ಹೇಳಬಾರದು. ಪಾಪ ಆ ಮನುಷ್ಯನ ಹೆಸರನ್ನು ನೀವು ಯಾಕೆ ಕೆಡಿಸಬೇಕು" ಎಂದೆ. ರಾಮಣ್ಣನವರು "ಅಯ್ಯೋ ಮಹಾಸ್ವಾಮಿ, ಎಲ್ಲಾದರೂ ಹೇಳಿಯೇನೆ? ನನ್ನ ಹೆಂಡ್ತಿಗೂ ಕೂಡ ಹೇಳೋದಿಲ್ಲ. ನಿಮ್ಮನ್ನ ನೋಡಿದೆ. ಬಹಳ ದಿವಸವಾಗಿತ್ತು. ಆ ನಮ್ಮ ಫಾರ್ ಡೆಪ್ಯುಟಿ ಕಮಿಷನರ್ ಸಾಹೇಬರು ನಮ್ಮ ಕಷ್ಟ ಸುಖ ಕಂಡು ನಮಗೆ ಬೇಕಾಗಿದ್ದವರು ಆಗಿದ್ದರು. ಅವರಿಗೆ ನೀವು ಬಹಳ ಬೇಕಾದವರು. ಅದರಮೇಲೆ ಏನೋ ಬಾಯಲ್ಲಿ ಬಂದುಬಿಡ್ತು, ಹೇಳಿದೆ. ಎಲ್ಲರಿಗೂ ಹೇಳಿಯೇನೆ" ಎಂದರು. ನಾನು "ಅಷ್ಟೇ ಸ್ವಾಮಿ ಹೋಗಿಬನ್ನಿ" ಎಂದೆ. ಅವರು ಹೊರಟುಹೋದರು.

ಅವರು ಈ ಕಥೆಯನ್ನು ಯಾರಿಗೂ ಹೇಳುವುದಿಲ್ಲವೆಂದು ನನಗೆ ನಂಬಿಕೆಯಿಲ್ಲ.

# ಡೂಬಾಯಿ ಪಾದ್ರಿಯ ಒಂದು ಪತ್ರ

"ಹಿಂದೂ ಜನರ ರೀತಿನೀತಿಗಳು" ಎಂಬ ಗ್ರಂಥವನ್ನು ಬರೆದ ಡೂಬಾಯಿ ಪಾದ್ರಿ ತನ್ನ ಮಿತ್ರರಿಗೆ ಬರೆದ ಕೆಲವು ಪತ್ರಗಳು ಫ್ರಾನ್ಸ್ ದೇಶದಲ್ಲಿ ಸೊಶಬೊನ್ ವಿಶ್ವವಿದ್ಯಾಲಯದ ಪುಸ್ತಕಭಂಡಾರದಲ್ಲಿವೆಯಂತೆ. ಅವು ಅಚ್ಚಾಗಿಲ್ಲ. ಅವುಗಳಲ್ಲಿ ಒಂದರ ಪ್ರತಿಯನ್ನು ನಮ್ಮ ವೆಂಕಟ ರಾಯನಿಗೆ ಅವನ ಸ್ನೇಹಿತರೊಬ್ಬರು ಕಳುಹಿಸಿದರು. ಇದು ಅದರ ಭಾಷಾಂತರ.

ಕ್ರೀಸ್ತಶಕ ೧೮೦೦ ಡಿಸೆಂಬರ್ ೧೨ನೇ ತಾರೀಕು ಶ್ರೀರಂಗಪಟ್ಟಣ ದಿಂದ.

ಪೂಜನೀಯ ಆಚಾರ್ಯ ಬೋಯನಿಯವರಿಗೆ ವಂದನೆಗಳು.

ನಿಮ್ಮ ಅನುಮತಿಯನ್ನು ಪಡೆದು ಆಂಗ್ಲೇಯ ಕಂಪೆನಿಯವರ ಇಷ್ಟ ವನ್ನು ಅನುಸರಿಸಿ ನಾನು ಈ ಊರಿಗೆ ಪ್ರಯಾಣಮಾಡಿದೆನಷ್ಟೆ. ಈ ಪತ್ರ ವನ್ನು ಶ್ರೀರಂಗಪಟ್ಟಣದಿಂದಲೇ ಬರೆಯುತ್ತಿದೇನೆ. ನಾನು ಈ ಮೊದಲು ಈ ಸುತ್ತಣ ಪ್ರಾಂತವನ್ನು ಅಲ್ಲಲ್ಲಿ ನೋಡಿದ್ದೆನು. ಆದರೆ ಈ ನಗರವನ್ನೂ ಇದು ಮಂಡಿಸಿರುವ ನದೀಮಧ್ಯದ ಈ ದ್ವೀಪವನ್ನೂ ನೋಡಿರಲಿಲ್ಲ. ಈ ಸ್ಥಳವು ನದೀಮಧ್ಯದ ದ್ವೀಪವೆಂದರೆ ಸಣ್ಣದೊಂದು ಮಣ್ಣಿನ ಗುಡ್ಡೆ ಯೆಂದು ಸಾಮಾನ್ಯವಾಗಿ ಅರ್ಥವಾಗಬಹುದು. ಇದು ಮಣ್ಣಿನ ಗುಡ್ಡೆ ಯಲ್ಲ. ವಿಶಾಲವಾದ ಮೂರು ಅಥವಾ ನಾಲ್ಕು ಚದರಮೈಲಿ ಇರುವ ಒಂದು ಪ್ರದೇಶ. ನ್ಯಾಯವಾಗಿ ಇದನ್ನು ಒಂದು ನದಿಯ ಮಧ್ಯದ ಪ್ರದೇಶವೆಂದು ಹೇಳುವುದೇ ಕಷ್ಟ. ಕೊಡಗಿನಿಂದ ಹರಿದುಬರುವ ಕಾವೇರೀ ನದಿಯು ಈ ಸ್ಥಳಕ್ಕೆ ಬರುವ ವೇಳೆಗೆ ವಿಸ್ತಾರವಾದ ಶಯ್ಯೆಯಲ್ಲಿ ಹರಿಯುವ ದೊಡ್ಡ ನದಿಯಾಗಿದೆ. ಈ ದಿಬ್ಬದ ಹತ್ತಿರ ಬಂದು ಅದು ಎಡಗಡೆಗೆ ಒಂದು ಶಾಖೆ ಬಲಗಡೆಗೆ ಒಂದು ಶಾಖೆ ಆಗುತ್ತದೆ. ಒಂದೊಂದು ಶಾಖೆಯೂ ಒಂದು ದೊಡ್ಡ ನದಿಯಂತೆಯೇ ಇದೆ. ಹೀಗೆ ಬೇರೆ ಬೇರೆಯಾಗಿ ಸುಮಾರು ಮೂರುಮೈಲಿ ಹರಿದಮೇಲೆ ಈ ಶಾಖೆಗಳು ಮರಳಿ ಕೂಡುತ್ತವೆ. ಮುಂದಕ್ಕೂ ನದಿಗೆ ಕಾವೇರಿಯೆಂದೇ ಹೆಸರು.

ಮಧ್ಯೆ ಎರಡಾದ ಶಾಖೆಗಳಿಗೂ ಅದೇ ಹೆಸರು. ಇದರಿಂದ ಈ ಸ್ಥಾನವನ್ನು ನದಿಯ ಮಧ್ಯದ ದ್ವೀಪ ಎಂದು ಹೇಳುವರು; ಸ್ಥಳದ ಪರಿಚಯವಿಲ್ಲದಿರುವವರು ಇದು ಸಣ್ಣದೊಂದು ದಿಬ್ಬವಿರಬಹುದೆಂದು ಭಾವಿಸುವರು.

ಇದೇನೋ ಈ ನದಿಯಲ್ಲಿ ಒಂದು ವಿಚಿತ್ರ. ಇಲ್ಲಿ ಒಂದು ದ್ವೀಪವನ್ನು ಬಳಸಿಕೊಂಡು ಎರಡು ಶಾಖೆಯಾಗಿ ಮರಳಿ ಸೇರಿ ಒಂದು ಹೊಳೆಯಾಗಿ ಮುಂದಕ್ಕೆ ಹರಿಯುವಂತೆ ಈ ನದಿ ಮುಂದೆ ಇನ್ನೆರಡು ದ್ವೀಪಗಳನ್ನು ಸುತ್ತುತ್ತದೆಯಂತೆ. ಈ ದೇಶದ ಜನರ ಪದ್ಧತಿಯಂತೆ ಈ ಸ್ಥಳಗಳು ಪುಣ್ಯಸ್ಥಳಗಳಾಗಿವೆ. ಈ ಮೂರು ದ್ವೀಪಗಳಲ್ಲಿಯೂ ಇವರು ರಂಗನಾಥ ಎಂಬ ದೇವರ ದೇವಾಲಯವನ್ನು ಕಟ್ಟಿದ್ದಾರೆ. ಕಾವೇರಿ ಆ ದೇವರ ಪತ್ನಿ ಎಂದೂ ರಂಗನಾಥನು ಅವಳ ತೋಳ ಮಧ್ಯೆ ನಿದ್ರಿಸುತ್ತಿದಾನೆಂದೂ ಇವರು ಒಂದು ಕಥೆ ಕಟ್ಟಿದಾರೆ. ಇದು ಇವರಲ್ಲಿ ವಾಡಿಕೆಯೆ. ಕಾವ್ಯ ದೃಷ್ಟಿಯಿಂದ ನೋಡಿದರೆ ಇಂಥಾ ಮಾತು ಚೆನ್ನಾಗಿಯೇ ಇರುತ್ತದೆ. ಆದರೆ ಈ ಜನರಲ್ಲಿ ಈ ಕಾರಣದಿಂದ ಸ್ವಲ್ಪ ತೊಂದರೆಯೇ ಉಂಟಾಗಿದೆ. ಇವರಿಗೆ, ಅದರಲ್ಲಿಯೂ ಈ ದೇವಾಲಯಗಳಲ್ಲಿ ಕೆಲಸಮಾಡುವವರಿಗೆ, ಕವಿಯ ಈ ಚಿತ್ರದ ಧ್ಯಾನದಲ್ಲಿ ಗಂಡು ಹೆಣ್ಣಿನ ಪ್ರೇಮ ಇತರ ಎಲ್ಲ ವಿಚಾರಕ್ಕಿಂತಲೂ ಮುಖ್ಯವೆಂದು ಕಾಣುತ್ತದೆ. ಸಾಲದ್ದಕ್ಕೆ ನದಿಯ ಎರಡೂ ಶಾಖೆ ಸೇರುವ ಕಡೆಗೆ ಇವರ ಭಾಷೆಯಲ್ಲಿ ಸಂಗಮ ಎಂದು ಹೆಸರು. ಇದರ ಅರ್ಥವೇನೆಂದು ಕೇಳಿದರೆ ಜೊತೆ ಸೇರುವುದು ಎಂದು ಮರ್ಯಾದೆಯಾಗಿ ಹೇಳುತ್ತಾರೆ. ಆದರೆ ಈ ಮಾತನ್ನು ಸಾಮಾನ್ಯವಾಗಿ ಇವರು ಉಪಯೋಗಿಸುವುದು ಗಂಡು ಹೆಣ್ಣಿನ ದೇಹದ ಸಂಬಂಧಕ್ಕೆ. ಇದು ಹೇಗಾದರೂ ಈ ವಿಸ್ತಾರವಾದ ದ್ವೀಪದ ಪ್ರದೇಶವು ಇತ್ತ ಒಂದು ನದಿ, ಅತ್ತ ಒಂದು ನದಿ, ಮಧ್ಯದಲ್ಲಿ ದೊಡ್ಡ ಊರು, ಕೋಟೆ, ಹೊಳೆಯ ಪಕ್ಕದಲ್ಲಿ ಗದ್ದೆಗಳು, ಸೊಂಪಾಗಿ ಬೆಳೆದಿರುವ ತೆಂಗಿನ ತೋಟಗಳು, ಒಂದು ಕಡೆ ಚೆನ್ನಾಗಿ ತಿದ್ದಿ ಬೆಳೆಸಿರುವ ರಾಜನ ಉದ್ಯಾನ, ಒಂದು ಕೊನೆಗೆ ಸೇನೆಯ ಪಾಳೆಯದ ಊರು, ಅದರಾಚೆಗೆ ಹೈದರಾಲಿ ನವಾಬ ಈಚೆಗೆ ಅವನ ಮಗ ಟೀಪು ಇವರ ಗೋರಿಗಳಿಂದ ಪ್ರಾಮುಖ್ಯವನ್ನು ಪಡೆದಿರುವ ಒಂದು ಸುಂದರವಾದ ಉಪವನ, ಕರಿಯ ಕಲ್ಲಕಟ್ಟಡ, ಇದೆಲ್ಲದರಿಂದ ಕಣ್ಣಿಗೆ ಆನಂದದಾಯಕ

ವಾಗಿ ಶೋಭಿಸುತ್ತದೆ. ಈ ಸ್ಥಳದ ವಿಷಯದಲ್ಲಿ ಯಾರೂ ದೂರು ಹೇಳಬೇಕಾದದ್ದಿಲ್ಲ.

ಟೀಪೂಸುಲ್ತಾನನು ತೀರಿಹೋಗಿ ಇನ್ನೂ ಕೊಂಚ ದಿನವೇ ಆಗಿರುವುದರಿಂದಲೂ ಪುನಃ ದೊರೆತನಕ್ಕೆ ಬಂದ ಹಿಂದೂ ರಾಜನು ಬಾಲಕನಾಗಿರುತ್ತಾ ಆಡಳಿತವು ಸದ್ಯದಲ್ಲಿ ಅವನ ಮುಖ್ಯ ಪ್ರಧಾನನ ಕೈಯಲ್ಲಿರುವುದರಿಂದಲೂ ಈ ಸ್ಥಳದಲ್ಲಿ ಜೀವನ ಇನ್ನೂ ಚಟುವಟಿಕೆಯಾಗಿಲ್ಲ; ಚಟುವಟಿಕೆಯಾಗಿ ಕಾಣುವ ಮುಖಗಳೆಂದರೆ ಇಲ್ಲಿಯ ಆಂಗ್ಲೇಯ ಸೈನಿಕರವು, ಅವರ ದಳಪತಿಗಳವರವು. ಅವರ ಕೈಕೆಳಗೆ ಸೇನೆಯಲ್ಲಿರುವ ಈ ದೇಶದ ಜನರೂ ತಕ್ಕಮಟ್ಟಿಗೆ ಚಟುವಟಿಕೆಯಾಗಿಯೇ ಇದ್ದಾರೆ. ಆದರೆ ಒಟ್ಟಿನಲ್ಲಿ ಈ ಜನರು ಸೋಮಾರಿಗಳೆಂದೇ ಹೇಳಬೇಕು. ನೀವು ಚೆನ್ನಾಗಿ ಬಲ್ಲಿರಿ: ಇವರಿಗೆ ಏನಾದರೂ ಹೇಳಿದರೆ ಅದನ್ನು ತಿಳಿದುಕೊಳ್ಳುವುದಕ್ಕೆ ಇವರು ಐದು ನಿಮಿಷ ಮಾಡುತ್ತಾರೆ. ಇವರಲ್ಲಿ ಬಹು ಬುದ್ಧಿವಂತನೆನಿಸಿಕೊಂಡಿರುವ ದಿವಾನ ಪೂರ್ಣಯ್ಯನೂ ಕೂಡ ನಮ್ಮ ಜನರ ಹಾಗೆ ಸರಬರನೆ ಓಡಾಡುವುದಿಲ್ಲ. ಹೇಳುವುದನ್ನು ಸಾವಧಾನವಾಗಿ ಹೇಳುತ್ತಾನೆ, ಮಾತನಾಡುವುದೂ ಕಷ್ಟವೆಂಬಂತೆ ಮಿತವಾಗಿ ಮಾತನಾಡುತ್ತಾನೆ. ಆದರೆ ಒಂದು ವಿಷಯವೇನೆಂದರೆ, ಈತನ ಆಡಳಿತದಲ್ಲಿ ಕೆಲಸ ಯಾವುದೂ ನಡೆಯದೆ ನಿಂತಿಲ್ಲ. ಎಲ್ಲರಿಗೂ ಒಂದು ರೀತಿಯ ಭಯವಿದೆ; ಹೇಳಿದ ಕೆಲಸವನ್ನು ಮಾಡಿ ಮುಗಿಸಿದರೆ ಕ್ಷೇಮ, ಇಲ್ಲದಿದ್ದರೆ ತೊಂದರೆ, ಎಂಬ ಭಾವನೆ ಇದೆ. ನನ್ನ ಕೆಲಸಕ್ಕೆ ಬೇಕಾದ ಸೌಕರ್ಯಗಳನ್ನು ಕುರಿತು ನಾನು ಈತನೊಂದಿಗೆ ಇಲ್ಲಿಗೆ ಬಂದಾಗ ಮಾತನಾಡಿದೆನು. ಅದರಲ್ಲಿ ಕೆಲವು ಭಾಗವನ್ನು ಈಗಾಗಲೇ ಮಾಡಿಕೊಟ್ಟಿದ್ದಾರೆ. ಉಳಿದದ್ದು ಇಷ್ಟರಲ್ಲೇ ಆಗಬಹುದು. ಕ್ರೀಸ್ತ ಗುರುವಿನ ಅಮೃತ ಸಂದೇಶವನ್ನು ಇಲ್ಲಿಯ ಜನರಿಗೆ ವಿವರಿಸಿ ಕತ್ತಲಲ್ಲಿ ನಡೆಯುತ್ತಿರುವ ಈ ಜೀವಗಳನ್ನು ದೇವರ ಕಡೆಗೆ ತಿರುಗಿಸಲು ಎಲ್ಲವೂ ಶೀಘ್ರದಲ್ಲಿಯೇ ಅನುಕೂಲಿಸುವುದೆಂದು ನನಗೆ ಭರವಸೆಯುಂಟು.

ಈ ಸಂದರ್ಭದಲ್ಲಿ ಒಂದು ವಿಷಯವನ್ನು ಮಾತ್ರ ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ಜನರು ಇತರ ವಿಷಯಗಳಲ್ಲಿ ಹೇಗೆಯೋ

ಮತಗಳ ವಿಷಯದಲ್ಲಿಯೂ ಹಾಗೆಯೇ ಬಹು ಸಾವಕಾಶವಾಗಿ ವರ್ತಿಸು ವರು. ಮನೆ ಸುಡುತ್ತಿದೆ ಎಂದರೆ ಅವಸರದಲ್ಲಿ ಹೋಗುವವರಲ್ಲ ಇವರು. ಮನೆಗೆ ಬೆಂಕಿ ಬಿದ್ದ ವಿಷಯ ನಿನಗೆ ಹೇಗೆ ತಿಳಿಯಿತು ಎಂದು ಮೊದಲು ವಿಚಾರಿಸುವರು; ಬಿದ್ದದ್ದು ನಿಜವೆಂದರೆ ನೀರು ಎಲ್ಲಿದೆ ಎಂದು ಯೋಚಿಸು ವರು; ಆಮೇಲೆ ಜನರನ್ನು ಜೊತೆಗೆ ಸೇರಿಸಿಕೊಳ್ಳಬೇಕು ಎನ್ನುವರು; ಇದಾದಮೇಲೆ ಮನೆ ಹೋಗಬೇಕು ಅಂತ ಹಣೆಯಲ್ಲಿ ಬರೆದಿದ್ದರೆ ಅವಸರ ಪಟ್ಟು ಪ್ರಯೋಜನವೇನು, ದೇವರು ಮಾಡಿದ್ದಾಯಿತು, ಎಂದು ಮೆಲ್ಲನೆ ಮನೆಯ ಕಡೆಗೆ ಹೋಗಿ ಈ ವೇಳೆಗೆ ಅತಿಯಾಗಿ ಬೆಳೆದಿರುವ ಬೆಂಕಿಗೆ ಒಂದು ಬೊಗಸೆ ನೀರನ್ನು ಹಾಕುವರು. ಪಾಪಿಗಳೇ, ನಿಮ್ಮ ಆತ್ಮವನ್ನು ಉದ್ಧಾರಮಾಡಿಕೊಳ್ಳಿ, ಎಂದು ಹೇಳಿದರೆ, ಪಾಪ ಯಾವುದು, ಎಲ್ಲಿಂದ ಬಂತು ಎನ್ನುತ್ತಾರೆ. ಮಾನವ ವರ್ಗದ ತಂದೆ ತಾಯಿ ಆಡಂ ಇವರ ಕಥೆ ಯನ್ನು ಹೇಳಿದರೆ ಇವರಿಗೆ ನಂಬಿಕೆ ಇಲ್ಲ. ಈ ಜನರಿಗೇ ನಂಬಿಕೆ ಇಲ್ಲ. ಅದರಲ್ಲಿಯೂ ಇವರ ಮತ ಪ್ರಚಾರಕರಾದ ಬ್ರಾಹ್ಮಣರಿಗೆ ಇಂಥ ಮಾತ ನ್ನೆಲ್ಲ ಕೇಳಿದರೆ ಬಹಳ ನಗು. ನರಕಕ್ಕೆ ಹೋಗುತ್ತ ತಮ್ಮ ಅಜ್ಞಾನವನ್ನು ಜ್ಞಾನವೆಂದು ಅಪ್ಪಿಕೊಳ್ಳುತ್ತ ಈ ಮೂಢರು ನಿತ್ಯ ಮೃತ್ಯುವಿನ ಸಾನ್ನಿಧ್ಯ ದಲ್ಲಿ ನಗುತ್ತಾ ನಿಲ್ಲುತ್ತಾರೆ. ಎಂಥ ಅಗಾಧ ನರಕಕೂಪದ ಅಂಚಿನಲ್ಲಿ ತಾವು ಕುಣಿಯುತ್ತಿದಾರೆಂಬುದನ್ನು ಇವರು ಕಾಣರು. ಇವರನ್ನು ಒಪ್ಪಿಸಿ ನಾವು ಇತರರನ್ನು ಕೈಗೆ ಹಾಕಿಕೊಳ್ಳುವುದೆಂದರೆ ಬಹು ಕಷ್ಟದ ವಿಚಾರ. ಡಿ ನೊಬಿಲಿ ಮಹಾಶಯನು ಹಿಂದೂ ಸಮಾಜವನ್ನು ಗೆಲ್ಲಬೇಕಾದರೆ ಬ್ರಾಹ್ಮಣರನ್ನು ಗೆಲ್ಲಬೇಕೆಂದು ಭಾವಿಸಿ ಅದಕ್ಕಾಗಿ ಮಾಡಿದ ಪ್ರಯತ್ನ ವನ್ನೆಲ್ಲ ನಾವು ಬಲ್ಲೆವು. ಅವರಂತೆ ಮಡಿ ಅವರಂತೆ ಅನಶನ ಅವರಂತೆ ಜಾಗರಣೆ ಅವರ ವೇಷ ಅವರ ಭೂಷಣ ಎಲ್ಲವನ್ನೂ ಅನುಕರಿಸಿ ಒಂದು ಜನ್ಮವೆಲ್ಲಾ ತಲೆಯ ಮೇಲೆ ನಿಂತು ತಪಸ್ಸುಮಾಡಿ ಆ ನಮ್ಮ ಸೋದರನು ಏನನ್ನೂ ಸಾಧಿಸಲಿಲ್ಲ. ಅವನ ಆಟಕ್ಕೆಲ್ಲ ಬೇಕಾದ ಸಲಕರಣೆಯನ್ನು ಒದಗಿಸಿ ಬ್ರಾಹ್ಮಣರು ಅವನನ್ನು ಬೆಳ್ಳಿಸಿ ಕಳುಹಿಸಿದರು. ನಾವು ಇದರಿಂದ ಒಂದು ಪಾಠವನ್ನು ಕಲಿಯಬೇಕಾಗಿದೆ. ಬ್ರಾಹ್ಮಣರನ್ನು ಒಪ್ಪಿಸಿ ನಾವು ಏಸುಕ್ರೀಸ್ತನ ಮತವನ್ನು ಹರಡುತ್ತೇವೆಂದು ಎಣಿಸಲಾಗದು. ನಮ್ಮ

ಗುರುವಿನ ದಿವ್ಯ ವಾಣಿ ಯಾರ ಮನವನ್ನು ಮುಟ್ಟುವುದೋ ಅವರನ್ನು ಧರ್ಮದ ಕಡೆಗೆ ಕರೆದುಕೊಳ್ಳೋಣ. ನಗುವವರನ್ನು ನಾವು ಮೆಚ್ಚಿಸುವುದಕ್ಕಾಗುವುದಿಲ್ಲ. ನಗುವವರು ನಗುತ್ತಿರಲಿ. ಬುದ್ಧಿ ಬಂದಾಗ್ಯೆ ಅವರೂ ಇತ್ತ ಬರುವರು. ಅದುವರೆಗೆ ನಾವು ಅವರ ಗೋಜಿಗೆ ಹೋಗುವುದು ಬೇಡ.

ನಮ್ಮವರು ಮಾಡಿದ ತಪ್ಪು ಇದಾದರೆ ಮುಹಮ್ಮದೀಯರು ಮಾಡಿದ ತಪ್ಪು ಬೇರೆ ಒಂದಿದೆ. ನಾವು ಅದರ ವಿಚಾರವನ್ನು ತಿಳಿದುಕೊಂಡು ಆ ತಪ್ಪನ್ನು ಮಾಡದೆ ಇರಬೇಕು. ಅದು ಏನೆಂದರೆ, ಜನರನ್ನು ಬಲವಂತದಿಂದ ಮತಕ್ಕೆ ಸೇರಿಸಿಕೊಳ್ಳುವುದು. ಇಲ್ಲಿ ತೀರಿಹೋದ ಟೀಪೂಸುಲ್ತಾನನ ಆಡಳಿತದಲ್ಲಿ ಅವನ ಜನರು ಯುದ್ಧದಲ್ಲಿ ಗೆದ್ದ ಕಡೆಯಲ್ಲೆಲ್ಲ ಅನೇಕ ಜನರನ್ನು ಬಲವಂತದಿಂದ ಮುಸಲ್ಮಾನರಾಗಿ ಮಾಡಿದರೆಂದು ನೀವು ಕೇಳಿರಬಹುದು. ಬಲವಂತದಿಂದ ಎಂಬ ಒಂದು ದೋಷವಿಲ್ಲದಿದ್ದರೆ ಅದು ಬಹಳ ಒಳ್ಳೆಯ ದಾರಿಯೆಂದೇ ಹೇಳಬಹುದಾಗಿತ್ತೇನೋ. ಸೇರಿಸಿಕೊಂಡಾಗ ಜನರು ನೊಂದರೂ ಆಮೇಲೆ ಹಿಂದೂಮತವು ಅವರನ್ನು ಹಿಂದಕ್ಕೆ ತೆಗೆದುಕೊಳ್ಳುವುದಿಲ್ಲವಾದದ್ದರಿಂದ ಅವರು ಹೊಸ ಮತದಲ್ಲಿಯೇ ನಿಲ್ಲಬೇಕಾಗುತ್ತದೆ. ಯಜಮಾನನಾದ ಒಬ್ಬನನ್ನು ಸೇರಿಸಿಕೊಂಡರೆ ಮನೆಯವರೆಲ್ಲ ಪ್ರಾಯಶಃ ಸೇರುತ್ತಾರೆ. ಇಷ್ಟವಿಲ್ಲದೆ ಸೇರಿದ ಒಬ್ಬನು ತನ್ನ ಜೀವವಿರುವವರೆಗೆ ಅಸಮಾಧಾನದಿಂದಿದ್ದರೂ ಅವನ ಮಕ್ಕಳು ಮೊಮ್ಮಕ್ಕಳು ಹೊಸ ಮತದ ಅವಿಚ್ಛಿನ್ನಭಕ್ತರಾಗುತ್ತಾರೆ. ಸಾವಿರ ವರ್ಷದಿಂದ ಆ ಮತದಲ್ಲಿಯೇ ಬೆಳೆದ ಮನೆತನದ ಜನಕ್ಕಿಂತ ಇಂಥವರು ಹೆಚ್ಚಿನ ಮತಾಭಿಮಾನವನ್ನು ತೋರುತ್ತಾರೆ. ಈ ಎಲ್ಲ ಕಾರಣದಿಂದ ಬಲವಂತದಿಂದ ಮತಕ್ಕೆ ಸೇರಿಸಿಕೊಳ್ಳುವುದು ಒಳ್ಳೆಯದೆಂದೇ ಕಾಣಬಹುದು. ಆದರೆ ಬಲವಂತದಿಂದ ಮತಕ್ಕೆ ಸೇರಿಸಿಕೊಳ್ಳುವುದು ಒಂದು ಅಸಂಸ್ಕೃತ ವರ್ತನೆ ಎನ್ನುವುದರಲ್ಲಿ ಸಂದೇಹವಿಲ್ಲ. ಅಲ್ಲದೆ ಅದರಲ್ಲಿ ಅಸಂಸ್ಕೃತಿಯ ಜೊತೆಗೆ ಇನ್ನೊಂದು ದೋಷವಿದೆ. ಅದು ಯಾವುದೆಂದರೆ, ಯಾವನಾದರೂ ಒಬ್ಬನು ತನ್ನನ್ನು ಕೆಡಿಸಿದರೆಂಬ ಕ್ರೋಧವನ್ನಿಟ್ಟುಕೊಂಡರೂ ಬಹಳ ಹಾನಿಯನ್ನು ಉಂಟುಮಾಡಬಹುದು. ಇದಕ್ಕೆ ಟೀಪೂಸುಲ್ತಾನನ ಗತಿಯೇ ನಿದರ್ಶನ. ಹೈದರಾಲಿ ಈ ದೇಶದ ಹಿಂದೂ

ರಾಜನನ್ನು ಮೂಲೆಗೆ ಒತ್ತಿ ತಾನೇ ಆಳಲು ಮೊದಲುಮಾಡಿದನು. ಅವನಿಗೆ ಇತರ ಮತದ ವಿಷಯದಲ್ಲಿ ದ್ವೇಷವೂ ತನ್ನ ಮತದ ವಿಷಯದಲ್ಲಿ ಅತಿಯಾದ ಅಭಿಮಾನವೂ ಇರಲಿಲ್ಲ. ಅವನ ಮಗನು ಅವನಿಗಿಂತ ಹೆಚ್ಚು ಅಭಿಮಾನದಿಂದ ತಮ್ಮ ಮತವನ್ನು ಹರಡಲು ಪ್ರಯತ್ನಿಸಿದನು. ಆದರ ಫಲವಾಗಿಯೇ ರಾಜ್ಯವನ್ನು ಕಳೆದುಕೊಂಡನೆನ್ನಬಹುದು. ಇದಕ್ಕೆ ಉದಾಹರಣೆಯಾಗಿ ಇಲ್ಲಿ ಒಂದು ಕಥೆಯನ್ನು ಕೇಳಿದೆನು. ಅದನ್ನು ತಮಗೆ ಹೇಳುತ್ತೇನೆ.

ಹಿಂದೂ ರಾಜನು ಇಲ್ಲಿಯೇ ಒಂದು ಸಣ್ಣ ಅರಮನೆಯಲ್ಲಿ ಇರುತ್ತಿದ್ದನೆಂಬುದನ್ನು ನೀವೂ ಬಲ್ಲಿರಷ್ಟೆ. ಅವರ ಊಳಿಗದಲ್ಲಿ ಒಬ್ಬ ಬ್ರಾಹ್ಮಣರ ಹೆಂಗಸು ಇದ್ದಳಂತೆ. ಅವಳಿಗೆ ಒಬ್ಬ ಮಗ. ನರಸಿಂಹನೆಂದು ಅವನ ಹೆಸರು. ಟೀಪು ದೊರೆಯಾದ ವರ್ಷವೇ ಅವನ ಮತಾಭಿಮಾನದ ವಿಜೃಂಭಣೆಯು ಎಲ್ಲ ಕಡೆಯೂ ಕಾಣುತ್ತಿತ್ತು. ಶ್ರೀರಂಗಪಟ್ಟಣದಲ್ಲಿಯೇ ಇವನ ಜನರು ದಿಕ್ಕುಗೆಟ್ಟ ಅನೇಕ ಜನರನ್ನು ಬಲವಂತದಿಂದ ಮುಹಮ್ಮದೀಯ ಮತಕ್ಕೆ ಸೇರಿಸಿಕೊಂಡರು. ಟೀಪುವಿಗೆ ಇದೆಲ್ಲವೂ ಇಷ್ಟವಂತೆ. ಆದರೆ ನೆಪಮಾತ್ರಕ್ಕೆ ತನ್ನ ಪ್ರಜೆಗಳನ್ನು ಬಲವಂತಪಡಿಸಕೂಡದೆಂದು ಹೇಳುತ್ತಿದ್ದನು. ಬಲವಂತಪಡಿಸಿದರೆಂದು ದೂರು ಬಂದರೆ ವಿಚಾರಣೆ ಮಾಡುವ ಒಂದು ಆಟವನ್ನು ಆಡಿಸಿ ಅವರಾಗಿಯೇ ಸೇರಿದರೆಂದು ಸಿದ್ಧಾಂತವನ್ನು ಮಾಡಿಸಿ ಇನ್ನೇನು ಮಾಡುವುದು ಬಿಡಿ ಎಂದು ಹೇಳಿಬಿಡುತ್ತಿದ್ದನಂತೆ. ಅರಮನೆ ಊಳಿಗದ ಈ ಬ್ರಾಹ್ಮಣಿ ದೇವರ ಮನೆಯ ಸೇವೆಯಲ್ಲಿದ್ದಳು. ಪೂಜೆಗೆ ತುಲಸಿಯನ್ನು ಒದಗಿಸುವುದು ಅವಳ ಮನೆಯವರ ಕೆಲಸ. ಟೀಪು ದೊರೆಯಾದ ವರ್ಷ ಒಂದುದಿನ ನರಸಿಂಹನ ತಾಯಿ ಅವನಿಗೆ ಬೆಳಗಾಗ ಸ್ವಲ್ಪ ತಿಂಡಿಯನ್ನು ಕೊಟ್ಟು ತುಲಸಿ ತರುವುದಕ್ಕೆ ಕಳುಹಿಸಿದಳು. ನರಸಿಂಹನು ತುಲಸಿಯ ವನಕ್ಕೆ ಹೋದನು. ಅಂದು ಅವನು ಹೋಗುವುದು ಸ್ವಲ್ಪ ಸಾವಕಾಶವಾಗಿತ್ತು. ಇತರ ಜನರು ಹೋಗಿದ್ದು ಹಿಂದಕ್ಕೆ ಬಂದುಬಿಟ್ಟಿದ್ದರು. ಇವನು ಅಲ್ಲಿ ದಳವನ್ನು ಬಿಡಿಸುತ್ತಿರಬೇಕಾದರೆ ನದಿಯ ಪಕ್ಕದಲ್ಲಿ ಯಾರೋ ನಾಲ್ವರು ಮುಸಲ್ಮಾನರಿದ್ದರಂತೆ. ಅವರು ಇವನ ಹತ್ತಿರ ಬಂದರು. ಒಂದೆರಡು ಒಳ್ಳೆಯ ಮಾತನ್ನು ಹೇಳಿದರು.

ದೇವರ ಪೂಜೆಗೆ ಅಲ್ಲಿ ಒಂದು ಕಡೆ ತುಂಬ ಹೂವಿದೆ, ತೆಗೆದುಕೊಂಡು ಹೋಗುವೆಯಂತೆ ಬಾ, ಎಂದರು. ಇವನಿಗೆ ಹೋಗುವುದಕ್ಕೆ ಇಷ್ಟವಿಲ್ಲ. ಹೆದರಿಕೆ ಉಂಟು; ಆದರೆ ಬರುವುದಿಲ್ಲವೆಂದು ಹೇಳುವುದಕ್ಕೆ ಧೈರ್ಯವಿಲ್ಲ. ಸ್ವಲ್ಪದೂರ ಹೋದಹಾಗೆ ಹೋಗಿ ಓಡೋಣವೆಂದು ಯೋಚಿಸಿ ಅವರ ಜೊತೆಗೆ ಹೋದನು. ಅವನನ್ನು ಅವರು ಯಾವುದೋ ಒಂದು ಕಟ್ಟಡಕ್ಕೆ ಕರೆದುಕೊಂಡು ಹೋದರು. ಆಮೇಲೆ ಅವನು ಹೊರಕ್ಕೆ ಬರುವುದಕ್ಕೆ ಎಂಟು ದಿನವಾಯಿತು.

ಮಗ ಎತ್ತಹೋದನೋ ಎಂದು ತಾಯಿ ಊರೆಲ್ಲ ಹುಡುಕಾಡಿಸಿದಳು. ಅವನು ಸಿಕ್ಕಲಿಲ್ಲ. ಬಂದು ಅರಮನೆಯಲ್ಲಿ ಫಿರ್ಯಾದು ಹೇಳಿದಳು. ಅರಮನೆಯ ಜನರು ಎಲ್ಲ ಕಡೆಯಲ್ಲಿಯೂ ಹುಡುಕಿದರು. ಹುಡುಗ ಏನಾದನೆಂದು ತಿಳಿಯಲಿಲ್ಲ. ಕೊನೆಗೆ ಹುಡುಗನು ಕೂಗಿಕೊಂಡದ್ದನ್ನು ಬೀದಿಯಲ್ಲಿ ಹೋಗುತ್ತ ಕೇಳಿದ ಯಾರೋ ಒಬ್ಬರಿಬ್ಬರು ಪಿಸುಮಾತಿನಲ್ಲಿ ಇವರಿಗೆ ತಿಳಿಸಿದರು. ಅರಮನೆಯ ಊಳಿಗದ ಬ್ರಾಹ್ಮಣಿಯ ಮಗನೆಂಬ ಕಾರಣದಿಂದ ವಿಷಯವು ಪೂರ್ಣಯ್ಯನಿಗೆ ಫಿರ್ಯಾದಾಯಿತು. ಈಗ ದಿವಾನನಾಗಿರುವಾತನೇ ಆ ಪೂರ್ಣಯ್ಯ. ಇವನು ಇಂಥ ವಿಷಯದಲ್ಲಿ ಏನುಮಾಡುತ್ತಿದ್ದನೋ ಈಗ ನಮಗೆ ತಿಳಿಯುವಂತಿಲ್ಲ. ಆದರೆ ಜನರಿಗೆ ಈ ವಿಷಯದಲ್ಲಿ ಬಹಳ ಅಸಮಾಧಾನವಿದೆ. ಅರಮನೆಯ ಪರವಾಗಿ ಒತ್ತಾಯವಾದಮೇಲೆ ಸುಲ್ತಾನನು ಆ ಹುಡುಗನನ್ನು ಹುಡುಕಿಸುವಂತೆ ಏರ್ಪಾಡುಮಾಡಿದನು. ಅವನನ್ನು ರಾಜಸೇವಕರು ಅರಮನೆಗೆ ಕರೆದು ತಂದರು. ಅವನು ಒಪ್ಪಿಯೇ ಮುಹಮ್ಮದೀಯನಾದನೆಂದೂ ಇದರಲ್ಲಿ ಸ್ವಲ್ಪವೂ ಬಲವಂತವಿಲ್ಲವೆಂದೂ ಆ ನಾಲ್ವರು ಮುಸಲ್ಮಾನರೂ ಇವನನ್ನು ಮುಹಮ್ಮದೀಯ ಮತಕ್ಕೆ ಸೇರಿಸಿಕೊಂಡ ಫಾಲ್ವಿಯೂ ಹೇಳಿದರು. ಆ ಬಾಲಕನು ಮಾತ್ರ ಸುಲ್ತಾನನ ಎದುರಿಗೇ ಅವರನ್ನು ಬಾಯಾರ ಬೈದನು, ತನ್ನನ್ನು ಬಲವಂತವಾಗಿ ಜಾತಿ ಕೆಡಿಸಿದರೆಂದು ಹೇಳಿದನು. ವಿಚಾರಣೆ ಮುಗಿದಮೇಲೆ ಸುಲ್ತಾನನು ಇನ್ನುಮೇಲೆ ಹೀಗೆ ಮಾಡಬಾರದು ಎಂದು ದಂಡಿಸಿ ಆ ಮುಸಲ್ಮಾನರನ್ನು ಕಳುಹಿಸಿ ಈ ಹುಡುಗನಿಗೆ ನಿನ್ನಿಷ್ಟದಂತೆ ಹೋಗಬಹುದು ಎಂದನು.

ನರಸಿಂಹನು ಅರಮನೆಯ ಒಳಗೆ ಬಂದು ಹೇಗಾದರೂ ಮಾಡಿ ತನ್ನನ್ನು ಮರಳಿ ಮತಕ್ಕೆ ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡನಂತೆ. ಅದು ಹಿಂದೂ ಮತದಲ್ಲಿ ಸಾಧ್ಯವಲ್ಲ. ನಿನ್ನ ಜನಿವಾರ ಕಿತ್ತುಹೋಗಿ ಎಂಟು ದಿನವಾಯ್ತು, ನೀನು ಸಂಧ್ಯಾವಂದನೆ ಮಾಡಿಲ್ಲ, ಮತ್ತೆ ಅಲ್ಲಿದ್ದಾಗ ಮ್ಲೇಚ್ಛರ ಕೈಲಿ ಆಹಾರವನ್ನು ತಿಂದಿದ್ದೀಯೆ, ಅದೇನನ್ನು ತಿಂದಿದ್ದೀಯೋ, ಸಾಲದ್ದಕ್ಕೆ ನಿನಗೊಂದು ಮುಹಮ್ಮದೀಯ ಹೆಸರನ್ನು ಬೇರೆ ಕೊಟ್ಟಿರುತ್ತಾರೆ, ಇನ್ನು ನಿನ್ನನ್ನು ಹಿಂದೂ ಮತದಲ್ಲಿ ಹೇಗೆ ಸೇರಿಸುವುದು, ಎಂದು ಅವನಿಗೆ ಎಲ್ಲರೂ ಹೇಳಿದರು. ಏನಾದರೂ ಪ್ರಾಯಶ್ಚಿತ್ತ ಮಾಡಿ ಅವನನ್ನು ಮರಳಿ ಜಾತಿಗೆ ಸೇರಿಸಿಕೊಳ್ಳೋಣ ಎಂದವರು ರಾಜನೂ ರಾಜನ ತಾಯಿಯೂ ಇಬ್ಬರೇ. ಕೊನೆಗೆ ಅವನು ಮುಹಮ್ಮದೀಯನಾಗಿ ಉಳಿಯಬಹುದು ಹೊರತು, ಹಿಂದುವಾಗಲು ಅವಕಾಶವಿಲ್ಲವೆಂದು ಆಯಿತು. ನರಸಿಂಹನಿಗೆ ಬಹು ದುಃಖ, ಬಹು ಕೋಪ. ಅವನು ಹಿಂದೂ ಧರ್ಮದ ಈ ನಿಷ್ಠುರ ಪದ್ಧತಿಯನ್ನು ವಿವರಿಸಿದ ಬ್ರಾಹ್ಮಣರನ್ನು ಕುರಿತು "ಹಿಂದುವಾಗಿದ್ದ ನನ್ನನ್ನು ಬಲವಂತವಾಗಿ ಜಾತಿ ಕೆಡಿಸಿದ ಆ ಮುಸಲ್ಮಾನರನ್ನು ಭಗವಂತನು ಶಿಕ್ಷಿಸುತ್ತಾನೆ. ಅವರು ಮಾಡಿದ ತಪ್ಪನ್ನು ತಿದ್ದುವುದಿಲ್ಲವೆನ್ನುವ ನಿಮ್ಮನ್ನೂ ದೇವರು ಬಿಡುವುದಿಲ್ಲ. ನಿಮ್ಮ ಮನೆ ಹಾಳಾಗಲಿ. ಹಾಗಾಗದೆ ಇದ್ದರೆ ನಿಮ್ಮ ಧರ್ಮ ಹಾಳಾಗಲಿ. ಇದೋ ಇಂದಿನಿಂದ ನಾನು ಮುಹಮ್ಮದೀಯನೇ. ನನ್ನ ನೋವನ್ನು ಸ್ವಲ್ಪವಾದರೂ ಬಲ್ಲ ನಮ್ಮ ದೊಡ್ಡ ರಾಣಿಗೆ ರಾಜನಿಗೆ ಒಳ್ಳೆಯದಾಗಲಿ. ಆದರೆ ಇನ್ನು ನಾನು ಟೀಪುಸುಲ್ತಾನನ ಸೇವಕನು. ಜೋಕೆ, ಎಲ್ಲಿಯಾದರೂ ನನ್ನ ಕೈಗೆ ಒಂಟಿಯಾಗಿ ಸಿಕ್ಕೀರಿ. ನಿಮ್ಮ ಮುಖದಮೇಲೆ ಉಗುಳುವೆನು. ನಿಮ್ಮ ಮತವೂ ಕೆಡುವುದು. ನೀವು ಆಮೇಲೆ ಪುನಃ ಬ್ರಾಹ್ಮಣರಾಗುವಂತಿಲ್ಲ. ನಿಮ್ಮ ಜನಿವಾರವನ್ನೂ ಕೀಳುತ್ತೇನೆ. ನಿಮ್ಮನ್ನು ಜಾತಿ ಕೆಡಿಸುತ್ತೇನೆ. ನನ್ನ ಕೈಗೆ ಒಂಟಿಯಾಗಿ ಮಾತ್ರ ಸಿಕ್ಕಬೇಡಿ" ಎಂದು ಎಲ್ಲರನ್ನೂ ತಾರುಮಾರಾಗಿ ಬಯ್ದು ತುಚ್ಛವಾದ ಮಾತುಗಳನ್ನಾಡಿ ಸುಲ್ತಾನನ ಕಡೆಗೆ ಹೊರಟುಹೋದನು; ಅವನ ಭಾವಮೈದುನರಿಗೆ ಸಲಾಮುಮಾಡಿ "ನಾನು ಎಂಟು ದಿನದ ಹಿಂದೆ ಜಾತಿಗೆಟ್ಟ ಬ್ರಾಹ್ಮಣ ನರಸಿಂಹ. ನನ್ನ ಜನ ನನ್ನನ್ನು ಬೇಡವೆಂದು

ಹೇಳಿದ್ದಾರೆ. ನನಗೆ ನಿಮ್ಮಲ್ಲಿಯೇ ಒಂದು ಕೆಲಸ ಕೊಡಿ" ಎಂದು ಹೇಳಿದನು. ಅವನಿಗೆ ಕೆಲಸ ದೊರೆಯಿತು. ಜಾತಿ ಕೆಡಿಸಿದಾಗ ಅವನಿಗೆ ಮಹಮ್ಮದ್ ಅಬ್ಬಾಸ್ ಎಂದು ಹೆಸರು ಕೊಟ್ಟಿದ್ದರು. ಅವನು ಆಮೇಲೆ ಅದೇ ಹೆಸರಿನಿಂದ ಓಡಿಯಾಡತೊಡಗಿದನು.

ಮಹಮ್ಮದ್ ಅಬ್ಬಾಸ್ ಟೀಪೂಸುಲ್ತಾನನ ಸಮೀಪದ ಸೇವಕರಲ್ಲಿ ಒಬ್ಬನಾದನು. ಬ್ರಾಹ್ಮಣರ ವಿಷಯದಲ್ಲಿ ಇವನ ವ್ಯಗ್ರವಾದ ಅಸಹನೆ ಯಾವ ಸಹಜ ಮುಸಲ್ಮಾನನಿಗೂ ಇದ್ದಿರಲಾರದು. ಮುಖ್ಯವಾದ ಅನೇಕ ಕೆಲಸಗಳಲ್ಲಿ ಸುಲ್ತಾನನೂ ಅವನ ಮುಖ್ಯ ಪ್ರಧಾನರೂ ಇವನನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಸುಲ್ತಾನನ ದಿನದಲ್ಲಿ ದೊಡ್ಡ ದೊಡ್ಡ ಅಧಿಕಾರಗಳಿಗೆಲ್ಲ ಮುಸಲ್ಮಾನರನ್ನೇ ನೇಮಿಸುವ ಏರ್ಪಾಡು ಬಂದಿತು. ಇವರಿಗೆ ಕನ್ನಡ ಬರವಣಿಗೆ ಬಾರದು. ಅವರು ಹತ್ತಿರದ ನೌಕರರ ಸಹಾಯದಿಂದಲೇ ಕೆಲಸಮಾಡಬೇಕಾಗಿತ್ತು. ಇಂಥ ಸಂದರ್ಭದಲ್ಲಿ ಯಜಮಾನರು ಹೇಳುವುದು ಒಂದಾದರೆ ಸೇವಕನು ಬರೆಯುವುದು ಇನ್ನೊಂದಾಗುವುದರಲ್ಲಿ ಆಶ್ಚರ್ಯವಲ್ಲ. ಅಬ್ಬಾಸನು ಇಂಥಾ ಅಧಿಕಾರಿಗಳಿಗೆ ಹತ್ತಾರು ಸಲ ಸಹಾಯಕ್ಕೆ ಬಂದು ಬೇಕಾದವನಾದನು. ಬರೆದಿರುವ ಪತ್ರವನ್ನು ಓದಿ ಅದರಲ್ಲಿ ಹೆಚ್ಚು ಕಡಮೆ ಇದ್ದರೆ ಅದನ್ನು ಅಧಿಕಾರಿಗಳಿಗೆ ತಿಳಿಸುವನು. ಈ ಕಾರಣದಿಂದ ನೌಕರರನೇಕರಿಗೆ ಇವನ ವಿಷಯದಲ್ಲಿ ಭಯ, ಇವನನ್ನು ಕಂಡರೆ ಆಗದು. ಆದರೆ ಇದರಿಂದ ಮುಸಲ್ಮಾನ ಅಧಿಕಾರಿಗಳಿಗೆ ಇವನು ನಂಬಿಕೆಗೆ ಅರ್ಹನೆಂದು ತಿಳಿವಳಿಕೆ ಹುಟ್ಟಿತು. ನರಸಿಂಹನು ಸಹಜವಾಗಿ ಬುದ್ಧಿವಂತನಾದ ಮನುಷ್ಯ. ಕೆಲವು ವರ್ಷಗಳಲ್ಲಿ ಇವನು ರಾಜಪರಿವಾರದ ಪ್ರಮುಖ ಸೇವಕರಲ್ಲಿ ಒಬ್ಬನಾದನು. ಆರಂಭದಲ್ಲಿ ಈ ಜಾತಿಗೆಟ್ಟ ಹುಡುಗನ ವಿಷಯದಲ್ಲಿ ವಿಶೇಷ ಯೋಚನೆ ಮಾಡದೇ ಇದ್ದ ಪೂರ್ಣಯ್ಯನೂ ಕೂಡ ಇವನು ಎಂದರೆ ಸ್ವಲ್ಪ ಎಚ್ಚರಿಕೆಯಿಂದ ಇರುವುದು ಆವಶ್ಯಕ ಎಂದು ಕಂಡುಕೊಂಡನಂತೆ.

ಹೀಗೆಯೇ ಕೆಲವು ವರ್ಷ ನಡೆಯಿತು. ದೊಡ್ಡ ಅಧಿಕಾರದಲ್ಲಿದ್ದ ಹಿಂದುಗಳನ್ನೆಲ್ಲ ಕಿತ್ತುಹಾಕಿ ಮುಸಲ್ಮಾನರನ್ನು ಆ ಸ್ಥಳಗಳಿಗೆ ಇಟ್ಟಿದ್ದರಿಂದಲೂ ತನ್ನ ಪ್ರಜೆಗಳನ್ನೆ ಬಲವಂತದಿಂದ ಮತ ಕೆಡಿಸಿದರೆ ಸುಲ್ತಾನನು

ಸುಮ್ಮನೆ ಇದ್ದುದರಿಂದಲೂ ಹತ್ತಾರು ವಿಧದಲ್ಲಿ ಹಿಂದುಗಳ ವಿಷಯದಲ್ಲಿ ಅವಿಶ್ವಾಸವನ್ನೂ ಮುಸಲ್ಮಾನರ ವಿಷಯದಲ್ಲಿ ಹೆಚ್ಚಿನ ಅಭಿಮಾನವನ್ನೂ ತೋರಿಸಿದ್ದರಿಂದಲೂ ರಾಷ್ಟ್ರದ ಹಿಂದೂ ಪ್ರಜೆಗಳಿಗೆ ಸುಲ್ತಾನನ ವಿಷಯದಲ್ಲಿ ಬೇಸರ ಹುಟ್ಟಿತು. ಹೈದರಾಲಿಯು ಇದ್ದಷ್ಟು ದಿವಸವೂ ಹಿಂದೂ ರಾಜನನ್ನು ರಾಜನೆಂದು ಹೇಳುತ್ತ ತಾನು ಅವನ ಪ್ರತಿನಿಧಿಯಾಗಿ ಕೆಲಸ ಮಾಡುತ್ತಿರುವೆನೆಂದು ನಟಿಸುತ್ತಲಾದರೂ ಇದ್ದನು. ಟೀಪು ರಾಜನನ್ನು ಗಾದಿಯಿಂದ ದೂಡಿದಂತೆಯೇ ಮಾಡಿ ತಾನು ಸಿಂಹಾಸನವನ್ನೇರಿದನು. ಈ ಕಾರಣದಿಂದಲೂ ಇವನ ಅಹಂಕಾರದಿಂದಲೂ ಅನೇಕ ಮುಸಲ್ಮಾನ ಮುಖಂಡರಿಗೂ ಇವನ ವಿಷಯದಲ್ಲಿ ಅಸಮಾಧಾನ. ಅರಮನೆಯ ಮಂದಿ ರಾಜನನ್ನು ಮೂಲೆಗೊತ್ತಿದ್ದನ್ನು ಸುಮ್ಮನೆ ಒಪ್ಪುವವರಲ್ಲ. ಏನಾದರೂ ಮಾಡಿ ಟೀಪುವನ್ನು ಸಿಂಹಾಸನದಿಂದ ಉರುಳಿಸಿ ರಾಜಮನೆ ತನಕ್ಕೆ ತಿರುಗಿ ರಾಜ್ಯವನ್ನು ಸಂಪಾದಿಸಿಕೊಡಬೇಕೆಂದು ಅಂದಿನಿಂದಲೂ ನಿರಂತರವಾದ ಪ್ರಯತ್ನ ನಡೆಯಿತು. ಈ ಪ್ರಯತ್ನದಲ್ಲಿ ಮುಖ್ಯಮೂರ್ತಿ ಹಿಂದಣ ರಾಜನ ಪತ್ನಿ, ಈಗ ರಾಜನಾಗಿರುವ ಬಾಲಕನ ಅಜ್ಜಿ, ಮಹಾರಾಣಿ ಲಕ್ಷ್ಮಮ್ಮಣ್ಣಿ. ಈಕೆ ಈಗಲೂ ಜೀವಂತರಾಗಿದ್ದಾರೆ. ಲಕ್ಷ್ಮಮ್ಮಣ್ಣಿ ರಾಜಕಾರಣ ದಕ್ಷರು. ಟೀಪುವನ್ನು ಕೆಳಕ್ಕೆ ಕೆಡಹುವುದಕ್ಕೆ ಇಂಗ್ಲೀಷರ ಸಹಾಯದಿಂದ ಹೊರತು ಬೇರೆ ಯಾವ ರೀತಿಯಿಂದಲೂ ಸಾಧ್ಯವಿಲ್ಲವೆಂದು ಈಕೆ ತಿಳಿದುಕೊಂಡರು. ಆಗಾಗ ಹಲವು ನಿಯೋಗಿಗಳನ್ನು ಮದರಾಸಿಗೆ ಅಟ್ಟಿ ಅಲ್ಲಿಯ ಇಂಗ್ಲೀಷು ಅಧಿಕಾರಿಗಳೊಂದಿಗೆ ಈ ವಿಷಯದಲ್ಲಿ ಸಂಭಾಷಣೆಯನ್ನು ನಡೆಯಿಸಿದರು. ಈ ಎಲ್ಲ ಚರಿತ್ರೆಯೂ ಈಗಾಗಲೇ ತಮಗೆ ತಿಳಿದಿದೆ. ತಿರುಮಲರಾಯನೆಂಬಾತನು ಮದರಾಸಿನಲ್ಲಿ ಇವರ ಪರವಾಗಿ ಮಾಡಿದ ಏರ್ಪಾಡಿನಲ್ಲಿ ಒಂದೊಂದು ಅಂಶಕ್ಕೂ ಲಕ್ಷ್ಮಮ್ಮಣ್ಣಿಯವರು ಇಲ್ಲಿಂದ ಪತ್ರಗಳನ್ನು ಬರೆದು ಕಳುಹಿಸುತ್ತಿದ್ದರು. ಈ ಪತ್ರವ್ಯವಹಾರದಲ್ಲಿ ಇವರಿಗೆ ಕೆಲವು ಜನ ಸಹಾಯಮಾಡಿದರು. ಮೊದಲು ಮೊದಲು ಹೀಗೆ ಸನ್ನಾಹ ನಡೆಯುತ್ತಿರುವುದು ತಿಳಿಯದೆ ಇದ್ದಾಗ, ಯಾರೋ ಪತ್ರ ಬರೆಯುವವರು, ಯಾರೋ ತೆಗೆದುಕೊಂಡು ಹೋಗುವವರು; ಅದು ಯಾರಿಗೂ ಗೋಚರವಾಗುತ್ತಿರಲಿಲ್ಲ. ಒಂದೆರಡು ವರ್ಷದ ಮೇಲೆ

ಸುಲ್ತಾನನ ಕಡೆಯವರು ಇದೇನೋ ಪಿತೂರಿ ನಡೆಯುತ್ತಿರುವುದೆಂದು ತಿಳಿದು ಅವನಲ್ಲಿ ವಿಷಯವನ್ನು ವಿಜ್ಞಾಪಿಸಿದರು. ಟೀಪು ಎಚ್ಚರಗೊಂಡನು. ಹೋಗಿಬರುವ ಜನರನ್ನು ನೋಡಿಕೊಳ್ಳುವುದಕ್ಕೆ ತಕ್ಕ ಏರ್ಪಾಡನ್ನು ಮಾಡಿದನು. ಪಿತೂರಿ ಕೆಲಸ ಹಿಂದಿನಷ್ಟು ಸುಲಭವಾಗಿ ನಡೆಯದಂತೆ ತನ್ನ ಕಡೆಯ ಜನರನ್ನು ನೇಮಿಸಿದನು.

ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ಆ ಕೆಲಸದಲ್ಲಿ ಸುಲ್ತಾನರ ಎರಡನೆಯ ಪ್ರಧಾನ ಕೃಷ್ಣರಾಯನೆಂಬುವನು ಸಹಾಯವಾಗಿದ್ದನಂತೆ. ಇವನು ಮಹಾರಾಷ್ಟ್ರ ದೇಶದ ಒಬ್ಬ ಬ್ರಾಹ್ಮಣ. ಇದು ಇಲ್ಲಿ ಒಂದು ವಿಚಿತ್ರ. ಸುಲ್ತಾನನು ಉಳಿದ ಎಲ್ಲ ಕೆಲಸಕ್ಕೂ ಮುಸಲ್ಮಾನರನ್ನೇ ನೇಮಿಸಿದರೂ ಬಹು ಮುಖ್ಯವಾದ ಪ್ರಧಾನರ ಪದವಿಗಳಲ್ಲಿ ಈ ಬ್ರಾಹ್ಮಣರನ್ನು ನೇಮಿಸಿಕೊಂಡಿದ್ದನು. ಹಿಂದುಗಳ ವಿಷಯದಲ್ಲಿ ಅಷ್ಟು ಅವಿಶ್ವಾಸವನ್ನು ತೋರಿಸಿದ ಟೀಪು ಇವರನ್ನು ಹೇಗೆ ಇಷ್ಟು ಹತ್ತಿರ ನಿಲ್ಲಿಸಿಕೊಂಡನೋ ನಮಗೆ ಅರ್ಥವಾಗುವುದಿಲ್ಲ. ನನಗೇನು ತೋರುತ್ತಿದೆಯೆಂದರೆ ಇವರು ಹಿಂದುಗಳೆಂದು ನಡೆದುಕೊಳ್ಳಲಿಲ್ಲ. ಜಾತಿ ಕೆಡಲಿಲ್ಲ ಹೊರತು ರಾಜನು ಕೊಟ್ಟ ಕೂಳಿಗಾಗಿ ಆತ್ಮಗೌರವವನ್ನು ಬಿಟ್ಟಿದ್ದರೆಂದು ಕಾಣುತ್ತದೆ. ಹಾಗಿಲ್ಲದಿದ್ದರೆ ಹಿಂದೂ ಪ್ರಜೆಗಳನ್ನು ಸುಲ್ತಾನನೂ ಅವನ ಕಡೆಯವರೂ ಹಿಂಸಿಸುತ್ತಿರಬೇಕಾದರೆ ಇವರು ನೋಡುತ್ತ ಸುಮ್ಮನೆ ಇದ್ದದ್ದು ಹೇಗೆ? ರಾಜನಿಗೆ ಯಾವುದು ಸರಿ ಎಂದು ತೋರುತ್ತದೋ ಅದನ್ನು ಅವನು ಮಾಡಲಿ, ನಮಗೆ ಅವನು ಕೊಟ್ಟಿರುವ ಕೆಲಸವನ್ನು ಸತ್ಯವಾಗಿ ಮಾಡಿದರೆ ಸಾಕು ಎಂದು ಇವರು ಬಹು ಮಿತವಾದ ಒಂದು ಧ್ಯೇಯವನ್ನು ಇರಿಸಿಕೊಂಡಿರಬೇಕು. ಒಂದು ರೀತಿಯಲ್ಲಿ ಇದು ಸ್ತುತ್ಯವಾದದ್ದು, ಇನ್ನೊಂದು ರೀತಿಯಲ್ಲಿ ನೀಚವರ್ತನ. ಅದು ಹೇಗಾದರೂ ಪೂರ್ಣಯ್ಯನೂ ಕೃಷ್ಣರಾಯನೂ ಸುಲ್ತಾನನಲ್ಲಿ ಬಹು ಮುಖ್ಯವಾದ ಸ್ಥಾನದಲ್ಲಿ ಇದ್ದರು. ಟೀಪುವನ್ನು ಸಿಂಹಾಸನದಿಂದ ದೂಡಿ ಹಿಂದೂ ರಾಜನಿಗೆ ಮರಳಿ ರಾಷ್ಟ್ರವನ್ನು ಕೊಡಿಸಬೇಕೆಂಬ ಪ್ರಯತ್ನದಲ್ಲಿ ಈ ಬ್ರಾಹ್ಮಣರ ಸಹಾಯವನ್ನು ಪಡೆಯಬೇಕೆಂಬ ಯತ್ನಗಳು ನಡೆದವಂತೆ. ಪೂರ್ಣಯ್ಯನು ಇದು ಯಾವುದಕ್ಕೂ ಕಿವಿಗೊಡಲೇ ಇಲ್ಲ. ಟೀಪು ತೀರಿಹೋದಮೇಲೆ ರಾಜ್ಯವನ್ನು

ಅವನ ಮಕ್ಕಳಿಗೆ ಕೊಡುವುದೇ ಹಿಂದೂ ರಾಜನಿಗೆ ಕೊಡುವುದೇ ಎಂದು ಚರ್ಚೆ ಬಂದಾಗ ಕೂಡ ಅದನ್ನು ಟೀಪುವಿನ ಮಕ್ಕಳಿಗೆ ಕೊಡಬೇಕೆಂದು ಈತನು ಸಲಹೆ ಕೊಟ್ಟನಂತೆ. ಹಿಂದೂ ರಾಜನಿಗೆ ಕೊಟ್ಟರೋ ಎಂದು ಕೇಳಿದಾಗ ಅದಕ್ಕೆ ಅನುಕೂಲಗಳು ಕಡಮೆ ಎಂದು ಹೇಳಿದನಂತೆ. ಇದು ಈ ಮನುಷ್ಯನ ಸ್ವಾಮಿಭಕ್ತಿಯನ್ನು ತೋರಿಸುತ್ತದೆ. ಈಚೆಗೆ ಹಿಂದೂ ರಾಜನೇ ತನ್ನ ರಾಷ್ಟ್ರಕ್ಕೆ ಬಂದು ಈ ಪೂರ್ಣಯ್ಯನೇ ಅವನಿಗಾಗಿ ರಾಜ್ಯವನ್ನಾಳುತ್ತಿದ್ದಾನೆ. ಈಗಲೂ ಇವನಲ್ಲಿ ಅದೇ ಸ್ವಾಮಿಭಕ್ತಿ ಕಾಣುತ್ತದೆ. ಪಿತೂರಿ ನಡೆಯುತ್ತಿದ್ದ ಕಾಲದಲ್ಲಿ ಪೂರ್ಣಯ್ಯನು ಆ ಕಡೆಗೆ ಮನಸ್ಸು ಕೊಡದೇ ಇದ್ದರೂ ಕೃಷ್ಣರಾಯನು ಇವನಷ್ಟು ಸತ್ಯದಿಂದ ನಡೆದುಕೊಳ್ಳಲಿಲ್ಲವೆಂದು ತೋರುತ್ತದೆ. ಯಾವ ಕಾರಣದಿಂದಲಾದರೂ ಸುಲ್ತಾನನ ವಿಷಯದಲ್ಲಿ ಅಸಮಾಧಾನಪಟ್ಟಿದ್ದ ಕೆಲ ಕೆಲ ಜನರು ಈ ಪ್ರಧಾನನೊಂದಿಗೆ ಆ ಕೆಲಸದಲ್ಲಿ ನೆರವಾದರು. ಹೀಗೆ ನೆರವಾದವರಲ್ಲಿ ಮುಹಮ್ಮದ್ ಅಬ್ಬಾಸ್ ಒಬ್ಬ.

ಮುಹಮ್ಮದ್ ಅಬ್ಬಾಸನು ಈ ಪಿತೂರಿಯಲ್ಲಿ ಏನೇನು ಕೆಲಸ ಮಾಡಿದನೋ ಯಾರೂ ಹೇಳುವಂತಿಲ್ಲ. ಇವನು ಬುದ್ಧಿವಂತನೆಂದು ಮೊದಲೇ ಹೇಳಿದ್ದೇನೆ. ಓದುಬರಹ ಬಲ್ಲವನು. ಮತದಲ್ಲಿ ಮುಸಲ್ಮಾನ. ಸುಲ್ತಾನನ ಸಮೀಪದಲ್ಲಿ ಎಲ್ಲ ಕಡೆಯೂ ಹೋಗಿಬರುವುದಕ್ಕೆ ಇವನಿಗೆ ಅಧಿಕಾರವಿತ್ತು. ಇವನಿಗೆ ಬ್ರಾಹ್ಮಣರನ್ನು ಕಂಡರೆ ಆಗದೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಆದದರಿಂದ ಮುಸಲ್ಮಾನರಿಗೂ ಇವನ ವಿಷಯದಲ್ಲಿ ಸಂದೇಹವಿಲ್ಲ. ತಾನು ಜಾತಿ ಕೆಟ್ಟ ಸಂದರ್ಭದಲ್ಲಿ ತನ್ನ ವಿಷಯದಲ್ಲಿ ಕನಿಕರದಿಂದ ಮಾತನಾಡಿದಳೆಂಬ ಕಾರಣದಿಂದ ಇವನಿಗೆ ಮಹಾರಾಣಿ ಲಕ್ಷ್ಮಮ್ಮಣ್ಣಿಯಲ್ಲಿ ಗೌರವಬುದ್ಧಿ ಇತ್ತು. ಅಲ್ಲದೆ ಚಿಕ್ಕಂದಿನಲ್ಲಿ ಅರಮನೆಯಲ್ಲಿ ಹುಟ್ಟಿ ಬೆಳೆದವನು. ಅದರಿಂದಲೂ ಅವನಿಗೆ ರಾಜಮನೆತನದವರ ವಿಷಯದಲ್ಲಿ ಒಂದು ಮಮತೆ. ಒಂದೆರಡು ಸಲ ಇವನನ್ನು ನೋಡಿ ರಾಣಿ ಲಕ್ಷ್ಮಮ್ಮಣ್ಣಿ ತಮ್ಮ ಕೆಲಸ ನಡೆಯುವುದಕ್ಕೆ ಇವನಿಂದ ಬಹಳ ಸಹಾಯವಾಗುತ್ತದೆಂದು ತಿಳಿದುಕೊಂಡರು. ಒಂದೆರಡು ವರ್ಷ ನಡೆದ ಪಿತೂರಿಯಲ್ಲಿ ಅಬ್ಬಾಸನು ರಾಣಿಯ ಇಷ್ಟವನ್ನು ತಿಳಿದುಕೊಳ್ಳುತ್ತ,

ಆವಶ್ಯಕವಾದ ಕಾಗದಗಳನ್ನು ಬರೆದು ಮರೆಯ ಬೇಹುಗಾರರಿಂದ ಎತ್ತ ಲೆಂದರೆ ಅತ್ತ ಕಳುಹಿಸುತ್ತ, ಬರುವ ಉತ್ತರಗಳನ್ನು ಜನಕ್ಕೆ ಸಂಶಯ ಹುಟ್ಟದ ರೀತಿಯಲ್ಲಿ ಬರಮಾಡಿಕೊಂಡು ಅವನ್ನು ಮಹಾರಾಣಿಗೆ ಮುಟ್ಟಿಸುತ್ತ, ಹತ್ತು ಜನರ ಕೆಲಸವನ್ನು ಒಬ್ಬನು ಮಾಡಿದನು. "ಇದೆಲ್ಲದ ರಲ್ಲಿಯೂ ಅವನಿಗೆ ಒಂದು ಉದ್ದೇಶ: ತನ್ನನ್ನು ಜಾತಿ ಕೆಡಿಸಿದ ಈ ಜನ ರನ್ನು ರಾಜಪದವಿಯಿಂದ ಕೆಡಹಬೇಕು ಎನ್ನುವುದು. ತನ್ನವರಾದ ಹಿಂದೂ ಜನಗಳು ರಾಜರಾಗಬೇಕೆಂಬ ಎಣಿಕೆ ಅಷ್ಟು ಬಲವಾಗಿರಲಿಲ್ಲ: ಈ ಕ್ರೂರ ಕರ್ಮಿಗಳು ರಾಜ್ಯವನ್ನಾಳುವುದಕ್ಕೆ ಯೋಗ್ಯರಲ್ಲ, ಇವರು ತನಗೆ ಕೇಡನ್ನು ಮಾಡಿದರು, ಇವರಿಗೆ ಪ್ರತೀಕಾರ ಮಾಡಬೇಕು, ಎನ್ನುವುದೇ ಅವನ ಮುಖ್ಯವಾದ ಎಣಿಕೆ."

ಹೀಗಿರುತ್ತಿರಲಾಗಿ ಒಂದು ಸಲ ಟೀಪು ಉತ್ತರದ ಕಡೆ ಸೈನ್ಯದೊಡನೆ ಹೋಗಿದ್ದಾಗ ಪಿತೂರಿಯ ಪತ್ರಗಳ ಓಡಿಯಾಟದಲ್ಲಿ ಅಬ್ಬಾಸನು ಒಂದು ಸ್ವಲ್ಪ ಅಜಾಗ್ರತೆಯಲ್ಲಿದ್ದನು. ಮದರಾಸಿಗೆ ಬರೆದ ಒಂದು ಕಾಗದ ಸುಲ್ತಾನರ ಪಕ್ಷದವರಿಗೆ ಸಿಕ್ಕಿಬಿತ್ತು. ಇದರ ಬರವಣಿಗೆ ಯಾರದೆಂದು ವಿಚಾರಿಸಿದರು. ಅದು ಅಬ್ಬಾಸನದು. ಸುಲ್ತಾನನು ಈ ವಿಷಯವನ್ನು ಕೇಳಿ ಹಿಂತಿರುಗಿ ಬಂದನು. ಅಬ್ಬಾಸನ ವಿಚಾರಣೆಯನ್ನು ತಾನೇ ನಡೆಸಿದನು. ಅಬ್ಬಾಸ್ ಯಾವ ವಿಷಯವನ್ನೂ ಹೇಳಲಿಲ್ಲ, ಈ ಕಾಗದವನ್ನು ಯಾರಾದರೂ ಬರೆಯಿಸಿದರೆಂದು ಒಪ್ಪಿಕೊಳ್ಳಲಿಲ್ಲ. ತಾನೇ ಅವಿಶ್ವಾಸಿ, ಅದನ್ನು ತಾನೇ ಬರೆದದ್ದು ಎಂದು ಒಂದು ಮಾತನ್ನು ಹೇಳಿ ಮುಗಿಸಿದನು. ಇನ್ನು ಯಾರೋ ಹೇಳಿದ ಮಾತಿನಿಂದ ಕೃಷ್ಣರಾಯನೂ ಇದರಲ್ಲಿ ಸಹಾಯವಾಗಿದ್ದನೆಂದು ತಿಳಿದು ಸುಲ್ತಾನನು ಅವನನ್ನು ಗುಪ್ತವಾಗಿ ಕೊಲ್ಲಿಸಿದನಂತೆ. ಅವನ ಹೆಂಡತಿ ಚೆಲುವೆಯಾದ ಸಾಧ್ವಿ. ಟೀಪು ಅವಳನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಂಡನು. ಅಬ್ಬಾಸನು ದ್ರೋಹಿಯೆಂದು ನಿರ್ಧಾರವಾಯಿತು. ಅವನನ್ನು ಆನೆಯ ಕಾಲಿಗೆ ಕಟ್ಟಿಸಿ ಊರಿನಲ್ಲಿ ಸುತ್ತಿಸಿ ಎಂದು ಸುಲ್ತಾನನು ಅಪ್ಪಣೆ ಮಾಡಿದನು. ಅಬ್ಬಾಸನು ಸುಲ್ತಾನನನ್ನೂ ಅವನ ಮತವನ್ನೂ ಬಾಯಿತುಂಬ ಬೈದನು. ತಾನು ಹುಟ್ಟಿದ ಹಿಂದೂ ಮತ ಧೈರ್ಯವಿಲ್ಲದ ಮತ, ಆ ಮುಟ್ಠಾಳ ಮತದಿಂದ ಯಾರೂ ಬದುಕುವಂತಿಲ್ಲ, ಅದು

ಹಾಳಾಗಬೇಕು, ಎಂದನು. "ನೀನು ಕೊಟ್ಟಿರುವ ಶಿಕ್ಷೆಯಿಂದ ನನಗೆ ಕೆಟ್ಟದೇನೂ ಆಗುವುದಿಲ್ಲ. ನನಗೆ ಈ ಜನ್ಮ ಸಾಕಾಗಿತ್ತು. ನಾನು ಸಂತೋಷದಿಂದ ಪ್ರಾಣವನ್ನು ಬಿಡುತ್ತೇನೆ. ಆದರೆ ಕೇಳು ಸುಲ್ತಾನ್, ನಿನ್ನ ಸಿಂಹಾಸನ ನಿಲ್ಲುವುದು ಸಾಧ್ಯವಲ್ಲ. ಅದು ಉರುಳುವುದಕ್ಕೆ ಬೇಕಾದ ಎಲ್ಲಾ ಏರ್ಪಾಡೂ ಭಗವಂತನ ಕೃಪೆಯಿಂದ ನಡೆದಿದೆ" ಎಂದು ಹೇಳಿ ಇವನನ್ನು ಸೆಳೆಯಲು ತಂದಿದ್ದ ಆನೆಯ ಬಳಿಗೆ ತಾನೇ ಹೋಗಿ ನಿಂತನು, ಸಂತೋಷವಾಗಿ ಜೀವವನ್ನು ಬಿಟ್ಟನು. ಶ್ರೀರಂಗಪಟ್ಟಣದ ಜನರು ಮನೆಗಳೊಳಗೆ ಕುಳಿತು ಬಾಗಿಲುಗಳನ್ನು ಹಾಕಿಕೊಂಡು ಈ ಭೀಕರ ದೃಶ್ಯವನ್ನು ನೋಡಲಾರದೆ ಅವಿತುಕೊಂಡರು. ಅರ್ಧ ಭಯ ಅರ್ಧ ನೋಡಬೇಕೆಂಬ ಆಶೆಯಿಂದ ಮಾಳಿಗೆಯ ಮೇಲಿಂದಲೋ ಅರೆತೆರೆದ ಕಿಟಕಿಯಿಂದಲೋ ಇದನ್ನು ನೋಡಿದವರು ಅಬ್ಬಾಸನ ಮುಖದಲ್ಲಿ ಆನೆ ತನ್ನನ್ನು ನೆಲದ ಮೇಲೆ ಸೆಳೆಯುವುದರ ನೋವಿನೊಂದಿಗೆ ಭಗವತ್ಸೇವೆಯಲ್ಲಿ ಜೀವವನ್ನು ಬಿಡುತ್ತಿದ್ದ ಧೀರನ ಆನಂದ ಸೂಚಕವಾದ ನಗೆಯನ್ನು ಕಂಡರಂತೆ. ಅಬ್ಬಾಸ್ ಅಥವಾ ನರಸಿಂಹನ ಚರಿತ್ರೆ ಅಂದು ಮುಗಿಯಿತು.

ಆದರೆ ರಾಷ್ಟ್ರವನ್ನು ಟೀಪುವಿನ ಕೈಯಿಂದ ತಪ್ಪಿಸುವುದಕ್ಕೆ ಅವನು ಮಾಡಿದ ಪ್ರಯತ್ನ ಅವನೊಂದಿಗೆ ಮುಗಿಯಲಿಲ್ಲ. ಅವನು ಹತ್ತಿಸಿದ್ದ ಸಣ್ಣ ಕಿಡಿ ಮೂರು ವರುಷ ಹೊಗೆಯಿತು. ಶ್ರೀರಂಗಪಟ್ಟಣದ ಕೊನೆಯ ಮುತ್ತಿಗೆಯಲ್ಲಿ ಮುಗಿಯಿತು. ಟೀಪೂಸುಲ್ತಾನನು ಆ ಕದನದಲ್ಲಿಯೇ ಜೀವವನ್ನು ಕಳೆದುಕೊಂಡನು. ಹಿಂದೂ ರಾಜನು ಮರಳಿ ಸಿಂಹಾಸನಕ್ಕೆ ಬಂದನು. ಈಗ ಅವನು ಆಳುತ್ತಿದಾನೆ. ನರಸಿಂಹನ ಕತೆಯ ವಿವರ ಒಂದೊಂದೂ ನಿಜವೆಂದು ನಾವು ನಂಬಬೇಕಾದದಿಲ್ಲ; ಇಲ್ಲಿಯ ಜನ ಇಂಥ ವಿಷಯವನು ಹೇಳಬೇಕಾದರೆ ಇಲ್ಲದ ಮಾತನ್ನು ಸೇರಿಸುವುದಕ್ಕೆ ಹಿಂದೆಗೆಯುವುದಿಲ್ಲ. ಆದರೆ ಮೊತ್ತದಲ್ಲಿ ಅದು ನಿಜವೆಂದು ನಾವು ನಂಬ ಬಹುದು. ಅದರಿಂದ ನಾವು ಒಂದು ವಿಷಯವನ್ನು ತಿಳಿಯಬೇಕು. ಟೀಪುವಿನ ಮತಾಭಿಮಾನ ಅತಿಯಾಗದೆ ಮಹಮ್ಮದ್ ಅಬ್ಬಾಸನನ್ನೂ ಅವನಂಥವರನ್ನೂ ಅವನ ಜನರು ಬಲವಂತದಿಂದ ಮತಕ್ಕೆ ಸೇರಿಸಿಕೊಳ್ಳದೆ ಇದ್ದಿದ್ದರೆ ಇಂದು ಟೀಪು ಇನ್ನೂ ಆಳಬಹುದಾಗಿತ್ತೇನೊ. ಆದರೆ

ಟೀಪುವಿಗೆ ಆಗ ಅದು ತೋರಲಿಲ್ಲ. ಅವನ ಜನರ ಆತುರದಿಂದ ಅವನ ಮತಕ್ಕೆ ನಷ್ಟವುಂಟಾಯಿತು. ನಾವು ಅವರಂತೆ ಆತುರಪಟ್ಟು ನಮ್ಮ ಮತದ ಪ್ರಚಾರಕ್ಕೆ ತೊಂದರೆ ತರಬಾರದು.

ಹೀಗೆಂದ ಮಾತ್ರಕ್ಕೆ ನಮ್ಮ ಮತ ಹರಡುವುದು ಸಾವಕಾಶವಾಗುವುದೆಂದು ನಾವು ತಿಳಿಯಬೇಕಾದದ್ದಿಲ್ಲ. ಹಿಂದೂ ಮತದಲ್ಲಿ ಕೆಲವು ಕೊರತೆಗಳಿವೆ. ಮುಹಮ್ಮದೀಯ ಮತವು ಆ ಕೊರತೆಗಳನ್ನು ಒಂದು ರೀತಿಯಲ್ಲಿ ನಿವಾರಿಸಬಹುದು. ಆದರೆ ಅದರ ಅನುಯಾಯಿಗಳ ಕೆಲವು ರೀತಿಗಳಿಂದ ಅದು ವಿಶೇಷವಾಗಿ ಜನರ ಮನಸ್ಸನ್ನು ಒಲಿಸಿಕೊಳ್ಳಲಾರದು. ಕ್ರೈಸ್ತ ಮತವು ಹಿಂದೂ ಮತದ ಕೊರತೆಗಳನ್ನು ನಿವಾರಿಸುತ್ತದೆ; ಮುಹಮ್ಮದೀಯ ಮತದ ಕಾಠಿಣ್ಯವಿಲ್ಲದಿರುವುದರಿಂದ ಜನರನ್ನು ಒಲಿಸಿಕೊಳ್ಳುತ್ತದೆ. ಹಿಂದೂ ಮತದ ಈ ಕೊರತೆಗಳು ಮುಖ್ಯವಾಗಿ ಮೂರು: ಒಂದು ಅದರ ದೇವರು ಸೃಷ್ಟಿಯನ್ನು ಒಂದು ಲೀಲೆಯೆಂದು ನಡೆಸುತ್ತಿರುವನು ಎನ್ನುವುದು. ಎಂದರೆ ಪ್ರಪಂಚದ ಕಷ್ಟ ದುಃಖ ಬೇನೆಗಳು ಅವನಿಗೆ ಆಟ. ಕ್ರೀಸ್ತಮತದ ದೇವರಂತೆ ಈ ದೇವರು ಮನುಷ್ಯನ ನೋವಿಗಾಗಿ ಕರಗುವವನಲ್ಲ. ಜನ ಸುಖವಾಗಿರುವ ನಾಡಿನಲ್ಲಿ ದೇವರು ಕರುಣಾಮಯನಾಗಿಲ್ಲದಿದ್ದರೂ ತೊಂದರೆಯಿಲ್ಲ. ಕಷ್ಟದಿಂದ ತುಂಬಿರುವ ಈ ಜನಾಂಗದಲ್ಲಿ ದೇವರು ಕಾರುಣ್ಯಮೂರ್ತಿಯಲ್ಲದೆ ಎಲ್ಲವನ್ನೂ ಲೀಲೆಯೆಂದು ನೋಡುವನೆಂದರೆ ಜನರ ಗತಿಯೇನು? ಈ ಜನರಿಗೆ ಕ್ರೈಸ್ತಮತದ ದೇವರು ಅಗತ್ಯವಾಗಿ ಬೇಕು. ಅವನ ಸ್ವರೂಪವನ್ನು ನಾವು ವಿವರಿಸುವುದೇ ತಡ, ಎಲ್ಲರೂ ಬಂದು ಅವನನ್ನು ಆಶ್ರಯಿಸುವರು. ಇನ್ನೊಂದು ಕೊರತೆಯೇನೆಂದರೆ, ಈ ಮತದ ಮುಖ್ಯ ವರ್ಗದವರಾದ ಬ್ರಾಹ್ಮಣರು ಡಾಂಭಿಕರು, ಅಹಂಕಾರಿಗಳು, ಮತಾಭಿಮಾನ ವಿಹೀನರು. ತಾವು ಸೃಷ್ಟಿಯಲ್ಲಿ ಉಳಿದ ಎಲ್ಲ ಜನಕ್ಕಿಂತಲೂ ಶ್ರೇಷ್ಠರೆಂದು ಇವರ ಭಾವನೆ. ಸೃಷ್ಟಿಗೆಲ್ಲ ಆರ್ಯಾವರ್ತ ಪುಣ್ಯಭೂಮಿ; ಏಕೆಂದರೆ ಅದರಲ್ಲಿ ವರ್ಣ, ಆಶ್ರಮ, ಧರ್ಮಗಳಿವೆ; ಇಲ್ಲಿಯ ಜನರು ಉಳಿದ ಎಲ್ಲ ದೇಶದ ಜನಗಳಿಗಿಂತ ಶ್ರೇಷ್ಠರು; ಇವರಲ್ಲಿ ನಾಲ್ಕು ಪಂಗಡ; ಅವರಲ್ಲಿ ಬ್ರಾಹ್ಮಣರು ಉತ್ತಮರು; ಇವರು ಬ್ರಹ್ಮನ ಮುಖದಿಂದ ಬಂದವರು; ಉಳಿದವರು

ಅವನ ಇತರ ಅಂಗಗಳಿಂದ ಬಂದವರು; ಇವರು ಭೂಮಿಗೆ ದೇವತೆಗಳು; ಉಳಿದ ಜನರೆಲ್ಲ ಇವರಿಗೆ ಕಡಮೆ; ಜನ್ಮಜನ್ಮಾಂತರ ಪ್ರಯತ್ನಪಟ್ಟು ಬ್ರಾಹ್ಮಣರಾಗಬೇಕು. ಇಂಥ ಭಾವನೆಯಿಂದ ಇವರು ವರ್ತಿಸುವುದರ ಫಲವೇನೆಂದರೆ ಹಿಂದಿನಿಂದ ನಡೆದಂತೆ ನಡೆಯೋಣವೆನ್ನುವವರು ಇವರ ಅಹಂಕಾರವನ್ನು ಹೇಗೋ ಸಹಿಸಿಕೊಂಡು ಹೋಗುತ್ತಾರೆ. ಉಳಿದವರು ಇವರು ನಮಗೆ ಬೇಡವೆನ್ನುತ್ತಾರೆ. ಹಿಂದೂ ಮತದಲ್ಲಿ ಈ ಬ್ರಾಹ್ಮಣರನ್ನು ಬೇಡವೆನ್ನುವವರು ಎಷ್ಟು ಮಂದಿಯೋ. ಇವರು ಕೂಡ, ನಿಮಗೆ ಇಷ್ಟವಿದ್ದರೆ ಬಂದು ನಮಗೆ ಕಡಮೆಯೆಂದು ಇರಿ, ಇಲ್ಲದಿದ್ದರೆ ಬಿಡಿ, ಎನ್ನುತ್ತಾರೆ. ಇಷ್ಟಾಗಿ ಇವರನ್ನು ದೊಡ್ಡವರೆಂದೇ ಒಪ್ಪಿಕೊಂಡರೆ ಉಳಿದವರಿಗೆ ಏನು ಪ್ರಯೋಜನ ಎಂದರೆ ಇವರನ್ನು ದೊಡ್ಡವರೆಂದದ್ದೇ ಪ್ರಯೋಜನ. ಇತರರು ಏನೇ ಆದರೂ ಬ್ರಾಹ್ಮಣರು ಅವರ ಸಹಾಯಕ್ಕೆ ಹೋಗುವುದಿಲ್ಲ. ಜಾತಿ ಕೆಡಿಸಿದರೆಂದು ಯಾರಾದರೂ ಬಂದು ಜಾತಿಗೆ ಸೇರಿಸಿಕೊಳ್ಳಿ ಎಂದರೆ ಇವರು ಆಗುವುದಿಲ್ಲವೆನ್ನುತ್ತಾರೆ. ನರಸಿಂಹನ ಕತೆಯಿಂದಲೇ ಇದು ವ್ಯಕ್ತವಾಗುತ್ತದೆ. ಹಿಂದೂ ಮತದಲ್ಲಿ ನಮ್ಮಲ್ಲಿ ವಾಲ್ವ್ ಎಂದು ಹೇಳುವಂತೆ ಒಂದೇ ಮುಖವಾದ ದಾರಿಯಿದೆ. ಯಾರೇ ಆಗಲಿ ಅದರಿಂದ ಹೊರಕ್ಕೆ ಹೋಗಬಹುದು, ಒಳಕ್ಕೆ ಬರುವಂತಿಲ್ಲ. ಹಾಗೆಲ್ಲಾದರೂ ಬಂದು ಬಿಟ್ಟಾರೆಂದು ಬಾಗಿಲಿಗೆ ಬ್ರಾಹ್ಮಣರು ಕಾವಲು. ಹಿಂದೂ ಮತದ ಇನ್ನೊಂದು ಕೊರತೆ, ಇದರ ವ್ಯವಹಾರದಲ್ಲಿ ಸೇರಿಕೊಂಡಿರುವ ದೋಷಗಳು. ಮತವೆನ್ನುವುದು ಶುದ್ಧವಾಗುವುದಕ್ಕೆ ಯತ್ನಮಾಡಬೇಕು; ಅಶುದ್ಧವಾದದ್ದನ್ನು ಬಿಡಲು ನೋಡಬೇಕು. ಇಲ್ಲಿ ಮತದಲ್ಲಿ ಎತ್ತ ನೋಡಿದರೂ ಅಶುದ್ಧವೇ ಕಣ್ಣಿಗೆ ಕಾಣುತ್ತಿರುತ್ತದೆ. ಇವರ ದೇವರಿಗೆ ಹೆಂಡತಿಯಿಲ್ಲದಿದ್ದರಾಗುವುದಿಲ್ಲ. ಇವರ ಅನೇಕ ದೇವರುಗಳಿಗೆ ಹಲವು ಹೆಂಡಿರು. ಇವರ ಮುಖ್ಯ ದೈವದ ಮುಖ್ಯ ಅವತಾರಕ್ಕೆ ಹೆಂಗಸರೊಡನೆ ಆಡುವುದು ಮುಖ್ಯ ಕರ್ಮ. ಇವರ ದೇವಾಲಯಗಳಲ್ಲಿ ಉಳಿದ ಎಲ್ಲ ಶಿಲ್ಪದ ಜೊತೆಗೆ ನಗ್ನಾಕೃತಿ ಮೊದಲಾದ ಕೊಳಚೆಯ ಚಿತ್ರಗಳು ಇರುತ್ತವೆ. ದೇವರನ್ನು ಬಿಜಮಾಡಿಸುವ ತೇರಿನಲ್ಲಿ ಕೆಳಗಿನ ಎರಡು ಸಾಲುಗಳು ಎಂಥೆಂಥವೋ ಚಿತ್ರಗಳು. ಈ ಊರಿನ ತೇರನ್ನು ನೋಡಬೇಕು. ಇದನ್ನು ಕೊರೆಯು

ವವನು ನಾಚಿಕೆ ಇಲ್ಲದೆ ಕೊರೆದರೆ ಇದನ್ನು ನೋಡುವವನು ಏಕೆ ನಾಚಿಕೊಳ್ಳುವುದಿಲ್ಲ ಎಂದು ಆಶ್ಚರ್ಯವಾಗುತ್ತದೆ. ಒಂದು ಸಲ ಮುಡುಕುತೊರೆ ಎಂಬ ಊರಿನಲ್ಲಿ ಜಾತ್ರೆಗೆ ಹೋಗಿದ್ದೆನು. ಜಾತ್ರೆಯಲ್ಲಿ ಒಂದು ಭಾಗ ಒಂದು ಸಣ್ಣ ಉತ್ಸವ. ಎರಡು ಬೊಂಬೆಗಳಿಂದ ಆಟವಾಡಿಸುತ್ತ ಉತ್ಸವ ನಡೆಸುತ್ತಿದ್ದರು. ದೇವರ ಉತ್ಸವವೆನ್ನುವುದು ಒಂದು ಕಡೆ ನಡೆಯುತ್ತಿದೆ. ಇದು ಅದರ ಅಂಗ. ಆ ಉತ್ಸವಕ್ಕೆಂದೇ ಜನ ಬರುವುದು. ಆದರೆ ಈ ಬೊಂಬೆಗಳ ಉತ್ಸವಕ್ಕೆ ಜನ ಕಡಮೆಯಿರಲಿಲ್ಲ. ಇನ್ನು ಇದರ ವಿವರವನ್ನೆಲ್ಲ ಹೇಳುವುದಕ್ಕೆ ನನಗೆ ನಾಚಿಕೆ. ಇನ್ನೂ ಹಲವು ಕಾರಣಗಳಿಂದ ನನಗೆ ಒಂದು ವಿಷಯ ನಿದರ್ಶನಕ್ಕೆ ಬಂದಿದೆ. ಹಿಂದೂ ಧರ್ಮ ಉಳಿಯುವ ಧರ್ಮವಲ್ಲ. ಈ ದೇಶಕ್ಕೆ ಕ್ರೈಸ್ತ ಧರ್ಮವೇ ಗತಿಯೆಂದು ನಾನು ತಿಳಿದುಕೊಂಡಿದ್ದೇನೆ. ನನ್ನ ಅಭಿಪ್ರಾಯದ ಕಾರಣಗಳನ್ನು ಇನ್ನು ವಿವರವಾಗಿ ತಿಳಿಸತೊಡಗಿದರೆ ಬಹುದೂರ ಬರೆಯಬೇಕಾಗುತ್ತದೆ. ಈ ಪತ್ರವು ಈಗಾಗಲೇ ಬಹಳ ಉದ್ದವಾಗಿರುವುದರಿಂದ ನಾನು ಇದನ್ನು ಈಗ ಮುಗಿಸುತ್ತೇನೆ. ಉಳಿದ ವಿವರವನ್ನು ಮುಂದಿನ ಪತ್ರದಲ್ಲಿ ಬರೆಯುತ್ತೇನೆ.

ನನಗೆ ಇಲ್ಲಿ ಎಲ್ಲ ವಿಷಯದಲ್ಲಿಯೂ ಅನುಕೂಲವಾಗಿದೆ. ನಮ್ಮ ಶಿಷ್ಯವರ್ಗಕ್ಕೆ ನಮ್ಮ ಕ್ಷೇಮಸಮಾಚಾರವನ್ನು ಮತ್ತು ಹರಕೆಗಳನ್ನು ತಿಳಿಸಿ. ನಿಮಗೆ ಬಿಡುವಾದಾಗ ಒಂದು ಕಾಗದವನ್ನು ಬರೆದು ಕಳುಹಿಸಿದರೆ ನಾನು ನೋಡಿ ಬಹಳ ಸಂತೋಷಪಡುತ್ತೇನೆ.

ಹೀಗೆ ನಿಮ್ಮ ನಮ್ರ ಸೇವಕ,
ಡೂಬಾಯ್.

# ಹೇಮಕೂಟದಿಂದ ಬಂದ ಮೇಲೆ

'ಮಾಲಿನೀ ತೀರದ ಕಣ್ವಋಷಿಗಳ ಆಶ್ರಮದ ಸಮೀಪ. ಹಸ್ತಿನಾವತಿಯಿಂದ ಆಶ್ರಮಕ್ಕೆ ಬರುವ ದಾರಿಯಲ್ಲಿ ಇಬ್ಬರು ತರುಣಿಯರು ಮೆಲ್ಲಗೆ ಮಾತನಾಡಿಕೊಳ್ಳುತ್ತ ಮೆಲ್ಲನೆ ಆಶ್ರಮದಿಂದ ನಡೆದುಹೋಗುತ್ತಿದಾರೆ. ಒಬ್ಬಳು, ಈ ಹೊತ್ತಾದರೂ ಬರುವರೋ ಇಲ್ಲವೋ, ಇಷ್ಟುಹೊತ್ತಿಗೆ ಬರಬೇಕಾಗಿತ್ತಲ್ಲ, ಎಂದಳು. ಇನ್ನೊಬ್ಬಳು, ಏನು ಕೆಲಸವೋ, ಒಂದು ರಾಷ್ಟ್ರದ ರಾಣಿಯೆಂದಮೇಲೆ ಎಲ್ಲವನ್ನೂ ಬಿಟ್ಟುಬರುವುದು ಸುಮ್ಮನೆ ಆಗುತ್ತದೆಯೇ, ಇಂದಲ್ಲದಿದ್ದರೆ ನಾಳೆಯಾದರೂ ಬರುತ್ತಾರೆ, ಎಂದಳು. ''ಮೊದಲನೆಯವಳು, ನನಗೆ ಸುಮ್ಮನೆ ಆಸೆಯಾಗುತ್ತದೆ, ನಮ್ಮ ಶಕುಂತಲೆಯನ್ನು ನೋಡಬೇಕೆಂದು, ನೋಡಿ ಏಳು ವರ್ಷದ ಮೇಲಾಯಿತಲ್ಲ, ಈಗ ಹೇಗಾಗಿದ್ದಾಳೋ, ಮಗುವನ್ನಂತೂ ನಾವು ನೋಡಿಯೇ ಇಲ್ಲ, ಎಂದಳು.'' ಅವಳ ಜೊತೆಯವಳು, ನನಗೂ ಬಹಳ ಆಸೆ, '' ಈ ಏಳು ವರ್ಷದಲ್ಲಿ ಅವಳನ್ನು ಎಷ್ಟು ಸಲ ಕನಸಿನಲ್ಲಿ ನೋಡಿದೇನೋ, 'ನಮ್ಮ ಶಕುಂತಲೆಯೂ ಖಂಡಿತ ನಮ್ಮನ್ನು ಬಹಳ ಸಲ ನೆನೆದುಕೊಂಡಿರಬಹುದು, ಎಂದಳು.''

'' ಮೊದಲು ಮಾತನಾಡಿದವಳು ಅನಸೂಯೆ; ಎರಡನೆಯವಳು ಪ್ರಿಯಂವದೆ. ಅವರು ರಾಣಿಯಾದ ಶಕುಂತಲೆಯ ಬರವನ್ನು ನಿರೀಕ್ಷಿಸುತ್ತಿದ್ದರು.'' ಅವಳು ಹಿಂದಿನ ದಿನವೇ ಬರಬೇಕಾಗಿತ್ತು; ಬರಲಿಲ್ಲ. ಇಂದು ಬರುವೆನೆಂದು ಹೇಳಿಕಳುಹಿಸಿದ್ದಳು.''ಆಶ್ರಮದ ಬಾಗಿಲ ಬಳಿ ರಾಣಿಯನ್ನು ಬರಮಾಡಿಕೊಳ್ಳುವುದಕ್ಕೆ ಆಶ್ರಮದ ಪ್ರತಿನಿಧಿಗಳು ನಿಂತಿದ್ದರು.'''' ಅವಳ ಈ ಸಖಿಯರಿಬ್ಬರೂ ಅವಳು ಬರುವವರೆಗೂ ಕಾದಿರಲು ಮನಸ್ಸು ತಡೆಯದೆ ಮೆಲ್ಲನೆ ದಾರಿಯಲ್ಲಿ ಮುಂದುವರಿದಿದ್ದರು. ''ರಾಣಿ ರಥದಲ್ಲಿ ಬರುತ್ತಿರಬೇಕಾದರೆ, ಐದು ನಿಮಿಷ ಮುಂದಾಗಿ ಅವಳನ್ನು ನೋಡಬೇಕೆಂದು ಇವರ ಅಪೇಕ್ಷೆ.''

ಬರುವವರನ್ನು ಎದುರುನೋಡುತ್ತ ಹೊತ್ತನ್ನು ಕಳೆಯುವುದು ಬಹು ಬೇಸರದ ಕೆಲಸ. 'ಇವರೋ ಶಕುಂತಲೆಯೊಂದಿಗೆ ಹತ್ತಾರು ವರ್ಷ ಅಕ್ಕ ತಂಗಿಯರಂತೆ ಬೆಳೆದಿದ್ದ ಸಖಿಯರು; ಶಕುಂತಲೆಯ ಜೀವದ ಅರ್ಧ

ದೆಂಬಂತೆ ಇದ್ದವರು. ಅವಳನ್ನು ಏಳು ವರ್ಷದ ಹಿಂದೆ ದುಷ್ಯಂತನ ಬಳಿಗೆ ಕಳುಹಿಸುವ ಸಂದರ್ಭದಲ್ಲಿ ನೋಡಿದ್ದೇ ನೋಡಿದ್ದು. ಈಚೆಗೆ ಇವರಿಗೆ ಅವಳನ್ನು ನೋಡುವ ಅವಕಾಶವಿರಲಿಲ್ಲ. ಶಕುಂತಲೆ ಆಶ್ರಮದಿಂದ ಹೋದ ತಿಂಗಳವೇಲೆ ಗೌತಮಿಯೂ ಶಾರ್ಙ್ಗರವ ಶಾರದ್ವತರೂ ಹಿಂದಕ್ಕೆ ಬಂದರು. ಅವರಿಂದ ಶಕುಂತಲೆಗೆ ಆದ ಅವಮಾನದ ಕತೆಯನ್ನು ಕೇಳಿ ಆಶ್ರಮವಾಸಿಗಳೆಲ್ಲ ನೊಂದರು. ಶಕುಂತಲೆಯನ್ನು ಮೇನಕೆ ಕರೆದು ಕೊಂಡುಹೋದದ್ದಾಗಲಿ, ಅವಳು ಮರೀಚಿ ಋಷಿಗಳ ಆಶ್ರಮದಲ್ಲಿ ಮಗನನ್ನು ಹೆತ್ತು ಸುಖವಾಗಿದ್ದಾಳೆಂಬುದಾಗಲಿ ಇವರಿಗೆ ತಿಳಿಯಲಿಲ್ಲ. ಕಣ್ವಋಷಿಗಳಿಗೆ ತಿಳಿಯಿತೇನೊ; ಅವರು ಆ ಮಾತನ್ನು ಎತ್ತಲಿಲ್ಲ. ಗೌತಮೀದೇವಿ ಒಂದು ಸಲ ಋಷಿಗಳನ್ನು ಕುರಿತು, "ಮಗು ಸುರಕ್ಷಿತವಾಗಿದ್ದಾಳೆಯೇ? ಹೇಗೋ ವರ್ತಮಾನ ತರಿಸಿಕೊಂಡರೆ ನನಗೆ ಮನಸ್ಸು ಸ್ವಲ್ಪ ಸಮಾಧಾನವಾಗಿರುತ್ತದೆ" ಎಂದಳು. ಋಷಿಗಳು ಅದಕ್ಕೆ "ಅವಳು ಸೌಖ್ಯವಾಗಿದ್ದಾಳೆ, ಆದರೆ ಈಗಣ ಅನಿಷ್ಟ ಕಳೆಯುವುದಕ್ಕೆ ಸ್ವಲ್ಪ ದಿನ ಬೇಕು, ಆಗ್ಯೆ ಎಲ್ಲಾ ಸರಿಹೋಗುತ್ತದೆ. ಅದುವರೆಗೆ ನಾವು ವಿಚಾರಿಸಿ ಪ್ರಯೋಜನವಿಲ್ಲ, ಆಗ್ಯೆ ಅವಳ ಕ್ಷೇಮಸಮಾಚಾರ ನಮಗೆ ತಾನೇ ತಿಳಿಯುತ್ತದೆ" ಎಂದರು. ಉಳಿದ ವಿವರ ಅವರನ್ನು ಇವರು ಯಾರೂ ಕೇಳುವಂತಿಲ್ಲ. ಅವರು ಅದನ್ನು ಇವರೊಂದಿಗೆ ಚರ್ಚೆಮಾಡುವವರೂ ಅಲ್ಲ. ಹೀಗೆ ಹತ್ತಿರ ಹತ್ತಿರ ಆರು ವರ್ಷ ಆದಮೇಲೆ ಒಂದು ದಿನ ರಾಜಪುರುಷನೊಬ್ಬನು ಚಕ್ರವರ್ತಿಯ ಕಡೆಯಿಂದ ಮರ್ಯಾದೆಗಳ ಸಮೇತ ಬಂದು "ರಾಜನು ಹೇಮಕೂಟದಲ್ಲಿ ಶಕುಂತಲೆಯನ್ನು ಕಂಡ ವಿಷಯವನ್ನೂ ಅಲ್ಲಿಂದ ಅವಳನ್ನೂ ಕುಮಾರ ಭರತನನ್ನೂ ಕರೆತಂದ ವಿಷಯವನ್ನೂ ಕಣ್ವಋಷಿಗಳ ಸನ್ನಿಧಿಯಲ್ಲಿ ನಿವೇದಿಸಿದನು. ಆ ದಿನ ಆಶ್ರಮವಾಸಿಗಳ ಆನಂದ ಎಷ್ಟೆಂದು ಹೇಳುವಂತಿಲ್ಲ. ಕುಲಪತಿಗಳು ಐದು ವರ್ಷ ನಕ್ಕಿರಲಿಲ್ಲ; ಅಂದು ನಕ್ಕರು. ಸಂಜೆಯಲ್ಲಿ ಪ್ರಿಯಂವದೆಯೂ ಅನಸೂಯೆಯೂ ಹೇಮಾಂತದಲ್ಲಿ ಹರಸುವುದಕ್ಕೆ ತಮ್ಮ ಮಕ್ಕಳನ್ನು ತಂದಾಗ ಇವರು ಅವನ್ನು ಕೈಯಲ್ಲಿ ಹಿಡಿದುಕೊಂಡು ಮುದ್ದಿಸಿದರು; ಸ್ವಲ್ಪ ನಗಿಸಿದರು. ಆ ಹೊತ್ತೆಲ್ಲಾ ಅವರ ನಡೆನುಡಿಯಲ್ಲಿ ಹೊಸದೊಂದು

ಉತ್ಸಾಹ ಕಾಣುತ್ತಿತ್ತು. "ಸಂಯಮಿಗಳಾದ ಅವರಿಗೇ ಹಾಗಿತ್ತೆಂದ ಮೇಲೆ ಉಳಿದವರ ಮಾತೇನು? ಎಲ್ಲರಿಗೂ ಮಿತಿಮೀರಿದ ಸಂತೋಷ. ಆಶ್ರಮದ ಮೃಗಪಕ್ಷಿಗಳೂ ಸುದ್ದಿಯನ್ನು ತಿಳಿದಂತೆಯೇ ಎಂದಿಗಿಂತ ಹೆಚ್ಚಾಗಿ ನಲಿದವು." ಅಂದು ಅವಕ್ಕೆ ಕಾವಲು ಕಡಮೆ; ಇದೇನೋ ಹಬ್ಬವೆಂದು ಅವುಗಳ ಜೀವಕ್ಕೆ ಕಂಡಿರಬೇಕು. "ಅಲ್ಲದೆ ಸಾತ್ವಿಕರ ಬಳಿಯ ಮೃಗಗಳೂ ಇನ್ನೊಂದು ಜೀವದ ನೋವು ನಲಿವಿನ ಸುಳುವನ್ನು ಸಹಜ ವಾಗಿ ಅರಿಯುತ್ತವೆ." ಪೂರ್ವದಿಂದ ಆಶ್ರಮದಲ್ಲಿ ಬೆಳೆದು ಋಷಿಗಳೊಡನೆ ವೃದ್ಧವಾಗಿ ಅವರ ತಪಸ್ಸಿನ ಪ್ರಭಾವದಲ್ಲಿ ಭಾಗಿಗಳಾದುವೆಂಬಂಥ ವೃಕ್ಷಗಳೂ ಅಂದು ಸಂಪ್ರದಾಯದ ಗಾಂಭೀರ್ಯದೊಡನೆ ಹೊಸದೊಂದು ಉಲ್ಲಾಸವನ್ನು ಸೂಚಿಸುವ ಮೃದುವಾದ ಶಬ್ದವನ್ನು ಮಾಡಿದವು. "ಕುಲಪತಿಗಳ ಸಾಕುಮಗಳು ಸುಖವಾಗಿದ್ದಾಳೆ, ಪತಿಯೊಂದಿಗೆ ಅರಮನೆ ಯಲ್ಲಿದ್ದಾಳೆ, ರಾಷ್ಟ್ರದ ರಾಣಿಯಾಗಿದ್ದಾಳೆ, ಭವಿಷ್ಯ ಚಕ್ರವರ್ತಿಯನ್ನು ಸಾಕುತ್ತಿದಾಳೆ" ಎಂಬ ಭಾವ ಆಶ್ರಮವಾಸಿಗಳ ಹೃದಯದಲ್ಲಿ, ಅಲ್ಲಿಯ ಉಳಿದೆಲ್ಲ ಜೀವನದಲ್ಲಿ, ಮಾಲಿನಿಯ ಪ್ರಸನ್ನ ಸಲಿಲಾಶಯಗಳಲ್ಲಿ, ತಪೋವನಕ್ಕೆ ಹರಿತಂದ ಗಾಳಿ ಬೆಳಕಿನಲ್ಲಿ, ಸರ್ವತ್ರ ಪ್ರಕಾಶಗೊಂಡಿತು." ಕುಲಪತಿಗಳು ರಾಜಪುರುಷನನ್ನು ಅಂದು ಅಲ್ಲಿ ನಿಲ್ಲಿಸಿಕೊಂಡಿದ್ದು ಮಾರನೆಯ ದಿನ ತಕ್ಕ ಮರ್ಯಾದೆಯಿಂದ ರಾಜನಿಗೆ ಮಗಳಿಗೆ ತಮ್ಮ ಆಶೀರ್ವಾದವನ್ನು ತಿಳಿಸತಕ್ಕದ್ದೆಂದು ಆಜ್ಞಾಪಿಸಿ ಕಳುಹಿಸಿಕೊಟ್ಟರು.

" ಶಕುಂತಲೆ ಸುಖವಾಗಿದಾಳೆ, ಹತ್ತು ದಿನದ ಪ್ರಯಾಣದಲ್ಲಿ ಹಸ್ತಿನಾವತಿಯಲ್ಲಿ ಸುಖವಾಗಿದಾಳೆ, ಎಂದು ತಿಳಿದ ಒಡನೆಯೇ ಅನಸೂಯೆ ಪ್ರಿಯಂವದೆಯರಿಗೂ ಗೌತಮೀದೇವಿಗೂ ಅವಳನ್ನು ನೋಡಬೇಕೆಂದು ಆಸೆಯಾಯಿತು." ಕುಲಪತಿಗಳಾದ ಕಣ್ವರಿಗೂ ಆಸೆಯಾಗಿರಬೇಕು; ಅಂದು ಅವಳೊಡನೆ ಹೋಗಿ ನಿಷ್ಠುರದ ಮಾತನಾಡಿ ಅವಳನ್ನು ಅಲ್ಲಿ ಒಂಟಿಯಾಗಿ ಬಿಟ್ಟುಬಂದ ತರುಣ ಶಾರ್ಙ್ಗರವನಿಗೂ ಶಾರದ್ವತನಿಗೂ ಕೂಡ ಕುತೂಹಲವಿದ್ದಿರಬಹುದು. ಆದರೆ ಗಂಡಸರು ಇಂಥ ಸಂದರ್ಭದಲ್ಲಿ ಆಸೆಯನ್ನು ಬಾಯಲ್ಲಿ ಹೇಳುವುದಿಲ್ಲ, ಹೆಂಗಸರು ಹೇಳದೆ ಇರುವುದಿಲ್ಲ. ಪ್ರಿಯಂವದೆ ಅನಸೂಯೆಗೆ ಹೇಳಿಕೊಟ್ಟಳು. 'ಅನಸೂಯೆ ಅಜ್ಜಿಯನ್ನು

ಎತ್ತಿಕಟ್ಟಿದಳು. ಆ ಮುದುಕಿ ಈ ಮಾತನ್ನೆತ್ತುವುದಕ್ಕೆ ನೆವ ಸಿಕ್ಕಿತಲ್ಲ ಎಂಬ ಸಂತೋಷದಿಂದ ಒಂದು ಸಂಜೆ, ಕುಲಪತಿಗಳನ್ನು ಕುರಿತು "ನಮ್ಮ ಮಗು ಹೇಗಿದ್ದಾಳೋ ಹೋಗಿ ನೋಡಿಕೊಂಡು ಬರೋಣವೆಂದು ಆಸೆ ಯಾಗುತ್ತದೆ. ಆಗಬಹುದೆಂದರೆ ಹೋಗಿಬರುತ್ತೇನೆ" ಎಂದಳು. ಋಷಿಗಳು, "ನೀನು ಹೋಗುವುದಕ್ಕೆ ಏನು ಅಡ್ಡಿ? ಆದರೆ ಮಕ್ಕಳೂ ಹೋಗಬೇಕೆಂದು ಆಶಿಸಬಹುದು. ಅವರನ್ನು ಬಿಟ್ಟು ಹೋಗುವುದು ಆಗುತ್ತದೆಯೋ" ಎಂದರು. ವೃದ್ಧೆ, "ಅವರನ್ನೂ ಕರೆದುಕೊಂಡು ಹೋಗುತ್ತೇನೆ" ಎಂದಳು. ಕುಲಪತಿಗಳು, "ಮಕ್ಕಳು ಎಳೆಯವು; ಅವರು ತರುಣಿಯರು; ಅಲ್ಲದೆ ರಾಣಿ ರಾಜರ ಸಮಕ್ಷಮಕ್ಕೆ ಕರೆಸಿಕೊಳ್ಳದೆ ತಾವಾಗಿ ಹೋಗುವುದು ಆಶ್ರಮವಾಸಿಗಳಿಗೆ ತಕ್ಕದಲ್ಲ; ನೋಡೋಣ" ಎಂದರು. ಮುದುಕಿಗೂ ಸಖಿಯರಿಗೂ ಆಶಾಭಂಗವಾಯಿತು. ಆದರೆ ಇದಾದ ಎರಡು ವಾರದಲ್ಲಿ ಶಕುಂತಲೆ ಹಿರಿಯರಿಗೆ ಕಿರಿಯರಿಗೆ ಜಿಂಕೆಗೆ ಹಸುವಿಗೆ ಆಲದಮರಕ್ಕೆ ಮಲ್ಲಿಕಾಲತೆಗೆ ಒಂದು ಸತ್ವಕ್ಕೆ ಬಿಡದಂತೆ ಎಲ್ಲರಿಗೂ ಬಾಗಿನಗಳನ್ನು ಕಳುಹಿಸಿ ತಾನು ಮೂರು ದಿನ ಬಿಟ್ಟು ಆಶ್ರಮಕ್ಕೆ ಬರುವುದಾಗಿ ಹೇಳಿಕಳುಹಿಸಿದಳು. ಆ ಬರಬೇಕಾಗಿದ್ದದು ನಿನ್ನೆಯ ದಿನ. ಎಲ್ಲರೂ ಕಾದಿರಲಾಗಿ, ಬರುವುದು ಸ್ವಲ್ಪ ಸಾವಕಾಶವಾಗುವುದೆಂದೂ ಮಾರನೆಯ ದಿನ ಆಶ್ರಮವನ್ನು ಸೇರುವುದಾಗಿಯೂ ತಿಳಿಸುವಂತೆ ರಾಣಿ ಇನ್ನೊಂದು ಬೇಹನ್ನು ಅಟ್ಟಿದಳು. ಅದರಿಂದಲೇ ಇಂದು ಇವರೆಲ್ಲ ಅವಳ ಬರವನ್ನು ನಿರೀಕ್ಷಿಸುತ್ತ ಇಂದೂ ಬರುವಳೋ ಇಲ್ಲವೋ ಎಂದು ಚಿಂತೆ ಮಾಡುತ್ತಿದ್ದರು.

ಶಕುಂತಲೆಯನ್ನು ನೋಡಬೇಕೆಂದು ಸಖಿಯರಿಗೂ ಗೌತಮೀ ದೇವಿಗೂ ಆಸೆಯಾದಂತೆ "ಶಕುಂತಲೆಗೆ ತಂದೆ ಅಜ್ಜಿ ಸಖಿಯರನ್ನೂ ಮಾಲಿನೀತೀರದ ಆ ಆಶ್ರಮವನ್ನೂ ನೋಡಬೇಕೆಂದು ತೀವ್ರವಾದ ಆಸೆ. ಒಲಿದ ಗಂಡನಿಂದ ನಿರಾಕೃತಳಾಗಿ ಹೋಗಿ ಹೇಮಕೂಟದಲ್ಲಿ ಆರು ವರ್ಷವನ್ನು ಕಳೆದು ಹದಿನೆಂಟು ವರ್ಷದ ತರುಣಿ ಮೂವತ್ತೈದು ವರ್ಷದ ಹೆಂಗಸಂತೆ ಜೀವನದ ಭಾರದಿಂದ ತಗ್ಗಿಹೋಗಿದ್ದಳು. ಪತಿ ಬಂದು ತಪ್ಪನ್ನೊಪ್ಪಿಕೊಂಡಾಗ ಅವಳ ಸ್ವಭಾವದಲ್ಲಿ ರೋಷಕ್ಕೆ ಸ್ಥಳವಿಲ್ಲವಾಗಿ

ಹೋಗಿತ್ತು. ಆಮೇಲೆ ಮಗನನ್ನು ಕರೆದುಕೊಂಡು ಹಸ್ತಿನಾವತಿಗೆ ರಾಣಿ ಯೆಂದು ಬಂದಾಗಲಾಗಲಿ ಅವಳ ಮನಸ್ಸು ಉತ್ಸಾಹದಿಂದ ಉಬ್ಬಲಿಲ್ಲ. ಒಂದು ಸ್ಥಿತಿ ಮೀರಿದನಂತರ ಮನಸ್ಸು ಎಂಥ ಸಂತೋಷದಲ್ಲೂ ಉಬ್ಬುವು ದನ್ನು ಮರೆಯುತ್ತದೆ. "ಅವಳಿಗೆ ಜೀವನದಲ್ಲಿ ಕಲ್ಯಾಣ ಮರಳಿ ಮೂಡಿದ ಕ್ಷಣದಲ್ಲಿ ತನಗೆ ಸುಖ ಬಂದಿತೆಂಬ ಭಾವನೆಗಿಂತ, "ತನ್ನ ತಂದೆಗೆ ಇನ್ನು ಚಿಂತೆ ಇಲ್ಲ, ತನ ಸಖಿಯರಿಗೆ ಇನ್ನು ಖೇದವಿಲ್ಲ, ತನ್ನ ಅಜ್ಜಿ ಇನ್ನು ಯೋಚಿಸಬೇಕಾದುದಿಲ್ಲ, ತನ್ನ ಮಗನಿಗೆ ಹುಟ್ಟಿನಿಂದ ಸಲ್ಲಬೇಕಾದ ಪದವಿ ದೊರೆಯುತ್ತದೆ, ತನ್ನ ನಡತೆ ಯಾವುದರಿಂದಲಾದರೂ ಅದು ಅವನಿಗೆ ತಪ್ಪಿಹೋಗಬೇಕಾದ ಪ್ರಮೇಯವಿಲ್ಲ" ಎನ್ನುವ ಭಾವವೇ ಮುಖ್ಯ ವಾಗಿತ್ತು." ಆದ್ದರಿಂದ ಅವಳು ಸಾಧ್ಯವಾದಷ್ಟು ಬೇಗ ತನ್ನವರನ್ನು ನೋಡಿ ಅವರ ಕಷ್ಟಸುಖಗಳನ್ನು ವಿಚಾರಿಸಿ ತನ್ನ ಸೌಖ್ಯದ ಮಾತನ್ನು ಅವರಿಗೆ ಪ್ರತ್ಯಕ್ಷವಾಗಿ ಹೇಳಬೇಕೆಂದು ಕುತೂಹಲಪಟ್ಟಳು. ಊರಿಗೆ ಬಂದೊಡನೆಯೇ ಆಶ್ರಮಕ್ಕೆ ಹೋಗುವ ಮಾತನ್ನೆತ್ತಬೇಕೆಂದೇ ಮನಸ್ಸಿನ ಪ್ರವೃತ್ತಿ. ಆದರೆ ಇನ್ನೂ ಹೊಸದು; ತನ್ನವರನ್ನು ನೋಡಬೇಕೆಂಬ ಮಾತನ್ನು ಅಷ್ಟು ಬೇಗ ತೆಗೆಯುವುದಕ್ಕೆ ಸಂಕೋಚವಾಯಿತು; ಸುಮ್ಮನಿದ್ದಳು. ತಾವು ಸುಖವಾಗಿ ಬಂದ ಮಾತನ್ನು ಹೇಳಿಕಳುಹಿಸಿದಾಗ ತಾನೂ ಸಖಿಯರಿಗೆ ಹಿರಿಯರಿಗೆ ಒಂದೊಂದು ಮಾತನ್ನು ಹೇಳಿಕಳುಹಿ ಸಿದ್ದಳು. "ರಾಜಪುರುಷರು ಹಿಂದಕ್ಕೆ ಬಂದಾಗ ಅವರಿಂದ ಆಶ್ರಮದ ವೃತ್ತಾಂತವನ್ನು ತಿಳಿದುಕೊಂಡಳು. ಅನಸೂಯೆ ಶಾರದ್ವತನನ್ನೂ ಪ್ರಿಯಂವದೆ ಶಾರ್ಙ್ಗರವನನ್ನೂ ಮದುವೆಯಾಗಿದ್ದರೆಂದು ಅವರ ಮಾತಿನಿಂದ ಅವಳು ಊಹಿಸಿದಳು." ಇದಾದ ಬಹು ದಿನದ ಮೇಲೆ ಅವಳು ತನ್ನ ಅರಸನಲ್ಲಿ ಕಣ್ವರ ಆಶ್ರಮಕ್ಕೆ ಹೋಗುವ ಮಾತನ್ನೆತ್ತುವ ಧೈರ್ಯಮಾಡಿ ದಳು. 'ರಾಜನು "ಅಗತ್ಯ ಹೋಗಿಬರಬೇಕಾದದ್ದೇ. ಆದರೆ ಸದ್ಯದಲ್ಲಿ ನಾನು ಅಲ್ಲಿ ಬರುವುದು ಸರಿಯಲ್ಲ. ಹೋದಸಲ ಆ ಪುಣ್ಯಭೂಮಿಯಲ್ಲಿ ಕಾಲಿಟ್ಟಾಗ ನಾನು ಕುಲಪತಿಗಳಲ್ಲಿ ಅಪರಾಧಮಾಡಿದೆ. ಈಗಲೇ ಅವರನ್ನು ನೋಡುವುದಕ್ಕೆ ಮನಸ್ಸಿನಲ್ಲಿ ಧೈರ್ಯವಿಲ್ಲ. ನೀನು ಹೋಗಿ ಬರಬಹುದು" ಎಂದನು. ಶಕುಂತಲೆ ಸ್ವಲ್ಪ ನಗುತ್ತ, "ಆಗ ನೀನು

ಮಾಡಿದ ಅಪರಾಧ ತಂದೆಗೆ ಈಗ ಪ್ರಿಯವಾಗಿ ಪರಿಣಮಿಸಿದೆ. ಅಲ್ಲದೆ ಅವರು ಅಂತಹ ಕ್ರೋಧವನ್ನು ಮನಸ್ಸಿನಲ್ಲಿಟ್ಟಾರೆ'' ಎಂದಳು. ದುಷ್ಯಂತನು, ''ನಾನು ಸಂಕೋಚಪಡುವುದಕ್ಕೆ ಅವರು ಮನಸ್ಸಿನಲ್ಲಿ ಕ್ರೋಧವಿಡಬೇಕಾದದ್ದಿಲ್ಲ. ನನ್ನ ತಪ್ಪಿನ ಭಾವ ಇನ್ನೂ ಮನಸ್ಸಿನಿಂದ ಅಳಿಸಿಲ್ಲ. ನಾನು ನಿನ್ನನ್ನು ಕೆಲವು ಕಾಲ ಸರಿಯಾಗಿ ನೋಡಿಕೊಂಡ ಮೇಲೆ ಅವರಲ್ಲಿ ಹೋಗುವುದಕ್ಕೆ ಧೈರ್ಯ ಬರುತ್ತದೆ'' ಎಂದನು. ಶಕುಂತಲೆ, ''ನಾನೂ ಅದುವರೆಗೆ ಹೋಗುವುದಿಲ್ಲ, ತಂದೆ ಹೇಳಿದಂತೆಯೇ ಆಗಲಿ'' ಎಂದಳು. ತಂದೆ ಹೇಳಿದ್ದೇನು ಎಂದು ರಾಜನಿಗೆ ತಿಳಿಯದು. ಏನು ಹೇಳಿದರು ಎಂದು ಅವನು ಕೇಳಿದನು. ''ಏಳು ವರುಷಗಳ ಹಿಂದೆ ನಾನು ಇತ್ತ ಹೊರಟವೇಳೆ ಈ ಆಶ್ರಮಕ್ಕೆ ಪುನಃ ಬರುವುದು ಯಾವಾಗಲೋ ಎಂದುದಕ್ಕೆ, ನಿನ್ನ ಯಜಮಾನನೊಂದಿಗೆ ತಪಸ್ಸಿಗೆ ಹೊರಟಾಗ ಎಂದು ಅಪ್ಪಣೆ ಮಾಡಿದರು'' ಎಂದು ಶಕುಂತಲೆ ಹೇಳಿದಳು. ಕಣ್ವರು ಆ ಸಂದರ್ಭದಲ್ಲಿ ''ನಿನ್ನ ಮಗನಿಗೆ ಪಟ್ಟಕಟ್ಟಿ ನಿನ್ನ ಯಜಮಾನನೊಂದಿಗೆ'' ಎಂದು ಹೇಳಿದ್ದರು. ''ಮಗನಿಗೆ ಪಟ್ಟಕಟ್ಟಿ'' ಎಂದ ಮಾತನ್ನು ಶಕುಂತಲೆ ಈಗ ರಾಜನಿಗೆ ತಿಳಿಸಲಿಲ್ಲ. ಬಾಳುವೆ ಅವಳಿಗೆ ಎಚ್ಚರಿಕೆಯನ್ನು ಕಲಿಸಿತ್ತು. ರಾಜನು ತನಗೆ ಒಲಿದಿದಾನೆ; ಮಗನಿಗೆ ಅನ್ಯಾಯ ಮಾಡಲಾರನು. ಆದರೆ 'ಯಾವ ವಿಷಯದಲ್ಲೂ ಅತಿ ನಿಶ್ಚಯ ಬೇಡ.' ಕಣ್ವರಾಡಿದವೆಂಬ ಮಾತಿಗೆ ರಾಜನು ''ಅದು ಆಶ್ರಮದಲ್ಲೇ ನಿಲ್ಲುವುದಕ್ಕೆ ಹೋಗುವುದು ಯಾವಾಗ ಎಂಬ ಅರ್ಥದಲ್ಲಿ ಹೇಳಿದ ಮಾತು. ಹೋಗಿ ನೋಡಿಕೊಂಡು ಬರುವುದಕ್ಕೆ ಆ ಮಾತು ಅನ್ವಯಿಸುವುದಿಲ್ಲ, ಹೋಗಿ ಅವರ ಮನಸ್ಸನ್ನು ಸಮಾಧಾನಪಡಿಸು'' ಎಂದನು. ಶಕುಂತಲೆ, ''ನಾನು ನಿನ್ನ ಪಕ್ಷದ ರಾಯಭಾರಿಯೇ'' ಎಂದಳು. ರಾಜನು, ''ನೀನು ಹಾಸ್ಯದಲ್ಲಿ ಕೇಳುತ್ತಿದೀಯೆ. ಆದರೆ ಅದು ನಿಜವಾದ ಮಾತು'' ಎಂದನು. ಇಷ್ಟೆಲ್ಲ ಆದಮೇಲೆ ರಾಣಿ ತಂದೆಯ ಆಶ್ರಮಕ್ಕೆ ತಾನು ಬರಲುಳ್ಳವಳೆಂದು ವರ್ತಮಾನ ಕಳುಹಿಸಿದಳು.

ಹೊರಡುವುದಕ್ಕೆ ಒಂದು ದಿನ ಗೊತ್ತಾಯಿತು. ಅಂದಿನ ಬೆಳಗೆ ಶಕುಂತಲೆ ದೇವರ ಪೂಜೆ ಮುಗಿಸಿ ಸಪತ್ನಿಯಾದ ಹಂಸಪದಿಕೆಗೆ ತಾನು

ಹೋಗಿಬರುವ ಮಾತನ್ನು ತಿಳಿಸಲು ಹೋದಳು. " ಹಂಸಪದಿಕೆ ಶಕುಂತಲೆ ಗಿಂತ ಮೊದಲು ನಾಲ್ಕು ವರುಷದಿಂದ ರಾಜನ ಮನಸ್ಸನ್ನು ಒಲಿಸಿ ಕೊಂಡಿದ್ದ ರಾಣಿ. ಗಾಂಧಾರ ರಾಜನ ಪುತ್ರಿ, ಚೆಲುವೆ, ತೇಜಸ್ವಿನಿ. ಆ ಚೆಲುವೂ ತೇಜಸ್ಸೂ ನಾಲ್ಕು ವರ್ಷ ಅರಮನೆಯನ್ನು ಆಳಿದವು." ಆಮೇಲೆ ಒಂದು ದಿನ ಬೇಟೆಗೆ ಹೋಗಿ ಹಿಂದಕ್ಕೆ ಬಂದ ರಾಜನು ಅನ್ಯ ಮನಸ್ಕನಾಗಿ ಇನಿಯಳ ವಿಷಯದಲ್ಲಿ ಅಶ್ರದ್ಧೆಯಿಂದ ನಡೆದುಕೊಂಡನು. ಇದು ಆ ಕಾಲದಲ್ಲಿ ರಾಣಿಯರಿಗೆ ಸಾಮಾನ್ಯವಾದ ಅನುಭವ. ರಾಜನು ಯಾರನ್ನಾದರೂ ನೋಡಿದನೋ ಎಂದು ಅವಳು ಸಂದೇಹಪಟ್ಟಳು; ಅವನ ಜೊತೆಗೆ ಹೋಗಿದ್ದ ಜನರನ್ನು ವಿಚಾರಿಸಿದಳು. ಅವಳ ಸಂದೇಹ ನಿಜವಾಗಿತ್ತು. ಅಶ್ರದ್ಧೆಯಿಂದ ರಾಜನು ಏನೋ ಒಂದು ರೀತಿಯಲ್ಲಿ ಮಾರ್ಪಟ್ಟನು;" ರಾಣಿಯ ವಿಷಯದಲ್ಲಿ ಮರಳಿ ಪ್ರೇಮವನ್ನು ತೋರಲಿಲ್ಲ." ಕೆಲವು ಕಾಲದ ಮೇಲೆ ಗರ್ಭಿಣಿಯಾದ ಒಬ್ಬ ಹೆಣ್ಣು ಬಂದು ರಾಜನು ತನ್ನನ್ನು ಮದುವೆಯಾದನೆಂದು ಹೇಳಿದ್ದೂ ಆಮೇಲಣ ಚರಿತ್ರೆಯೂ ಹಂಸಪದಿಕೆಯ ಬಾಳನ್ನು ಇನ್ನಷ್ಟು ಬರಿದಾಗಿ ಮಾಡಿದವು ಹೊರತು ಮತ್ತೇನೂ ಆಗಲಿಲ್ಲ." ಹೀಗೆ ಕೆಲವು ವರ್ಷಗಳಾದ ಮೇಲೆ ಆ ನಿರಾಕೃತ ಳಾಗಿ ಹೋಗಿದ್ದ ಶಕುಂತಲೆ ರಾಣಿಯೆಂದು ಬಂದೇ ಬಂದಳು; ಅವಳ ಮಗನೂ ಜೊತೆಗೆ ಬಂದನು. ಹಂಸಪದಿಕೆ ಇನ್ನು ತಾನು ಜೀವನದಲ್ಲಿ ನಿರೀಕ್ಷಿಸಬೇಕಾದ ಸುಖವೇನೂ ಇಲ್ಲವೆಂದು ಮನಸ್ಸುಮಾಡಿಕೊಂಡಳು." ಶಕುಂತಲೆ ತನ್ನನ್ನು ಬಹಳ ತಿರಸ್ಕಾರದಿಂದ ಕಾಣುವಳೆಂದೇ ಅವಳ ನಿರೀಕ್ಷೆ. ಆದರೆ ಶಕುಂತಲೆ ಬಂದ ಮಾರನೆಯ ದಿನವೇ ಅವಳಿಗೆ ಜೀವನ ದಲ್ಲಿ ಮರಳಿ ಒಂದು ಆನಂದ ತಲೆದೋರಿತು. ಶಕುಂತಲೆ ಮಗನನ್ನು ಹೆತ್ತ ಮುಖ್ಯರಾಣಿ ಎಂದು ಅರಮನೆಯಲ್ಲಿ ಎಲ್ಲರಿಗೂ ಆಜ್ಞೆಯಾಗಿತ್ತು. ನ್ಯಾಯವಾಗಿ ಉಳಿದ ರಾಣಿಯರು ಅವಳಿಗೆ ಮರ್ಯಾದೆ ತೋರಬೇಕಾ ದದ್ದು ಸಂಪ್ರದಾಯ." ಆದರೂ ಶಕುಂತಲೆ ತಾನೇ ಇವರ ಬಳಿಗೆ ಬಂದಳು. ಬಂದು ಹಂಸಪದಿಕೆಗೆ ನಮಸ್ಕರಿಸಿ, "ನೀವು ನನಗೆ ಹಿರಿಯರು, ನಾನು ಅರಿಯದ ಹುಡುಗಿ, ನನ್ನನ್ನು ತಂಗಿಯಂತೆ ನೋಡಿಕೊಂಡು ತಿಳಿಯದ್ದನ್ನು ಹೇಳಿಕೊಡಬೇಕು" ಎಂದು ಕೇಳಿದಳು. ಇವಳ ವಿನಯವನ್ನು ನೋಡಿ

ಹಂಸಪದಿಕೆಗೆ ಆಶ್ಚರ್ಯವಾಯಿತು. ಅವಳು ಶಕುಂತಲೆಯನ್ನು ಹತ್ತಿರಕ್ಕೆ ಕರೆದು ಅಪ್ಪಿಕೊಂಡು, "ಇದು ಏನು ತಂಗೀ, ನೀನು ಹೇಳುವ ಮಾತು? ರಾಜನು ನಿನ್ನ ಆಜ್ಞೆಯಂತೆ ನಡೆಯುತ್ತಾನೆ. ನಾವು ನಿನ್ನನ್ನು ಆಶ್ರಯಿಸ ಬೇಕು ಹೊರತು ನೀನು ನಮ್ಮನ್ನು ಕೇಳಬೇಕಾದದ್ದೇನಿದೆ?" ಎಂದಳು. ಶಕುಂತಲೆ, "ತನಗೆ ರಾಜನ ಒಲುಮೆ ಬಹಳ ಬೇಕು, ಆದರೆ ಹಾಗೆಯೇ ತನ್ನ ಅಕ್ಕಂದಿರ ವಿಶ್ವಾಸವೂ ಇರಬೇಕು" ಎಂದು ಹೇಳಿ, ಅವಳ ಮನಸ್ಸನ್ನು ಒಲಿಸಿಕೊಂಡಳು. ಅಂದಿನಿಂದ ಇವರ ಸ್ನೇಹ ಒಂದೇ ರೀತಿ ಬೆಳೆದಿತ್ತು. ತಂದೆಯ ಆಶ್ರಮಕ್ಕೆ ಹೊರಡುವ ದಿನ ಹೋಗಿಬರುವೆನೆಂದು ಹೇಳಲು ಶಕುಂತಲೆ ಹಂಸಪದಿಕೆಯ ಬಳಿ ಹೋದಾಗ ಹಂಸಪದಿಕೆ, "ಅಲ್ಲಿ ಎಷ್ಟು ದಿನ ಇರುತ್ತೀಯೆ? ಎಂದು ಬರುತ್ತೀಯೆ? ಅಲ್ಲಿ ಯಾರು ಯಾರು ಇದ್ದಾರೆ? ಆಶ್ರಮ ಹೇಗಿದೆ?" ಎಂದು ಮೊದಲಾಗಿ ಕೇಳಿದಳು. ಇವಳ ಪ್ರಶ್ನೆಗಳಿಂದ ಶಕುಂತಲೆಗೆ ಅವಳಿಗೂ ಆಶ್ರಮಕ್ಕೆ ಬರುವ ಅಭಿಲಾಷೆಯಿದೆ ಯೆಂದು ಕಂಡಿತು. ಹಂಸಪದಿಕೆಯನ್ನು ಅವಳು ನೀವೂ ಬರುತ್ತೀರಾ ಅಕ್ಕಾ ಎಂದು ಕೇಳಿದಳು. ಹಂಸಪದಿಕೆ ನೀನು ನಿಮ್ಮ ಜನರಲ್ಲಿ ಹೋಗಿ ಬರಬೇಕಾದರೆ ನಾನೇಕೆ ಮಧ್ಯೆ ಬಂದು ತೊಂದರೆ ಕೊಡಬೇಕು ಎಂದಳು. ಶಕುಂತಲೆ ಅವಳನ್ನು ಬರಬೇಕೆಂದು ಬಲವಂತಮಾಡಿ ಒಪ್ಪಿಸಿ ರಾಜನನ್ನೂ ರಾಜಮಾತೆಯನ್ನೂ ಕೇಳಿ ತಾವಿಬ್ಬರೂ ಹೋಗುವುದಕ್ಕೆ ಅನುಮತಿಯನ್ನು ತೆಗೆದುಕೊಂಡಳು. ಅಂದೇ ಹೊರಡುವುದಕ್ಕೆ ಹಂಸಪದಿಕೆ ಸಿದ್ಧಳಾಗಿರ ಲಿಲ್ಲವಾದ್ದರಿಂದ ಮೂರನೆಯ ದಿನ ಹೊರಡುವುದಾಗಿ ಗೊತ್ತುಮಾಡಿದಳು. ಇದರಿಂದಲೇ ಪ್ರಯಾಣ ಒಂದು ದಿನ ಮುಂದೆ ಬಿದ್ದದ್ದು, ಶಕುಂತಲೆ ತಾನು ಬರುವುದು ಒಂದು ದಿನ ಸಾವಕಾಶವಾಗುತ್ತದೆಂದು ಆಶ್ರಮಕ್ಕೆ ಹೇಳಿಕಳುಹಿಸಿದ್ದದ್ದು.

ಹಸ್ತಿನಾವತಿಯಿಂದ ಕಣ್ವರ ಆಶ್ರಮಕ್ಕೆ ಸಾಮಾನ್ಯವಾಗಿ ಹತ್ತು ದಿನದ ನಡಿಗೆ. ಆತುರದಿಂದ ವೇಗವಾಗಿ ಹೋಗುವ ಜನರಿಗೆ ಒಂದು ವಾರದ ಪ್ರಯಾಣ. ವಾಹನಗಳ ಮೇಲೆ ಹೋಗುವ ಪುಣ್ಯವಂತರಿಗೆ ಮೂರು ಅಥವಾ ನಾಲ್ಕು ದಿನದ ಓಟ. ರಾಜನು ರಾಣಿಯರಿಬ್ಬರನ್ನೂ ಕಳುಹಿಸಬೇಕಾದರೆ ತಕ್ಕಷ್ಟು ಪರಿವಾರವನ್ನು ಹಿಂದೆ ಕಳುಹಿಸುವ

ಏರ್ಪಾಡು ಮಾಡಿದನು. ಮತ್ತು ಮಾಢವ್ಯನೂ ಅವರ ಜೊತೆಗೆ ಹೋಗುವುದೆಂದು ಮೋದಕಪ್ರಿಯನಾದ ಆ ವಯಸ್ಯನಿಗೆ ತಿಳಿಸಿದನು. ಶಕುಂತಲೆಯ ನಿರಾಕರಣವಾದಂದಿನಿಂದ ಮಾಢವ್ಯನಿಗೆ ಒಂದು ದಿನವಾದರೂ ಸರಿಯಾದ ಊಟ ದೊರೆತ ಜ್ಞಾಪಕವಿಲ್ಲ. ಊಟ ಇದ್ದರೂ ಜ್ಞಾಪಕ ಕಷ್ಟ; ಇಲ್ಲಿ ಊಟವೂ ಇದ್ದಿರಲಿಲ್ಲ. ಅವಳು ಬಂದಮೇಲೆ ಅವನಿಗೆ ಬೇಸಗೆಯಲ್ಲಿ ಕಾದ ನೆಲಕ್ಕೆ ಮಳೆ ಬಂದಂತಾಗಿತ್ತು. ದ್ವಾದಶ ವರ್ಷಗಳ ಕ್ಷಾಮದ ಯೋಗವೆಂದು ಕಂಡಿದ್ದ ಸಂದರ್ಭ ಅವಳು ಬಂದ ದಿನ ಇದ್ದದಿದ್ದಹಾಗೆ ಕೊನೆಗಂಡಿತು. ರಾಜನು ದಿನವೂ, ಮಾಢವ್ಯನಿಗೆ ಈ ತಿಂಡಿ ಮಾಡಿ ಕೊಡಬಾರದೆ, ಆ ತಿಂಡಿ ಮಾಡಿಕೊಡಬಾರದೆ ಎಂದು ಕೇಳುವುದಕ್ಕೆ ಆರಂಭಮಾಡಿದ್ದನು. "ಇದರಮೇಲೆ ಶಕುಂತಲೆಯೂ ಹಿರಿಯ ರಾಣಿಯೂ ಆಶ್ರಮಕ್ಕೆ ಹೋಗಬೇಕೆಂದಾಗ ಇವನು ಅವರ ಜೊತೆಗೆ ಹೋಗತಕ್ಕದೆಂದು ಅಪ್ಪಣೆಯಾಗಲು ಮಾಢವ್ಯನ ಆನಂದಕ್ಕೆ ಮೊದಲು ಕೊನೆ ಇಲ್ಲವಾಯಿತು. ತಾನು ರಾಜನಿಗೆ ಪ್ರತಿನಿಧಿಯಾಗಿ ಹೋಗುವೆನೆನ್ನುವುದು ಇದಕ್ಕೆ ಒಂದು ಕಾರಣ.'' ಹಿಂದಿನ ಸಲ ಅಲ್ಲಿ ಹೋಗಿದ್ದಾಗ ಯಾವನೋ ಯಃಕಶ್ಚಿತನಂತೆ ಯಾರನ್ನೂ ಮಾತನಾಡಿಸದೆ ಕುಲಪತಿಗಳಿಗೆ ದರ್ಶನವನ್ನೂ ಕೊಡದೆ ಹೊರಟುಬಂದದ್ದಾಯಿತು. ಈ ಸಲ ಹೋದರೆ ತಾನು ಎಂತಹ ಪ್ರಾಜ್ಞನೆಂದೂ ರಾಜಪರಿವಾರದಲ್ಲಿ ತನ್ನ ಸ್ಥಾನ ಎಷ್ಟು ಪ್ರಮುಖವಾದದ್ದೆಂದೂ ತೋರಿಸುವುದಕ್ಕೆ ಒಂದು ಅವಕಾಶವಾಯಿತೆನ್ನುವುದು ಇನ್ನೊಂದು ಕಾರಣ." ಇದರಮೇಲೆ ಭರತ ಕುಮಾರನೂ ಜೊತೆಗಿರುವುದರಿಂದ ಬೇಕಾದಷ್ಟು ಆಟಕ್ಕೆ ಅವಕಾಶ. ಮಾಢವ್ಯನು ಒಂದು ರಥದಲ್ಲಿ ಕುಳಿತನು. ರಾಣಿಯರು ಒಂದು ರಥದಲ್ಲಿ ಕುಳಿತರು. ಕೆಲವರು ಮಾತ್ರ ಮೈಗಾವಲ ಜನರೊಡನೆ ಇವರು ಹಸ್ತಿನಾವತಿಯಿಂದ ಪ್ರಯಾಣ ಬೆಳೆಸಿದರು.

ಹೊರಡುವಾಗ ಕುಮಾರನು ರಾಣಿಯರ ರಥದಲ್ಲಿ ಕುಳಿತನು. ಅವನು ಅಲ್ಲಿ ಕೂಡುವ ಮೊದಲು ಮಾಢವ್ಯನು ಹತ್ತಿರ ಬಂದು ಅವನ ಕಿವಿಯಲ್ಲಿ, ಸ್ವಲ್ಪದೂರ ಹೋದಮೇಲೆ ನನ್ನ ರಥಕ್ಕೆ ಬಾ ಆಡೋಣ, ಎಂದನು. ಭರತನು ಉಂ ಎಂದನು." ಪ್ರಯಾಣ ಎರಡು ಗಳಿಗೆ ಬೆಳೆದ

ಮೇಲೆ ಅವನಿಗೆ ಈ ಹೆಂಗಸರ ತೇರಿನಲ್ಲಿ ಕುಳಿತು ಬೇಸರವಾಯಿತು. ನಾನು ಮಾಢವ್ಯನ ರಥಕ್ಕೆ ಹೋಗುತ್ತೇನೆಂದನು." ತೇರುಗಳನ್ನು ನಿಲ್ಲಿಸಿ ಇವನನ್ನು ಆ ರಥದಲ್ಲಿ ಕುಳ್ಳಿರಿಸಿದರು. ರಾಣಿಯರಿಗೂ ಇದರಿಂದ ಅನುಕೂಲವೇ. ಶಕುಂತಲೆಗೆ ಮಗನು ಹತ್ತಿರ ಇರಬೇಕೆಂದೇ ಆಸೆ. ಆದರೆ ಅವನಿದ್ದರೆ ತಾನು ಅಕ್ಕನನ್ನು ವಿಚಾರಿಸಿಕೊಳ್ಳುವುದು ಸಾಧ್ಯವಲ್ಲ. ಈಗ ತನ್ನ ತೇರಿನಿಂದ ಇನ್ನೊಂದರಲ್ಲಿ ಕುಳಿತಿರುವ ಮಗನನ್ನು ಮರಳಿ ಮರಳಿ ತಾಯ ಮಮತೆಯಿಂದ ನೋಡುತ್ತ, ಇತ್ತ ಹಿರಿಯ ರಾಣಿಯೊಂದಿಗೆ ಆ ಮಾತು ಈ ಮಾತು ಆಡುತ್ತ ಇದ್ದಳು. 'ಆ ತೇರಿನಲ್ಲಿ ಮಾಢವ್ಯನು ಎಲ್ಲಾ ಜಾತಿಯ ಮೃಗಪಕ್ಷಿಗಳ ಕೂಗನ್ನು ಅನುಕರಿಸಿ ತೋರಿಸುತ್ತಿದ್ದನು.' ಅದರ ಹಿಂದೆ ಏಳು ದಿನ ಅವನಿಗೂ ಭರತನಿಗೂ ಇದೇ ಕೆಲಸ. ಮಾಢವ್ಯನು ಈ ಅನುಕರಣದಲ್ಲಿ ಬಹಳ ಚತುರನು. ಅವನು ಸಿಂಹದ ಹಾಗೆ ಶಬ್ದಮಾಡಿದಾಗ ಕುದುರೆಗಳು ಹೆದರಿ ವೇಗವನ್ನು ಹೆಚ್ಚಿಸಿದವು. ಹೀಗೆಯೇ ಅವನು ಕಾಗೆ, ಕೋಗಿಲೆ, ಗಿಳಿ, ಗೊರವಂಕ, ಹುಲಿ, ನರಿ, ತೋಳಗಳ ಕೂಗನ್ನು ಅನುಕರಿಸಿ ಭರತಕುಮಾರನನ್ನು ಮೆಚ್ಚಿಸಿದನು. ಭರತನು ಕತ್ತೆಯಹಾಗೆ ಕೂಗು ಎಂದನು.'' ದಿನವೂ ಅದೇ ಕೆಲಸವಾಗಿ ಕೇಳಿದರೆಯೇ ಮಾಢವ್ಯನು ಇದನ್ನು ಮಾಡಬೇಕಾದರೆ. ಪ್ರಯಾಣದಲ್ಲಿ ಮಧ್ಯೆ ಇವನು ತೇರಿನಲ್ಲಿ ಕತ್ತೆಯಹಾಗೆ ಕಿರಿಚಲು ಆರಂಭಿಸಿದರೆ ಜನರು ಇವನನ್ನು ಏನೆನ್ನಬೇಕು? ಅವನು ಈಗ ಬೇಡ ರಾಣಿಯರು ಇದ್ದಾರೆ ಎಂದನು. ಭರತನು "ತೇರನ್ನು ಮುಂದೆ ಬಿಡಹೇಳು; ಆಮೇಲೆ ಕೂಗು. ನೀನು ಇನ್ನೆಲ್ಲಾ ಕೂಗುವುದಕ್ಕಿಂತ ಕತ್ತೆಯಹಾಗೆ ಕೂಗುವುದು ಚೆನ್ನಾಗಿರುತ್ತದೆ" ಎಂದನು." ಮಾಢವ್ಯನಿಗೆ ಆ ಕ್ಷಣ ಅಸಮಾಧಾನವಾಯಿತು. ಆದರೆ ಒಡನೆಯೇ ಇದು ಹಿರಿಯರು ಹೇಳಬಹುದಾದ ಕುಹಕದ ಮಾತಲ್ಲ, ಹಸುಳೆಯ ಅಚ್ಚಮನಸ್ಸಿನ ತಿಳಿಮಾತೆಂದು ತಿಳಿಯಿತು. ತೇರನ್ನು ಸ್ವಲ್ಪ ಮುಂದಕ್ಕೆ ಬಿಡಹೇಳಿ ಮೆಲ್ಲನೆ ಕತ್ತೆಯಹಾಗೆ ಕಿರಿಚಿ ಅವನು ಕುಮಾರನ ಆಸೆಯನ್ನು ಸಲ್ಲಿಸಿದನು. "ಹೀಗೆ ಇವರು ದಾರಿಯ ಬೇಸರವನ್ನರಿಯದೆ ಮುಂದರಿದರು.

ಮೂರನೆಯ ದಿನದ ಸಂಜೆ ಇವರು ಆಶ್ರಮದ ಹತ್ತಿರ ಹತ್ತಿರ ಬಂದರು. ಆಶ್ರಮ ಹತ್ತಿರವಾಯಿತೆಂದೊಡನೆ ಕುಮಾರನು ತೇರನ್ನು ಬೇಗನೆ ಬಿಡೆಂದು ಸೂತನಿಗೆ ಹೇಳಿದನು. ನಾವು ಮುಂದಾಗಿ ಹೋಗಿ ಅಮ್ಮಾಜಿ ಬರುತ್ತಿದ್ದಾರೆ ಎಂದು ತಿಳಿಸೋಣ ಎನ್ನುವುದು ಬಾಯಲ್ಲಿ ಹೇಳಿದಕಾರಣ. ನಿಜವಾದ ಕಾರಣ, ಮುಂದಾಗಿಯೇ ಆಶ್ರಮವನ್ನು ನೋಡಬೇಕು, ಅಲ್ಲಿ ಎಲ್ಲರನ್ನೂ ಮಾತಾಡಿಸಿ ಗುರುತುಮಾಡಿಕೊಳ್ಳಬೇಕು ಎನ್ನುವುದು. ಆ ತೇರಿನ ಸೂತನೂ ತರುಣನು. ಇನ್ನೊಂದು ತೇರಿಗಿಂತ ಮುಂದಾಗಿ ಹೋಗಬೇಕೆಂದು ಅವನಿಗೂ ಆಸೆ. ಅಂತೂ ಇವರ ತೇರು ಬರಬರುತ್ತ ಅರ್ಧ ಹರಿದಾರಿಯಷ್ಟು ಮುಂದಾಯಿತು. ಆದ್ದರಿಂದ ಅನಸೂಯೆ ಪ್ರಿಯಂವದೆಯರು ರಾಣಿಯನ್ನು ಎದುರುಗೊಳ್ಳುವುದಕ್ಕೆ ಮುಂದಾಗಿ ಬರುತ್ತಿರುವಲ್ಲಿ, ಇವರ ತೇರು ವೇಗವಾಗಿ ಅವರೆದುರಿಗೆ ಬಂದಿತು. "ಸಖಿಯರು ದೂರದಿಂದ ತೇರನ್ನು ನೋಡಿದರು. ಅದರಲ್ಲಿ ಮಾಢವ್ಯನು ಮಾತ್ರ ಕಂಡುದರಿಂದ ಯಾರೋ ಗಂಡಸರ ತೇರು ಎಂದು ಅದಕ್ಕೆ ದಾರಿ ಬಿಟ್ಟು ಒಂದು ಪಕ್ಕಕ್ಕೆ ನಿಂತರು. ಕುಮಾರನು ಮಾಢವ್ಯನನ್ನು, ಇವರು ಯಾರು ಕಕ್ಕ, ಎಂದು ಕೇಳಿದನು. ಮಾಢವ್ಯನು, ರಾಣಿಯವರ ಸಖಿಯರಾಗಿದ್ದವರೆಂತ ಕಾಣುತ್ತದೆ, ಎಂದನು. ಕುಮಾರನು ಅವರನ್ನು ನೋಡಿ, ಹೌದು ಹೌದು ಎನ್ನುತ್ತ, ತೇರನ್ನು ನಿಲ್ಲಿಸೆಂದನು. ತೇರು ಇವರಿದ್ದ ಕಡೆ ಸರಿಯಾಗಿ ನಿಂತಿತು. ಹುಡುಗನು ತೇರಿನಿಂದ ಧುಮುಕಿ ಇವರ ಹತ್ತಿರಕ್ಕೆ ಬಂದನು. ಮುಖದ ಹೋಲಿಕೆಯಿಂದ ಸಖಿಯರಿಗೆ ಇವನು ಶಕುಂತಲೆಯ ಮಗನೆಂದು ಒಡನೆಯೇ ತಿಳಿಯಿತು. ಅಹುದೋ ಅಲ್ಲವೋ, ಮಗು ಮಾತ್ರ ಹೀಗೆ ಬರುವುದುಂಟೇ, ಎಂದು ಅವರು ಯೋಚನೆಮಾಡುತ್ತಿರುವಷ್ಟರಲ್ಲಿಯೇ ಕುಮಾರನು ಅವರನ್ನು ಸಮೀಪಿಸಿ, ನೀವು ನಮ್ಮ ಅಮ್ಮಾಜಿಯ ಸಖಿಯರಲ್ಲಾ, ಎಂದನು. ಪ್ರಿಯಂವದೆ, ಹೌದು, ಅಮ್ಮಾಜಿ ಎಲ್ಲಿ ಎಂದಳು. ಕುಮಾರನು ಬಳಿಗೆ ಬಂದು, ಹಿಂದೆ ಬರುತ್ತಾ ಇದ್ದಾರೆ, ಎಂದು ಹೇಳಿ, ನೀವು ಪ್ರಿಯಂವದೆ, ಅವರು ಅನಸೂಯೆ ಎಂದನು. ಅನಸೂಯೆ, ನಿನಗೆ ಹೇಗೆ ತಿಳಿಯಿತು, ಎಂದು ಅವನನ್ನು ಎತ್ತಿಕೊಂಡಳು. ಅವನು ಅವಳ ಮೂಗಿನ ಮೇಲೆ

ಬೆರಳನ್ನಿಟ್ಟು, ದೊಡ್ಡಮ್ಮನ ಮುಖ ಅಗಲ, ನಿಮ್ಮ ಮುಖ ಉದ್ದುದ್ದ ಎಂದು ಹೇಳಿದರು ಅದೇ ಗುರುತು, ಎಂದನು." ಪ್ರಿಯಂವದೆ, ಬರೀ ಅಷ್ಟರಿಂದ ತಿಳಿಯಿತೆ, ಎಂತಾ ಬುದ್ಧಿವಂತ, ಎಂದಳು. ಅವನು, ಇಲ್ಲ ನಿಮ್ಮ ಮೂಗು ಸ್ವಲ್ಪ ದೊಡ್ಡದು ಎಂತ ಹೇಳಿದ್ದರು, ಅದರಿಂದಲೂ ತಿಳಿದು ಕೊಂಡೆ ಎಂದನು. ಸಖಿಯರಿಬ್ಬರೂ ನಕ್ಕರು; ಹುಡುಗನನ್ನು ಹಿಡಿದು ಕೊಂಡು ಮುದ್ದಿಸಿದರು. ತಂದೆ ಇದ್ದಹಾಗೆಯೇ ಇದ್ದಾನೆ, ಚೆನ್ನಾಗಿ ಬೆಳೆದಿದ್ದಾನೆ ಎಂದುಕೊಂಡರು. ಮಾಧವ್ಯನು ಈ ವೇಳೆಗೆ ಹತ್ತಿರ ಬಂದನು; ಇವರನ್ನು ಮಾತನಾಡಿಸಿದನು. ಸಖಿಯರು ಇವನಿಗೆ ತಕ್ಕ ಉತ್ತರವನ್ನು ಕೊಟ್ಟು, ರಾಣಿ ಎಷ್ಟು ದೂರದಲ್ಲಿದ್ದಾರೆ? ಎಂದು ಕೇಳಿದರು. ಅಷ್ಟುಹೊತ್ತಿಗೆ ದೂರದಲ್ಲಿ ಇನ್ನೊಂದು ತೇರೂ ಕಂಡಿತು. ಅಕೋ ತೇರು ಎಂದು ಅನಸೂಯೆ ಹುಡುಗನನ್ನು ಕೆಳಗಿಳಿಸಿ ಮುಂದೆ ನಡೆದಳು. ಪ್ರಿಯಂವದೆ ಹುಡುಗನನ್ನು ಎತ್ತಿಕೊಂಡು ಹಿಂದೆ ಹೋದಳು. "ಶಕುಂತಲೆ ದೂರದಿಂದಲೇ ಇವರ ಗುಂಪನ್ನು ನೋಡಿ, ತೇರನ್ನು ನಿಲ್ಲಿಸುವಂತೆ ಸೂತನಿಗೆ ಆಜ್ಞೆಮಾಡಿ, ಅದು ನಿಂತೊಡನೆ ಇಳಿದು ಹಂಸಪದಿಕೆಯನ್ನೂ ಇಳಿಸಿ ಜೊತೆಗೆ ಕರೆದುಕೊಂಡು ಸಖಿಯರ ಬಳಿಗೆ ಬಂದಳು."

ಏಳು ವರ್ಷ ಅಗಲಿದ್ದು ಮರಳಿ ಸೇರಿದ ಈ ಸಖಿಯರ ಮನಸ್ಸಿನ ಭಾವಗಳನ್ನು ಯಾರು ಬಣ್ಣಿಸಬೇಕು? ಸ್ವಲ್ಪ ಹೊತ್ತಿಗೆ ಹಿಂದೆ ಪ್ರಿಯಂವದೆ ತನ್ನಲ್ಲಿ ತಾನೇ "ಇಂದು ಶಕುಂತಲೆ ಅಂದಿನ ಶಕುಂತಲೆಯಲ್ಲ; ರಾಣಿ. ಅವಳನ್ನು ಏನೆಂದು ಕರೆಯಬೇಕೋ, ಅವಳಿಗೆ ಏನು ಮರ್ಯಾದೆ ತೋರ ಬೇಕೋ" ಎಂದು ಸ್ವಲ್ಪ ಯೋಚಿಸಿದ್ದಳು." ತೇರಿನಿಂದಿಳಿದ ರಾಣಿಯನ್ನು ನೋಡಿ ಅವಳಿಗೆ ಈ ಯೋಚನೆಯೆಲ್ಲ ಎತ್ತಲೋ ಹೋಯಿತು.'' ಅವಳು ಶಕುಂತಲೆಯನ್ನು ರಾಣಿ ಎಂದು ಕೂಡ ಕರೆಯಲಿಲ್ಲ. ಶಕುಂತಲೇ, ಚೆನ್ನಾಗಿದ್ದೀಯಾ ಎಂದು ಕೂಗಿದಳು. ಕೊರಳು ಕಟ್ಟಿಕೊಂಡಿತು. ಕಣ್ಣಲ್ಲಿ ನೀರು ತಡೆಯಲಾರದೆ ಹರಿಯಲಾಗದೆ ಹನಿಯಾಗಿ ನಿಂತಿತು.' ಅನಸೂಯೆ ಮಗುವಿನಂತೆ ಓಡಿ ಶಕುಂತಲೆಯನ್ನು ಮಾತಾಡದೆ ಅಪ್ಪಿಕೊಂಡಳು." ಅವಳ ಭುಜದ ಮೇಲೆ ತಲೆಯನ್ನಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ಶಕುಂತಲೆಗೂ ಕ್ಷಣಮಾತ್ರ ಧೃತಿ ತಪ್ಪಿತು. ಆದರೆ ಒಂದು ಕ್ಷಣದಲ್ಲಿ ಅವಳು ಧೈರ್ಯ

ತಂದುಕೊಂಡು, ಬಾ ಅನಸೂಯೆ, ಇಕೊ ನೋಡು ಯಾರು ಬಂದಿದ್ದಾರೆ ಎಂದು ಬಿಡಿಸಿಕೊಂಡು, ಪ್ರಿಯಂವದೆಯನ್ನು ಹತ್ತಿರ ಸೆಳೆದುಕೊಂಡು ಹಂಸಪದಿಕೆಗೆ ಸಖಿಯರ ಪರಿಚಯವನ್ನು ಮಾಡಿಕೊಟ್ಟಳು." ಸಖಿಯರಿಗೆ, ಇವರು ನಮ್ಮ ಅಕ್ಕ, ನನ್ನನ್ನು ತಂಗಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದಾರೆ ಎಂದಳು. ಪ್ರಿಯಂವದೆ, ನೀವೂ ನಮ್ಮ ಆಶ್ರಮಕ್ಕೆ ಬಂದದ್ದು ಸಂತೋಷ, ಎಂದಳು. ಮರ್ಯಾದೆಯ ಮಾತುಗಳಾದ ಮೇಲೆ ಶಕುಂತಲೆ ತಂದೆ ಗೌತಮೀದೇವಿ ಸುಖವಾಗಿದ್ದಾರೆಯೇ ಎಂದು ಕೇಳಿ, ಆಮೇಲೆ ಎಲ್ಲರ ಕ್ಷೇಮಸಮಾಚಾರಗಳನ್ನೂ ವಿಚಾರಿಸಿದಳು: ಮಾಢವ್ಯನು ಒಂದು ಕಡೆಗಿರಲು, ಸುಮ್ಮನೆ ಮಾತನಾಡುವುದಕ್ಕಾಗಿ, ನಮ್ಮಿಂದ ನಿಮ್ಮ ಪ್ರಯಾಣಕ್ಕೆ ಸಾವಕಾಶವಾಯಿತು ಎಂದು ಅವನಿಗೆ ಹೇಳಿ," ಮಗನನ್ನು ನಿರ್ದೇಶಿಸಿ, ಮಗು ಆಗಲೇ ನಿಮ್ಮ ಸ್ನೇಹ ಮಾಡಿಕೊಂಡನೆ ಎಂದಳು. ಪ್ರಿಯಂವದೆ, ಹೌದು, ನೀನು ಮೊದಲೇ ನಮ್ಮನ್ನೆಲ್ಲಾ ಅವನಿಗೆ ವರ್ಣಿಸಿ ನನ್ನ ಮೂಗು ದೊಡ್ಡದು ಎಂತ ಹೇಳಿದ್ದೆಯಂತೆ, ಎಂದಳು. ಶಕುಂತಲೆಯೂ ಹಂಸಪದಿಕೆಯೂ ನಕ್ಕರು." ಶಕುಂತಲೆ ಮಗನನ್ನು, ಏನೋ ಮಗು, ಮಾತಿಗೆ ಮುಂಚೆ ದೊಡ್ಡವರನ್ನು ಇಂಥ ಮಾತು ಹೇಳುವುದೆ, ಎಂದಳು. ಭರತ "ನಾನು ಮೊದಲು ಹೇಳಲಿಲ್ಲ ಅಮ್ಮ. ದೊಡ್ಡಮ್ಮಾಜಿ ಹ್ಯಾಗೆ ಗುರುತಿಸಿದೆ? ಎಂದರು. ನಿಮ್ಮ ಮುಖ ದೊಡ್ಡದು, ಚಿಕ್ಕಮ್ಮಾಜಿ ಅವರ ಮುಖ ಉದ್ದುದ್ದ ಎಂದೆ. ದೊಡ್ಡಮ್ಮಾಜಿ ಇಷ್ಟರಲ್ಲೇ ತಿಳಿಯಿತೆ ಎಂದರು. ಇಲ್ಲ ನಿಮ್ಮ ಮೂಗು ಸ್ವಲ್ಪವೇ ಸ್ವಲ್ಪ ದೊಡ್ಡದು ಎಂತ ಅಮ್ಮ ಹೇಳಿದ್ದರು ಎಂದೆ" ಎಂದು ದಾರಿಯ ಒಂದು ಕಲ್ಲನ್ನು ಒದ್ದನು. ಎಲ್ಲರೂ ಮರಳಿ ನಕ್ಕರು. ಮಕ್ಕಳ ಮಾತೇ ಹೀಗೆ." ಸ್ನೇಹದಿಂದಾಗಲಿ, ದುಃಖದಿಂದಾಗಲಿ ದೊಡ್ಡವರ ಕಂಠ ಕಟ್ಟಿದಾಗ ಮಕ್ಕಳ ಒಂದು ಮಾತು ಆ ಉದ್ವೇಗವನ್ನು ಇಳಿಸುತ್ತದೆ. ಹೆತ್ತವರು ಸಾಕಿದವರು ಚಿಂತೆಯಲ್ಲಿ ಮುಳುಗಿರುವಾಗ ಎಳೆಯರ ಒಂದು ನಗೆ ಅವರ ಹೃದಯದಲ್ಲಿ ಹರ್ಷವನ್ನು ಮೂಡಿಸುತ್ತದೆ. ದಿನ ಕಳೆದು ಹಿರಿಯರಾದವರು ಬಾಳೆಲ್ಲ ಬರಿದೆಂದು ಕುಗ್ಗಿದ ವೇಳೆಯಲ್ಲಿ, ಹಸಿವಿನಿಂದ ಅಳುವ ಕೂಸು ಬಾಳಿನಲ್ಲಿ ಆಗಬೇಕಾದದ್ದು ಬಹಳವಿದೆ ಎಂದು ಅವರನ್ನು ಎಚ್ಚರಿಸುತ್ತದೆ. ಪ್ರಿಯಂವದೆ

ಅನಸೂಯೆಯರು ಮತ್ತೆ ಹುಡುಗನನ್ನು ಮುದ್ದಿಸಿ ಅವನನ್ನು ಹಿಡಿದು ಕೊಂಡು ನಡೆದರು. ಜೊತೆಗೆ ಇತ್ತ ಶಕುಂತಲೆ ಇತ್ತ ಹಂಸಪದಿಕೆ. ಮಾಧವ್ಯನು ಹಿಂದೆ ಬಂದನು. ಹೀಗೆ ರಾಣಿಯರೂ ತಾಪಸ ತರುಣಿಯರೂ ಮಾತಾಡುತ್ತ ಆಶ್ರಮದ ಕಡೆಗೆ ನಡೆದರು. ತೇರುಗಳು ಹಿಂದೆ ಬಂದವು.

ಹೆಜ್ಜೆಗಳನ್ನಿಡುತ್ತ ಮುಂದರಿದ ಹಾಗೆ ಶಕುಂತಲೆ ತನ್ನ ಪರಿಚಯದ ಸ್ಥಳಗಳ ಮುಖಮುದ್ರೆಯನ್ನು ಒಂದೊಂದಾಗಿ ಗುರುತಿಸಿದಳು. ಇಲ್ಲಿ ದಾರಿಯ ಪಕ್ಕದಲ್ಲಿ ದೊಡ್ಡದೊಂದು ಮರ. ಅದರಲ್ಲೊಂದು ಪೊಟ್ಟರೆ. ಮರದ ಬಳಿ ಪೊಟ್ಟರೆಯಿಂದ ಸುರಿದ ಕಾಳು. ಅಲ್ಲಿ ಮಾಲಿನೀ ನದಿಯ ಸ್ನಾನಘಟ್ಟದಿಂದ ಬರುವ ದಾರಿ. ಇನ್ನಲ್ಲಿ ಆಶ್ರಮದ ಗಿಡಗಳಿಗೆ ಮೇಲ್ಗಡೆಯಿಂದ ತಂದಿರುವ ಕಾಲುವೆ. ಇಲ್ಲಿ ಮತ್ತೆ ಜಿಂಕೆಗಳ ಮಾಳ. ಯಾರು ಬಂದರೆಂಬಂತೆ ನಿಂತು ಇವರನ್ನು ನೋಡುತ್ತಿರುವವು ಕೆಲವು; ಯಾರು ಬಂದರೆ ನಮಗೇನು ಭಯ ಎಂಬಂತೆ ತಲೆಯನ್ನೆತ್ತದೆ ಮೇವಿನಲ್ಲಿ ತೊಡಗಿರುವವು ಕೆಲವು. "ಪ್ರಪಂಚ ಇಂದು ಅಂದಿದ್ದಂತೆಯೇ ಇದೆ ಎಂದು ಶಕುಂತಲೆಗೆ ತೋರಿತು. ಆದರೆ ಅಂದಿನ ಉಲ್ಲಾಸ ತಿರುಗಿ ಇವಳ ಮನಸ್ಸಿನಲ್ಲಿ ಮೂಡಲಿಲ್ಲ. ತನ್ನನ್ನು ಸಾಕಿದ ಸ್ಥಳವನ್ನು ನೋಡಿ ಶಕುಂತಲೆಗೆ ಸಂತೋಷ; ಅದರ ಮುಖ ಹಾಗೆಯೇ ಇದ್ದರೂ ಅದರಿಂದ ತನಗೆ ಅಂದಿನ ಸುಖ ಕಾಣಲಿಲ್ಲವೆಂದು ಒಂದು ಕೊರತೆ. ಮನಸ್ಸಿನ ಈ ಸ್ಥಿತಿಯೇಕೆಂದು ಶಕುಂತಲೆ ಅರಿಯಲಾರದೆ ಹೋದಳು." ಆಶ್ರಮದ ಬಾಗಿಲಿಗೆ ಬರುವ ವೇಳೆಗೆ ಅಲ್ಲಿ ಶಾರ್ಙ್ಗರವ ಶಾರದ್ವತರೂ ಕೆಲವರು ತಾಪಸ ಕುಮಾರರೂ ಕನ್ಯೆಯರೂ ಇದ್ದರು. "ಶಾರ್ಙ್ಗರವನು ಒಂದು ತಟ್ಟೆಯಲ್ಲಿ ಫಲಮಂತ್ರಾಕ್ಷತೆಗಳನ್ನು ಇಟ್ಟುಕೊಂಡು ಎದುರು ಬಂದು ರಾಜಾಶೀರ್ವಾದವನ್ನು ಹೇಳಿ ಬಾಲಕನ ಮೇಲೂ ರಾಣಿಯರ ಮೇಲೂ ಅಕ್ಷತೆಯನ್ನು ಹಾಕಿದನು." ಆಮೇಲೆ ಶಕುಂತಲೆಯನ್ನು ಕುರಿತು "ರಾಣಿಯವರನ್ನು ಇಲ್ಲಿ ತಾವೇ ಇದ್ದು ಬರಮಾಡಿಕೊಳ್ಳಬೇಕೆಂದು ಕುಲಪತಿಗಳು ಉದ್ದೇಶಿಸಿದ್ದರು; ಆದರೆ ಸಂಜೆಯ ಹೋಮದ ಹೊತ್ತಾದರಿಂದ, ಯಜ್ಞವಾಟಿಯಲ್ಲಿರುತ್ತೇವೆ, ಅಲ್ಲಿಗೇ ಅವರನ್ನು ಬಿಜಮಾಡಿಸಿಕೊಂಡು ಬನ್ನಿ ಎಂದು ನಮಗೆ ಅಪ್ಪಣೆ ಮಾಡಿ ಹೋದರು" ಎಂದನು. ಶಕುಂತಲೆ

ಇವನ ಮರ್ಯಾದೆಯಿಂದ ಬಹಳ ನೊಂದಳು. ಆದರೆ ಅವಳು ಒಡನೆಯೇ ಅವನನ್ನು ಧಾರಾಳವಾಗಿ ಮಾತನಾಡಿಸಿ ಇದೆಲ್ಲ ಬೇಡವೆಂದು ಹೇಳು ವಂತಿರಲಿಲ್ಲ; ಅದರಿಂದ ಸುಮ್ಮನಿದ್ದಳು. ಶಾರದ್ವತನು ಹತ್ತಿರಕ್ಕೆ ಬಂದು ಚೆನ್ನಾಗಿದ್ದೀಯಾ ತಾಯಿ ಎಂದು ಮೆಲ್ಲನೆ ಕೇಳಿ, ಕುಮಾರನನ್ನು ಹತ್ತಿರಕ್ಕೆ ಕರೆದು ಶಾರ್ಙ್ಗರವನಿಗೆ, ಚಕ್ರವರ್ತಿ ಕುಮಾರರು ಒಳ್ಳೇ ಸುಟಿಯಾಗಿದ್ದಾರೆ, ಎಂದನು. ಶಾರ್ಙ್ಗರವನು ಎಲ್ಲ ಕುಲಪತಿಗಳ ಅನುಗ್ರಹ ಎಂದನು. ಎಲ್ಲರೂ ಅಲ್ಲಿಂದ ಯಜ್ಞವಾಟಿಗೆ ಹೋದರು.

"ಕುಲಪತಿಗಳು ಹೋಮಾಗ್ನಿಯ ಮುಂದೆ ಕುಳಿತಿದ್ದರು. ಇವರು ಬಂದದ್ದು ತಿಳಿಯಲಾಗಿ ಒಳಗಿಂದ ಒಬ್ಬ ವಟುವನ್ನು ಕಳುಹಿಸಿ ಒಳಗೆ ಬರಬೇಕೆಂದು ಅಪ್ಪಣೆಮಾಡಿದರು. ಶಕುಂತಲೆಗೆ ಹೋಗಿ ತಂದೆಯನ್ನು ಅಪ್ಪಿಕೊಳ್ಳಬೇಕೆಂಬ ಆಸೆ. ಆದರೆ ಬೆಳೆದ ಹೆಣ್ಣಿಗೆ, ಚಕ್ರವರ್ತಿಯ ಪತ್ನಿಗೆ, ಚಕ್ರವರ್ತಿಯಾಗುವವನ ತಾಯಿಗೆ, ಅದು ಸರಿಯಲ್ಲ. ಅವಳು ಮಗುವನ್ನು ಕುರಿತು ಬಾರಪ್ಪ ತಾತನಿಗೆ ನಮಸ್ಕಾರಮಾಡು ಎಂದು ಹೇಳಿ ನಮಸ್ಕರಿಸು ತ್ತೇನೆ ಎಂದು ತಂದೆಗೆ ಮಂಡಿಯೂರಿದಳು. ಆಶೀರ್ವಾದ ಪಡೆದು ಎದ್ದು ಹಂಸಪದಿಕೆಯನ್ನು ತೋರಿ, ನಮ್ಮ ಅಕ್ಕ, ಕೂಡ ಬರಲು ಒಪ್ಪಿದರು, ನಿಮಗೆಲ್ಲ ಅವರು ಬರುವುದು ಬಹು ಸಂತೋಷವೆಂದು ಕರೆತಂದೆನು ಎಂದಳು. ಕುಲಪತಿಗಳು ಬರಿಯ ಸಂಜ್ಞೆಯಿಂದ ಎಲ್ಲ ಮಾತನ್ನು ಒಪ್ಪಿ ಕೊಂಡು ಇವರನ್ನೆಲ್ಲ ಆಶೀರ್ವಾದದ ಅಕ್ಷತೆಯಿಂದ ಹರಸಿ ಕುಳಿತುಕೊಳ್ಳ ಹೇಳಿದರು. ಹೋಮ ಮುಂದಕ್ಕೆ ಸಾಗಿತು. ಹದಿನೈದು ನಿಮಿಷದ ಮೇಲೆ ಹೋಮಾಗ್ನಿಯ ಪೂಜೆಯಿಂದ ಸಂಧ್ಯಾಕಾಲದ ಸೇವೆಯನ್ನು ಮುಗಿಸಿ ಅವರು ಇವರನ್ನು ಕುಶಲಪ್ರಶ್ನೆ ಕೇಳಿದರು." ಭರತಕುಮಾರನು ಇತರರ ಹತ್ತಿರ ಆಡಿದಂತೆ ಇವರಲ್ಲಿ ಸಲಿಗೆಯಿಂದ ಆಡಲಿಲ್ಲ. ಬಹಳ ಗಂಭೀರವಾಗಿ ನಡೆದುಕೊಂಡನು. ಕುಲಪತಿಗಳು ಹಂಸಪದಿಕೆಯನ್ನು ಬಹು ಗೌರವದಿಂದ ಮಾತನಾಡಿಸಿದರು. ಈ ವೇಳೆಗೆ ಹೊಳೆಗೆ ಹೋಗಿದ್ದ ಗೌತಮಿದೇವಿ ಬಂದರು. "ಸಂಜೆಯೆಲ್ಲಾ ಕಾದಿದ್ದೆ, ನೀನು ಬರುವ ಹೊತ್ತಿಗೆ ಸರಿಯಾಗಿ ಹೊಳೆಗೆ ಹೋದೆ ನೋಡು ನಾನು" ಎನ್ನುತ್ತ ಹತ್ತಿರ ಕುಳಿತರು. ಬಂದವರು ಆಕೆಗೂ ನಮಸ್ಕಾರ ಮಾಡಿ ಆಶೀರ್ವಾದ ಪಡೆದರು. ಕಣ್ವರು ಸ್ವಲ್ಪ

ಹೊತ್ತು ರಾಜನ ಮಾತನ್ನೂ ರಾಜಕುಟುಂಬದ ಮಾತನ್ನೂ ಆಡಿ, ಗೌತಮಿ ಯನ್ನು ಕುರಿತು "ವತ್ಸೆಗೂ ರಾಣಿಯವರಿಗೂ ಪ್ರಯಾಣದಿಂದ ಆಯಾಸ ವಾಗಿದೆ. ಮಗುವಿಗೂ ಹಸಿವಿರಬಹುದು. ಕರೆದುಕೊಂಡುಹೋಗಿ ಉಪಚಾರ ಮಾಡಿ" ಎಂದು ಹೇಳಿದರು." ಇವರೆಲ್ಲ ಎದ್ದರು. ಕಣ್ವರು ಪ್ರಿಯಂವದೆ ಅನಸೂಯೆಯರನ್ನು ಕುರಿತು ರಾಣಿಯವರಿಗೆ ನಿಮ್ಮ ಮಕ್ಕಳನ್ನು ತೋರಿಸಿ ಎಂದು ನಕ್ಕರು. ಸ್ವಲ್ಪ ನಾಚಿಕೆಯಿಂದ ಅವರು ತೋರಿಸುತ್ತೇವೆ ಎಂದರು. ಇವರೆಲ್ಲ ಬಿಡಾರದ ಮಂಟಪಗಳಿಗೆ ಹೋದರು.

ಸಖಿಯರೂ ಶಕುಂತಲೆಯೂ ಆಡಬೇಕಾದ ಮಾತು ನೂರು. ರಾಣಿ ಹಂಸಪದಿಕೆ ಇದನ್ನು ತಿಳಿದುಕೊಂಡು "ತಾನು ರಾಜಕುಮಾರನಿಗೆ ಭೋಜನ ಮಾಡಿಸುತ್ತೇನೆಂದು ಗೌತಮಿಾದೇವಿಯ ಜೊತೆಗೆ ಭೋಜನಶಾಲೆಗೆ ಹೋದಳು. ಆಮೇಲೆ ಆಶ್ರಮವನ್ನು ನೋಡಬೇಕೆಂಬ ನೆಪದಿಂದ ಅವನನ್ನು ಕರೆದುಕೊಂಡು ಅಲ್ಲಲ್ಲಿ ಸುತ್ತಿ ಹೊತ್ತು ಮಾಡಿ ಬಿಡಾರಕ್ಕೆ ಬಂದಳು. ಆವೇಳೆಗೆ ಇವರು ಶಕುಂತಲೆಗೆ ತಮ್ಮ ಮಕ್ಕಳನ್ನು ತೋರಿಸಿ ಮರಳಿ ಬಂದು, "ಅವಳ ಜೊತೆಯಲ್ಲಿ ಸಖಿಯರಿಗೆ ಸಹಜವಾದ ಆಸೆಯಿಂದ ಎಲ್ಲಿಲ್ಲದ ಮಾತನ್ನು ಆಡಿದ್ದರು. ದೂರ್ವಾಸನ ಶಾಪದ ಮಾತು, ಇವರು ಭಯಪಟ್ಟಿದ್ದದ್ದು, ಅದರಂತೆಯೇ ಆದದ್ದರ ಮಾತು, ಕಣ್ವರು ವ್ಯಥೆಪಟ್ಟ ಮಾತು, ಶಾರ್ಙ್ಗರವ ಶಾರದ್ವತರು ರಾಜಧಾನಿಯಿಂದ ಹಿಂದಕ್ಕೆ ಬಂದ ಒಡನೆ ಗೌತಮಿಾದೇವಿ ಇವರಿಗೆ ಮದುವೆಮಾಡಿಬಿಡಬೇಕೆಂದು ಹಠಮಾಡಿದ ಮಾತು, ಶಕುಂತಲೆಯ ಜಿಂಕೆ ಮರಿಹಾಕಿದ ಮಾತು, ಮತ್ತೆ ಈಗ ಗರ್ಭಿಣಿಯಾಗಿರುವ ಮಾತು, ಶಾರ್ಙ್ಗರವನ ಹಠದ ಮಾತು, ಶಾರದ್ವತನ ಸರಳತೆಯ ಮಾತು, ಕಣ್ವಋಷಿಯ ದೊಡ್ಡ ಮನಸ್ಸಿನ ಮಾತು. ಊಟ ಮುಗಿದು ಕುಮಾರನು ಬಂದಮೇಲೆ ಶಕುಂತಲೆ ಅವನನ್ನು ಅಪ್ಪಿ ಮಲಗಿಸಿ ಹಂಸಪದಿಕೆಯೊಂದಿಗೆ ಊಟಕ್ಕೆ ಹೋದಳು." ಇಲ್ಲಿಯ ಜನರ ಸೌಲಭ್ಯವನ್ನು ನೋಡಿ ಹಂಸಪದಿಕೆಗೆ ಬಹಳ ಆಶ್ಚರ್ಯ. ಊಟವಾದ ಮೇಲೆ ಸ್ವಲ್ಪಹೊತ್ತು ಬೆಳದಿಂಗಳಲ್ಲಿ ಕುಳಿತಿದ್ದು, ಆಮೇಲೆ ಇವರೆಲ್ಲ ಮಲಗಿಕೊಳ್ಳಹೋದರು. ಆ ರಾತ್ರಿ ಶಾರದ್ವತ ಶಾರ್ಙ್ಗರವರು ತಮ್ಮ ಮಕ್ಕಳ ಕಷ್ಟಸುಖವನ್ನು ತಾವೇ ನೋಡಿಕೊಳ್ಳಬೇಕಾಯಿತು. ಶಾರದ್ವತನು

ಸಾಧು. ಅವನಿಗೆ ಇದೆಲ್ಲ ಲಕ್ಷ್ಯವಿಲ್ಲ. ಶಾರ್ಙ್ಗರವನದು ಸ್ವಲ್ಪ ಕಠಿಣ ಹೃದಯ. ಅವನಿಗೆ ಅಷ್ಟುಬೇಗ ಮದುವೆಯಾಗುವ ಉದ್ದೇಶವಿರಲಿಲ್ಲ. ಪ್ರಿಯಂವದೆಗೂ ಇನ್ನು ಸ್ವಲ್ಪ ದಿನವಾಗಲೆಂದೇ ಮನಸ್ಸು. ಆದರೆ ಗೌತಮಿಾದೇವಿ ಹಠಮಾಡಿದ್ದಳು. "ಬೆಳೆದ ಹುಡುಗಿಯನ್ನು ಇರಿಸಿಕೊಂಡು ನಮ್ಮ ಹಾಗೆ ತಾನೇ ಎಂದು ನಾನು ಅಜಾಗರೂಕತೆಯಿಂದ ಇದ್ದೇ ಆಗ ಹಾಗಾಯಿತು. ಇನ್ನು ನಿಮ್ಮಿಂದ ಒಂದಷ್ಟು ಚಿಂತೆ ಬಂದೀತು ನನಗೆ, ನೀವು ಈ ಸಲವೇ ಮದುವೆಯಾಗಬೇಕು" ಎಂದಳು. ಅನಸೂಯೆ ಶಾರದ್ವತರು ಮದುವೆಯಾಗಲು ಒಪ್ಪಿದರು. ಪ್ರಿಯಂವದೆ ಈಗ ಬೇಡವೆನ್ನಲು, ಅನಸೂಯೆ "ನೀನು ಅಕ್ಕ, ನಾನು ತಂಗಿ; ನಿನಗೇ ಮದುವೆ ಬೇಡವೆಂದರೆ ನನಗೇನು ಅವಸರ. ಸ್ವಲ್ಪ ದಿನ ಹೋಗಲೇಳು ಜೊತೆಯಾಗಿ ಮದುವೆಯಾಗೋಣ" ಎಂದಳು. ಇದನ್ನೆಲ್ಲ ನೋಡಿ ಕುಲಪತಿಗಳು ಆ ವರ್ಷವೇ ಮದುವೆಗಳನ್ನು ನಡೆಯಿಸಿದರು. ಈಗ ಅನಸೂಯೆಗೆ ಒಂದು ಹೆಣ್ಣುಮಗು, ಪ್ರಿಯಂವದೆಗೆ ಒಂದು ಗಂಡು. ಅವರು ಸಖಿಯ ಸಲುವಾಗಿ ಅಂದು ಅವಳ ಬಿಡಾರದಲ್ಲಿ ಮಲಗಿದರು. ಮೂವರೂ ಬಹು ಹೊತ್ತು ಮಾತನಾಡುತ್ತ ನಿದ್ದೆಹೋದರು. ಅರಮನೆಯಿಂದ ಬಂದ ಶಕುಂತಲೆ ಈ ಬಡತನದ ಬಿಡಾರದಲ್ಲಿ ಜ್ವರವಿಳಿದ ವೇಳೆ ತಾಯಮಡಲಲ್ಲಿ ನಿದ್ರಿಸುವ ಮಗುವಿನಂತೆ ಹಾಯಾಗಿ ನಿದ್ರಿಸಿದಳು! ಅವಳ ನಿದ್ದೆ ಬಹು ದಿನದಿಂದ ಕಾಣದಿದ್ದ ಕನಸುಗಳಿಂದ ಸುಖಮಯವಾಯಿತು. ಬೆಳಗಾಗ ಎದ್ದವೇಳೆ ಕುಲಪತಿಗಳು ಆ ಮೊದಲೇ ಬಂದು ವಿಚಾರಿಸಿಕೊಂಡು ಹೋಗಿದ್ದರೆಂದು ತಿಳಿಯಿತು. ರಾಣಿಯರು ಎದ್ದು ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಯಜ್ಞವಾಟಿಗೆ ಹೋಗಿ ಹಿರಿಯರಿಗೆ ನಮಸ್ಕರಿಸಿದರು. ಆಮೇಲೆ ಶಕುಂತಲೆ ಸಖಿಯರೊಡನೆ ತನ್ನ ಮಲ್ಲಿಕಾಲತೆಯನ್ನು ನೋಡ ಹೋದಳು. ಅದು ಹೊರವಾಗಿ ಬೆಳೆದಿತ್ತು. ಅದೇ ಸುಂದರವಾದ ಸಹಕಾರ ವೃಕ್ಷ. ಆ ಬಳಿಯಲ್ಲಿ ದೀರ್ಘಾಪಾಂಗವೂ ಬಂದಿತು! ಮೊದಲು ಅದಕ್ಕೆ ರಾಣಿಯ ಗುರುತು ಸಿಕ್ಕಲಿಲ್ಲ. ಇವಳು ಕರೆದರೆ ಅದು ದೂರ ಹೋಯಿತು. ಸಖಿಯರು ಅದನ್ನು ಕರೆತಂದು ಹತ್ತಿರ ನಿಲ್ಲಿಸಲು ಇವಳನ್ನು ನೋಡಿ ಮೈ ಕೈಯನ್ನು ನೆಕ್ಕಿ ಏನೋ ಸ್ವಲ್ಪ ನೆನವು ಬಂದಂತೆ ಸಮಾಧಾನ

ವಾಗಿ ನಿಂತಿತು. ಆದರ ಮರಿಯೂ ಅಲ್ಲೇ ಇತ್ತು. ಅದಕ್ಕೂ ತಾಯಿಗೂ ವ್ಯತ್ಯಾಸ ಹೇಳುವಂತಿರಲಿಲ್ಲ. ಶಕುಂತಲೆ ಅಲ್ಲಿಂದ ಹೊರಟು ತನ್ನನ್ನು ರಾಜನು ಮೊದಲು ನೋಡಿದ ಸ್ಥಳವನ್ನೂ ತಾನೂ ಅವನೂ ಕುಳಿತಿದ್ದ ಸ್ಥಳವನ್ನೂ ತಾನು ಪತ್ರ ಬರೆದ ಸ್ಥಳವನ್ನೂ ತನ್ನನ್ನು ಅವನು ವರಿಸಿದ ಸ್ಥಳವನ್ನೂ ಮಾಲಿನೀತೀರದ ಸ್ನಾನಘಟ್ಟವನ್ನೂ ನೋಡಿದಳು. ಅವಳಿಗೆ ತನ್ನ ಬಾಲ್ಯದ ಕಥೆಯೆಲ್ಲ ಕಣ್ಣೆದುರಿಗೆ ಮರಳಿ ನಡೆದಂತೆ ಆಯಿತು. ಆ ಉಲ್ಲಾಸವೇನು, ಆ ಉತ್ಸಾಹವೇನು, ಆ ಸರಳಭಾವನೆಯೇನು. ಇಂದು ಆಗ ಇದ್ದದಕ್ಕಿಂತ ಹೆಚ್ಚಿನ ಸುಖಸಾಮಗ್ರಿ ಇತ್ತು. ಆದರೆ ಆಗಣ ಸುಖವಿರಲಿಲ್ಲ! ಶಕುಂತಲೆ ಬಹಳ ಖಿನ್ನಳಾದಳು. ಅವಳ ಅಂದಿನ ಬಾಳು ಯಾರದೋ ಬೇರೆಯವರೊಬ್ಬರ ಬಾಳೆಂಬಂತೆ ಕಂಡಿತು. ಆಸೆಯಲ್ಲಿ ಸುಖವಿಲ್ಲ. ಆಸೆ ತುಂಬುವುದರಲ್ಲಿ ಸುಖವಿಲ್ಲ. "ಆಸೆಯರಿಯದೆ ಇರುವ ಸುಖವೇ ಸುಖ ಎಂದು ಅವಳ ಮನಸ್ಸಿಗೆ ತೋರಿತು." ಹಾಗೆಯೇ ಅಲ್ಲೆಲ್ಲಾ ಸಖಿಯರೊಡನೆ ಓಡಿಯಾಡಿ ಮರಳಿ ಅವಳು ಬಿಡಾರಕ್ಕೆ ಹೋದಳು.

ಮಧ್ಯಾಹ್ನ ಶಾರ್ಙ್ಗರವನು ಬಂದು "ಅಂದು ನಿಮ್ಮನ್ನು ಅರಮನೆಯಲ್ಲಿ ಬಿಡುವಂದು ನಾನು ಕಠಿಣವಾದ ಮಾತನ್ನಾಡಿದೆ, ಅದನ್ನು ನನ್ನ ವಿಷಯದಲ್ಲಿ ಜ್ಞಾಪಕವಿಟ್ಟುಕೊಳ್ಳಬಾರದು" ಎಂದನು.

ಶಕುಂತಲೆ "ನೀನು ನನ್ನನ್ನು ಬಹುವಚನದಿಂದ ಕರೆಯಬೇಡ ಅಣ್ಣ. ಎಂದಿದ್ದರೂ ಏನಾದರೂ ನಾನು ನಿನ್ನ ತಂಗಿ. ಇನ್ನು ಅಂದು ನೀನು ಹೇಳಿದ್ದು ಆಗಣ ಸಂದರ್ಭದಲ್ಲಿ ತಪ್ಪಲ್ಲ. ಇಂದು ಹೇಗೆ ತಪ್ಪಾದೀತು. ನೀನು ನನ್ನ ಅಣ್ಣನೆಂದು ಮಾತ್ರ ನನ್ನ ಅರಿವು, ಉಳಿದದ್ದು ನನಗೆ ಜ್ಞಾಪಕವೇ ಇಲ್ಲ" ಎಂದು ಅವನಿಗೆ ಧೈರ್ಯ ಹೇಳಿದಳು.

ಸಂಜೆಯಲ್ಲಿ ಕಣ್ವರು ಬಂದು ಹತ್ತಿರ ಕುಳಿತು ತಾವಾಗಿ "ನೀನು ಇನ್ನೊಂದು ಸಲ ಬರುವಾಗ ಚಕ್ರವರ್ತಿಗಳನ್ನು ನಾನು ಬರಹೇಳಿದೆನೆಂದು ಹೇಳಿ ಕರೆತರಬೇಕು. ನನ್ನ ಬಳಿಗೆ ಬರುವುದಕೆ ಸಂಕೋಚ ಬೇಡವೆಂದು ತಿಳಿಸು" ಎಂದರು. ಶಕುಂತಲೆ ಕರೆತರುತ್ತೇನೆ ಎಂದಳು.

ಶಕುಂತಲೆ ಮಾರನೆಯ ಬೆಳಿಗ್ಗೆ ಎದ್ದು ನಿತ್ಯವಿಧಿಗಳನ್ನು ಮುಗಿಸಿ ತಾನು ತಂದಿದ್ದ ಒಡವೆ ವಸ್ತುಗಳನ್ನು ಎಲ್ಲರಿಗೂ ಹಂಚಿ ಹಿರಿಯರಿಗೆ

ವಂದಿಸಿ ಸಖಿಯರಿಗೆ ಹೋಗಿಬರುವೆನೆಂದು ಹೇಳಿ ಮರಳಿ ಹಸ್ತಿನಾವತಿಗೆ ಹೊರಟಳು. ಹಿಂದೆ ಅವಳು ಆ ಆಶ್ರಮದಿಂದ ಹೊರಟ ಸಂದರ್ಭ ಅವಳಿಗೂ ಉಳಿದೆಲ್ಲರಿಗೂ ಚೆನ್ನಾಗಿ ನೆನಪುಂಟು. ಅಂದು ಅವಳು ನಡೆಯುತ್ತ ಹೊರಟವಳು ಇಂದು ತೇರನ್ನೇರಿ ಹೊರಟಳು. ಅಂದು ಗರ್ಭ ದಲ್ಲಿದ್ದ ಮಗನು ಇಂದು ಬೆಳೆದು ಶುಕ್ಲಪಕ್ಷದ ಸಪ್ತಮಿಯ ಚಂದ್ರನಂತೆ ಅವಳ ಜೊತೆಯಲ್ಲಿ ಕುಳಿತಿದ್ದನು. ಅಂದಿದ್ದ ಸಂದೇಹ ಶಂಕೆಗಳೊಂದೂ ಇಂದಿಲ್ಲ. ಇದು ಉಳಿದೆಲ್ಲರಿಗೂ ಬಹಳ ಸಂತೋಷ. ಶಕುಂತಲೆಗೆ ಮಾತ್ರ ಮನಸ್ಸಿನ ಸ್ಥಿತಿ ಅಂದಿನ ಸ್ಥಿತಿಯಿಂದ ಬಹಳ ಬೇರೆಯಾಗಿರಲಿಲ್ಲ. ಕಾರಣವರಿಯದೆ ಅವಳು ಅಂದಿನಂತೆಯೇ ಉತ್ಕಂಠಿತೆಯಾಗಿದ್ದಳು. ಅವಳಿಗೆ, ಮರಳಿ ಈ ಆಶ್ರಮಕ್ಕೆ ಬರಬೇಕಾದರೆ ಪತಿಯೊಡನೆ ಬರಬೇಕು, ಬಂದಮೇಲೆ ತಿರುಗಿ ಹಸ್ತಿನಾವತಿಗೆ ಹೋಗಬಾರದು, ಎನ್ನಿಸಿತು. ನೋವನ್ನು ಕಾಣದೆ ನಕ್ಕ ನಗೆಯೇ ನಗೆ; ನೊಂದು ನೋವನ್ನು ನುಂಗಿ ಆಮೇಲೆ ನಗುವ ನಗೆ ನಗೆಯಲ್ಲ. ಕಣ್ವಋಷಿಯ ಸಾಕುಮಗಳಿಗೆ ಇದು ಅನುಭವಕ್ಕೆ ಬಂದಿತು. ನಿಜವಾದ ಸುಖವನ್ನು ಹಿಂದೆ ಬಿಟ್ಟೆದೇನೆಂಬ ತಿಳಿವಿನಲ್ಲೇ ಅವಳು ತೇರಲ್ಲಿ ಕುಳಿತು ಹಸ್ತಿನಾವತಿಗೆ ತೆರಳಿದಳು.

# ಮೊದಲನೆಯ ಮುದ್ರಣದ ಮುನ್ನುಡಿ

ಈ ಪುಸ್ತಕದ ನಾಲ್ಕು ಸಣ್ಣ ಕತೆಗಳೂ ಧಾರವಾಡದ ನನ್ನ ಗೆಳೆಯರ "ಜೀವನ" ಪತ್ರಿಕೆಯಲ್ಲಿ ಈ ಆರು ತಿಂಗಳಲ್ಲಿ ಪ್ರಕಟವಾದುವು. ಈ ಗೆಳೆಯರು ಇವುಗಳನ್ನು ಕುರಿತು ತೋರಿರುವ ವಿಶ್ವಾಸವನ್ನು ನಮ್ಮ ಜನರೆಲ್ಲ ತೋರಿಯಾರೆಂದು ನಾನು ಹಾರೈಸುತ್ತೇನೆ.

ಬೆಂಗಳೂರು, ವಿಕ್ರಮ ಸಂವತ್ಸರ
ಜ್ಯೇಷ್ಠ ಶುದ್ಧ ಪಂಚಮಿ

**ಶ್ರೀನಿವಾಸ**

# ವಿಷಯ ಸೂಚಿ

# ಕಲ್ಮಾಡಿಯ ಕೋಣ

ಕಲ್ಮಾಡಿ ನಮ್ಮ ಸುತ್ತಿಗೆ ದೊಡ್ಡ ಹಳ್ಳಿ. ಕಲ್ಮಾಡಿ ಎಂದು ಕೇಳಿ ಇದು ಮಂಗಳೂರಿನ ಬಳಿ ಇರುವ ಕಲ್ಮಾಡಿ ಎಂದು ತಿಳಿಯಬಾರದು. ಲೋಕಕ್ಕೆಲ್ಲಾ ನಮ್ಮ ಕಲ್ಮಾಡಿಯೆ ಕಲ್ಮಾಡಿ ಎಂದು ನಾನು ಬಹುಕಾಲ ತಿಳಿದಿದ್ದೆ. ಈಚೆಗೆ ನಮ್ಮ ಮಿತ್ರರೊಬ್ಬರು ಮಂಗಳೂರಿನ ಬಳಿ ಒಂದು ಕಲ್ಮಾಡಿ ಇದೆ ಎಂದು ಹೇಳಿದರು. ನಮ್ಮ ಕಲ್ಮಾಡಿಯು ಒಂದೇ ಆಗಿರುವ ಯಶಸ್ಸು ಇದರಿಂದ ಅರ್ಧ ಆದಹಾಗಾಯಿತು. ಈ ಕಲ್ಮಾಡಿ ನಮ್ಮೂರಿನ ಪಕ್ಕದ ಹಳ್ಳಿ. ಹೊರಹಳ್ಳಿ ಕಲ್ಮಾಡಿಗೆ ಮಧ್ಯೆ ಇರುವುದೆಲ್ಲ ಸಣ್ಣ ಒಂದು ಕೆರೆ. ಕೆರೆ ಮಧ್ಯೆ ಇರಲಿಲ್ಲ ಎಂದರೆ ನಮ್ಮ ಊರು ಕಲ್ಮಾಡಿಯ ಒಂದು ಮಜರೆಯಾಗುತ್ತಿದ್ದಿತೊ ಏನೊ. ಸ್ವಲ್ಪ ಸಮುದ್ರ ನಡುವೆ ಇರುವ ಕಾರಣದಿಂದ ಯೂರೋಪಿನ ಸಣ್ಣ ಸಣ್ಣ ರಾಜ್ಯಗಳು ಸ್ವತಂತ್ರ ರಾಷ್ಟ್ರಗಳಾಗಿರುವಂತೆ, ಆ ಕೆರೆಯ ಕೃಪೆಯಿಂದ ನಮ್ಮೂರು ಲೆಕ್ಕದಲ್ಲಿ ಬೇರೆ ಒಂದು ಹೆಸರನ್ನು ಪಡೆಯಿತು.

ನನಗೆ ಊರುಗಳ ಹೆಸರುಗಳನ್ನು ಕುರಿತು ಯಾವಾಗಲೂ ಕುತೂಹಲ. ಕಲ್ಮಾಡಿ ಎಂದರೆ ಏನೆಂದು ಬಹಳ ಸಲ ಯೋಚಿಸಿದೇನೆ. ಅಲ್ಲಿಯವರು ಕಲ್ಲು ಮಾರಿ ಎನ್ನುವುದು ಕಲ್ಲು ಮಾಡಿ, ಕಲ್ಮಾಡಿ, ಆಯಿತು ಎಂದು ಹೇಳುತ್ತಾರೆ. ಕಲ್ಮಾಡಿಯಲ್ಲಿರುವ ದೊಡ್ಡ ವಿಶೇಷವೆಂದರೆ ಊರಿನ ಮಾರಿಕಾದೇವತೆ. ಆದಕಾರಣ ಆ ಊರ ಜನರು ಎಲ್ಲವನ್ನೂ ಮಾರಿಯ ಮಹಿಮೆಗೆ ತಿರುಗಿಸುತ್ತಾರೆ. ಕಲ್ಲು ಮಾರಿ ಎಂದರೆ ಕಲ್ಲಿನಲ್ಲಿ ಮಾಡಿರುವ ಮಾರಿ ಎಂದು ಅರ್ಥವಾಗಬಹುದು. ನಮ್ಮ ಸುತ್ತಿನಲ್ಲೆಲ್ಲ ಗ್ರಾಮದೇವತೆ ಕಲ್ಲಿನಲ್ಲಿ ಮಾಡಿದ ವಿಗ್ರಹವೇ ಆಗಿರುವುದರಿಂದ ಆ ವ್ಯುತ್ಪತ್ತಿ ನನಗೇಕೋ ಒಪ್ಪಲಿಲ್ಲ. ಕಲ್ಲಿನಂಥ ಮಾರಿ ಎಂದು ಅರ್ಥಮಾಡುವುದಾದರೂ ಕಲ್ಮಾಡಿಗೆ ಹೆಚ್ಚಿನ ಪ್ರಾಶಸ್ತ್ಯ ಬರಬಹುದೆ ಎಂಬ ವಿಚಾರದಲ್ಲಿ ಸಂಶಯ. ಮಾರಿ ಎಂದ ಮೇಲೆ ಮಾರಿ; ಅದರ ಮೇಲೆ ಕಲ್ಲಿನಂಥ ಮಾರಿಯೇನು, ಬೆಣ್ಣೆಯಂಥ ಮಾರಿಯೇನು? ಆದರೆ ಕಲ್ಮಾಡಿಯ ಮಾರಿಯಲ್ಲಿ ಒಂದು ವಿಶೇಷವಿರುವುದರಿಂದ ಅದೇ ಅರ್ಥ ಇದ್ದರೂ ಇರಬಹುದೆಂದು ಊಹಿಸಬಹು

ದಾಗಿದೆ. ಆ ವಿಶೇಷ ಯಾವುದು ಎಂದರೆ ಅಲ್ಲಿ ಮಾರಿಯ ಹಬ್ಬಕ್ಕೆ ನಮ್ಮ ಊರುಗಳಿಗಿಂತ ವಿಜೃಂಭಣೆ ಹೆಚ್ಚು. ನಮ್ಮ ಊರುಗಳಲ್ಲಿ ಗ್ರಾಮದೇವತೆ ಒಂದು ಕೋಳಿಯಿಂದಲೋ, ಒಂದು ಕುರಿಯಿಂದಲೋ, ಒಂದು ಆಡಿನಿಂದಲೋ ತೃಪ್ತಳಾಗುತ್ತಾಳೆ. ಕಲ್ಮಾಡಿಯಲ್ಲಿ ಜನರಿಗೆ ಜ್ಞಾಪಕ ವಿರುವ ಕಾಲದಿಂದಲೂ ಮಾರಿಗೆ ವರ್ಷಕ್ಕೆ ಒಂದು ಬಲಿತ ಕೋಣ ಹೊರತಾಗಿ ಇನ್ನೂ ಯಾವುದೂ ಸಾಕಾಗುವುದಿಲ್ಲ. ಬಲಿಯಾಗುವ ಜೀವ ಊರ ಪಾಪದ ಮೊತ್ತ, ಅದರ ಜನದ ಪ್ರತಿನಿಧಿ. ದೊಡ್ಡ ಊರಿನಲ್ಲಿ ದೊಡ್ಡ ಜೀವ ಬಲಿ. ಊರು ದೊಡ್ಡದಾಗಿರುವುದರಿಂದ ಗ್ರಾಮಸ್ಥರು ಒಂದು ಕೋಣವನ್ನು ಕೊಡುವಷ್ಟರ ಶಕ್ತಿಯನ್ನು ಪಡೆದಿದ್ದಾರೆಂದೂ ಇದರ ಕಾರಣವನ್ನು ಊಹಿಸಬಹುದು. ಆದರೆ ಇದರ ಜೊತೆಗೆ ಉಳಿದ ಊರುಗಳ ಮಾರಿಗಿಂತ ಕಲ್ಮಾಡಿಯ ಮಾರಿ ಹೆಚ್ಚು ಪ್ರತ್ಯಕ್ಷ, ಎಂದರೆ ಕಠಿಣ, ಎಂಬ ಒಂದು ನಂಬಿಕೆಯೂ ಇದೆ. ಆದರೂ ಕಟ್ಟುವಾಗಲೇ ಇಂಥ ಹೆಸರಿಡುತ್ತಾರೆಯೆ? ಊರಿಗೂ ಮುಂದೇ ಮಾರಿ?

ನಾನು ಹೋಗಿರುವ ಊರುಗಳಲೆಲ್ಲಾ ಸ್ವಲ್ಪ ಭಯದಿಂದ ಮಾರಿಯ ಮೂರ್ತಿಯನ್ನು ಪರೀಕ್ಷಿಸಿ ನೋಡಿದ್ದೇನೆ. ನನ್ನ ಭಯದಿಂದ ಆ ಮೂರ್ತಿ ಗಳು ಭಯಂಕರವಾಗಿ ಕಾಣುತ್ತವೋ, ಇಲ್ಲ ಅವು ಭಯಂಕರವಾಗಿ ಇರುವುದರಿಂದ ನಾನು ಭಯಪಡುತ್ತೇನೋ ನನಗೆ ತಿಳಿಯದೆ ಇದೆ. ಸಾಮಾನ್ಯವಾಗಿ ನಾನು ನೋಡಿರುವ ಮಾರಿಯ ಮೂರ್ತಿಯೆಲ್ಲಾ ನನ್ನಲ್ಲಿ ಭಯವನ್ನು ಉಂಟುಮಾಡಿವೆ. ಅಂಥ ಮೂರ್ತಿಗಳಲ್ಲಿ ನಾನು ಇದುವರೆಗೆ ನೋಡಿರುವ ಎಲ್ಲಕ್ಕಿಂತಲೂ ಕಲ್ಮಾಡಿಯ ಮೂರ್ತಿ ಹೆಚ್ಚು ಭಯಂಕರ; ಮೃತ್ಯುವೇ ಕಲ್ಲಿನಲ್ಲಿ ಮಾರಿಯಾಗಿ ಮೂಡಿದೆ ಎಂಬಂತೆ ಕಾಣುತ್ತದೆ. ಬಾಳು ಸಾವನ್ನು ನೋಡಿ ಹೆದರದೆ ಹೇಗೆ ಇರಬಹುದು? ಅರಿವು ಇಲ್ಲದಿದ್ದರೆ ಭಯಪಡದೆ ಇರಬಹುದು. ಅರಿವುಳ್ಳ ಮಾನವನು ತನ್ನ ಭಯಕ್ಕೆ ತಾನೇ ಕಲ್ಲಿನಲ್ಲಿ ಆಕಾರವನ್ನು ಕೊಟ್ಟು ಅದನ್ನು ನೋಡಿ ಭಯಪಡುತ್ತಾನೆ. ಕಲ್ಮಾಡಿಯ ಮಾರಿ ಹಾಗೆ ಯಾವುದೋ ಕಾಲದಲ್ಲಿ ಒಬ್ಬ ಶಿಲ್ಪಿಯ ಉಳಿಯ ಮೊನೆಯಿಂದ ಕಲ್ಲಿನಲ್ಲಿ ರೂಪು ಪಡೆಯಿತು. ಅವನು ಎಲ್ಲಿ ಸಾವನ್ನು ನೋಡಿ ಅದರ ಆಕೃತಿಯನ್ನು ಮನಸ್ಸಿನಲ್ಲಿ ಚಿತ್ರಿಸಿಕೊಂಡನೋ, ಅಂತೂ

ಅವನ ಚಿತ್ರ ಕಲ್ಲಿನಲ್ಲಿ ರೂಪಗೊಂಡಿರುವುದು ನನ್ನಂಥವರ ಹೃದಯದಲ್ಲಿ ಅಳಿಸಿಹೋಗದಿರುವ ರೀತಿಯಲ್ಲಿ ಭೀತಿಯನ್ನು ಉಂಟುಮಾಡುವುದು.

ಉಳಿದ ಎಲ್ಲ ಊರ ಮಾರಿಗಿಂತ ಹೆಚ್ಚು ಭಯಂಕರ ರೂಪುವುಳ್ಳ ಕಾರಣದಿಂದ ಇದ್ದರೂ ಇರಬಹುದು, ಕಲ್ಮಾಡಿಯ ಮಾರಿಗೆ, ಕುರಿ ಆಡು ಕೋಳಿ ಸಾಲದೆ, ಕೋಣವೇ ಬೇಕಾಗಿದೆ. ಯಾವ ಸಂಪ್ರದಾಯ ದಿಂದಲೋ ಏನೋ, ಸಾಲದ್ದಕ್ಕೆ ಆ ಊರಿನಲ್ಲಿ ಮಾರಿಗೆ ಬಿಡುವ ಕೋಣ ಮೂರು ವರ್ಷ ಬೆಳೆಯಬೇಕು. ಉಳಿದ ಊರುಗಳಲ್ಲಿ ಒಂದು ವರ್ಷ ಬೆಳೆದರೆ ಸಾಕಾಗುತ್ತದೆ. ಅಲ್ಲಿ ಯಾವ ಕಾಲದಲ್ಲಾದರೂ ಬರುವ ಮೂರು ವರ್ಷದ ಕೋಣಗಳು ತೊಂಡು ಮೇಯುತ್ತಿರುತ್ತವೆ.

ಒಟ್ಟಿನಲ್ಲಿ ನಮ್ಮ ಕಡೆಗೇ ಕಲ್ಮಾಡಿ ತನ್ನ ಮಾರಿದೇವತೆಯಿಂದ ಪ್ರಸಿದ್ಧಿ. ಊರು ತನ್ನ ಹೆಸರನ್ನು ಅವಳಿಂದಲೇ ಪಡೆದಿರಬಹುದೆಂದು ಹೇಳಿದರೆ ಇರಬಹುದೋ ಏನೋ ಎಂದು ಹೇಳುವಷ್ಟು ಮಟ್ಟಿಗೆ ಅವಳ ಮಹಿಮೆ ಹರಡಿದೆ.

ನಾನು ನಾಲ್ಕುವರ್ಷದ ಹಿಂದೆ ನಮ್ಮ ಊರಿಗೆ ಹೋದಾಗ ಒಂದು ಸಂದರ್ಭವನ್ನು ಕಂಡೆನು. ನಮ್ಮ ಊರಿಗೆ ಮೋಟಾರಾಗಲಿ, ಬಸ್ಸಾಗಲಿ ಹೋಗುವಂತೆ ಇಲ್ಲ. ಹಾಲಾರದಲ್ಲಿ ಇಳಿದು ಹಳ್ಳಿಯ ದಾರಿಯಲ್ಲಿ ಗಾಡಿಯಲ್ಲಿ ಕುಳಿತು ಹೋಗುತ್ತಿದ್ದೆ. ಮಧ್ಯಾಹ್ನದ ಸುಡುಬಿಸಿಲು. ಕಲ್ಮಾಡಿಗೆ ಹೊರಹಳ್ಳಿಗೆ ಎರಡು ಮೈಲಿ ದೂರದಲ್ಲಿರುವ ಬೆಟ್ಟ, ಬೆಟ್ಟದ ಸುತ್ತಿನ ಕಾಡು, ಇವು ಹೊರತಾಗಿ ಸುತ್ತ ಅಷ್ಟೇನೂ ಮರಗಿಡ ಇಲ್ಲ; ಇಂಥ ಕಡೆ ಗಾಡಿಯ ಜಾಡು ಹೋಗುತ್ತದೆ. ಎತ್ತುಗಳು ಎಳೆಯಲಾರದೆ ಗಾಡಿಯನ್ನು ಎಳೆಯುತ್ತಿವೆ ಎಂದು ನನಗೆ ತೋರುತ್ತಿತ್ತು. ಇಳಿದು ನಡೆಯೋಣ ಎನ್ನಿಸಿತು. ಗಾಡಿಯವನು 'ಎಷ್ಟಾದರೂ ಎತ್ತು, ಮನಸರಿ ಗನ್ನ ಚನ್ನಾಗಿ ಬಿಸಿಲು ತಡಿಯುತದೆ, ಕುಳಿತಿರಿ' ಎಂದು ಹೇಳಿದ. ನಾನು ಗಾಡಿಯಲ್ಲಿಯೇ ಕುಳಿತಿದ್ದೆ. ನಾವು ಸ್ವಲ್ಪದೂರ ಹೋಗುವುದರಲ್ಲಿ ಜನರ ಗದ್ದಲ ಕೇಳಿಸಿತು. ಸ್ವಲ್ಪಹೊತ್ತಿನಲ್ಲಿ ಜನರು ಗುಂಪು ಗುಂಪಾಗಿ ಓಡಿ ಬರುತ್ತಿರುವುದು ಕಂಡಿತು. ವಿಸ್ತಾರವಾದ ಬಯಲಿನ ಮೇಲೆ ಬಿಸಿಲಿನಲ್ಲಿ ಅವರು ಓಡಿಬರುತ್ತಿದ್ದರು. ಎಲ್ಲರ ಮುಖದ ಮೇಲೂ ಭಯ, ಏನು

ಮಾಡಬೇಕೆಂಬ ವಿಚಾರ. ಅರ್ಧ ಜನ ಬೆವತು ನೀರಾಗಿದ್ದರು; ಉಳಿದ ವರು ನೀರಾಗುತ್ತಿದ್ದರು. ಒಬ್ಬರಿಗೊಬ್ಬರು ಮಾತನಾಡಿಕೊಂಡು ಓಡು ತ್ತಿದ್ದರು. ಅದು ಏನೆಂದು ತಿಳಿಯಬೇಕೆಂಬ ಅಪೇಕ್ಷೆಯಿಂದ ನಾನು ಗಾಡಿಯವನನ್ನು 'ಗಾಡಿ ನಿಲ್ಲಿಸಿಕೊ' ಎಂದೆ; ಓಡುತ್ತಿದ್ದವರಲ್ಲಿ ಹತ್ತಿರ ಇದ್ದವನನ್ನು ಕೂಗಿ 'ಏನೋ ಇದು' ಎಂದು ಕೇಳಿದೆ. ಅವನು 'ಕೋಣ, ಕೋಣ' ಎಂದು ದೂರಕ್ಕೆ ಕೈತೋರಿಸಿದನು. ಅವನು ಕೈತೋರಿಸಿದ ಕಡೆ ದೃಷ್ಟಿಯನ್ನಿಟ್ಟುಕೊಂಡು ನೋಡಲು ನಮಗೆ ದೂರದಲ್ಲಿ ಒಂದು ಕಡೆ ಬಿಸಿಲಲ್ಲಿ ಒಂದು ಕೋಣ ಓಡುತ್ತಿದ್ದುದು ಕಂಡಿತು. ಉಳಿದ ಏನೂ ಕಾಣಲಿಲ್ಲ. ಗಾಡಿಯವನು 'ಹೋಗಿ ತಿಳುಕೊಂಡು ಬರಲೆ ಸ್ವಾಮಿ' ಎಂದು ಕೇಳಿದ. ಬಹಳಹೊತ್ತು ಎತ್ತು ಬಿಸಿಲಲ್ಲಿ ಏಕೆ ನಿಲ್ಲಬೇಕೆಂದು ಯೋಚಿಸಿ ನಾನು 'ಏನೂ ಬೇಡ, ಊರಿಗೆ ಬಿಡು' ಎಂದು ಹೇಳಿದೆ. ನಾವು ಊರಿಗೆ ಹೋದೆವು. ಸಂಜೆ ಆದಮೇಲೆ ಕಲ್ಮಾಡಿಗೆ ಹೋಗಿ ವಿಚಾರಿಸು ವುದು ಎಂದು ನಾನು ಮನಸ್ಸು ಮಾಡಿಕೊಂಡೆ. ಆ ದಿನ ಸಂಜೆ ಹೋಗಿ ವಿಚಾರಿಸಿದ್ದರಲ್ಲಿ ಈ ಮಾತು ತಿಳಿದು ಬಂದಿತು.

ಕಲ್ಮಾಡಿಯ ಮಾರಿಗೆ ಮೂರು ಕೋಣಗಳು ಇರುವಂತೆ ಆ ಕೋಣ ಗಳನ್ನು ಕೊಲ್ಲುವುದಕ್ಕೆ ಮೂರು ಜನ ತೋಟಿಗಳು ಇದ್ದಾರೆ. ಒಂದು ಕೋಣವನ್ನು ಬಲಿಮಾಡಿದ ಮೇಲೆ ಇನ್ನು ಮೂರು ವರ್ಷಕ್ಕೆ ಬಲಿ ಆಗುವ ಕೋಣಕ್ಕಾಗಿ ಊರಿನಲ್ಲಿರುವ ಕರುಗಳಲ್ಲಿ ಸ್ವಲ್ಪಮಟ್ಟಿಗೆ ತುಂಬಿಕೊಂಡಿ ರುವ ಒಂದನ್ನು ಗೊತ್ತುಮಾಡುವುದು ವಾಡಿಕೆ. ಆ ಕರು ಯಾರಿಗೆ ಸೇರಿದೆಯೋ ಅವರಿಗೆ ಅದಕ್ಕಾಗಿ ಮಾರಿಯ ಆಸ್ತಿಯಿಂದ ಆಗಲೇ ಐಗಳ ರಾಗಿ ಕೊಟ್ಟುಬಿಡುವುದು. ಕರು ತನ್ನ ಮನೆಯಲ್ಲಿದ್ದುಕೊಂಡು ಚೆನ್ನಾಗಿ ಮೇಯ್ದುಕೊಂಡು ತುಂಬಿ ಬಲಿಯಾಗುವ ಕಾಲಕ್ಕೆ ಅದರ ಧಣಿಗೆ ಇನ್ನು ಐದು ಕೊಳಗ ರಾಗಿ. ಈ ಮಧ್ಯೆ ಮೋಸಲಾದ ಕರು ತೀರಿಕೊಂಡರೆ ಬೇರೊಂದು ಕರುವನ್ನು ಏರ್ಪಡಿಸುವುದು. ಅದು ಬಲಿಯಾಗಬೇಕಾದ ವರ್ಷದಲ್ಲಿ ತೀರಿಕೊಂಡರೆ ಮುಂದಿನ ವರ್ಷದ ಕೋಣವು ಅದೇ ವರ್ಷವೇ ತೀರಿಕೊಳ್ಳುವಂತೆ ಅದಕ್ಕೆ 'ಪ್ರಮೋಷನ್' ಕೊಡುವುದು ಇದು ಪದ್ಧತಿ.

ಇದರಲ್ಲಿ ಈ ಸಲ ಒಂದು ವಿಚಿತ್ರ ಸಂದರ್ಭ ಹೀಗೆ ಒದಗಿತು. ಎರಡು ವರ್ಷದ ಹಿಂದೆ ಊರಿನವರು ಆರಿಸಿದ ಒಂದು ಕೋಣ ಮಾರಿಯ ಮೂವರು ತೋಟಿಗಳಲ್ಲಿ ಒಬ್ಬನದು. ಮುನಿಯುನಿಗೆ ತನ್ನ ಆ ಕರುವನ್ನು ಮಾರಿಗೆ ಮಾಸಲು ಕೊಡುವುದು ಇಷ್ಟವಿರಲಿಲ್ಲ. ಆದರೆ ಕೊಡುವುದಿಲ್ಲ ವೆಂದು ಹೇಳುವ ಧೈರ್ಯ ಅವನಿಗೆ ಹೇಗೆ ಬರಬೇಕು ? ಮಾರಿಯ ಕೋಪ ವನ್ನು ಹೇಗಾದರೂ ತಡೆದುಕೊಳ್ಳಬಹುದು, ಊರಿನ ಕೋಪವನ್ನು ತಡೆದುಕೊಳ್ಳುವುದು ಅವನಿಗೆ ಸಾಧ್ಯವಾಗಿ ಕಾಣಲಿಲ್ಲ. ಮಾರಿಯ ಕಣ್ಣು ಎಷ್ಟಾದರೂ ಕಲ್ಲಿನಲ್ಲಿ ಮಾಡಿರುವುದರಿಂದ ಅರಳುವಹಾಗಿಲ್ಲ. ಗೌಡರ ಕಣ್ಣು ಜೀವಂತ ದೇಹದಲ್ಲಿರತಕ್ಕದ್ದು. ಅದು ಅರಳಿದರೆ ಮಾರಿಯ ಅಪ್ಪನ ಕಣ್ಣಿನಂತೆ ಇರುವುದು. ಮುನಿಯನು ತನ್ನ ಕರುವಿಗೆ ಆಯ್ಕೆಯ ಮರ್ಯಾದೆ ಬಂದಾಗ ಕುಗ್ಗಿ ಒಪ್ಪಿಕೊಂಡನು. ದಾರಿಯೆಂದು ಕಂಡಕಡೆ ಗೋಡೆಯೊಂದು ಎದ್ದರೆ, ಜೀವ ದಿಕ್ಕು ತೋಚದೆ ನಿಸ್ಸಹಾಯದಿಂದ ಈ ರೀತಿ ನಡೆದುಕೊಳ್ಳುತ್ತದೆ, ತಗ್ಗಿಹೋಗುತ್ತದೆ.

ಮುನಿಯನ ಕರು ಚೆನ್ನಾಗಿತ್ತು. ದೊಡ್ಡದಾದ ಕಣ್ಣು, ಅಂದವಾದ ಮೂಗು; ಕೋಡು ಮೋಸಾಗಿ ಬರುತ್ತಿತ್ತು. ಅಗಲವಾದ ಮುಖ; ಇದ್ದುದು ಇದ್ದಂತೆ ಕಿರಿದಾಗಿ ಸಣ್ಣದಾಗಿದೆ; ಕೊನೆಯಲ್ಲಿ ಮುಸುಡಿ ಬೊಂಬೆಯಲ್ಲಿ ಬರೆದಂತೆ ಕಾಣುತ್ತಿತ್ತು. ಮೂಗುಹೊಳ್ಳೆ ದೊಡ್ಡದಾಗಿ ಕಾಣುವುದು. ಮುನಿಯ ಈ ಕೋಣವನ್ನು ಕೊನೆಗೆ ಏನು ಮಾಡ ಬೇಕೆಂದಿದ್ದನೋ ಅದು ಅವನಿಗೇ ತಿಳಿಯದು. ಆದರೆ ಅದು ಮಾರಿಗೆ ಬಲಿಯಾಗತಕ್ಕದ್ದೆಂದು ಗೊತ್ತಾದಾಗ ಅವನಿಗೆ ಜೀವವೇ ಹೋದಂತೆ ಕಂಡಿತು. ಆ ಹಿಂದೆ ಅವನು ಮಾರಿಯ ಎದುರಲ್ಲಿ ಎರಡು ಕೋಣಗಳನ್ನು ಕೊಂದಿದ್ದನು. ತೋಟಿಗಳು ಮೂವರೂ ಸಹಜವಾಗಿಯೇ ಬಲಾಢ್ಯರು. ಕೈಯಲ್ಲಿ ಮಚ್ಚನ್ನು ಹಿಡಿದು ನಿಂತರೆ ಬೇರೆ, ಕೈಗೆ ಎಲ್ಲಿಂದಲೋ ಶಕ್ತಿ ಬಂದಹಾಗೆ ಆಗುತ್ತಿತ್ತು. ಹಿಂದಿನ ಎರಡು ಸಲವೂ ಮುನಿಯನು ಹೊಡೆದ ಒಂದು ಪೆಟ್ಟಿಗೆ ಕೋಣದ ಕುತ್ತಿಗೆ ಹಸಿಗೆಯಾಗಿ ರುಂಡ ಕೆಳಗೆ ಬಿದ್ದಿತ್ತು. ಹಾಗೆ ಮಾರಿಯ ಎದುರಿನಲ್ಲಿ ನಿಂತು ಭಕ್ತಿಯ ಉತ್ಸಾಹದಿಂದ ಎರಡು ಕೋಣಗಳನ್ನು ಕೊಂದಿದ್ದ ಬಲಾಢ್ಯ ಮುನಿಯನಿಗೆ ಮುಂದೆ

ಎಂದೋ ಒಂದು ದಿನ ತನ್ನ ಈ ಕರು ಸಾಯುವುದಲ್ಲ ಎಂಬುದು ಭಯವನ್ನು ಉಂಟುಮಾಡಿತು. ತಾನು ಕೈಯಿಂದ ಕಡಿದುಹಾಕಿದ ಕೋಣಗಳ ವಿಷಯದಲ್ಲಿ ಅವನಿಗೆ ಆಗ ಕನಿಕರ ಹುಟ್ಟಿರಲಿಲ್ಲ. ಈಗ ತನ್ನ ಕರು ಮೂರು ವರ್ಷದಲ್ಲಿ ಸಾಯುವುದಲ್ಲ ಎಂಬ ಯೋಚನೆಯಲ್ಲಿ ಅವನ ಮನಸ್ಸು ಕರಗಿ ಹರಿಯಿತು.

ಕರಗಾಗಲಿ ಹರಿವಾಗಲಿ ಯಾವುದೂ ಆಗ ಪ್ರಯೋಜನಕ್ಕೆ ಬರುವಂತೆ ಇರಲಿಲ್ಲ. ಕರುವಿನ ಆ ವಿಶಾಲವಾದ ಹಣೆಯ ಮೇಲೆ ಈ ಬರಹ ಬರೆದಿತ್ತು ಎಂದು ಗೊತ್ತುಮಾಡಿಕೊಂಡು ಮುನಿಯ ಸುಮ್ಮನಾದನು. ಎರಡು ವರ್ಷ ಕಳೆಯಿತು. ನಾನು ಹೇಳುತ್ತಿರುವ ಆ ವರ್ಷದಲ್ಲಿ ಬಲಿಯಾಗುವುದಕ್ಕೆ ಒಂದು ಕರು ಗೊತ್ತಾಗಿತ್ತಷ್ಟೆ. ಆ ವರ್ಷದಲ್ಲಿ ಅದನ್ನು ಕಡಿಯಬೇಕಾದವನು ಮುನಿಯ. ಮುಂದಿನ ವರ್ಷ ಮುನಿಯನ ಕೋಣ ಸಾಯಬೇಕು. ಹೀಗಿರುತ್ತಿರಲಾಗಿ ಮಾರಿಯ ಉತ್ಸವಕ್ಕೆ ಎಂಟು ದಿನದ ಹಿಂದೆ ಆ ಗೊತ್ತಾಗಿದ್ದ ಬೇರೆಯ ಕೋಣ ಯಾವುದೋ ಕಾರಣದಿಂದ ಸತ್ತುಹೋಯಿತು. 'ಪ್ರಮೋಷನ್' ಪದ್ಧತಿಯ ಪ್ರಕಾರವಾಗಿ ಮಾರಿಗೆ ಬಲಿಯಾಗಬೇಕಾದದ್ದು ಮುನಿಯನ ಕೋಣವೇ ಆಯಿತು. ಇದು ತಿಳಿದಾಗ ಮುನಿಯನಿಗೆ ಮನಸ್ಸು ಹೇಗೆ ಆಯಿತೆಂದು ನಾವು ಯಾರೂ ಹೇಳುವಂತಿಲ್ಲ. ತನ್ನದೊಂದು ಕೋಣ ಬಲಿಯಾದೀತೆಂಬ ಯೋಚನೆ ಮನಸ್ಸಿಗೆ ಬರದೇ ಇದ್ದ ಕಾಲದಲ್ಲಿ ಅವನು ಎರಡು ಕೋಣಗಳನ್ನು ಧಾರಾಳವಾಗಿ ಕಡಿದು ಯಶಸ್ಸನ್ನು ಪಡೆದಿದ್ದನು. ತನ್ನದೇ ಒಂದು ಕೋಣ ಮುಂದಿನ ವರ್ಷ ಬಲಿಯಾಗತಕ್ಕದ್ದು ಎಂದು ಕಂಡ ಕಾರಣದಿಂದ ಈ ಸಲ ಅವನಿಗೆ ತನ್ನ ತೋಳಿನಲ್ಲಿ ಬಲ ಸ್ವಲ್ಪ ಕಡಮೆ ಆದಂತೆ ತೋರುತ್ತಿತ್ತು. ನನ್ನ ಕರುವನ್ನು ಹೀಗೆಯೇ ಬಲಿಯಲ್ಲಿ ಮುಂದಿನ ವರ್ಷ ನನ್ನ ದಾಯಾದಿ ಹೊಡೆಯುತ್ತಾನೆ ಎಂಬುದು ಅವನ ರಕ್ತದಲ್ಲಿದ್ದ ಕಾರವನ್ನು ಕಡಮೆಮಾಡಿತ್ತು. ಇದ್ದುದು ಇದ್ದಹಾಗೆಯೇ, ತಾನು ಕಡಿಯುವುದು ಯಾರದೋ ಬೇರೆ ಒಂದು ಕೋಣ ಎನ್ನುವುದು ತಪ್ಪಿಹೋಗಿ ತನ್ನ ಕೋಣವೇ ಬಲಿಯಾಗಿ ತನ್ನ ಕೈಗೆ ಬರುವುದೆಂದು ಕಂಡಾಗ ಅವನ ಉಸಿರು ಇನ್ನೂ ಕುಗ್ಗಿಹೋಯಿತು. ನಾನು ಇದನ್ನು ಹೇಗೆ ಕೊಲ್ಲಲಿ

ಎಂದು ಅವನು ಚಿಂತಿಸುತ್ತ ನಿಂತನು. ಒಂದು ರಾತ್ರಿಯೆಲ್ಲ ಚಿಂತೆಮಾಡಿ ಗೌಡನನ್ನು ಒಂದು ಮಾತು ಕೇಳಿಕೊಂಡನು. ಇಲ್ಲವೇ ಈ ಕೋಣನನ್ನು ಕೊಲ್ಲುವುದಕ್ಕೆ ಇನ್ನೊಬ್ಬನನ್ನು ಗೊತ್ತುಮಾಡುವುದು; ತನ್ನ ಸರದಿಯನ್ನು ಒಂದು ವರ್ಷ ಮುಂದಕ್ಕೆ ಹಾಕುವುದು. ಇಲ್ಲವೇ ತನ್ನ ಕೋಣವನ್ನು ಮುಂದಿನ ವರ್ಷಕ್ಕೆಂದೇ ಗೊತ್ತುಮಾಡಿಟ್ಟುಬಿಟ್ಟು ಆದರ ಮಾರನೆಯ ವರ್ಷದ ಕೋಣವನ್ನು ಎರಡು ವರ್ಷ ಮುಂದರಿಸಿ ಈ ವರ್ಷಕ್ಕೆ ತರುವುದು.

ಇದು ಯಾವ ಮಾತನ್ನೂ ಗೌಡ ಒಪ್ಪಲಿಲ್ಲ. ಗೌಡನಿಗೆ ಊರ ಕ್ಷೇಮದ ವಿಷಯ ದೊಡ್ಡದು. ಮುನಿಯನ ಮನಸ್ಸು ನೋಯುತ್ತದೆಂಬ ಕಾರಣದಿಂದ ಮಾರಿಯ ಮನಸ್ಸನ್ನು ನೋಯಿಸುವುದಕ್ಕೆ ಯಾರು ಒಪ್ಪು ತ್ತಾರೆ? ಗೌಡ 'ಇದು ಏನೋ ನನಗೆ ಸರಿಹೋಗಲಿಲ್ಲ. ಜೋಯಿಸರನ್ನ ಕೇಳೋಣ' ಎಂದ. ಜೋಯಿಸರನ್ನ ಕೇಳಿದ್ದಾಯಿತು. ಜೋಯಿಸರು ಒಂದು ಮಾತು ಹೇಳಿದರು. ''ಮಾರಿಯ ಸೇವೆಗೆ ಹಿಂತೆಗೆದರೆ ಮುನಿಯನ ಮನೆ ಏನಾಗಬೇಕು? ಹಿಂದೆ ಯಾವ ಪಾಪ ಮಾಡಿಯೋ ಈಗ ಈ ಜನ್ಮ ದಲ್ಲಿ ಹುಟ್ಟಿದಾನೆ; ಒಂದು ಗುಡಿಸಲಲ್ಲಿ ಇದ್ದಾನೆ. ಈ ಜನ್ಮದಲ್ಲಿ ಈ ರೀತಿ ಅಶ್ರದ್ಧೆಯಿಂದ ನಡೆದುಕೊಂಡರೆ ಮುಂದಿನ ಜನ್ಮಕ್ಕೆ ಕೋಣನಾಗಿ ಹುಟ್ಟಿ ಸಾಲವನ್ನು ತೀರಿಸಬೇಕಾದೀತು. ಸರದಿಯನ್ನು ಬಿಡುವುದು ಆಗದು. ಕೋಣನನ್ನು ಬೇರೆ ಮಾಡುವುದು ಎಂದರೂ ದೇವತೆಗೆ ಅದು ಸಮ್ಮತ ವಾಗಲಾರದು. ಒಂದು ಕಾರಣ, ಕೋಣ ಸಣ್ಣದು, ಬಲಿತಿರುವುದಿಲ್ಲ. ಈಗಾಗಲೇ ತುಂಬಿದ್ದ ಕೋಣ ತೀರಿಕೊಂಡು ಅದಕ್ಕಿಂತ ಒಂದು ವರ್ಷ ಕಡಮೆ ಬೆಳೆದ ಕೋಣವನ್ನು ಕೊಡುವುದಾಗಿದೆ. ದೇವಿ 'ಸಂಪ್ರದಾಯದ ಪ್ರಕಾರ ನಡೆದಿದಾರೆ, ಪಾಪ, ಇವರ ತಪ್ಪಲ್ಲ; ಬೆಳೆದಿದ್ದ ಕೋಣವನ್ನು ನಾನೇ ಸ್ವಲ್ಪ ಮುಂದಾಗಿ ತೆಗೆದುಕೊಂಡುಬಿಟ್ಟೆ. ಅದರಿಂದ ಈ ಕಡಮೆ ಗಾತ್ರದ ಕೋಣ ಬಂದಿದೆ' ಎಂದು ಮನ್ನಿಸಬಹುದು. ಈ ವ್ಯತ್ಯಾಸ ಅವಳ ಇಷ್ಟದಂತೆ ನಡೆದಿದೆ. ಅದರ ಜೊತೆಗೆ ನಾವು ನಮ್ಮ ಮನಸ್ಸನ್ನು ಬೆರಸಿ ಇನ್ನೊಂದು ಕೋಣನನ್ನು, ಅದಕ್ಕಿಂತ ಕಡಮೆ ಗಾತ್ರದ ಕೋಣ ನನ್ನು, ಅವಳ ಎದುರಿಗೆ ನಿಲ್ಲಿಸಿದರೆ ಕೋಣದ ಬೆಲೆ ಎಷ್ಟು ಕಡಮೆ

ಆಯಿತೋ ಅದಕ್ಕೆ ನೂರರಷ್ಟು ಮನುಷ್ಯರನ್ನು ಅವಳು ತಿಂದಾಳು. ಒಪ್ಪಂದ ಎಂದಮೇಲೆ ಒಪ್ಪಂದ. ಮನುಷ್ಯರ ಕೋರ್ಟುಗಳಲ್ಲಿ ಬೇಕಾದರೆ ಸುಳ್ಳು ಹೇಳಬಹುದು; ಸಾಕ್ಷಿಗಳನ್ನು ತಂದು ಕರಿಯದನ್ನು ಬಿಳಿಯದಾಗಿ ಮಾಡಬಹುದು. ದೇವರ ಕೋರ್ಟಿನಲ್ಲಿ ಈ ಸುಳ್ಳು ತಟವಟ ನಡೆಯು ಲಾರದು. ಆದ್ದರಿಂದ ಇಂಥ ಅವಿವೇಕ ಮಾಡಬಾರದು.'' ಮುನಿಯನಿಗೆ ಯಾವುದೂ ದಾರಿ ತೋರಲಿಲ್ಲ. ಎನೋ ಗ್ರಹಚಾರದಿಂದ ತಾನು ಸಾಕಿದ ಕರು ತನ್ನ ಕೈಯಿಂದಲೇ ಮಾರಿಯ ಮುಂದೆ ಸಾಯುವುದಾಗಿದೆ ಎಂದು ಅವನು ಒಪ್ಪಿಕೊಂಡನು; ಸುಮ್ಮನಾದನು.

ನಾನು ಊರಿಗೆ ಹೋಗುತ್ತಿದ್ದ ಆ ದಿನವೇ ಉತ್ಸವ. ಮುನಿಯು ಬೆಳಗಾಗ ಎದ್ದು ಊರ ಹತ್ತಿರದ ಹೊಲಗಳಲ್ಲಿ ಮೇಯುತ್ತಿದ್ದ ಕೋಣ ನನ್ನು ಹೊತ್ತಿಗೆ ಮೊದಲು ಹಿಡಿದು ತಂದನು. ಮನೆಯ ಮುಂದೆ ನಿಲ್ಲಿಸಿ ಅದರ ಮೈ ಕೈ ಕಾಲನ್ನೆಲ್ಲ ತಿಕ್ಕಿದನು. ಅವನ ಹೆಂಡತಿ ಅಳುತ್ತ ಬಂದು ಅದರ ಗೊರಸಿಗೆ ನೀರು ಹೊಯ್ದಳು; ಅದರ ಮೈಯನ್ನೆಲ್ಲ ತಡವಿದಳು; ಅದರ ಮುಸುಡಿಯನ್ನು ತನ್ನ ಮೈಗೆ ಮುಟ್ಟಿಸಿಕೊಂಡು ಅಪ್ಪಿದಳು. ಅದು ತನ್ನ ಮಗುವಿಗೆ ಸಮನೋ ಎಂಬಂತೆ ಅದರ ಮುಖಕ್ಕೆ ಒಂದು ಮುತ್ತನ್ನು ಕೊಟ್ಟಳು. ಇದು ಸರಿ ಎಂಬುದು ಧೈರ್ಯವಾಗಿ ಮುನಿಯು ತಾನೂ ಅದಕ್ಕೆ ಒಂದು ಮುತ್ತನ್ನು ಕೊಟ್ಟನು. ಮುಟ್ಟಿ ಮೈಯನೆಲ್ಲ ತಿಕ್ಕಿ ಕೋಡುಗಳ ನಡುವೆ ಅದನ್ನು ತುರಿಸಿ ಮುಖಕ್ಕೆ ಕುಂಕುಮದ ಒಂದು ಬೊಟ್ಟನ್ನಿಟ್ಟು ಅದನ್ನು ಚಾವಡಿಯ ಮುಂದಕ್ಕೆ ತಂದನು.

ಆ ವೇಳೆಗೆ ಊರ ಜನ ಕೆಲವರು ಬಂದು ಅಲ್ಲಿ ಸೇರಿದ್ದರು. ದೇವರ ಗುಡ್ಡ ಹೋಗಿ ದೇವತೆಗೆ ಕೈ ಮುಗಿದು ಅವಳ ಎದುರಿನಲ್ಲಿರಿಸಿದ್ದ ನೀರ ಕೊಡವನ್ನು ತಂದು ಕೋಣನಿಗೆ ಮಜ್ಜನ ಮಾಡಿಸಿ, ಅರಿಸಿನ ಕುಂಕುಮ ಹೂವು ಮುಂತಾದದ್ದನ್ನೆಲ್ಲ ತಂದು ಅದಕ್ಕೆ ಅಲಂಕಾರ ಮಾಡಿದನು. ಮಾರಿಯ ಕೋಣನ ಅಲಂಕಾರವನ್ನು ನೀವು ನೋಡಿರುವಿರೋ ಇಲ್ಲವೋ? ನೋಡದೆ ಇದ್ದರೆ ಯಾವುದಾದರೂ ಒಂದು ಸಂದರ್ಭದಲ್ಲಿ ಹೋಗಿ ನೋಡುವುದು ಒಳ್ಳೆಯದು. ಕಲ್ಮಾಡಿಯಲ್ಲಿ ಕೋಣನಿಗೆ ಮಾಡುವ ಅಲಂಕಾರ ಸ್ವಲ್ಪ ವಿಶೇಷ. ಈ ಅಲಂಕಾರದಲ್ಲಿ ಬಹುಭಾಗ ಹೂವಿನದು;

ಅದೂ ತೀರ ಎರಡೇ ತರದ ಹೂವಿನದು: ಚೆಂಡುಮಲ್ಲಿಗೆ ಮತ್ತು ಸೇವಂತಿಗೆ. ನಮ್ಮ ಪ್ರಾಂತ್ಯದಲ್ಲಿ ಉಳಿದ ಯಾವ ಹೂವು ಇಲ್ಲದಿದ್ದರೂ ಈ ಎರಡು ಹೂ ಬಹು ಚೆನ್ನಾಗಿ ಬೆಳೆಯುತ್ತದೆ. ಅದರಿಂದಲೇ ಇರ ಬಹುದು ಕಲ್ಮಾಡಿಯ ಕೋಣನಿಗೆ ವಿಶೇಷವಾಗಿ ಚೆಂಡುಮಲ್ಲಿಗೆಯ ದಂಡೆ, ಸೇವಂತಿಗೆಯ ಹಾರದಿಂದಲೇ ಅಲಂಕಾರವಾಗುವುದು. ಕುತ್ತಿಗೆಗೆ ಒಂದು ದಂಡೆಹಾರ; ಕೋಡುಗಳಿಗೆ ಒಂದೊಂದು ದಂಡೆ ಉಂಗುರ; ಮೊಣಕಾಲ ಬಳಿ ದಂಡೆ ಉಂಗುರ; ಹೊಟ್ಟೆಗೆ ಒಂದು ದಂಡೆಹಾರ; ಮುಖದ ಮೇಲೆ ಅರಿಸಿನ ಸಿಂಧೂರದಲ್ಲಿ ಒಂದು ರೀತಿಯ ಚಿತ್ರ. ದೇವರಗುಡ್ಡ ಇದನ್ನೆಲ್ಲ ಸಾವಧಾನವಾಗಿ ಮಾಡಿದನು. ಮುನಿಯನಿಗೆ ಈ ಎಲ್ಲ ವಿವರವನ್ನು ನೋಡುತ್ತ ಉಸಿರು ಒಳಗೊಳಗೇ ಕಟ್ಟುತ್ತ ಬಂದಿತು.

ಅಲಂಕಾರವಾದ ಮೇಲೆ ತಮಟೆ ಆರಂಭವಾಯಿತು. ಮಾರಿಯ ತಮಟೆ ಹೇಗಿರುತ್ತದೆಂಬ ಪರಿಶ್ರಮವಿಲ್ಲದವರು ಅದನ್ನು ಎಂದಾದರೂ ಅಲ್ಲಿ ಹೋಗಿ ಕೇಳಬೇಕು. ಹೊಡೆಯುವವರು ತಾನೇ ಅದು ಹೇಗೆ ಆ ವೇಗದಿಂದ, ಆ ಆವೇಶದಿಂದ, ಆ ರೌದ್ರದಿಂದ ಹೊಡೆಯುತ್ತಿದ್ದಾರೆ ಎಂದು ನಮ್ಮಂಥವರಿಗೆ ಆ ಹೊಡೆತ ಆಶ್ಚರ್ಯವನ್ನು ಉಂಟುಮಾಡುತ್ತದೆ. ಸಾಮಾನ್ಯವಾಗಿ ಆ ಕೋಣ ತಮಟೆಯ ಶಬ್ದ ಆರಂಭವಾದಾಗ ಸ್ವಲ್ಪ ಬೆಚ್ಚಿದಂತಾಗಿ ಮತ್ತೆ ತಟಸ್ಥವಾಗುತ್ತದೆ. ಇದು ಏನು ಸೊಗಸು ಎಂದು ಅದು ಆಗ ತಿಳಿಯಬೇಕು!

ತಮಟೆಯ ಶಬ್ದ ಸ್ವಲ್ಪ ಹೊತ್ತು ಕಿವಿಯನ್ನು ತುಂಬಿದ ಮೇಲೆ ಮುನಿಯನ ಕೋಣ ಊರ ಮೆರವಣಿಗೆ ಹೊರಟಿತು. ಒಂದು ಕಡೆ ದೇವರಗುಡ್ಡ ಒಂದು ಕಡೆ ಮುನಿಯ. ಕೋಣ ಊರೊಳಗೆ ಮೆರವಣಿಗೆ ಹೊರಟು ಎಲ್ಲ ಕೇರಿಯಲ್ಲೂ ಎಲ್ಲ ಮನೆಗಳ ಮುಂದೆಯೂ ಆರತಿಯನ್ನೆತ್ತಿಸಿ ಕೊಂಡು ಸಾಂಗ್ಯವೆಲ್ಲ ಮುಗಿಸಿಕೊಂಡು ಮತ್ತೆ ಚಾವಡಿಯ ಬಳಿ ಸೇರುವ ಹೊತ್ತಿಗೆ ಮಧ್ಯಾಹ್ನ ನಡುಬಿಸಿಲಾಗುವುದು ವಾಡಿಕೆ. ಮನೆಮನೆಯಿಂದ ಬಂದ ಸುಮಂಗಲಿಯರ ತಂಬಿಟ್ಟು, ದೀಪ, ಶೃಂಗಾರದ ತಟ್ಟೆಗಳೊಡನೆ ಕೋಣ ಮಾರಿಯ ಸನ್ನಿಧಿಗೆ ಹನ್ನೆರಡು ಗಂಟೆಯ ವೇಳೆಗೆ ಬಂದಿತು. ಅಲ್ಲಿ ದೇವಿಯ ಮುಂದೆ ಇನ್ನಿಷ್ಟು ಸಾಂಗ್ಯ. ಅದು ಸ್ವಲ್ಪಹೊತ್ತು

ತೆಗೆದುಕೊಳ್ಳುವ ಕೆಲಸ. ನಾನು ನೋಡಿರುವುದರಲ್ಲಿ ನಮ್ಮ ಹಬ್ಬ ಹುಣ್ಣಿಮೆ ಯಲ್ಲೆಲ್ಲ ಇದು ಒಂದು ವಿಶೇಷ. ಮಂತ್ರ ಇರುವಲ್ಲಿ ಅದು ಒಂದು ಪಾಲಾದರೆ ತಂತ್ರ ನಾಲ್ಕು ಪಾಲಿರುತ್ತದೆ. ಮಂತ್ರವೇ ಇಲ್ಲದಲ್ಲಿ ತಂತ್ರ ಹತ್ತು ಪಾಲಾಗುತ್ತದೆ. ನಿಮಗೂ ಅದರ ಅನುಭವ ಇರಬಹುದು. ಮದುವೆ ಪ್ರಸ್ತಗಳಲ್ಲಿ ಗಂಡು ಹೆಣ್ಣನ್ನು ಮಣೆಯ ಮೇಲೆ ಕೂರಿಸಿ ಪುರೋಹಿತನು ನಡೆಯಿಸುವ ಕೆಲಸ ಬಹಳ ಕಡಮೆ. ಆಮೇಲೆ ಸುಮಂಗಲಿ ಯರು ಬಂದು ಸೇಸೆ ಹಾಕಿ ದೃಷ್ಟಿ ತೆಗೆದು ಆರತಿ ಎತ್ತಿ ಸೋಬಾನೆ ಹಾಡಿ ಇನ್ನು ಮುಗಿಯಿತು ಎಂದು ಹೇಳುವುದು ಬಹಳ ಕಷ್ಟ. ಸಾವಿನ ಮಾಲೆ ಯನ್ನು ಧರಿಸಿ ಬಂದ ಮುನಿಯನ—ಅಲ್ಲ ಮಾರಿಯ—ಈ ಕೋಣನಿಗೆ ಅದೇ ಸ್ಥಿತಿ. ಎಷ್ಟು ಆರತಿ ಎಷ್ಟು ಸೇಸೆ! ತಮಟೆಯ ಶಬ್ದ ಮತ್ತೆ ಮತ್ತೆ ಹೆಚ್ಚಾಯಿತು. ಸುಮಂಗಲಿಯರು ಬಂದು ದೇವಿಗೆ ಬೇರೆ ಬೇರೆಯಾಗಿ ತಮ್ಮ ತಂಬಿಟ್ಟಿನ ತಟ್ಟೆಗಳನ್ನು ಒಪ್ಪಿಸಿ, ಕೋಣನಿಗೆ ಮತ್ತೆ ಸಿಂಧೂರ ಹಚ್ಚಿ, ತಾಯಿಗೆ ಆರತಿಯೆತ್ತಿ ಅದನ್ನೇ ಕೋಣನಿಗೆ ಮತ್ತೆ ಎತ್ತಿ, ಮಂಗಳ ಹಾಡಿದರು. ಮುನಿಯನ ಕೋಣನಿಗೆ—ಮತ್ತೆ ಮತ್ತೆ ಮುನಿಯನ ಕೋಣ ಎಂದೇ ಹೇಳುತ್ತಿದ್ದೇನೆ; ಒಂದೊಂದು ಸಲವೂ ಅದನ್ನು ತಿದ್ದಿ ಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ; ಮುನಿಯನ ಕೋಣ ಎಂದೇ ಹೇಳುತ್ತೇನೆ; ಮುನಿಯನ ಕೋಣನಿಗೆ— ಈ ಎಲ್ಲ ಅನುಭವ ಏನಾಗಿ ಕಂಡಿತೋ ಕೋಣನಲ್ಲದ ನಾನು ಹೇಗೆ ಬಣ್ಣಿಸಬಹುದು! ಅಂತೂ ಅದು ಸ್ವಲ್ಪ ಬೆಗಡುಗೊಂಡಿತು. ಅಷ್ಟು ಆರ್ಭಟೆ, ಅಷ್ಟು ಗದ್ದಲ, ಅಷ್ಟು ಉಪಚಾರದಿಂದ, ಕೋಣನಾದರೂ ಬೆಗಡುಗೊಳ್ಳದೆ ಇರಬಹುದೆ?

ಪೂಜೆಯೆಲ್ಲಾ ಮುಗಿದ ಮೇಲೆ ಅತ್ತ ಅರ್ಧ ಜನ ಇತ್ತ ಅರ್ಧ ಜನ ನಿಂತು ನೋಡುತ್ತಿರಲಾಗಿ, ದೇವರಗುಡ್ಡ ಒಂದು ಕಡೆ ಇರುತ್ತ ಮತ್ತೊಂದು ಕಡೆ ಮುನಿಯ ನಿಂತನು. ತಾಯ ಸನ್ನಿಧಿಯಲ್ಲಿ ಇಟ್ಟಿದ್ದ ಕಡುಗತ್ತಿ ಅವನ ಕೈಗೆ ಬಂದಿತು. ಮುನಿಯನ ಕಣ್ಣಲ್ಲಿ ನೀರು ಚಿಮ್ಮ ಬೇಕು. ಅವನು ಅದು ಪಾಪವಾಗುತ್ತದೆಂದು ಭಯಪಟ್ಟು ತಡೆದು ಕೊಳ್ಳುತ್ತಿದ್ದನು. ಒಂದು ಯಂತ್ರದ ತೋಳಿನಂತೆ ನಿಟ್ಟಿನಲ್ಲಿ ಹಿಡಿತವಾಗಿ ನಿಂತು ಇರಬೇಕಾದ ಅವನ ಕೈ ಅವನನ್ನೂ ಮೀರಿ ಸ್ವಲ್ಪ ನಡುಗುತ್ತ

ಇತ್ತು. ದೇವರಗುಡ್ಡ ಇನ್ನು ಆಗಲಿ ಎಂದನು. ತಮಟೆಯ ಶಬ್ದ ಮತ್ತೂ ವೇಗವಾಯಿತು. ಜನರು ಹಲಲೋ ಕುಲಲೋ ಎಂದು ದನಿಯೆತ್ತಿ ಚೀರಿದರು. ನಾನು ಮಗುವಾಗಿದ್ದಾಗ ಈ ಶಬ್ದ ಕೇಳಿ ಬೆಚ್ಚಿದ ನೆನಪು ಈಗಲೂ ನನಗಿದೆ. ಹುಡುಗನಾಗಿ ಆ ಶಬ್ದ ಕೇಳಿ ಅಂಜುತ್ತಿದ್ದೆ. ಮಧ್ಯ ವಯಸ್ಸಿನ ಈಗಿನ ಮನಸ್ಸಿನಲ್ಲಿ ನನಗೆ ಆ ಭಯಂಕರ ಚೀರಾಟದ ನೆನಪು ಭಯದ ಲಾಂಛನವಾಗಿ ಉಳಿದಿದೆ. ಮೊದಲ ಸಲ ಅವರು ಕೂಗಿದಾಗ ಕೋಣ ಬೆದರಿತು; ಇತ್ತ ಅತ್ತ ನೋಡುವುದಕ್ಕೆ ಯತ್ನಮಾಡಿತು. ಹಗ್ಗ ಕಟ್ಟಿ ಇಬ್ಬರು ಹಿಡಿದಿದ್ದುದರಿಂದ ಧಾರಾಳವಾಗಿ ತಲೆ ಆಡಿಸಲಾಗಲಿಲ್ಲ. ಮತ್ತೊಂದು ವೇಳೆ ಹಲಲೋ ಕುಲಲೋ ಎಂದು ಚೀರಾಟವಾಯಿತು. ದೇವರಗುಡ್ಡ ಕೋಣನ ಕೊರಳ ಹಾರವನ್ನು ಕಿತ್ತು ಭಕ್ತರ ಕಡೆಗೆ ಎಸೆದನು. ಆ ಪ್ರಸಾದಕ್ಕಾಗಿ ನೂಕುನುಗ್ಗಲು. ಮೂರನೆಯ ಸಲ ಕೂಗಿದಾಗ ತೋಟಿ ಕಡುಗತ್ತಿಯನ್ನು ಎರಡು ಕೈಯಿಂದ ಎತ್ತಿ ಕೋಣನ ಕುತ್ತಿಗೆಗೆ ಹೊಡೆಯಬೇಕೆಂದು ಸಂಕೇತ. ಜನರು ಮೂರನೆಯ ಸಲ ಚೀರಿದರು. ಮುನಿಯ ಕತ್ತಿಯನ್ನು ಹಾಗೆಯೇ ಎತ್ತಿದ. ಅದು ಕೋಣನ ಕುತ್ತಿಗೆಗೆ ಬೀಳಬೇಕು. ಯಾವ ಗ್ರಹಚಾರದಿಂದಲೋ ಏನೋ ಕೋಣನು ಪಕ್ಕದಲ್ಲಿ ನಿಂತಿದ್ದ ತನ್ನ ಯಜಮಾನನ ಕಡೆಗೆ ಮುಖ ಮಾಡುವಂತೆ ಕುತ್ತಿಗೆಯನ್ನು ತಿರುಗಿಸಿತು. ಮುನಿಯನಿಗೆ ಅದರ ಕಣ್ಣು ಕಂಡಿತು. ಅಲ್ಲಿ ಕಂಡ ಏನೊಂದನ್ನೂ ಅರಿಯದ ಕೂಸಿನ ಎಳೆ ನೋಟದಿಂದ ಅವನ ಜೀವ ತಲ್ಲಣಿಸಿಹೋಯಿತು. ಈ ಜೀವವನ್ನು ನಾನು ತೆಗೆದುಕೊಳ್ಳುವುದೆ ಎಂಬ ಪ್ರಶ್ನೆ ಮುನಿಯನ ಮೈಯಲ್ಲಿ ತಲೆಯಿಂದ ಕಾಲಿನವರೆಗೆ ಸೆಳೆಮಿಂಚಿ ನಂತೆ ಹರಿದಂತಾಯಿತು. ಮೊದಲಲ್ಲಿ ಸ್ವಲ್ಪ ನಡುಗಿ ಆಮೇಲೆ ಕರ್ತವ್ಯದ ದೃಷ್ಟಿಯಿಂದ ಮತ್ತೆ ದೃಢವಾಗಿ ಕಡುಗತ್ತಿಯನ್ನು ಎತ್ತಿದ ಅವನ ಕೈಯಲ್ಲಿ ಈ ಪ್ರಶ್ನೆ ಹೊಳೆಹೊಳೆಯಾಗಿ ಹರಿಯಿತು. ಅದರಲ್ಲಿ ಕಡಿಯುವುದಕ್ಕೆ ಸಾಕಾದ ಬಲವಿಲ್ಲದೆ ಹೋಗಿ, ಕೋಣನ ಕುತ್ತಿಗೆಗೆ ಅರ್ಧಕ್ಕೆ ಕಡಮೆ ಇಲ್ಲದೆ ಇಳಿಯಬೇಕಾಗಿದ್ದ ಕತ್ತಿ ಬಲದ ಒಂದು ಪಕ್ಕಕ್ಕೆ ಬಿದ್ದು ತಕ್ಕಷ್ಟು ಒಳಗೆ ಹೋಗದೆ ನಿಂತಿತು. ಪೆಟ್ಟು ಕೋಣನನ್ನು ಸಾಯಬೀಳಿಸಬೇಕಾಗಿತ್ತು; ಬೀಳಿಸಲಿಲ್ಲ.

ಮುನಿಯನ ಕೋಣ ಎರಡು ವರ್ಷ ಚೆನ್ನಾಗಿ ಮೇಯ್ದಿತ್ತು. ಸ್ವಭಾವವಾಗಿ ಬಲವಾದ ಕೋಣ. ಅನೇಕ ಕೋಣಗಳು ಇದರಷ್ಟು ಚುರುಕಾಗಿರುವುದಿಲ್ಲ. ಅದಕ್ಕೆ ತಮಟೆಯ ಶಬ್ದದಿಂದ, ಹಲಲೋ ಕುಲಲೋ ಚೀರಾಟದಿಂದ, ಸಾಕಾದಷ್ಟು ಆಶ್ಚರ್ಯ ಉಂಟಾಗಿತ್ತು. ಮತ್ತೆ ಏನನ್ನು ನೋಡಿ ಕೋಣ ಭಯಪಟ್ಟಿರಬಹುದೋ ನಾವು ಹೇಳು ವಂತಿಲ್ಲ. ಮೇಲೆ ಮುನಿಯನ ಕೈಯಿಂದ ಕತ್ತಿಯು ಪೆಟ್ಟು ಬಿದ್ದಾಗ ಅದಕ್ಕೆ ವಿಪರೀತ ಭಯವುಂಟಾಗಿ ಎಲ್ಲಿಯೂ ಇಲ್ಲದ ಶಕ್ತಿ ಬಂದಿತು. ಹಗ್ಗ ಕಟ್ಟಿ ಹಿಡಿದಿದ್ದ ತಲೆಯನ್ನು ಅದು ಕೊಡವಿತು. ಅದು ಹಾಗೆ ಮಾಡುವುದೆಂದು ನಿರೀಕ್ಷಿಸದೆ ಇದ್ದದ್ದರಿಂದ ಆ ಹಗ್ಗ ಹಿಡಿದಿದ್ದವರ ಕೈ ಸ್ವಲ್ಪ ಜಾರಿತು. ಕೋಣನು ಕೊಸರಿಕೊಂಡು ಹಗ್ಗವನ್ನು ಬಿಡಿಸಿಕೊಂಡು, ಮಾರಿಯ ಎದುರು ಶಾಸ್ತ್ರೋಕ್ತವಾಗಿ ಸತ್ತುಬೀಳುವುದನ್ನು ಬಿಟ್ಟು, ಜನರ ಮೇಲೆ ನುಗ್ಗಿ ಓಟ ಕಿತ್ತಿತು.

ಎಂದೂ ಆಗದೆ ಇದ್ದ ಈ ಅನರ್ಥದ ಹೊತ್ತಿನಲ್ಲಿ ಜನ ಕೋಣನ ಮುಂದೆ ದಾರಿ ಬಿಟ್ಟುಕೊಟ್ಟಿತು. ನಮ್ಮ ಊರುಗಳಲ್ಲಿ ಸಂಕ್ರಾಂತಿಯ ದಿನ, ಕರು, ಕೋಣ, ಗೂಳಿ ಎಲ್ಲಕ್ಕೂ ಕೋಡಿಗೆ ಬಣ್ಣ ಹಚ್ಚಿ ಅಲಂಕಾರ ಮಾಡಿ ಕಿಚ್ಚು ಹಾಯಿಸುವುದುಂಟು. ಈ ಕೋಣನೂ ಕೆಲವು ವರ್ಷ ಹಾಗೆ ಕಿಚ್ಚು ಹಾಯ್ದಿತ್ತು. ಈ ಸಲವೂ ತಾನು ಕಿಚ್ಚು ಹಾಯುತ್ತಿದ್ದೇನೆಂದೇ ತಿಳಿಯಿತೋ ಎಂಬಂತೆ ನುಗ್ಗಿ ಅದು ಊರ ಬಾಗಿಲಲ್ಲಿ ಹಾಯ್ದು ಹೊಲಗಳ ಮೇಲೆ ಹೊರಟುಬಿಟ್ಟಿತು. ಸಂಕ್ರಾಂತಿಯ ಓಟಕ್ಕೂ ಈಗಿನ ಓಟಕ್ಕೂ ಒಂದು ವ್ಯತ್ಯಾಸ. ಆಗ ಕೊರಳಲ್ಲಿ ನೋವೇನೂ ಕಾಣುತ್ತಿರಲಿಲ್ಲ. ಈಗ ನೋವು. ಕೋಣನು ನುಗ್ಗಿ ಓಡಿದ ಒಂದು ನಿಮಿಷದ ಹೊತ್ತು ಮಾರಿಯ ಭಕ್ತರಿಗೆ ಏನಾಯಿತೆನ್ನುವುದು ಮನಸ್ಸನ್ನು ಮುಟ್ಟಲಿಲ್ಲ. ನಿಮಿಷವಾದ ಒಡನೆಯೇ ಬಹಳ ಅನಾಹುತವಾಯಿತೆಂದು ಅವರಿಗೆ ಕಂಡಿತು. ಮಾರಿ ಯಾವುದೋ ಕಾರಣದಿಂದ ತನಗೆ ನಿರ್ದಿಷ್ಟವಾಗಿದ್ದ ಒಂದು ಕೋಣನನ್ನು ಹತ್ತು ದಿನ ಮುಂದಾಗಿಯೇ ತೆಗೆದುಕೊಂಡಿದ್ದಳು. ಜೊತೆಗೆ ಈಗ ಒಂದು ಕೋಣನನ್ನು ಅರ್ಧ ಹೊಡೆಸಿ ಓಡಿಹೋಗುವಂತೆ ಮಾಡಿದ್ದಳು. ಇದು ಏಕೆ ಇರಬಹುದು? ಈ ಪ್ರಶ್ನೆ ಎಲ್ಲರಿಗೂ ತೋರಿ

ಊರಿಗೆ ಏನು ಅನಿಷ್ಟ ಕವಿಯುತ್ತದೋ ಎಂದು ಎಲ್ಲರಿಗೂ ಭಯವಾಯಿತು. ಈ ಕೋಣನನ್ನು ಬೇಗನೆ ಹಿಡಿದು ತಂದು ತಾಯ ಸನ್ನಿಧಿಯಲ್ಲಿ ನಿಲ್ಲಿಸಿ ಜೀವ ತೆಗೆಯಬೇಕು, ಆಮೇಲೆ ಅಜಾಗ್ರತೆಗೆ ಏನು ಶಾಂತಿ ಮಾಡುವುದು ಎನ್ನುವುದನ್ನು ನೋಡುವುದು, ಎಂದೇ ಮುಖಂಡರ ಮನಸ್ಸಿನಲ್ಲಿ ಯೋಚನೆ. ದೇವರಗುಡ್ಡ, ಗೌಡ, ಉಳಿದ ಮೂವರು ನಿಂತು ಅವಸರ ಅವಸರವಾಗಿ ನಾಲ್ಕು ಮಾತನ್ನು ಆಡಿಕೊಂಡರು. "ಎಲಾ ಓಡಿರೋ, ಆ ಕೋಣನನ್ನು ಹಿಡಿದು ತನ್ನಿ" ಎಂದು ತಮಟೆಯವರಿಗೆ ಉಳಿದವರಿಗೆ ಕೂಗಿ ಹೇಳಿದರು. ತಮಟೆಯವರು ತಮಟೆಗಳನ್ನು ಬೆನ್ನಮೇಲೆ ತೂಗು ಹಾಕಿಕೊಂಡು ಉಳಿದವರು ಕೈಯಲ್ಲಿ ಏನು ಸಾಮಾನು ಇತ್ತೋ ಅದನ್ನೇ ಹಿಡಿದುಕೊಂಡು ಕೋಣನು ಹೋದ ದಾರಿಯನ್ನು ನೋಡುತ್ತ ಓಡಿದರು.

ಇದು ಹಾಗೆ ಆಗುತ್ತಿದ್ದಾಗಲೇ ನಾನು ಗಾಡಿಯಲ್ಲಿ ಹೋಗುತ್ತ ಅವರನ್ನು ಕಂಡದ್ದು.

ಸಂಜೆ ನಾನು ಹೋಗಿ ಇದನ್ನೆಲ್ಲಾ ವಿಚಾರಿಸುವ ವೇಳೆಗೆ ಜನರಿಗೆ ಕೋಣ ಎಲ್ಲಿ ಹೋಯಿತೆನ್ನುವುದು ಇನ್ನೂ ಕಂಡಿರಲಿಲ್ಲ. ಊರಿಂದ ತಪ್ಪಿಸಿಕೊಂಡು ಓಡುತ್ತ ಕೋಣ ಎರಡು ಮೈಲಿಯ ದೂರದ ಕಾಡಿನೊಳಕ್ಕೆ ನುಗ್ಗಿತು. ಸ್ವಲ್ಪ ದೂರ ಅದು ಅಲ್ಲಲ್ಲಿ ಸುರಿಸಿದ ರಕ್ತದ ಕಲೆ ಕಾಣುತ್ತಿತ್ತು. ಕಾಡಿನೊಳಕ್ಕೆ ನುಗ್ಗಿದ ಮೇಲೆ ಆ ಕಲೆ, ಇತ್ತ ಹೋದಂತೆ ಒಂದು ಸಲ, ಅತ್ತ ಹೋದಂತೆ ಒಂದು ಸಲ, ದಾರಿಯ ನಿಟ್ಟನ್ನು ತಪ್ಪಿಸಿತ್ತು. ಮಧ್ಯಾಹ್ನದಿಂದ ಸಂಜೆಯವರೆಗೆ ಎಲ್ಲರೂ ಕಾಡಲ್ಲಿ ಓಡಾಡಿ ನಾಲ್ಕು ದಿಕ್ಕನ್ನೂ ನೋಡಿ ಮುಗಿಸಿದರು. ಕೋಣ ಏನು ಆಯಿತು ಎಂದು ಅವರಿಗೆ ತಿಳಿಯಲಿಲ್ಲ. ಒಬ್ಬರಿಬ್ಬರಿಗೆ ಮಾರಿ ಆ ಕಾಡಿನಲ್ಲಿ ಸ್ವತಃ ದೇಹವನ್ನು ತಳೆದು ಕೋಣನನ್ನು ನುಂಗಿಬಿಟ್ಟಳು ಎಂದೇ ತೋರಿತು. ಅವರು ಆ ಮಾತನ್ನು ಹೇಳಿಯೂ ಹೇಳಿದರು. ದೇವಿಯ ಮಹಿಮೆ, ಹೀಗಾದರೂ ಏನು ಆಶ್ಚರ್ಯ, ಎಂದು ಉಳಿದವರು ಯೋಚಿಸಿಕೊಂಡರು. ಸೂರ್ಯಾಸ್ತವಾದ ಮೇಲೆ ಅಲ್ಲಿರುವುದು ಕ್ಷೇಮವಲ್ಲವೆಂಬ ಕಾರಣದಿಂದಲೂ ಹೇಗಾದರೂ ಇನ್ನು ಕೋಣನನ್ನು ಹುಡುಕುವುದು ಸಾಧ್ಯವಲ್ಲವೆಂಬ ಕಾರಣದಿಂದಲೂ

ಎಲ್ಲರೂ ಹಿಂತಿರುಗಿದರು. ಮಾರನೆಯ ಬೆಳಗ್ಗೆ ಮತ್ತೆ ಹೋಗಿ ಹುಡುಕು ವುದೆಂದು ಗೊತ್ತಾಯಿತು.

ಬೆಳಗ್ಗೆ ಹೊರಟ ಗುಂಪಿನೊಂದಿಗೆ ನಾನೂ ಹೊರಟೆ. ರಕ್ತದ ಕಲೆ ಎಲ್ಲಿಯವರೆಗೆ ಕಂಡಿತೋ ಅಲ್ಲಿಯವರೆಗೆ ಗುಂಪೆಲ್ಲಾ ಒಟ್ಟಾಗಿ ಹೋಗಿ ಸೇರಿದೆವು. ಅಲ್ಲಿಂದ ಮುಂದೆ ಎಲ್ಲಿಗೆ ಹೋಗಿರಬಹುದೆಂದು ಸುತ್ತ ಹುಡುಕಿದ್ದಾಯಿತು. ಕೊನೆಗೆ ಒಬ್ಬನು ಪಕ್ಕದ ಗುಡ್ಡದ ಮೇಲುಗಡೆಗೆ ಹೋದ ಗುರುತು ಕಾಣುತ್ತಿದೆ ಎಂದು ಹೇಳಿದನು. ಹೋಗಿ ನೋಡಲಾಗಿ ಅದು ನಿಜವೆಂದು ಕಂಡಿತು. ಹಿಂದಿನ ದಿನ ಯಾರ ದೃಷ್ಟಿಯೂ ಆ ಕಡೆ ಹೋಗಿರಲಿಲ್ಲ. ಜನದ ಗುಂಪು ಹೆಜ್ಜೆಯ ಗುರುತನ್ನು ಹಿಡಿದು ಬೆಟ್ಟವನ್ನು ಹತ್ತಿತು. ಬೆಟ್ಟ ಅಂದರೆ ಅಷ್ಟೇನೂ ಎತ್ತರದ್ದು ಎಂದಲ್ಲ. ಎತ್ತರದ ಒಂದು ಬಂಡೆ, ಮೇಲೆ ಬಹಳವೇನೂ ಮಣ್ಣಿಲ್ಲ. ಸ್ವಲ್ಪ ಗಿಡ ಬೆಳೆದಿದೆ. ಅದು ಕೊನೆಯಲ್ಲಿ ನೆಲದಿಂದ ಸುಮಾರು ಹತ್ತು ಆಳುದ್ದ ಇರಬಹುದು. ಆ ಬಂಡೆಯ ಮೇಲಿಂದ ಒಂದು ಕಡೆ ಊರು ಕೇರಿ ಕಾಣುವುವು; ಇನ್ನೊಂದು ಕಡೆಗೆ ಕಾಡು ಕಾಣುವುದು. ಕಾಡಿನ ಕಡೆಗೆ ಬಂಡೆ ಕಡಿದಾದ ಎರಡು ಮೆಟ್ಟಲಾಗಿರುವುದು. ಎಂದರೆ ಐದು ಆಳುದ್ದಕ್ಕೆ ಒಂದು ಮಂಚಿಗೆ. ನಮ್ಮ ಪ್ರಾಂತದ ಜನರು ತಮ್ಮ ಶೌರ್ಯವನ್ನು ಹೇಳಿಕೊಳ್ಳಬೇಕಾದರೆ ಆ ಬಂಡೆಯ ತಲೆಯಿಂದ ಆ ಮಂಚಿಗೆಗೆ ಜಿಗಿದು ಮಂಚಿಗೆಯಿಂದ ಮತ್ತೆ ನೆಲಕ್ಕೆ ಜಿಗಿಯುತ್ತೇನೆ ಎಂದು ಕೊಚ್ಚುವರು. ಯಾರು ಎಂದಾದರೂ ಇದನ್ನು ಮಾಡಿದರೋ ನಾನು ಅರಿಯೆ. ಐದಾಳು ಎತ್ತರವನ್ನು ಹಾರುವುದು ಎಂದರೆ ಬಹಳ ಕಷ್ಟವೆಂದು ತೋರುತ್ತದೆ. ನಾವು ಆ ದಿನ ಕೋಣನ ಜಾಡನ್ನು ನೋಡುತ್ತ ಹೋದಾಗ ಅಲ್ಲಿ ಬಂಡೆಯ ತಲೆಯ ಮೇಲೆ ರಕ್ತದ ಕಲೆ ಸ್ವಲ್ಪ ಕಂಡಿತು. ಅಲ್ಲಿ ಬಂದು ಕೋಣ ಏನಾಗಿರಬಹುದು ಎಂದು ಸುತ್ತ ನೋಡಿ ಇಣಿಕಿದೆವು. ಅಲ್ಲಿ ಮಂಚಿಗೆಯ ಮೇಲೆ ಅದು ಬಿದ್ದಿತ್ತು. ಜೀವ ಇನ್ನೂ ಹೋಗಿರಲಿಲ್ಲ. ಕುತ್ತಿಗೆಯ ಗಾಯದಿಂದ ಪಕ್ಕಕ್ಕೆ ಸುರಿದಿದ್ದ ರಕ್ತದಲ್ಲಿ ನೊಣದ ಸೇನೆ ಮುತ್ತಿಕೊಂಡಿತ್ತು. ಎರಡು ಕಾಗೆ ಆಗತಾನೇ ಅದರ ಸುಳಿವನ್ನು ಅರಿತು ಅಲ್ಲಿ ಬಂದು ಆ ಗಾಯದೊಳಕ್ಕೆ ಕೊಕ್ಕನ್ನಿಟ್ಟು ತಲೆಯನ್ನು ಓರೆಮಾಡಿಕೊಂಡು ನೆತ್ತರನ್ನು ಸವಿಯುತ್ತ ಇತ್ತ ಅತ್ತ

ನೋಡುತ್ತ ಆನಂದಪಡುತ್ತಿದ್ದವು. ಕೋಣನು ತಲೆಯನ್ನು ಆಡಿಸಬೇಕು, ಅದಕ್ಕೆ ಪ್ರಾಣವಿಲ್ಲದೆಯೋ ಇಲ್ಲ ನೋವಿನಿಂದಲೋ, ಏನೋ ಸ್ವಲ್ಪ ಆಡಿಸುವಂತೆ ಆಡಿಸದಂತೆ ತೋರುತ್ತಿತ್ತು. ಕೋಣನ ಇದಿರಿಗೆ ಬಂಡೆಯ ಮೇಲೆ ಒಂದು ಹದ್ದು ಕುಳಿತಿತ್ತು. ಯಾವುದೋ ಒಂದು ಕ್ಷಣವನ್ನು ಎದುರು ನೋಡುತ್ತ ಕುಳಿತಿರುವಂತೆ ಇದ್ದ ಆ ಹದ್ದು ನಾವು ಬಂದಾಗ ಆ ಸ್ಥಳವನ್ನು ಬಿಟ್ಟು ಹಾರಿ ಒಂದೇ ಒಂದು ಸುತ್ತುಹಾಕಿ ಮರಳಿ ನಾವು ಮಾತನಾಡುತ್ತಿದ್ದಂತೆ ಅದೇ ಸ್ಥಳಕ್ಕೆ ಬಂದು ಕುಳಿತುಕೊಂಡಿತು. ಕೋಣನಿಗೆ ಏನನ್ನಾದರೂ ನೋಡುವ ಪ್ರವೃತ್ತಿ ಇದ್ದಿದ್ದರೆ ಆಗ ಅದರ ಕಣ್ಣೂ ಆ ಹದ್ದಿನ ಕಣ್ಣೂ ಸಂಧಿಸಬಹುದಾಗಿತ್ತು. ಆದರೆ ಕೋಣ ಸೊರಗಿತ್ತು. ಅದಕ್ಕೆ ಇದು ಯಾವುದೂ ಬೇಕಾಗಿರಲಿಲ್ಲ.

ಮಾರಿಯಿಂದ ತಪ್ಪಿಸಿಕೊಂಡು ಓಡಿದ ಕೋಣ ಯಾವ ಅದ್ಭುತ ಸಾಮರ್ಥ್ಯದಿಂದಲೋ ಎರಡು ಮೈಲಿ ಓಡಿ ಬಂಡೆಯನ್ನು ಹತ್ತಿ ಭಯದಲ್ಲಿ ಏನು ಮಾಡುತ್ತಿದೇನೆ ಎನ್ನುವುದನ್ನು ಯೋಚಿಸದೆ ಐದು ಆಳುದ್ದದ ಮಂಚಿಗೆಗೆ ಜಿಗಿದುಬಿಟ್ಟಿತ್ತು; ಕುತ್ತಿಗೆಗೆ ಬಿದ್ದಿದ್ದ ಕತ್ತಿಯ ಪೆಟ್ಟಿನಿಂದ ಅರ್ಧಜೀವವಾಗಿದ್ದದ್ದು ಈ ಜಿಗಿತದಿಂದ ಇನ್ನಷ್ಟು ಜೀವವನ್ನು ಕಳೆದು ಕೊಂಡು, ಪ್ರಾಯಶಃ ಕಾಲನ್ನೇ ಮುರಿದುಕೊಂಡು, ಬಿದ್ದಲ್ಲೇ ಇದ್ದು ಬಿಟ್ಟಿತ್ತು. ಆರು ವರ್ಷ ಸಾಕಿದ ಮುನಿಯ ಬೇಡ, ಮೂರು ವರ್ಷ ಕೊಬ್ಬಿಸಿದ ಊರು ಬೇಡ, ನಂಬಿಸಿ ದ್ರೋಹಮಾಡುವ ಮನುಷ್ಯರೇ ಬೇಡ, ಎಂದೂ ಮನುಷ್ಯರ ಹೆಜ್ಜೆ ಬೀಳದ ಈ ಮಂಚಿಗೆಯಲ್ಲಿ ಬಂದು ಜೀವವನ್ನು ಬಿಡುವುದು ಎಂದು ನಿರ್ಧಾರಮಾಡಿಕೊಂಡಂತೆ ಇತ್ತು. ಕೋಣ ಜೀವಂತ ವಾಗಿರುವುದನ್ನು ಕಂಡು ಊರ ಹಿರಿಯರಿಗೆ ಸಂತೋಷ: ಅದನ್ನು ಯಥಾ ವಿಧಿಯಾಗಿ ತೋಟಿಯಿಂದ ಕೊಲ್ಲಿಸಿ ಸಾಂಗ್ಯವನ್ನು ಸಂಪೂರ್ಣಮಾಡುವುದು ಸಾಧ್ಯವಾಗಿದೆಯಲ್ಲಾ ಎಂದು. ದೇವಿಯ ಕೃಪೆ! ಆದರೆ ಕೋಣನನ್ನು ಅಲ್ಲಿಂದ ತೆಗೆದುಕೊಂಡು ಹೋಗುವುದಕ್ಕೆ ಆಗುವಂತಿರಲಿಲ್ಲ. ಆದ್ದರಿಂದ ಅಲ್ಲಿಯೇ ಅದರ ಜೀವವನ್ನು ಮುಗಿಸಿಬಿಡಬೇಕೆಂದು ಹಿರಿಯರು ಗೊತ್ತು ಮಾಡಿಕೊಂಡರು. ಅದನ್ನು ಮಾಡತಕ್ಕದ್ದು ಮುನಿಯನ ಕೆಲಸ. ಊರಿಗೆ ಜನರನ್ನು ಅಟ್ಟಿ ಸುಮಂಗಲಿಯರಿಬ್ಬರು, ಸೇದುವ ಹಗ್ಗ ಎರಡನ್ನು

ತರಿಸಿದರು. ಮುನಿಯನನ್ನು ಕಡುಗತ್ತಿಯೊಡನೆ ಆ ಹಗ ದಿಂದ ಮಂಚಿಗೆಗೆ ಇಳಿಯಬಿಟ್ಟರು. ಸಾಂಗ್ಯಮಾಡುವ ಸುಮಂಗಲಿಯರು ಮೇಲೆ ಬೇಗನೆ ಸಾಂಗ್ಯಮಾಡಿ ಮುಗಿಸಲು ಮುನಿಯ ಕೆಳಗೆ ಕೋಣನನ್ನು ಕೊಲ್ಲುವಂತೆ ಏರ್ಪಾಡು ಮಾಡಿದರು. ನಾನು ಸ್ವಲ್ಪ ದೂರಹೋಗಿ ನಿಂತುಕೊಂಡೆ. ಮುನಿಯನ ಕತ್ತಿಯಿಂದ ಕೋಣ ತೀರಿಕೊಂಡಿತು. ಜನರು ಹಲಲೋ ಕುಲಲೋ ಎಂದು ಚೀರಿ ಕೋಣನ ಕೆಲಸ ಮುಗಿಯಿತು ಎಂಬುದನ್ನು ಕಾಡಿಗೆ ಕೂಗಿ ಹೇಳಿದರು. ಆಮೇಲೆ ಇನ್ನು ಕೆಲವರು ಕೆಳಕ್ಕೆ ಇಳಿದು ಕೋಣನ ದೇಹವನ್ನು ಹಗ್ಗಗಳಿಂದ ಕಟ್ಟಿ ನೆಲಕ್ಕೆ ಇಳಿಸಿದರು. ಅಲ್ಲಿಂದ ಅದು ಯಾರ ಪಾಲಿಗೆ ಸೇರತಕ್ಕದ್ದಿತ್ತೋ ಅವರಿಗೆ ಸೇರಿತು. ಊರಿಗೆ ಎಲ್ಲರೂ ಹಿಂದಕ್ಕೆ ಬಂದೆವು.

ಎಂದೂ ಇಲ್ಲದ ಈ ಅನರ್ಥ ಪರಂಪರೆ ಈ ಸಲ ಏಕೆ ಆಯಿತು, ಇದಕ್ಕೆ ಏನು ಶಾಂತಿ, ಎಂದು ಆಮೇಲೆ ಚರ್ಚೆ ನಡೆಯಿತು. ಈ ಚರ್ಚೆಯಿಂದ ಮೊದಲು ನಿರ್ಧರವಾದ ವಿಷಯ, ಇದೆಲ್ಲಕ್ಕೂ ಕಾರಣ ಮುನಿಯ ಎನ್ನುವುದು. ಅವನು ತನ್ನ ಕೋಣವನ್ನು ಕೊಡುವುದಕ್ಕೆ ಹಿಂದೆಗೆದುದರಿಂದಲೇ ಅದು ಮೂರು ವರ್ಷ ಬೆಳೆಯಬೇಕಾಗಿದ್ದದ್ದು ಎರಡೇ ವರ್ಷದಲ್ಲಿ ಮಾರಿಯ ಮುಂದೆ ಬರಬೇಕಾಯಿತು. ಅದರಲ್ಲೂ ಒಂದು ವಿಚಾರ. ಮುನಿಯನು ಅದನ್ನು ಬಲಿಯಾಗಿ ಕೊಡುವುದಕ್ಕೆ ಒಪ್ಪಿರಲಿಲ್ಲ; ಅವನಿಂದಲೇ ಬಲಿ ಮಾಡಿಸುತ್ತೇನೆ ಎಂದು ತಾಯಿ ಹಟಮಾಡಿದ್ದಳು. ಅವನಿಂದಲೇ ಅವನ ಕೋಣನನ್ನು ಕೊಲ್ಲಿಸಬೇಕೆಂಬ ಕಾರಣದಿಂದಲೇ ಅವನ ಸರದಿಯ ಆ ವರ್ಷದಲ್ಲಿ ಅವನ ಕೋಣ ಬಲಿಯಾಗುವಂತೆ ತಾಯಿ ಮೂರು ವರ್ಷ ಬೆಳೆದ ಕೋಣನನ್ನು ಸ್ವಲ್ಪ ಮುಂದಾಗಿಯೇ ಸಾಯುವಂತೆ ಮಾಡಿದ್ದಳು. ಎಲ್ಲ ಕೋಣಗಳಂತೆ ನ್ಯಾಯವಾಗಿ ಒಂದು ಪೆಟ್ಟಿನಿಂದ ಬಲಿಯಾದರೆ ಮುನಿಯನಿಗೆ ಸಾಕಾದಷ್ಟು ಪ್ರಾಯಶ್ಚಿತ್ತ ಆಗುವುದಿಲ್ಲ. ಆದಕಾರಣವೇ ಅವನ ಕೈಯಿಂದ ಅರ್ಧಪೆಟ್ಟು ತಿಂದು ಕೋಣ ತಪ್ಪಿಸಿಕೊಳ್ಳುವಂತೆ ಅವಳು ಮಾಡಿದ್ದಳು. ಈ ಮಾತು ಬಂದಾಗ ಆ ಕೋಣನನ್ನು ಹಿಡಿದಿದ ಇಬ್ಬರು, ತಮ್ಮ ಕೈಯಿಂದ ಬಿಡಿಸಿಕೊಂಡದ್ದು ಕೋಣ ಎನ್ನುವಂತೆ ಇರಲಿಲ್ಲ, ಯಾವುದೋ ದಿವ್ಯಶಕ್ತಿ ತಮ್ಮ ಕೈಯಿಂದ ಅದನ್ನು

ಕೊಸರಿ ಬಿಡಿಸಿದಂತೆ ಆಯಿತು, ಎಂದು ಹೇಳಿದರು. ಕೋಣ ತಪ್ಪಿಸಿ ಕೊಂಡದ್ದು ಮಾರಿಯ ಇಚ್ಛೆಯಿಂದಲೇ ಎನ್ನುವುದು ಈ ಮಾತಿನಿಂದ ಇನ್ನೂ ಸ್ಫುಟವಾಗಿ ಗೊತ್ತಾಯಿತು. ಮಾರಿಯ ಮಹಿಮೆಯಿಂದಲೇ ಇರಬೇಕು, ಆ ಕೋಣ ಸಂಜೆಯವರೆಗೆ ಕಾಡಿನಲ್ಲಿ ಓಡಾಡುತ್ತ ಇವರಿಗೆ ಸಿಕ್ಕದಂತೆ ಇರುವುದು ಸಾಧ್ಯವಾಯಿತು. ಆದಿಲ್ಲದಿದ್ದರೆ ನೂರಿನ್ನೂರು ಜನ ಹಿಂದಟ್ಟಿದ್ದ ಒಂದು ಕೋಣ, ಅದರಲ್ಲೂ ಗಾಯಪಟ್ಟಿದ್ದದ್ದು. ಸಿಕ್ಕದೆ ಇರಬೇಕೆ? ಕೊನೆಗೆ ಆ ಕೋಣ ಕಣ್ಣಿಗೆ ಕಾಣದೆ ಹೋದದ್ದಾದರೂ ವಿಚಿತ್ರವೇ. ಇಲ್ಲಿದೆ ಅಲ್ಲಿದೆ ಎಂದು ಒಬ್ಬರನ್ನೊಬ್ಬರು ತಪ್ಪುದಾರಿಗೆ ಎಳೆಯುವಂತೆ ಮಾಡಿ, ಕಣ್ಣೆದುರಿಗಿದ್ದ ಕೋಣ ಕಾಣದಂತೆ ಅದನ್ನು ಬಂಡೆಯ ಮೇಲೆ ಕರೆದುಕೊಳ್ಳಬೇಕಾದರೆ, ಮಾರಿಯ ಮಹಿಮೆಯಿಲ್ಲದೆ ಅಸಂಭವವೇ. ನೂರಾರು ಜನರನ್ನು ಕಣ್ಣು ತೆರೆದಿರುವಂತೆಯೇ ಕುರುಡರನ್ನಾಗಿ ಮಾಡಿ ಇದಿರಿಗಿದ್ದ ಕೋಣ ಮಂಗಮಾಯವಾಗುವಂತೆ ತಾಯಿ ಅದಕ್ಕೆ ನೆರವಾಗಿ ಅದನ್ನು ಆ ಮಂಚಿಗೆಗೆ ಜಿಗಿಸಿದ್ದಳು. ನೆಲದ ಮೇಲೆ ಎಲ್ಲಿದ್ದರೂ ಅದು ಗುರುತು ಸಿಕ್ಕಬಹುದಾಗಿತ್ತು. ಅದು ಆ ದಿನ ಸಂಜೆ ಸಿಕ್ಕದೆ ಇದ್ದುದಕ್ಕೆ ಅದು ಆ ಮಂಚಿಗೆಯನ್ನು ಸೇರಿದ್ದೇ ಕಾರಣ. ಅಂಥ ಅಸಾಮಾನ್ಯವಾದ, ಅಚಿಂತ್ಯವಾದ, ಅದ್ಭುತವಾದ ನಡತೆಯಿಂದ ದೇವಿ ಎಂದಿಗಿಂತಲೂ ಹೆಚ್ಚಾಗಿ ಜನರಿಗೆ ತನ್ನ ಮಹಿಮೆಯನ್ನು ತೋರಿಸಿದ್ದಳು. ತಪ್ಪು ಮುಖ್ಯವಾಗಿ ಮುನಿಯನದು. ಅವನಿಗೆ ಈಗಾಗಲೇ ಸ್ವಲ್ಪ ಶಿಕ್ಷೆ ಆಗಿತ್ತು. ಆದರೂ ಅವನಿಂದ ಸ್ವಲ್ಪ ದಂಡ ಕೊಡಿಸಿದ ಹೊರತು ಈ ಪ್ರಾಯಶ್ಚಿತ್ತ ಮುಗಿಯುವಂತಿಲ್ಲ. ಇದು ಒಂದು ಮಾತು ಗೊತ್ತಾಯಿತು.

ಇನ್ನೊಂದು ಮಾತು ಗೊತ್ತಾದದ್ದೆಂದರೆ, ತಾಯಿಯ ಇದಿರಿನಲ್ಲಿ ಸಾಯದೆ ಎಲ್ಲೋ ಹೋಗಿ ಬಂಡೆಯ ಮೇಲಿನ ಒಂದು ಮಂಚಿಗೆಯಲ್ಲಿ ಸತ್ತ ಕೋಣ ತಾಯಿಗೆ ಬಲಿಯಾದಂತೆ ಆಯಿತೆ? ಇಲ್ಲ. ನಿಮ್ಮ ಮುಂದೆ ಒಂದು ಎಡೆಯಿರಿಸಿ ಅದನ್ನು ನೀವು ಎತ್ತಿ ಬಾಯಿಗೆ ಇಟ್ಟುಕೊಳ್ಳುವ ಮುನ್ನ ಎಡೆಯನ್ನೇ ತೆಗೆದು ಬೇರೆ ಕಡೆಗೆ ಕೊಂಡುಹೋಗಿಟ್ಟರೆ ಅದು ನಿಮಗೆ ಆರೋಗಣೆಯಾದಂತೆ ಆಯಿತೆ? ಈ ಸಲ ಈ ಮುನಿಯನ ದುರ್ಬುದ್ಧಿಯಿಂದ ಮೊದಲು ಒಂದು ಕೋಣ ನಿಷ್ಕಾರಣವಾಗಿ ಸತ್ತದ್ದಲ್ಲದೆ,

ಸ್ವಲ್ಪ ಸತ್ತ ಈ ಕೋಣವೂ ತಾಯಿಗೆ ಸೇರಿದಂತೆ ಆಗಲಿಲ್ಲ. ಅವನಿಗೆ ಮನಸ್ಸಿಲ್ಲ. ಅವನಿಗೆ ಮನಸ್ಸಿಲ್ಲದಿದ್ದರೆ ಆ ಕೋಣ ನನಗೆ ಬೇಡ ಎಂದು ತಾಯಿ ಹೇಳಿದ್ದಳು ಎಂದು ಎಲ್ಲರೂ ಗೊತ್ತುಮಾಡಿಕೊಂಡರು. ತಾಯ ಮುಂದೆ ಇನ್ನೊಂದು ಕೋಣನನ್ನು ಕೊಲ್ಲಿಸಬೇಕು. ಎರಡು ಕೋಣ ಇದುವರೆಗೆ ವ್ಯರ್ಥವಾಯಿತು. ಇನ್ನೊಂದು ಕೋಣವನ್ನಾದರೂ ತಾಯಿ ಒಪ್ಪಿಸಿಕೊಂಡರೆ ಊರಿಗೆ ಏನೂ ಕೇಡಾಗದೆ ಎಲ್ಲರೂ ಬಾಳಬಹುದು. ಇದು ಎರಡನೆಯ ನಿರ್ಧಾರ.

ಕೋಣ ಹೋಗಿ ಜೀವಬಿಟ್ಟ ಬಂಡೆಯ ಮಂಚಿಗೆಯಲ್ಲಿ ಮಾರಿಯ ಗುಡಿ ಇನ್ನೊಂದನ್ನು ಮಾಡಿಸಿ ಅಲ್ಲಿಯೂ ಊರಿನಲ್ಲಿ ನಡೆಯುತ್ತಿದ್ದಂತೆ ಪೂಜೆ ನಡೆಯಿಸಬೇಕೆನ್ನುವುದು ಮೂರನೆಯ ನಿರ್ಧಾರ. ಈ ನಿರ್ಧಾರಕ್ಕೆ ಬರುವುದರಲ್ಲಿ ಊರ ಜೋಯಿಸರು ಸಹಾಯಮಾಡಿದರು. ಇಂಥ ವಿಚಾರ ಅವರ ಬುದ್ಧಿಗೆ ಹೊಳೆದ ಹಾಗೆ ಉಳಿದವರಿಗೆ ಹೊಳೆಯುವುದಿಲ್ಲ. ಜನರ ಮನಸ್ಸು ಈ ನಿರ್ಧಾರವನ್ನು ಮುಟ್ಟಿದ್ದು ಒಟ್ಟನಲ್ಲಿ ಹೀಗೆ. ಬಲಿಯಾಗಲು ಸಿದ್ಧವಾದ ಕೋಣ ಊರಲ್ಲಿ ದೇವರ ಮುಂದೆ ಅರ್ಧಪೆಟ್ಟನ್ನು ತಿಂದು ಒಂದೇ ಸಮನಾಗಿ ಓಡಿತಲ್ಲಾ ! ಯಾರೂ ಊಹಿಸದಂಥ ಸ್ಥಳದಲ್ಲಿ ಹೋಗಿ ಬಿದ್ದು ಅಲ್ಲಿಂದ ಕದಲದೆ ನಿಂತಿತಲ್ಲಾ ! ಬಿದ್ದ ಪೆಟ್ಟಿಗೇ ನ್ಯಾಯವಾಗಿ ಸಾಯಬೇಕು, ಸಾಯದೆ ಒಂದು ರಾತ್ರಿಯೆಲ್ಲ ಉಸಿರು ಹಿಡಿದು ಉಳಿದಿತ್ತಲ್ಲಾ ! ಇದು ಎಲ್ಲ ಹೇಗಾಯಿತು ? ಮಾರನೆಯ ದಿನ ದೇವರ ಅರ್ಚಕನು ಬಂದು ಸರಿಯಾಗಿ ಕಡಿದಾಗಲೇ ಬಲಿ ಜೀವವನ್ನು ಕೊಟ್ಟದ್ದು. ದೇವಿಗೆ ಮೀಸಲಾದ ಆ ಜೀವ ತನ್ನ ಅರ್ಪಣಕ್ಕೆ ಅದೇ ಸರಿಯಾದ ಸ್ಥಳ ಎಂದು ತಿಳಿಯದಿದ್ದರೆ ಅಲ್ಲಿ ಏಕೆ ಹೋಗುತ್ತಿತ್ತು ? ಅಲ್ಲೇ ಏಕೆ ಸಾಯುತ್ತಿತ್ತು ? ಭಕ್ತನಿದ್ದಲ್ಲಿ ದೇವರು ಎಂಬಂತೆ ಬಲಿಯಾದಲ್ಲಿ ಮಾರಿ. ತಾಯಿ ಬಹುಕಾಲ ಊರಿನಲ್ಲಿ ಬಿಜಮಾಡಿಸಿದ್ದು ಊರಿನವರ ಭಕ್ತಿಗೆ ಮೆಚ್ಚಿ ಇನ್ನೊಂದು ಕಡೆ ತನ್ನ ಸಾನ್ನಿಧ್ಯವನ್ನು ಪ್ರಕಟಮಾಡಿದ್ದಳು. ಅಧಿಕಾರಿಗಳಾದವರು ಒಂದು ಊರ ಜನ ತಮ್ಮನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ ಎಂದು ಕಂಡರೆ ಅಲ್ಲಿ ಒಂದು ಮುಸಾಫರ ಬಂಗಲೆಯನ್ನು ಕಟ್ಟಿಸುವಂತೆ; ಅಥವಾ ವೈಸ್‌ರಾಯ್ ಮುಂತಾದವರು ಬೇಸಗೆಯ ದಿನಕ್ಕೆಂದು ಪ್ರಶಸ್ತವಾದ ಒಂದು ಸ್ಥಳದಲ್ಲಿ

ಒಂದು ಮನೆಮಾಡಿಕೊಳ್ಳುವಂತೆ. ದೇವಿಯ ಸಾನ್ನಿಧ್ಯ ಪ್ರಕಟವಾದ ಈ ಮಂಚಿಗೆಯ ಮೇಲೆ ಕೋಣನು ಮುಖಮಾಡಿದ್ದ ಕಡೆಗೆ ದರ್ಶನ ಕೊಡುತ್ತ ತಾಯಮೂರ್ತಿಯನ್ನು ಬಂಡೆಯಲ್ಲಿ ಕಡೆಯಿಸಬೇಕು. ಅಲ್ಲಿ ವರ್ಷಕ್ಕೆ ಒಂದು ಸಲ ಊರಿನಲ್ಲಿ ಕಡಿಯುವ ಕೋಣ ಒಂದಲ್ಲದೆ ಬೇರೆ ಒಂದು ಕೋಣವನ್ನು ತಾಯಿಗೆ ಅರ್ಪಿಸಬೇಕು.

ಕಲ್ಮಾಡಿಯಲ್ಲಿ ಈಗ ನಾಲ್ಕು ವರ್ಷದಿಂದ ಈ ಏರ್ಪಾಡು ವಾಡಿಕೆಗೆ ಬಂದಿದೆ. ಊರು ಬೆಳೆಯಿತು; ಮಾರಿ ಬೆಳೆಯಳೆ? ಕಲ್ಮಾಡಿಯ ಮಾರಿ ಈಗ ಎರಡು ಮೂರ್ತಿಯಾಗಿ ಊರಮ್ಮ ಕಾಡಮ್ಮ ಎಂದು ಹೆಸರು ಪಡೆದಿದಾಳೆ. ಒಂದೊಂದು ಮೂರ್ತಿಗೂ ಮೂರು ಮೂರು ಕೋಣ ಬಿಡುವುದು ಕಷ್ಟವಾದೀತು ಎಂಬ ಕಾರಣದಿಂದ ಎರಡೆರಡನ್ನು ಮಾತ್ರ ಬಿಡುವುದು ಬಳಕೆಗೆ ಬಂದಿದೆ. ಅಂತೂ ಪೂರ್ವದಲ್ಲಿ ಮೂರು ಕೋಣ ಮೇಯುತ್ತಿದ್ದವು; ಈಗ ನಾಲ್ಕು ಮೇಯುತ್ತಿವೆ. ಮೂರು ವರ್ಷ ತೊಂಡು ಮೇಯ್ದ ಒಂದು ಕೋಣಕ್ಕಿಂತ ಎರಡು ವರ್ಷ ತೊಂಡು ಮೇಯ್ದ ಎರಡು ಕೋಣ ಕೊಟರೆ ಸ್ವಲ್ಪ ಹೆಚ್ಚು ಸಲ್ಲಿಸಿದಂತೆಯೇ ಆಯಿತು ಎಂದು ಜೋಯಿಸರು ಹೇಳಿದರಂತೆ. ನೋಡೋಣ ಎಂದು ಊರವರು ಹಾಗೆ ಮಾಡಿದರು. ಮಾರಿಯೂ ಈ ಗಣಿತವನ್ನು ಒಪ್ಪಿಕೊಂಡಿದಾಳೆಂದು ತೋರುತ್ತದೆ. ಈ ನಾಲ್ಕು ವರ್ಷ ಊರಿಗೆ ಕಾಯಿಲೆ ಕಸಾಲೆ ಏನೂ ಬಂದಿಲ್ಲ. ಜನ ಸುರಕ್ಷಿತವಾಗಿದಾರೆ.

ಈ ಸಲ ನಾನು ಅದೇ ಕಾಲದಲ್ಲಿ ನಮ್ಮ ಊರಿಗೆ ಹೋದಾಗ್ಗೆ ಕಲ್ಮಾಡಿಯ ಜನ ಹರಕೆಯ ಕೋಣವನ್ನು ಕಾಡಮ್ಮನ ಗುಡಿಗೆ ಮೆರೆಯಿಸಿಕೊಂಡು ಹೋಗುತ್ತಿದ್ದುದನ್ನು ನೋಡಿದೆನು. ಆ ದಂಡೆ ಆ ಹಾರ; ತಂಬಿಟ್ಟು, ಶೃಂಗಾರ; ಓಲಗ, ತಮಟೆ; ಎಂದಿನಂತೆ ವಿಜೃಂಭಣೆಯಿಂದ ಸಾಗುತ್ತಿದ್ದುವು. ಮಧ್ಯೆ ಮುನಿಯನ ಕೋಣನಂಥ ಇನ್ನೊಂದು ಕೋಣ ತನ್ನ ಮುಂದನ್ನರಿಯದೆ ನಡೆಯುತ್ತಿತ್ತು. ನನಗೆ ಸ್ವಲ್ಪ ಭಯವಾಯಿತು. ಏಕೆ ಎಂದು ಹೇಳಲಾರೆ; ನಿಜವಾಗಿ, ಹೇಳಲರಿಯೆ. ಸೂಚಿಸುವುದಾದರೆ, ಕೊಲ್ಲುವ ನಾವೂ ಸಾಯುವ ಕೋಣವೂ ಸಾವಿನ ವಿಕಟಚಕ್ರದಲ್ಲಿ ಸಿಕ್ಕಿಕೊಂಡಿದೇವೆ ಎಂಬ ಭಾವ ಇದರ ಮೂಲ. ನಾಲ್ಕು ವರ್ಷದ ಹಿಂದೆ

ಇಂಥ ಒಂದು ಜೀವ ತಾನು ಉಳಿಯಬೇಕೆಂದು ಓಟ ಕಿತ್ತಿತು. ಕೋಣನ ಬುದ್ಧಿ! ಜೀವ ಉಳಿಯುವುದೆಂತು? ಎಂದಿದ್ದರೂ ಅದು ಸಾಯಬೇಕು. ಉಳಿಯುವುದು ಸಾವು. ಮನುಷ್ಯನಿಂದ ಕೋಣ, ಹಾವಿನಿಂದ ಮನುಷ್ಯ, ಜೀವದಿಂದ ಜೀವವನ್ನು ಕೊಲ್ಲಿಸುತ್ತ ಸಾವು ಸಾಮ್ರಾಜ್ಯ ಮಾಡುತ್ತಿದೆ. ಜೀವ ದಾಳವೆಸೆದು ಸಾವಿನ ಗರವನ್ನು ನಡೆಸುತ್ತಿದೆ. ಅಂದು ಒಂದು ಜೀವ ಸ್ವಾರ್ಥದಿಂದ ದುಡುಕಿದ್ದರಿಂದ ಇಂದು ಅದರಂಥ ಎರಡು ಜೀವಕ್ಕೆ ಅಳಿವು ಒದಗಿದೆ. ಹೀಗಾಗುವುದೆಂದು ತಿಳಿದಿದ್ದರೆ ಮುನಿಯನ ಕೋಣ ದುಡುಕುತ್ತಿತ್ತೆ? ಹೇಗೆ ಹೇಳುವುದು? ಇದು ಸಾಯುವ ಕೋಣಕ್ಕೇ ತಿಳಿಯದಿರಬಹುದು. ಇನ್ನು ಕೊಲ್ಲುವ ಮನುಷ್ಯನ ಮಾತೇನು?

# ಆಚಾರ್ಯರ ಪತ್ನಿ

## ೧

ಮೈಸೂರ ಮಂಡಲದಲ್ಲಿ ಮಿರ್ಲೆ ಭೇರ್ಯದ ಬಳಿಯಲ್ಲಿ ಸಾಲಿಗ್ರಾಮ ಎಂಬ ಊರು ಒಂದುಂಟು. ಇದು ಪೂರ್ವದಲ್ಲಿ ಸಾಕಾದಷ್ಟು ದೊಡ್ಡ ಊರಾಗಿ ಇದ್ದಿರಬೇಕು; ಈಗಲೂ ಬಹಳ ಸಣ್ಣದೇನೂ ಅಲ್ಲ. ಆದರೆ ಹೊಯ್ಸಳರಾಜರು ದ್ವಾರಸಮುದ್ರದಲ್ಲಿ ಆಳುತ್ತಿದ್ದಾಗ ಇದು ಕಂಡ ವೈಭವ ಈಗ ಇರುವುದು ಸಾಧ್ಯವೇ? ಈಗ ನೋಡಿದರೆ ಗ್ರಾಮ ತನ್ನ ಅಂದಿನ ವೈಭವದ ನೆನವಿನಲ್ಲಿ ಮುಳುಗಿ ಇಂದಿನ ಸ್ಥಿತಿಯನ್ನು ಅರಿಯದಿದೆ ಎಂಬಂತೆ ಕಾಣುತ್ತದೆ. ಯಾವ ಪುಣ್ಯಾತ್ಮೆಯ ಹೆಸರ ನೆನವಿಗಾಗಿ ತಾನು ಸಾಲಿಗ್ರಾಮ ಆದೆನೊ ಆ ಸಾಲಿ ಯಾರು ಎಂದು ಯೋಚಿಸುತ್ತ ಊರು ಪಾಠವನ್ನು ಮರೆತ ಹುಡುಗನಂತೆ ಮಂಕಾಗಿ ನಿಂತಿದೆ. ಗ್ರಾಮ, ಅದರ ಬೀದಿಗಳು; ಕೆರೆ, ಬಳಿಯ ಗದ್ದೆ ತೋಟ; ಆಲಯ, ಬಸತಿ; ಅವುಗಳ ಮುಂದಣ ಹೊಂಡ, ಮಂಟಪ: ಎಲ್ಲದರ ಮೇಲೆ ಎಂಟು ನೂರು ವರ್ಷದ ಹಳೆಯ ಬೆಳಕೊಂದು ಮೆದುವಾಗಿ ಮಲಗಿದೆ. ಇಂಥ ಸ್ಥಳದಲ್ಲಿ ಕಾಲ ಇನ್ನೆಲ್ಲ ಹಿರಿಮೆಯನ್ನು ಮರೆಯಿಸುತ್ತದೆ; ಅದಕ್ಕೆ ಪ್ರತಿಯಾಗಿ ತನ್ನ ದೊಂದು ಮಹಿಮೆಯನ್ನು ಪಾವುಡದಂತೆ ಹೊದಿಸುತ್ತದೆ.

ಎಂಟು ನೂರು ವರ್ಷದ ಹಿಂದೆ ವಿಶಿಷ್ಟಾದ್ವೈತ ಮತಸ್ಥಾಪಕರಾದ ರಾಮಾನುಜಾಚಾರ್ಯರು ಈ ಊರಿನಲ್ಲಿ ಕೆಲವು ವರ್ಷ ಅಜ್ಞಾತವಾಗಿ ವಾಸಮಾಡಿದರು. ಆಚಾರ್ಯರು ಹುಟ್ಟಿದ್ದು ಪೆರುಂಬುದೂರಲ್ಲಿ, ಬೆಳೆದದ್ದು ಕಾಂಚೀಪುರದಲ್ಲಿ. ಯತಿಯಾಗಿ ವೈಷ್ಣವ ಧರ್ಮದ ಪ್ರತಿಪಾದಕರಾದದ್ದು ಶ್ರೀರಂಗದಲ್ಲಿ. ಆಗದವರು ಜೀವ ತೆಗೆದಾರೆಂದು ಕಂಡಾಗ ಶಿಷ್ಯರ ಬಲವಂತದಿಂದ ತಲೆತಪ್ಪಿಸಿಕೊಂಡು ಬಂದು ಬಾಳಿದ್ದು ಹೊಯ್ಸಳ ನಾಡಿನಲ್ಲಿ. ಹೊಯ್ಸಳ ನಾಡು ಪುಣ್ಯಭೂಮಿ. ಉತ್ತರದ ದೇಶದಲ್ಲಿ ಕ್ಷಾಮ ಅಡಸಿದಾಗ ಶ್ರಮಣರ ತಂಡವೊಂದು ಇಲ್ಲಿಗೆ ಬಂದು ಇದರ ಸಿರಿಮಡಿಲ ಆಶ್ರಯದಲ್ಲಿ ಉಸಿರುಳಿಸಿಕೊಂಡು ಬೆಳೆಯಿತು. ದಕ್ಷಿಣ ದೇಶದಲ್ಲಿ ಅರಸು ಕ್ರೂರನಾದಾಗ ಅಲ್ಲಿಯ ಧರ್ಮ ಸೇವಕರು, ತಂದೆ

ಕೋಪಿಸಿದಾಗ ಚಿಕ್ಕಪ್ಪನ ಹಿಂದೆ ಅವಿತುಕೊಳ್ಳುವ ಮಕ್ಕಳಂತೆ, ಇಲ್ಲಿ ಬಂದು ಈ ನಾಡ ನೆಳಲಲ್ಲಿ ಬಾಳನ್ನು ಸಾಗಿಸಿದರು. ಆಚಾರ್ಯರು ಪೂಜಿಸಿದ ನರಸಿಹ್ಮಮೂರ್ತಿ ಈಗಲೂ ಇಲ್ಲಿ ದೇವಸ್ಥಾನದಲ್ಲಿ ಭಕ್ತರಿಗೆ ಸೇವೆಕೊಡುತ್ತ ಬಿಜಮಾಡಿದೆ. ದೇವಾಲಯದ ಒಂದು ಮಂದಿರದಲ್ಲಿ ಆಚಾರ್ಯರ ಮೂರ್ತಿಯೊಂದು ಅವರೇ ಪ್ರತ್ಯಕ್ಷ ಕುಳಿತಿರುವರೊ ಎಂಬ ಭ್ರಮೆಯನ್ನುಂಟುಮಾಡುತ್ತ ಮಂಡಿಸಿ ಇದೆ. ಆಲಯದ ಮುಂದೆ ಒಂದು ಕೊಳ, ಒಂದು ಹೊಂಡ ಇವೆ. ಇದರಲ್ಲಿ ಆಚಾರ್ಯರು ಕೈಕಾಲು ತೊಳೆದುಕೊಳ್ಳುತ್ತಿದ್ದರಂತೆ, ಇಲ್ಲಿ ಇಳಿದು ಸ್ನಾನಮಾಡುತ್ತಿದ್ದರಂತೆ. ಜನರು ಈ ಸ್ಥಳಗಳನ್ನು ತೋರಿಸುತ್ತಾರೆ. ನಮ್ಮಂಥವರು ಈ ಮಾತುಗಳನ್ನು ಕೇಳುತ್ತ ಆಲಯವನ್ನು ನೋಡುತ್ತ ಊರ ವಿಷಯವನ್ನು ನೆನೆದರೆ ಕಾಲಚಕ್ರದಲ್ಲಿ ಎಂಟು ಶತಮಾನ ಹಿಂದಕ್ಕೆ ಹರಿದು ಹೊಯ್ಸಳರ ಕಾಲದ ಬಾಳುವೆ ಎದುರುಬಂದಂತೆ ಆಗುತ್ತದೆ. ಅಲ್ಲಿ ನೋಡಿ, ಕೊಳದಲ್ಲಿ ಯತಿಯೊಬ್ಬನು ಇಳಿದಿದಾನೆ. ಅವನೇ ರಾಮಾನುಜ.

ಹತ್ತು ವರ್ಷದ ಹಿಂದೆ ಒಮ್ಮೆ ಸಾಲಿಗ್ರಾಮಕ್ಕೆ ಹೋದಾಗ ನಾನು ದೇವಾಲಯದ ಬಳಿಯಲ್ಲಿ ಸುಳಿಯುತ್ತ ಆಚಾರ್ಯರ ಕತೆಯನ್ನು ನೆನೆದೆನು. ಅದು ಬಹು ಸೊಗಸಾದ ಚರಿತ್ರೆ. ಬಡತನದಲ್ಲಿ ಹುಟ್ಟಿ ವಿದ್ಯೆಯಲ್ಲಿ ಬುದ್ಧಿವಂತನೆನ್ನಿಸಿಕೊಂಡು ಐವರು ಗುರುಗಳಿಂದ ಭಾಗವತಧರ್ಮವನ್ನು ತಿಳಿದು ಆಚಾರ್ಯರು ಆ ಮತದ ಪ್ರತಿಷ್ಠಾಪಕರಾದರು. ಅದಕ್ಕೆ ರಾಜರ ಮನ್ನಣೆಯನ್ನು ಗಳಿಸಿದರು; ಅದರಿಂದ ಲಕ್ಷಾಂತರ ಜೀವಿಗಳನ್ನು ಉದ್ಧಾರ ಮಾಡಿದರು. ಹಾಗೆಯೇ ಯೋಚಿಸುತ್ತ ನಾನು ಆ ಬಾಳ ವಿಷಯದಲ್ಲಿ ಬಹು ಹೆಮ್ಮೆಗೊಂಡೆನು. ಆದರೆ ಒಂದು ವಿಷಯದ ಬಳಿ ಬಂದು ನನ್ನ ಮನಸ್ಸು ಹಾಗೆಯೇ ನಿಂತಿತು. ಆಚಾರ್ಯರು ಸಂನ್ಯಾಸ ತೆಗೆದುಕೊಳ್ಳಬೇಕಾದರೆ ಅವರ ಹೆಂಡತಿಯ ಅವಿವೇಕ ಕಾರಣವಾಯಿತೆಂದು ಇತಿಹಾಸ ಹೇಳುತ್ತದೆ. ಇವರು ತನ್ನ ಗುರು ಒಬ್ಬನಿಗೆ ಮರ್ಯಾದೆ ಮಾಡಬೇಕೆಂದು ನೋಡಿದರು. ಆ ಹೆಂಡತಿ ಅವನಿಗೆ ಬಡಿಸಿ ಆತನು ಕಡಮೆಯ ಜಾತಿಯವನೆಂಬ ಕಾರಣದಿಂದ ಸ್ನಾನ ಮಾಡಿದರು. ಇವರು ಆ ಗುರುವಿನ ಮನೆಯವರಿಗೆ ಬಹು ಮರ್ಯಾದೆ ತೋರಿಸುತ್ತಿದ್ದರು. ಆಕೆ ಬಾವಿಯ

ಬಳಿ ಏನೋ ಜಗಳ ಬಂದಾಗ ಆ ಮನೆಯವರನ್ನು ಬೈದು ಮಾತನಾಡಿದರು. ಇವರು ಒಂದು ದಿನ ಹೊತ್ತುಮಾಡಿಕೊಂಡು ಮನೆಗೆ ಬಂದರು: ಆಕೆ ಹಾಸಿಗೆಯಲ್ಲಿ ಮಲಗಿ ನಿದ್ರಿಸುತ್ತಿದ್ದರು. ಈ ಕಾರಣಗಳಿಂದ ಆಚಾರ್ಯರು ಸಂನ್ಯಾಸ ತೆಗೆದುಕೊಂಡರಂತೆ. ಈ ಮಾತಿಗೆ ನನ್ನ ಮನಸ್ಸು ಹೀಗೆಂದಿತು. "ಆಚಾರ್ಯರು ಮಾಡಿದ್ದು ಸರಿ ಇರಬಹುದು. ಆದರೆ ಆ ಹೆಂಗಸು ಮಾಡಿದ ತಪ್ಪಿಗೆ ಶಿಕ್ಷೆ ಹೆಚ್ಚಲ್ಲವೆ? ಇವರಿಗೆ ತಮ್ಮ ವಿದ್ಯೆ ದೊಡ್ಡದು, ತಮ್ಮ ಧರ್ಮ ಸೇವೆ ದೊಡ್ಡದು. ಆದರೆ ಅರಿಯದ ಹೆಂಗಸಿಗೆ ಇನ್ನು ಸ್ವಲ್ಪ ತಾಳ್ಮೆಯಿಂದ ಬುದ್ಧಿ ಹೇಳಬಾರದಿತ್ತೆ?" ಆಕೆಯ ಸ್ವಭಾವ ಹೇಗೋ! ಸಂಸಾರವೇ ಹೀಗೆ. ಗಂಡ ಸಂನ್ಯಾಸಿಯಾಗಲು ತಾಯ ಮನೆಗೆ ಹೋದ ಆ ಹೆಂಡತಿಯ ಪಾಡು ಆಮೇಲೆ ಏನಾಯಿತು?....ಹೀಗೆ ಯೋಚಿಸುತ್ತ ನಾನು ಅಲ್ಲಿ ಒಂದು ಮರದ ಕೆಳಗೆ ಕುಳಿತೆನು. ಒಂದು ಕೊಕ್ಕರೆ ಹಾರಿ ಬಂದು ಹೊಂಡದ ಒಂದು ಕೊನೆಯಲ್ಲಿ ಕುಳಿತಿತು. ಅದನ್ನು ನೋಡುತ್ತಿರಲು ನನ್ನ ಮನಸ್ಸಿನಲ್ಲಿ ಒಂದು ಸಂಗತಿ ತಾನೇ ಕತೆ ಕಟ್ಟಿಕೊಂಡಿತು.

೨

ಚೋಳ ದೇಶವನ್ನು ಬಿಟ್ಟು ರಾಮಾನುಜಾಚಾರ್ಯರು ಸತ್ಯಮಂಗಲದ ಮಾರ್ಗವಾಗಿ ಮೈಸೂರ ಮೆಟ್ಟುಭೂಮಿಯನ್ನು ಸೇರಿದರು. ಅವರು ಬಂದ ಸ್ಥಿತಿಯಲ್ಲಿ ಹಗೆಗಳು ಹಿಂದೆ ಅಟ್ಟಿಕೊಂಡು ಬರುತ್ತಿದಾರೋ ಎಂದೇ ಅವರ ಶಿಷ್ಯರಿಗೆ ಸಂದೇಹ. ಆಚಾರ್ಯರು ಕಾವಿಯ ಬಟ್ಟೆಯನ್ನು ಹಾಕಿಕೊಳ್ಳುವುದಕ್ಕೂ ಆ ಶಿಷ್ಯರು ಒಪ್ಪಲಿಲ್ಲ. ಶಿಷ್ಯನೊಬ್ಬನು ಕಾವಿಯಲ್ಲಿ ಇರುತ್ತ ಆಚಾರ್ಯರು ಬಿಳಿಯ ಬಟ್ಟೆಯನ್ನು ಧರಿಸುವಂತೆ ಮಾಡಿದ್ದನು. ಹಗೆಯಾದ ಅರಸನು ಕೆಲವು ದಿನದ ಹಿಂದೆ ಹೇಳಿಕಳುಹಿಸಿದಾಗ ಶಿಷ್ಯನೊಬ್ಬನು ತಾನು ರಾಮಾನುಜನ ವೇಷದಲ್ಲಿ ಅವನ ಬಳಿಗೆ ಹೋಗಿದ್ದನು. ಉಳಿದ ಶಿಷ್ಯರು ಗುರುವನ್ನು ಬಡಗಣ ನಾಡಿಗೆ ಸೆಳೆದು ತಂದಿದ್ದರು. ಪ್ರಯಾಣದಲ್ಲಿ ಹಗೆ ಬಂದು ಹಿಡಿದಾನೆಂಬ ಶಂಕೆ. ಈಗ ಇನ್ನೊಬ್ಬ ಶಿಷ್ಯನು ಗುರುವಿನ ವೇಷದಿಂದ ನಡೆಯುತ್ತ ಹಾಗೆ ಯಾರಾದರೂ ಬಂದರೆ ತಾನು ರಾಮಾನುಜನೆಂದು ಅವನಿಗೆ ಸಿಕ್ಕತಕ್ಕದ್ದು ಎಂದು ನಿರ್ಧರಿಸಿಕೊಂಡಿದ್ದನು. ಹೊಯ್ಸಳ

ನಾಡಿಗೆ ಬಂದು ಈ ಶಿಷ್ಯರು ಯತಿಯ ಜೀವನಕ್ಕೆ ಅನುಕೂಲವಾದ ಸ್ಥಳವನ್ನು ಹುಡುಕುತ್ತ ಸಾಲಿಗ್ರಾಮವನ್ನು ಕಂಡು ಅಲ್ಲಿ ಗುರುವನ್ನು ನಿಲ್ಲಿಸಿದರು. ತಾವು ಸಂನ್ಯಾಸಿ ವೇಷದಲ್ಲಿ ದೂರದ ಕೆಲವು ಗ್ರಾಮಗಳಲ್ಲಿ ಇದ್ದುಕೊಂಡು ದಿನಗಳನ್ನು ಕಳೆಯುತ್ತ ಆಗಾಗ ಬಂದು ಗುರುವನ್ನು ನೋಡಿ ಕೊಂಡು ಹಿಂದಕ್ಕೆ ಹೋಗುತ್ತಿದ್ದರು. ಮೊದಲು ಹದಿನೈದು ದಿನ ಒಬ್ಬನು ಸಾಲಿಗ್ರಾಮದಲ್ಲಿ ಗುರುವಿನ ಜೊತೆಯಲ್ಲಿದ್ದು ಸ್ಥಳದ ಗೃಹಸ್ಥನೊಬ್ಬನು ಯತಿಯಲ್ಲಿ ಭಕ್ತಿಯನ್ನು ತೋರಿದ್ದರಿಂದ ಗುರುವಿನ ಸೇವೆಯನ್ನು ಅವನಿಗೆ ಒಪ್ಪಿಸಿ ತಾನೂ ಇತರರಂತೆ ಬೇರೆ ಒಂದು ಊರನ್ನು ಸೇರಿದನು. ಒಂದು ವರ್ಷದ ಕಾಲ ದಕ್ಷಿಣ ದೇಶದಿಂದ ಹಗೆಗಳು ಹಿಂದಟ್ಟಿಬಂದದ್ದು ಕಾಣಲಿಲ್ಲ. ಇದರಿಂದ ಆಚಾರ್ಯರ ಶಿಷ್ಯರಿಗೆ ಈ ರೀತಿಯ ಶಂಕೆ ಕಡಮೆಯಾಯಿತು. ಇಬ್ಬರು ಶಿಷ್ಯರು ತೊಂಡನೂರಿನಲ್ಲಿರುತ್ತ ಉಳಿದವರು ಊರಿಗೆ ಸಾರಿದರು. ಅಲ್ಲಿಯ ಸ್ಥಿತಿಗತಿಗಳ ವಿಷಯವನ್ನು ಆಗಾಗ ಇಲ್ಲಿಗೆ ತಿಳಿಸುತ್ತಿರಬೇಕೆಂದು ಏರ್ಪಾಡಾಯಿತು.

ಸಾಲಿಗ್ರಾಮದ ಸ್ಥಳವೊಂದಿಗನಾಗಿ ಆಚಾರ್ಯರ ಸೇವೆಗೆ ನಿಂತ ಭಕ್ತನು ಇತಿಹಾಸದಲ್ಲಿ ವಡಗನಂಬಿ ಎಂದರೆ ಉತ್ತರ ಪ್ರಾಂತದ ಭಕ್ತ ಎಂದು ಹೆಸರಾಗಿದಾನೆ. ವಡಗನಂಬಿ ಭಾಗವತ ಸಂಪ್ರದಾಯದ ಬ್ರಾಹ್ಮಣ. ಆಗಿನ ಕಾಲದ ಪದ್ಧತಿಯಂತೆ ಸಂಸ್ಕೃತವನ್ನು ಅಭ್ಯಾಸ ಮಾಡಿ ವೇದಾಂತ ವನ್ನು ಕಲಿತು ಕಾಂಚೀಪುರ ಶ್ರೀರಂಗ ಮುಂತಾದಲ್ಲಿ ಹೋಗಿಬಂದು ತಕ್ಕಷ್ಟು ಕೃತವಿದ್ಯನಾಗಿದ್ದನು. ಊರ ಮುಂದಣ ನರಸಿಹ್ಮಸ್ವಾಮಿಯ ಸೇವೆ ಅವನ ಮನೆತನಕ್ಕೆ ಸೇರಿದ್ದು. ಯಾರೋ ಸಂನ್ಯಾಸಿ ಬಂದಿರುವುದು ಕಂಡಾಗ ಅವನು ಸಹಜವಾಗಿ ಅವನನ್ನು ಆರಾಧಿಸಲು ಅಪೇಕ್ಷಿಸಿದನು. ಯತಿಗೆ ವಯಸ್ಸಾಗಿದೆಯೆಂದು ಅವನಿಗೆ ಕಂಡಿತು. ಆದರೆ ಮುಖದಲ್ಲಿ ನಡತೆಯಲ್ಲಿ ವಯಸ್ಸು ಕಾಣುತ್ತಿರಲಿಲ್ಲ. ದೇಹದಲ್ಲಿ ವಾರ್ಧಿಕ್ಯ ಕಾಣ ದಿದ್ದರೂ ಜ್ಞಾನ ಮಾತ್ರ ಒಂದು ಜನ್ಮದಲ್ಲಿ ಸಂಪಾದಿಸಿದ ಜ್ಞಾನ ಎಂಬಂತೆ ತೋರಲಿಲ್ಲ. ವಡಗನಂಬಿ ಮೂರು ದಿನ ಗುರುವನ್ನು ಆಶ್ರಯಿಸಿ ಭಾಗವತ ಸಂಪ್ರದಾಯದವರೆಂದು ಕಂಡದ್ದರಿಂದ ತನ್ನನ್ನು ಶಿಷ್ಯನಾಗಿ ತೆಗೆದುಕೊಳ್ಳ ಬೇಕೆಂದು ಬೇಡಿದನು. ಗುರು ಆಗಬಹುದೆಂದರು. ಅವರ ಪರಿಚಯ

ವನ್ನು ತಿಳಿಯಲು ಇವನು ಪ್ರಯತ್ನಮಾಡಿದನು. ಗುರುವನ್ನು ಕೇಳು ವಂತಿಲ್ಲ. ಅವರ ಶಿಷ್ಯನು ಹೇಳಲಿಲ್ಲ. ಭಕ್ತನು ಇದರ ಮಾತನ್ನು ಮುಂದಕ್ಕೆ ಬೆಳೆಸಲಿಲ್ಲ. ಗುರುವಿನ ಪರಿಚಯ ತಿಳಿದು ಆಗಬೇಕಾದದ್ದೇನು? ಹಿರಿಯರಾಗಿದಾರೆ ಇಷ್ಟು ಸಾಕು ಎಂದು ಸುಮ್ಮನಾದನು. ಭಕ್ತನ ಈ ಅಸಾಧಾರಣ ಸೌಜನ್ಯದಿಂದ ಆಚಾರ್ಯರು ಅತ್ಯಂತ ಸಂತುಷ್ಟ ರಾದರು; ತೆಂಕಣಿಂದ ಬಂದಿದ್ದ ಶಿಷ್ಯನು ಮುಗ್ಧನಾದನು. ಈ ಸೌಜನ್ಯದ ಕಾರಣದಿಂದಲೇ ಆಚಾರ್ಯರ ಸೇವೆ ಅಷ್ಟು ಶೀಘ್ರವಾಗಿ ತೀರಾ ಪಡಗ ನಂಬಿಯ ಪಾಲಿಗೆ ಬಂದಿತು.

ಪಡಗನಂಬಿಗೆ ಗುರುವಿನ ಬಾಳನ್ನು ನೋಡಿ ದಿನದಿನಕ್ಕೆ ಆಶ್ಚರ್ಯ ಬೆಳೆಯುತಿತ್ತು. ಯಾವುದೋ ಮಾತಿನಲ್ಲಿ ಗುರು ತನಗೆ ಎಂಭತ್ತು ವಯಸ್ಸು ಎಂದು ಹೇಳಿದರು. ಎಂಭತ್ತು ವಯಸ್ಸಿನ ಮನುಷ್ಯ ಹೀಗೆ ಇರಬಹುದೇ ಎನ್ನುವುದೇ ಒಂದು ಆಶ್ಚರ್ಯ. ಭಕ್ತನು ಹಲವು ದಿನವನ್ನು ಪೂರ್ಣವಾಗಿ ಗುರುವಿನ ಬಳಿಯಲ್ಲೇ ಕಳೆದನು. ರಾತ್ರಿ ಗುರು ಯಾವ ಹೊತ್ತಿಗೆ ನಿದ್ರೆಹೋಗುತ್ತಲಿದ್ದರೆನ್ನುವುದು ಈ ಶಿಷ್ಯನಿಗೆ ತಿಳಿದದ್ದಿಲ್ಲ. ಉದಯದಲ್ಲಿ ತಾನು ಏಳುವ ವೇಳೆಗೆ ಗುರು ಎದ್ದಿರುವನು. ಆತನು ಬಹುಪಾಲು ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳುವನು. ಭಕ್ತನು ಒಂದು ಹೊತ್ತು ಅಡಿಗೆಮಾಡಿಕೊಟ್ಟ ಊಟದ ತೆರಳೆಯನ್ನು ಮಧ್ಯಾಹ್ನ ದೇವರೆದುರಿಗೆ ಭಿಕ್ಷವಾಗಿ ಸ್ವೀಕರಿಸಿ ಉಂಡು ರಾತ್ರಿ ಒಂದು ಪಾತ್ರೆಯಲ್ಲಿ ಕೊಟ್ಟ ಹಾಲಿನಿಂದ ತೃಪ್ತನಾಗಿ ಸಂನ್ಯಾಸಿ ಸದಾ ಇಲ್ಲ ಧ್ಯಾನದಲ್ಲಿ, ಇಲ್ಲ ಭಗವತ್ಕೈಂಕರ್ಯದಲ್ಲಿ, ಇಲ್ಲ ತಾನು ಕಲಿತಿದ್ದ ವಿಷಯವನ್ನು ಬಾಯಲ್ಲಿ ಹೇಳುತ್ತ ತಿರುವಿಹಾಕುವುದರಲ್ಲಿ, ಉದ್ಯುಕ್ತನಾಗಿರುವನು. ಭಕ್ತನಿಗೆ ಸುಮಾರು ನಾಲ್ವತ್ತು ವರ್ಷ ಇರಬಹುದು. ತನ್ನ ಪುಣ್ಯದಿಂದ ಇಂಥ ಗುರು ಸಿಕ್ಕಿದನೆಂದು ಅವನಿಗೆ ಸಂತೋಷ. ಅವನಿಗೆ ಹೆಂಡತಿ, ಆರು ವರ್ಷದ ಒಬ್ಬ ಮಗ, ಇದ್ದರು. ಅವನು ತಾನು ಸೇವೆ ಮಾಡುವುದಲ್ಲದೆ ತನ್ನ ಹೆಂಡತಿಯೂ ಮಗನೂ ಗುರುವಿನ ಉಪಚಾರಕ್ಕೆ ನಿಲ್ಲುವುದಕ್ಕೆ ಅಪ್ಪಣೆಯನ್ನು ಬೇಡಿದನು. ಶ್ಯಾಮಲಾಂಬೆಯೂ ರಾಮಚಂದ್ರನೂ ಗುರು ವಿನ ಅಚ್ಚಿನ್ನ ಭಕ್ತರಾದರು. ಹೀಗೆ ಹತ್ತಿರ ಹತ್ತಿರ ಎರಡು ವರ್ಷ ಕಳೆಯಿತು.

ಎರಡು ವರ್ಷದವರೆಗೆ ವಡಗನಂಬಿಗೂ ಶ್ಯಾಮುಲಾಂಬೆಗೂ ತಾವು ಸೇವೆ ಮಾಡುತ್ತಿದ್ದ ವ್ಯಕ್ತಿ ರಾಮಾನುಜಾಚಾರ್ಯರೆನ್ನುವುದು ತಿಳಿಯದೆ ಹೋಗಲಿಲ್ಲ. ಶುಶ್ರೂಷೆ ಆರಂಭವಾದ ಕೊಂಚ ದಿನದಲ್ಲೇ ಆಚಾರ್ಯನು ತನ್ನ ಶಿಷ್ಯರನ್ನು ಕುರಿತು, ಈ ಜನ್ಮದಲ್ಲಿ ಹೀಗೆ ನನ್ನನ್ನು ಸಾಕುತ್ತಿರುವ ಇವರು ಹಿಂದೆ ಒಂದು ಜನ್ಮದಲ್ಲಿ ನನ್ನ ಮಗಳು ಅಳಿಯ ಆಗಿದ್ದಿರಬೇಕು, ಅವರಿಗೆ ಎಲ್ಲವನ್ನೂ ಹೇಳಿ, ಎಂದು ಅಪ್ಪಣೆಮಾಡಿದನು. ಶಿಷ್ಯರು ಆಚಾರ್ಯರ ಚರಿತ್ರೆಯನ್ನು ಭಕ್ತನಿಗೂ ಅವರ ಪತ್ನಿಗೂ ರಹಸ್ಯವಾಗಿ ತಿಳಿಸಿದರು. ಆಚಾರ್ಯರು ಸಂನ್ಯಾಸ ತೆಗೆದುಕೊಂಡ ಸಂದರ್ಭವನ್ನು ಹೇಳುತ್ತ ಸಂಸಾರದಲ್ಲಿ ಶ್ಯಾಮುಲಾಂಬೆಯಂತೆ ಎಲ್ಲ ಹೆಂಗಸರೂ ಗಂಡನ ಮನಸ್ಸನ್ನು ಅನುಸರಿಸಿ ನಡೆಯುವುದಿಲ್ಲ, ಆಚಾರ್ಯರ ಹೆಂಡತಿ ಅವರ ಮನಸ್ಸನ್ನು ತಿಳಿದುಕೊಳ್ಳಲಿಲ್ಲ, ತಿಳಿಯಬೇಕೆಂದು ಅಪೇಕ್ಷಿಸಲಿಲ್ಲ, ಯತ್ನ ಮಾಡಲಿಲ್ಲ, ಆಚಾರ್ಯರು ಒಂದು ರೀತಿಯಲ್ಲಿ ನಡೆಯಬೇಕೆಂದರೆ ತಾವು ಒಂದು ರೀತಿಯಲ್ಲಿ ನಡೆದು ಅವರನ್ನು ಬೇಸರಗೊಳಿಸಿದರು, ಎಂದು ಆ ಕಥೆಯನ್ನೆಲ್ಲ ವಿಸ್ತರಿಸಿದರು. ಹೇಗಾದರೂ ಆಗಲಿ, ಆಕೆ ಹಾಗೆ ನಡೆದುಕೊಂಡದ್ದರಿಂದ ಆಚಾರ್ಯರು ಸಂನ್ಯಾಸ ತೆಗೆದುಕೊಳ್ಳುವುದಾಯಿತು, ಅವರ ಆಯುಸ್ಸು ಸಂಪೂರ್ಣವಾಗಿ ಧರ್ಮಕ್ಕೆ ಧಾರೆ ಎರೆಯಿತು, ಎಂದರು. ತಮ್ಮ ಗುರು ಎಂಥ ಮಹನೀಯನೆಂದು ಮೊದಲೇ ತಿಳಿದಿದ್ದ ವಡಗನಂಬಿ ಶ್ಯಾಮುಲಾಂಬೆಯರಿಗೆ ಆಚಾರ್ಯರಲ್ಲಿ ಪ್ರೀತಿ ಗೌರವ ಮತ್ತಷ್ಟು ಹೆಚ್ಚಿತು. ಅವರ ಸೇವೆಯ ಶ್ರದ್ಧೆ ಎಷ್ಟು ಎಂದು ಹೇಳತೀರದೆ ಹೋಯಿತು.

ಆಚಾರ್ಯರು ಹೀಗೆ ಹತ್ತಿರ ಹತ್ತಿರ ಎರಡು ವರ್ಷ ಇವರಿಂದ ಸೇವೆಯನ್ನು ಪಡೆದಿದಾರೆ. ಒಂದು ದಿನ ಹೊಂಡದಲ್ಲಿ ಮಧ್ಯಾಹ್ನ ಸ್ನಾನ ಮಾಡುತ್ತಿದಾರೆ. ಹೊಂಡದ ಒಂದು ಕಡೆಗೆ ಒಂದು ಅರಳಿಯ ಮರ. ಆಚಾರ್ಯರು ನೀರಿನಲ್ಲಿ ಮುಳುಗಿ ಎದ್ದಾಗ ಸ್ನಾನಮಂತ್ರವನ್ನು ಹೇಳುತ್ತ ಅರಳಿಯ ಮರದ ಕಡೆಗೆ ನೋಡಿದರು. ಅಲ್ಲಿ ಹೆಂಗಸು ಒಬ್ಬಾಕೆ ಮರದ ಹಿಂದೆ ನಿಂತು ಇವರನ್ನು ಇಣಿಕಿ ನೋಡುತ್ತಿದ್ದಳೆಂದೂ ಇವರ ನೋಟ ಆ ಕಡೆ ಹರಿದೊಡನೆ ತಟ್ಟನೆ ಮುಖಮರೆಸಿಕೊಂಡು ಕಾಣದೆ ಆದಳೆಂದೂ ಅವರಿಗೆ ತೋರಿತು. ಯಾವ ಹೆಂಗಸಾದರೂ ಹೀಗೆ ಏಕೆ ಮಾಡಬಹು

ದೆಂದು ಆಚಾರ್ಯರಿಗೆ ತೋರಲಿಲ್ಲ. ಮುಖವೂ ಸಾಕಾದಷ್ಟು ಕಾಣಲಿಲ್ಲ. ಯಾರೋ ಪಾಪ, ಹೊಂಡಕ್ಕೆ ಬಂದ ಹೆಂಗಸಿರಬೇಕು, ತನ್ನ ಸ್ನಾನ ಮುಗಿದ ಮೇಲೆ ಆಕೆ ಬಟ್ಟೆಬರೆ ಒಗೆಯಬೇಕೋ, ನೀರು ತೆಗೆದುಕೊಂಡು ಹೋಗಬೇಕೋ, ಕಾದಿದಾರೆ ಎಂದುಕೊಂಡರು. ಆದರೆ ಹೀಗೆ ಮಾಡು ವವರು ಬೇರೆಯ ಊರವರಿರಬೇಕು. ಸಾಲಿಗ್ರಾಮದ ಜನರು ಆಚಾರ್ಯರ ವಿಷಯದಲ್ಲಿ ಈ ರೀತಿಯ ಸಂಕೋಚದಿಂದ ನಡೆಯುತ್ತಿರಲಿಲ್ಲ. ಅವರ ಹೋಗುಬರವು ಊರಿಗೆ ವಾಡಿಕೆಯಾಗಿಬಿಟ್ಟಿತ್ತು. ಆಚಾರ್ಯರು ಸ್ನಾನ ಮುಗಿಸಿಕೊಂಡು ದೇವಾಲಯದೊಳಕ್ಕೆ ಹೋದರು.

ಅಂದಿನ ರಾತ್ರಿ ಊರ ಕ್ಷೇಮ ಸಮಾಚಾರವನ್ನು ಗುರುಗಳಿಗೆ ಹೇಳುತ್ತ ಭಕ್ತನು ಆ ದಿನ ದಕ್ಷಿಣ ದೇಶದ ಹೆಂಗಸೊಬ್ಬರು ಒಬ್ಬ ವೃದ್ಧ ಸೇವಕಿಯೊಡನೆ ಬಂದಿದ್ದರೆಂದು ತಿಳಿಸಿದನು. ಯಾರೆಂದು ವಿಚಾರಿಸಲು ಅವರಲ್ಲಿ ಕಿರಿಯವರು, ತನ್ನ ಪತಿಗೆ ಒಂದು ದೋಷ ಇರುವ ಕಾರಣದಿಂದ ಅದರ ನಿವಾರಣೆಗಾಗಿ ತಾನು ಉತ್ತರ ದೇಶಕ್ಕೆ ಯಾತ್ರೆ ಹೊರಟಿರುವೆ ನೆಂದೂ ಸೇವಕಿಗೆ ಮೈಯಲ್ಲಿ ಚೆನ್ನಾಗಿಲ್ಲದೆ ಇರುವುದರಿಂದ ಎರಡು ದಿನ ಇಲ್ಲಿ ನಿಲ್ಲಬೇಕಾಗಿದೆಯೆಂದೂ ಆದಕಾರಣ ದಯಮಾಡಿ ತಾವು ಅಲ್ಲಿರು ವುದಕ್ಕೆ ಅವಕಾಶ ಕೊಡಬೇಕೆಂದೂ ಕೇಳಿಕೊಂಡರಂತೆ. ಶ್ಯಾಮಲಾಂಬೆ ಆಗಬಹುದು ಎಂದು ತನ್ನ ಮನೆಯ ತೊಟ್ಟಿಯಲ್ಲಿ ಒಂದು ಕಡೆ ಸ್ಥಳ ಮಾಡಿಕೊಟ್ಟು ಪಾತ್ರೆ ಪದಾರ್ಥವನ್ನು ಒದಗಿಸಿದ್ದಳು. ಆಚಾರ್ಯರು ಈ ಮಾತನ್ನು ಸಾಮಾನ್ಯವಾಗಿ ಉಳಿದ ಮಾತನ್ನು ಕೇಳುವಂತೆ ಕೇಳಿದರು. ಆಮೇಲೆ ಇವರು ವೇದಾಂತದ ಚರ್ಚೆಯನ್ನು ಮೊದಲು ಮಾಡಿದರು.

ತೊಂಡನೂರಿನಲ್ಲಿ ಶಿಷ್ಯರಿಬ್ಬರಿಗೂ ಜ್ವರ ಬಂದಿದೆಯೆಂದು ಗುರುಗಳಿಗೆ ಇವರ ಮಾರನೆಯ ದಿನ ಸುದ್ದಿ ಬಂದಿತು. ಆ ವರ್ಷ ದೇಶದಲ್ಲಿ ಯಾವುದೋ ರೀತಿಯ ಜ್ವರ ಅತಿಯಾಗಿ ಹರಡಿತ್ತು. ಗುರು ಭಕ್ತನೊಡನೆ ತೊಂಡನೂರಿಗೆ ಹೋಗಿ ಶಿಷ್ಯರನ್ನು ನೋಡಿಕೊಂಡು ಬಂದರು. ಬಂದ ದಿನವೇ ಆಚಾರ್ಯರಿಗೆ ಜ್ವರ ಬಂದಿತು. ಜ್ವರ ಬಂದರೂ ಆಚಾರ್ಯರು ತಮ್ಮ ಜೀವನದ ನಿತ್ಯಕ್ರಮವನ್ನು ಬೇರೆ ಮಾಡಲಿಲ್ಲ. ಮೂರು ಹೊತ್ತು ಹೊಂಡದಲ್ಲಿ ಸ್ನಾನ, ಎಂದಿನಂತೆ ಒಂದು ಹೊತ್ತು ಆಹಾರ, ಒಂದು

ಹೊತ್ತಿನ ಹಾಲು, ಹೀಗೆ ಮೂರು ದಿನ ಮಾಡಿದರು. ವೈ ಇದನ್ನು ಕೇಳಲಿಲ್ಲ. ಜ್ವರ ಅತಿಯಾಯಿತು. ಭಕ್ತನೂ ಶ್ಯಾಮಲಾಂಬೆಯೂ ಕ್ಷಣ ಬಿಡದೆ ಗುರುವಿನ ಬಳಿ ಕುಳಿತು ಶುಶ್ರೂಷೆಯಲ್ಲಿ ತೊಡಗಿದರು.

ಜ್ವರದ ಬಾಧೆಯಲ್ಲಿ ಬಹು ದೊಡ್ಡಭಾಗ ವೈ ಕೈ ಕಾಲಿನ ಚಳುಕು. ಆಚಾರ್ಯರು ಗೋಡೆಗೆ ಒರಗಿ ಕುಳಿತು ಕಾಲು ಚಳುಕು ಎಂದಾಗ ಶ್ಯಾಮಲಾಂಬೆ ಕಾಲನ್ನು ಹಿಡಿದು ಔಕುವುದಕ್ಕೆ ಮೊದಲು ಮಾಡಿದಳು. ಗುರು 'ಬೇಡ ತಾಯಿ' ಎಂದು ಕಾಲನ್ನು ಸೆಳೆದುಕೊಂಡರು. ಭಕ್ತನು ನಿಮ್ಮ ಮಗಳು ನಿಮ್ಮ ಅಳಿಯ ನಿಮ್ಮ ಕೈ ಕಾಲು ನೋವಾದಾಗ ಹಿಸುಕಿದರೆ ತಪ್ಪಾಯಿತೆ? ನಮ್ಮ ಜನ್ಮ ಸಾರ್ಥಕ ಆಗಲಿ, ಇದನ್ನು ಅನುಗ್ರಹಿಸಬೇಕು, ಎಂದನು. ಅಂದೆಲ್ಲ ಭಕ್ತನೊ, ಶ್ಯಾಮಲಾಂಬೆಯೊ, ರಾಮಚಂದ್ರನೊ, ಅವರ ಕಾಲನ್ನು ಆಗಾಗ ಔಕುತ್ತಲೇ ಇದ್ದರು.

ಮೂರನೆಯ ದಿನ ಜ್ವರ ಹಾಗೆಯೇ ಇತ್ತು. ಚಳುಕು ಇನ್ನೂ ಹೆಚ್ಚು. ಮನೆಗೆ ಹೋಗಿ ಅಡಿಗೆ ಮಾಡಿ ಬರುವಷ್ಟು ಹೊತ್ತಲ್ಲದೆ, ಉಳಿದ ವೇಳೆಯನ್ನೆಲ್ಲಾ ಶ್ಯಾಮಲಾಂಬೆ ದೇವಾಲಯದಲ್ಲಿ ಕಳೆದಳು ಅವಳ ಗಂಡನು ಗುರುಗಳಿಗೆ ಸ್ವಲ್ಪ ಹಾಲು ಕಾಯಿಸುವುದಕ್ಕಾಗಿ, ತನ್ನ ಸ್ನಾನ ಊಟಕ್ಕಾಗಿ, ಹೊರಗೆ ಹೋದದ್ದೆಷ್ಟೊ ಅಷ್ಟು ಹೊರತು ಉಳಿದ ಹೊತ್ತನ್ನು ದೇವರ ಸನ್ನಿಧಿಯಲ್ಲಿ ಗುರುವಿನ ಪರವಾಗಿ ಪ್ರಾರ್ಥನೆ ಮಾಡುತ್ತ ಕಳೆದನು. ಹಗಲು ಸ್ವಲ್ಪ ಹೊತ್ತು ರಾಮಚಂದ್ರ, ಸ್ವಲ್ಪ ಹೊತ್ತು ಶ್ಯಾಮಲಾಂಬೆ, ಅವರ ಕಾಲನ್ನು ಔಕುತ್ತಿದ್ದರು. ರಾತ್ರಿ ರಾಮಚಂದ್ರ ಔಕುವಂತಿಲ್ಲ. ಸಣ್ಣ ಹುಡುಗ, ತನ್ನ ಪಾಡಿಗೆ ನಿದ್ದೆಹೋದನು. ಶ್ಯಾಮಲಾಂಬೆ ಸ್ವಲ್ಪ ಹೊತ್ತು ಗುರುವಿನ ಹತ್ತಿರ ಕುಳ್ಳಿರುತ್ತ ಸ್ವಲ್ಪ ಹೊತ್ತು ಗರ್ಭಗುಡಿಯ ಹಿಂದುಗಡೆಯ ಅಂಗಳದಲ್ಲಿ ಮಲಗಿರುತ್ತ ಜಾಗರಣೆ ಮಾಡುತ್ತಿದ್ದಳು. ಅರ್ಧರಾತ್ರಿ. ಶ್ಯಾಮಲಾಂಬೆ ಹೀಗೆ ಸ್ವಲ್ಪ ದೂರದಲ್ಲಿ ಮಲಗಿದಾಳೆ. ಅವಳಿಗೆ ನಿದ್ರೆಹತ್ತಿದೆ. ಆಚಾರ್ಯರು ಯಾರು, ಯಾರು ಎಂದು ಕೂಗಿದಂತಾಯಿತು. ಶ್ಯಾಮಲಾಂಬೆ ಇದನ್ನು ಕೇಳಿ ಎದ್ದು ಅವರೆಡೆಗೆ ಬಂದಳು. ಮುಖ್ಯವಾಗಿ ಅವಳಿಗೆ ಗುರುವಿನ ಕಡೆ ದೃಷ್ಟಿ. ಆದರೆ ಅವರ ಹತ್ತಿರಿದ್ದ ಸಣ್ಣ ಒಂದು ಹಣತೆಯ ಮಸಕು ಬೆಳಕಿನಲ್ಲಿ ಹಾಸಿಗೆಯಿಂದ ಯಾರೋ

ನಡೆದುಹೋಗುತ್ತಿರುವಂತೆ ಕಂಡಿತು. ದೀಪವನ್ನು ದೊಡ್ಡದು ಮಾಡಿ ನೋಡುವ ವೇಳೆಗೆ ಅಲ್ಲಿ ಯಾರೂ ಇರಲಿಲ್ಲ. ಶ್ಯಾಮುಲಾಂಬೆಗೆ ಸ್ವಲ್ಪ ಭಯವಾಯಿತು. ಆದರೆ ಗುರುವನ್ನು ವಿಚಾರಿಸಿಕೊಳ್ಳುವುದರಲ್ಲಿ ಅವಳು ಆ ವಿಷಯವನ್ನು ಯೋಚನೆ ಮಾಡಲಾಗಲಿಲ್ಲ. ಅವಳು ಗುರುವನ್ನು 'ಏನಪ್ಪಾಜಿಗಳೆ, ಏನಾಯಿತು?' ಎಂದು ಕೇಳಿದಳು. ಗುರು 'ನೀನೆ ತಾಯಿ' ಎಂದರು. ಶ್ಯಾಮುಲಾಂಬೆ 'ಹೌದು' ಎಂದಳು. ಗುರು ಮತ್ತೇನನ್ನೂ ಹೇಳಲಿಲ್ಲ. ಶ್ಯಾಮುಲಾಂಬೆ ಹಣತೆಯನ್ನು ತೆಗೆದುಕೊಂಡು ದೇವಾಲಯದ ಮುಂಬದಿಗೆ ಹೋಗಿ ನೋಡಿದಳು. ಅಲ್ಲಿ ಯಾರೂ ಕಾಣಲಿಲ್ಲ. ಆದ ವಿಷಯವನ್ನು ಗಂಡನಿಗೆ ತಿಳಿಸಿದಳು. ಅವನು 'ನೀನು ದೂರ ಹೋಗಿ ಮಲಗಿದೆಯೇಕೆ, ಹತ್ತಿರ ಕುಳಿತಿರಬೇಕಾಗಿತ್ತು' ಎಂದನು. ಅವಳು 'ಇದು ಯಾರು ತಾನೇ ಹಾಸಿಗೆಯ ಬಳಿ ಬಂದು ಹೋಗಿರ ಬಹುದು? ನನಗೆ ಭಯವಾಗುತ್ತದೆ' ಎಂದಳು. ಅವನು 'ನರಸಿಹ್ಮನ ಆಲಯದಲ್ಲಿ ಗುರುವಿನ ಬಳಿಗೆ ಯಾರು ಬಂದು ಹೋಗುತ್ತಾರೆ? ದೇವರೋ ತಾಯಿಯೊ, ಯಾವ ಆಳ್ವಾರೊ, ಗುರುವನ್ನು ನೋಡಿಕೊಳ್ಳುವುದಕ್ಕೆ ಬಂದಿರಬೇಕು. ನಾವು ನೋಡಿಕೊಳ್ಳದಿದರೆ ಗುರುವಿಗೆ ಕಡಮೆಯೆ?' ಎಂದನು. ಶ್ಯಾಮುಲಾಂಬೆಗೆ ತನ್ನ ಮೇಲಣ ಟೀಕೆ ಮನಸ್ಸಿಗೆ ಮುಟ್ಟಲಿಲ್ಲ. ಕೆಟ್ಟದಲ್ಲವೆಂದಷ್ಟರಿಂದ ಧೈರ್ಯ ಬಂದಿತು. ಮೊದಲ ಕ್ಷಣದಲ್ಲಿ ಅವಳ ಮನಸ್ಸಿಗೆ ಆ ಹಾಸಿಗೆಯ ಕಡೆಯಿಂದ ಹೋದ ಸತ್ವ ಜ್ವರಗಿರದ ದೇವತೆಯೋ, ಜ್ವರ ಹೆಚ್ಚಾಗಿ ಕೆರಳುವುದಕ್ಕಾಗಿ ಅವಳೇನಾದರೂ ಬಂದಿದ್ದಳೋ, ಎಂದು ಶಂಕೆ ತಲೆದೋರಿತ್ತು. ಈ ಸ್ಥಳದಲ್ಲಿ ಈ ಗುರುವಿಗೆ ಇದು ಆಗಲಾರದೆಂದು ಅವಳ ಅತಿ ಸ್ನೇಹಕ್ಕೆ ಕಂಡಿರಲಿಲ್ಲ. ಗಂಡನ ಮಾತಿನಿಂದ ಇದು ತೋರಿ ಅವಳು ಸಮಾಧಾನಪಟ್ಟುಕೊಂಡಳು, ಬಂದು ಗುರುವಿನ ಬಳಿ ಕುಳಿತಳು.

ದೇವರ ಕೃಪೆಯಿಂದ ಬೆಳಗಾಗುವ ವೇಳೆಗೆ ಗುರುವಿನ ಜ್ವರ ಇಳಿಯಿತು. ಅವರು ಅಂದು ಸ್ವಲ್ಪ ಆಹಾರವನ್ನೂ ತೆಗೆದುಕೊಂಡರು. ಭಕ್ತನಿಗೂ ಶ್ಯಾಮುಲಾಂಬೆಗೂ ಅವರ ವಿಷಯದಲ್ಲಿ ಚಿಂತೆ ತಪ್ಪಿತು. ಗಂಡನಿಗೆ ಹೇಳದಿದ್ದರೂ ಶ್ಯಾಮುಲಾಂಬೆ ಹಿಂದಿನ ರಾತ್ರಿ ಗುರುವಿನ

ಕಡೆಯಿಂದ ಹೊರಟುಹೋದದ್ದು ಜ್ವರದ ದೇವತೆಯೇ ಇರಬೇಕೆಂದು ಗೊತ್ತುಮಾಡಿಕೊಂಡಳು.

ಗುರುವಿಗೆ ವಾಸಿಯಾದರೂ ಶ್ಯಾಮಲಾಂಬೆಗೆ ಜ್ವರ ಬಂದವರ ಉಪಚಾರದ ಯೋಗ ತಪ್ಪಲಿಲ್ಲ. ಆ ದಿನ ಅವಳು ಮನೆಗೆ ಹೋದಾಗ ದಕ್ಷಿಣ ದೇಶದಿಂದ ಬಂದಿದ್ದ ಸುಮಂಗಲಿ ಜ್ವರದಿಂದ ಮಲಗಿದ್ದರು. ಅವಳು ಆಕೆಗೆ ಸ್ವಲ್ಪ ಕಷಾಯವನ್ನು ಮಾಡಿ ಕುಡಿಸಿ ಪಥ್ಯಕ್ಕೆ ಬೇಕಾದ ಪದಾರ್ಥವನ್ನು ಕೊಟ್ಟು ಆಮೇಲೆ ದೇವಾಲಯಕ್ಕೆ ಬಂದಳು. ಗುರುಗಳು ಭಕ್ತನಿಗೆ ತನಗೆ ರಾತ್ರಿ ಆದ ಒಂದು ಸ್ವಪ್ನದ ವಿಷಯವನ್ನು ಹೇಳುತ್ತಿದ್ದರು. ತಾನು ಜ್ವರದಲ್ಲಿ ಮಲಗಿದಾರೆ. ಕಾಲು ಚಳುಕು. ಶ್ಯಾಮಲಾಂಬೆ ನಾಲ್ಕಾರು ಸಲ ಕಾಲನ್ನು ಔಕಿದ್ದು ತಿಳಿಯುತ್ತಿದೆ. ಹಾಗೆಯೇ ಸ್ವಲ್ಪ ನಿದ್ದೆ ಬಂದಂತಾಯಿತು. ಆಗ ಬೇರೆ ಯಾರೋ ಹೆಂಗಸು ಬಂದು ತನ್ನ ಕಾಲನ್ನು ಹಿಸುಕಿದಂತೆ ಆಯಿತು. ಆ ಹಿಡಿದ ರೀತಿ ಬೇರೆಯ ರೀತಿ. ಶ್ಯಾಮಲಾಂಬೆಯ ಕೈ ಮಗಳ ಕೈ. ಆ ಕೈ ಹೆಣ್ಣು ಕೈ. ಸಂಸಾರಿಯ ಕೈ. ಆಚಾರ್ಯರಿಗೆ ತಮ್ಮ ಉಸಿರನ್ನು ಸೆಳೆದಂತಾಯಿತು, ಅವರು ನಿದ್ದೆಕೆಟ್ಟು ಯಾರು ಎನ್ನುತ್ತ ಎಚ್ಚತ್ತರು. ಯಾರೋ ಎದ್ದು ನಡೆದುಹೋದದ್ದೂ ಶ್ಯಾಮಲಾಂಬೆ ದೂರದಿಂದ ಬರುತ್ತ ಏನು ಎಂದು ಕೇಳಿದ್ದೂ ಅವರಿಗೆ ತಿಳಿಯಿತು. ಗುರು ಈ ಮಾತನ್ನು ಹೇಳುತ್ತಿರಲಾಗಿ ಭಕ್ತನಿಗೆ ತನ್ನ ಹೆಂಡತಿ ರಾತ್ರಿ ತಿಳಿಸಿದ ಸಂಗತಿ ನೆನಪಿಗೆ ಬಂದಿತು. ಈ ವಿವರವನ್ನು ಸ್ವಲ್ಪ ಕೇಳಿ ಶ್ಯಾಮಲಾಂಬೆ ಗುರುಗಳು ಕೂಗಿದ್ದನ್ನೂ ತಾನು ಬಂದದ್ದನ್ನೂ ಒಪ್ಪಿಕೊಂಡಳು. ಯಾರನ್ನೋ ಕಂಡಂತಾಯಿತೆನ್ನುವುದನ್ನು ಹೇಳಲಿಲ್ಲ. ಜ್ವರದ ದೇವತೆ ಬಿಟ್ಟುಹೋಗುವಾಗ ಕಾಲನ್ನು ಏನೋ ಮಾಡಿರಬೇಕು. ಈ ಹೆಣ್ ನಂಬಿಕೆಯನ್ನು ಅವಳು ಗುರುವಿಗಾಗಲಿ ಗಂಡನಿಗಾಗಲಿ ಏನೆಂದು ಹೇಳುವುದು? ಅವಳ ಗಂಡನು ಗುರುಗಳ ಮಾತನ್ನು ಕೇಳಿ ಇದು ಏನಿರಬಹುದೆಂದು ಯೋಚಿಸುತ್ತ ಸುಮ್ಮನಿದ್ದನು. ತನಗೆ ಬಗೆ ಹರಿಯದಿರುವ ವಿಷಯವನ್ನು ಪ್ರಸ್ತಾಪಿಸಿ ಪ್ರಯೋಜನವೇನು? ಅಲ್ಲದೆ ಗುರುಗಳಿಗೆ ಮೈಯಲ್ಲಿ ಸರಿಯಾಗಿಲ್ಲ; ನಾಲ್ಕು ದಿನ ಬಿಟ್ಟು ಈ ಮಾತನ್ನು ಹೇಳಬಹುದು.

ಯಾವ ವಿಚಿತ್ರದಿಂದಲೋ ಗುರು ಮಾರನೆಯ ದಿನದಿಂದ ತಮ್ಮ ನಿತ್ಯದ ಜೀವನವನ್ನು ಪೂರ್ವದಂತೆ ಆರಂಭಿಸಿದರು. ಭಕ್ತನೂ ಶ್ಯಾಮಲಾಂಬೆಯೂ ತಮ್ಮತಮ್ಮ ಕೆಲಸವನ್ನು ಸ್ವಲ್ಪ ನೋಡಿಕೊಳ್ಳುವುದು ಸಾಧ್ಯವಾಯಿತು. ಎರಡು ಮೂರು ದಿನದಲ್ಲಿ ಭಕ್ತನು ಗುರುವಿಗೆ ತಮ್ಮಲ್ಲಿ ಬಂದು ಇಳಿದಿದ್ದ ಸುಮಂಗಲಿಗೆ ಜ್ವರ ಬಂದಿದ್ದದ್ದು ಅತಿಯಾಯಿತೆಂದು ಹೇಳಿದನು. ಸಂಜೆಯಲ್ಲಿ ಶ್ಯಾಮಲಾಂಬೆಯೂ ಮನೆಗೆ ಸ್ವಲ್ಪ ಮುಂದಾಗಿ ಹೋಗುವುದಕ್ಕಾಗಿ ಗುರುವಿಗೆ ಇದೇ ಮಾತನ್ನು ಅರಿಕೆ ಮಾಡಿದಳು. ಅದರ ಮಾರನೆಯ ದಿವಸ ಭಕ್ತನು ಸ್ವಲ್ಪ ಹೊತ್ತುಮಾಡಿಕೊಂಡು ಬಂದನು. ಸುಮಂಗಲಿ ಅಂದಿನ ಬೆಳಗಾಗ ಪರಮಪದವನ್ನೈದಿದಳೆಂದೂ ತನ್ನ ಉತ್ತರಕ್ರಿಯೆಯನ್ನು ಈತನು ನಡೆಸಬೇಕೆಂದು ಹೋಗುವ ಮುನ್ನ ಶ್ಯಾಮಲಾಂಬೆಯನ್ನು ಬೇಡಿಕೊಂಡಳೆಂದೂ, ಬ್ರಾಹ್ಮಣ ದೇಹಕ್ಕೆ ಸಂಸ್ಕಾರ ನಡೆಸುವುದು ಕರ್ತವ್ಯವಾದ್ದರಿಂದ ತಾನು ಒಪ್ಪಿಕೊಂಡೆನೆಂತಲೂ ಆದಕಾರಣ ತಾನು ಗುರುಗಳ ಸೇವೆಗೆ ಬರಲು ಸಾವಕಾಶವಾಯಿತೆಂದೂ ವಿಜ್ಞಾಪಿಸಿದನು. ಗುರು 'ಯಾವ ಪ್ರಾಂತದಿಂದಲೋ ಬಂದವರು ಇಲ್ಲಿ ತೀರಿಕೊಂಡರೆ?' ಎಂದು ಸ್ವಲ್ಪ ವ್ಯಥೆಪಟ್ಟು, ದೇವರ ಸೇವೆಯಲ್ಲಿ ಎಂದಿನಂತೆ ತೊಡಗಿದರು.

ಸಂಜೆಯಲ್ಲಿ ಶ್ಯಾಮಲಾಂಬೆ ಗುರುವಿನ ಸನ್ನಿಧಿಗೆ ಬಂದಳು. ಅವಳ ಗಂಡನೂ ಅಲ್ಲಿಯೇ ಕುಳಿತಿದ್ದನು. ಇಬ್ಬರಿಗೂ ನಮಸ್ಕರಿಸಿ ಶ್ಯಾಮಲಾಂಬೆ ಬಳಿಯಲ್ಲಿ ಕುಳಿತಳು. ಅವಳು ತುಂಬ ಅತ್ತಿದ್ದಂತೆ ಕಾಣುತ್ತಿತ್ತು; ಬಹಳ ಹೊತ್ತು ಮಾತನಾಡಲಿಲ್ಲ. ಕೊನೆಗೆ ಗುರು 'ತಾಯಿ, ಎಂಥ ಹತ್ತಿರದ ಬಂಧುವನ್ನು ಕುರಿತಾದರೂ ಅತಿಯಾಗಿ ದುಃಖಿಸಬಾರದು. ನಿಮ್ಮ ಮನೆಯ ನೆರಳಿಗೆ ಬಂದ ಕಾರಣದಿಂದ ನೀನು ಅವರನ್ನು ನೋಡಿಕೊಂಡದ್ದಾಯಿತು. ತೀರಿಕೊಂಡರು. ನಿಮ್ಮ ಯಜಮಾನರು ಮಗನಂತೆ ಸಂಸ್ಕಾರ ಮಾಡಿದ್ದಾಯಿತು. ಇನ್ನು ದುಃಖವೇಕೆ?' ಎಂದರು.

ಶ್ಯಾಮಲಾಂಬೆ ಏನೋ ಹೇಳುವುದಕ್ಕೆ ಹೋದಳು. ದುಃಖದ ವೇಗದಿಂದ ಕಂಠಕಟ್ಟಿತು. ಬಾಯಿಂದ ಸ್ವರ ಹೊರಡದೆ ಅವಳು ಬಿಕ್ಕಿ ಬಿಕ್ಕಿ ಅಳುತ್ತ ಗುರುವಿನ ಕಾಲಮೇಲೆ ಬಿದ್ದಳು. ಕ್ಷಣಬಿಟ್ಟು ಎರಡು ಮಾತನ್ನು ಆಡಿದಳು. ಅದು ಇವರಿಗೆ ಸ್ಪಷ್ಟವಾಗಿ ತಿಳಿಯಲಿಲ್ಲ. ಗುರುಗಳು

ಅವಳನ್ನು ಮೃದುವಾದ ಮಾತುಗಳಿಂದ ಸಂತೈಸಿದರು; ತುಂಬ ನೊಂದಿದ್ದಾಳೆ, ಮನೆಗೆ ಕರೆದುಕೊಂಡು ಹೋಗು, ಎಂದು ಭಕ್ತನಿಗೆ ಹೇಳಿದರು; ಅವರನ್ನು ಬೀಳ್ಕೊಟ್ಟರು.

ಮಾರನೆಯ ದಿನ ಭಕ್ತನು ಬಂದನು. ಅವನ ರೀತಿಯಿಂದ ಅವನೂ ಅತ್ತಿದ್ದನೆಂದು ಕಂಡಿತು. ಗುರು 'ಇಷ್ಟು ದುಃಖಪಡಬಹುದೆ?' ಎಂದರು. ಭಕ್ತನು ದುಃಖವನ್ನು ತಡೆದುಕೊಂಡು, ನಿಮ್ಮ ಮಗಳು ಇಂದಿನ ಸಂಜೆ ಬಂದಾಗ ಎಲ್ಲವನ್ನೂ ಅರಿಕೆಮಾಡುತ್ತಾಳೆ, ಎಂದನು.

ಶ್ಯಾಮಲಾಂಬೆ ಸಂಜೆಗೆ ಬರುವಾಗ ಹಿಂದಿನ ದಿನದಂತೆ ದುಃಖದ ಆವೇಗದಲ್ಲಿರಲಿಲ್ಲ; ಸಮಾಧಾನವಾಗಿದ್ದಳು. ಬಂದವಳು ಗುರುವಿನ ಕಾಲಿಗೆ ಎರಗಿದಳು. ಅವರ ಅಪ್ಪಣೆಯಂತೆ ಬಳಿಯಲ್ಲಿ ಕುಳಿತಳು. ಭಕ್ತನು 'ಅರಿಕೆ ಮಾಡು' ಎಂದನು. ಶ್ಯಾಮಲಾಂಬೆ ಗುರುವಿನ ಮುಖವನ್ನು ಒಂದು ಕ್ಷಣ ನೋಡುತ್ತಿದ್ದು ಅವರನ್ನು ಕುರಿತು 'ಹೇಗೆ ಅರಿಕೆ ಮಾಡುವುದೊ ತಿಳಿಯಲಿಲ್ಲ' ಎಂದಳು. ಒಂದು ಕ್ಷಣ ಬಿಟ್ಟು 'ನಿನ್ನೆ ಬೆಳಗಾಗ ಪರಂಧಾಮವನ್ನೈದಿದ ಸುಮಂಗಲಿ ಯಾರೋ ಎಂದಿದ್ದೆ. ಅವರು ನಮಗೆ ದೂರವಲ್ಲ. ಬಹು ಹತ್ತಿರದವರು ಎಂದು ಅವರು ಹೋಗುವ ಮುನ್ನ ನನಗೆ ತಿಳಿಯಿತು' ಎಂದಳು. ಗುರು ಆಕೆಯ ಮಾತನ್ನು ಕೇಳುತ್ತ ಸುಮ್ಮನೆ ಕುಳಿತಿದ್ದರು. ಶ್ಯಾಮಲಾಂಬೆ 'ಆಕೆ ತೀರಿಕೊಳ್ಳುವ ಮೊದಲು ತಮ್ಮ ಸಂಬಂಧವನ್ನು ನನ್ನ ಕಿವಿಯಲ್ಲಿ ಹೇಳಿದರು. ಆ ಕಾರಣದಿಂದಲೇ ನಮ್ಮ ಯಜಮಾನರು ಅವರಿಗೆ ಉತ್ತರಕ್ರಿಯೆಯನ್ನು ಮಾಡುವ ಮಾತಿಗೆ ನಾನು ಒಪ್ಪಿಕೊಂಡೆ. ಅವರು ನಮ್ಮ ಆಚಾರ್ಯರ ಪೂರ್ವಾಶ್ರಮದ ಪತ್ನಿ' ಎಂದಳು.

ಗುರುವಿನ ಮುಖದಲ್ಲಿ ಯಾವ ವಿಧವಾದ ವಿಕಾರವೂ ಕಾಣಲಿಲ್ಲ. ಅವರು 'ನಾರಾಯಣ' ಎಂದರು. ಮತ್ತೆ ಒಂದು ಕ್ಷಣ ಬಿಟ್ಟು ಶ್ಯಾಮಲಾಂಬೆ ಗುರುವನ್ನು ಕುರಿತು 'ಗುರುಪತ್ನಿ ಗುರುಗಳಲ್ಲಿ ಒಂದು ವಿಷಯಕ್ಕೆ ಕ್ಷಮೆ ಬೇಡಬೇಕೆಂದು ನನಗೆ ತಿಳಿಸಿದರು. ಆಗಲಿ ಎಂದು ಹೇಳಿದೆ. ಕೃಪೆಮಾಡಿ ಕ್ಷಮೆಯನ್ನು ನೀಡಬೇಕು' ಎಂದಳು. ಗುರು 'ಭಗವಂತನ ಪಾದವನ್ನು ಸೇರುವ ಮೊದಲು ಈ ಲೋಕದ ಸಂಬಂಧಗಳು,

ಈ ಲೋಕದ ಮರ್ಯಾದೆಗಳು, ಈ ಲೋಕದ ಕ್ಷಮೆ, ಈ ಲೋಕದ ದವು. ಭಗವಂತನ ಪಾದವನ್ನು ಸೇರಿರುವ ಆ ಜೀವದ ವಿಷಯದಲ್ಲಿ ನಾನು ನೀಡಬೇಕಾದ ಕ್ಷಮೆ ಯಾವುದಿದೆ ಇನ್ನು?' ಎಂದರು.

ಶ್ಯಾಮಲಾಂಬೆ 'ಒಂದು ವಿಷಯವನ್ನು ನಾನು ಅವರ ಪರವಾಗಿ ಅರಿಕೆ ಮಾಡಬೇಕಾಗಿದೆ. ಅದರಿಂದ ತಾವು ಕೋಪಗೊಂಡರೆ ಸ್ವರ್ಗದಿಂದ ಕೂಡ ತನಗೆ ಚ್ಯುತಿಯಾಗಬಹುದೆಂದು ಅವರು ಶಂಕೆಪಟ್ಟರು. ಕ್ಷಮಿಸಿದೇನೆಂದು ಅಪ್ಪಣೆಮಾಡಿದರೆ ಅರಿಕೆ ಮಾಡುತ್ತೇನೆ' ಎಂದಳು.

ಗುರುಗಳು 'ಹೇಳು ತಾಯಿ. ಕ್ಷಮಿಸಿದೇನೆ' ಎಂದರು. ಶ್ಯಾಮಲಾಂಬೆ 'ಗುರುಪತ್ನಿ ಚಿಕ್ಕಂದು ತಮ್ಮ ಮಹಿಮೆಯನ್ನು ತಿಳಿಯದೆ ಎಡ್ಡಾದಿಡ್ಡಿಯಾಗಿ ನಡೆದುಕೊಂಡರಂತೆ. ತಾನು ಸಣ್ಣ ಹುಡುಗಿ, ಸಂಸಾರದ ವಿಷಯ ಬಲ್ಲವಳಲ್ಲ. ಯಜಮಾನರು ತನಗಿಂತ ವಯಸ್ಸಿನಲ್ಲಿ ಇಪ್ಪತ್ತೈದು ವರ್ಷದಷ್ಟು ಹಿರಿಯರು. ಸಾಲದ್ದಕ್ಕೆ ತಾನು ತುಂಬ ಆಚಾರವಂತರ ಮನೆಯೊಂದರಿಂದ ಬಂದಿದ್ದಳು. ಈ ಎಲ್ಲ ಕಾರಣದಿಂದ ತನ್ನ ನಡತೆ ಅವಿವೇಕವಾಗಿ ಗುರುವಿಗೆ ಬೇಸರ, ತನಗೆ ಸೌಮಂಗಲವೈಧವ್ಯ ಉಂಟಾಯಿತು. ಹೀಗೆಂದು ಗುರುಪತ್ನಿ ತುಂಬ ಪರಿತಾಪಪಟ್ಟರು' ಎಂದಳು.

ಗುರು: 'ದೈವೇಚ್ಛೆ, ಇದರ ಹೊಣೆ ಬೇರೆ ಯಾರದೂ ಅಲ್ಲ. ಇದರಲ್ಲಿ ಕ್ಷಮೆಯ ಮಾತೇನು?'

'ತಾವು ಚೋಳ ದೇಶವನ್ನು ಬಿಟ್ಟು ಇತ್ತ ಬಂದ ಮೇಲೆ ತಾಯಿ ಮನೆಯಲ್ಲಿ ಅವರಿಗೆ ಈ ಸಮಾಚಾರ ತಿಳಿದು ತುಂಬ ವ್ಯಥೆಯಾಗಿ ಒಂದು ಸಲ ತಮ್ಮನ್ನು ಮರೆಯಿಂದ ನೋಡಿಕೊಂಡು ಹೋಗಬೇಕೆಂದು ಅವರು ದಾರಿ ವಿಚಾರಿಸಿಕೊಂಡು ಬಂದರು. ಇಲ್ಲಿರುವ ಸಂನ್ಯಾಸಿ ತಾವೇ, ಅಲ್ಲವೇ, ಎಂದು ಒಂದು ದಿನ ಮರೆಯಿಂದ ನೋಡಿ ನಿರ್ಧರಿಸಿಕೊಂಡರು. ಆ ದಿನ ಹೊರಡಬೇಕೆಂದು ಯೋಚಿಸಿದರು. ಹೊರಡಲಿಲ್ಲ. ಒಂದು ದಿನ ಇದ್ದು ಮತ್ತೆ ತಮ್ಮ ದರ್ಶನ ತೆಗೆದುಕೊಂಡು ಹೋಗಬೇಕೆಂದು ಆಸೆ ಒಂದು ಕಡೆ, ಸೇವಕಿ ಅಸ್ವಸ್ಥಳಾದಳು ಬೇರೆ; ಇನ್ನೆರಡು ದಿನ ಇಲ್ಲಿ ನಿಲ್ಲುವುದಾಯಿತು. ಆಮೇಲೆ ತಮಗೆ ಜ್ವರ ಬಂದಿತು. ಅದು ವಾಸಿಯಾಗುವ

ವರೆಗೆ ಹೊರಡಲು ಮನಸ್ಸು ಬರಲಿಲ್ಲ: ಜ್ವರ ಹೆಚ್ಚಿ ತಾವು ಆಯಾಸಪಡು ತ್ತಿರುವ ವಿಷಯವನ್ನೆಲ್ಲ ಅವರು ದಿನವೂ ಕೇಳಿ ತಿಳಿಯುತ್ತಿದ್ದರು. ಅವರಿಗೆ ಬಹಳ ಕಷ್ಟವಾಗುತ್ತಿತ್ತು. ಇವರು ಏಕೆ ಇಷ್ಟು ಕಾತರರಾಗುತ್ತಾರೆ ಎಂದು ನನಗೆ ಆಗ ತಿಳಿಯುತ್ತಿರಲಿಲ್ಲ, ಈಗ ತಿಳಿಯುತ್ತದೆ.'

ಗುರು 'ನಲವತ್ತು ವರ್ಷದ ಹಿಂದೆ ಸಂಸಾರವನ್ನು ಮುಗಿಸಿದ ನನಗೆ ಇಂದು ಇದು ಏನು ಸಂದೇಶ ನನ್ನ ತಾಯಿ?' ಎಂದರು.

ಶ್ಯಾಮಲಾಂಬೆ: 'ಮುಂದಿನ ಮಾತನ್ನು ಅರಿಕೆಮಾಡುವುದಕ್ಕಾಗಿ ಇಷ್ಟೆಲ್ಲ ಹೇಳಿದೆ. ಜ್ವರ ಬಹಳ ಹೆಚ್ಚಿದಾಗ ಗುರುಪತ್ನಿ ಭಗವಂತನಲ್ಲಿ ಪ್ರಾರ್ಥನೆ ಮಾಡಿಕೊಂಡು ಈ ಜ್ವರವನ್ನು ನಾನು ತೆಗೆದುಕೊಳ್ಳುತ್ತೇನೆ, ಇವರನ್ನು ಉಳಿಸು, ಎಂದು ಬೇಡಿಕೊಂಡರು. ತಮಗೆ ಜ್ವರ ಬಹು ಹೆಚ್ಚಾದ ಆ ರಾತ್ರಿ ಇಲ್ಲಿ ಬಂದಿದ್ದು ನಾನು ದೂರ ಹೋಗಿ ಮಲಗಿದ ವೇಳೆ ತಮ್ಮ ಸನ್ನಿಧಿಯಲ್ಲಿ ಬಂದು ಕುಳಿತು ಕಾಲನ್ನು ಮುಟ್ಟಿ ಜ್ವರವನ್ನು ಎಳೆದುಕೊಳ್ಳಬೇಕೆಂದು ಮೈಯನ್ನು ಸೋಕಿದರು.'

ಗುರು 'ಆ' ಎಂದರು.

ಶ್ಯಾಮಲಾಂಬೆ: 'ಮೈಯನ್ನು ಮುಟ್ಟಿದಾಗ ತನ್ನ ಸೌಭಾಗ್ಯದ ದಿನದ ನೆನಪಾಗಿ ಒಮ್ಮೆ ಕಾಲನ್ನು ಔಕುವ ಚಪಲ ಹುಟ್ಟಿ ಔಕಿದರು. ಅದರಿಂದಲೇ ತಾವು ಎಚ್ಚೆತ್ತಿರಿ; ಯಾರು ಎಂದು ಕೂಗಿದಿರಿ. ನಾನು ಎದ್ದು ಬಂದೆ. ಮಾರನೆಯ ದಿನವೇ ಅವರು ಜ್ವರದಲ್ಲಿ ಮಲಗಿದರು. ಈ ದಿವ್ಯ ದೇಹವನ್ನು ಮುಟ್ಟುವ ಅಧಿಕಾರವನ್ನು ಎಂದೋ ಕಳೆದು ಕೊಂಡಿದ್ದ ಹೆಂಗಸು ಹೀಗೆ ಬಂದು ತನ್ನ ಕೈಯನ್ನು ತಮಗೆ ಸೋಕಿಸಿ ತಮ್ಮ ತಪಸ್ಸನ್ನು ಕಡಮೆ ಮಾಡಿದ್ದು ಉತ್ಕಟ ಪಾತಕ, ಅದನ್ನು ಮನ್ನಿಸ ಬೇಕು, ಎಂದೇ ಅವರು ಬೇಡಿದ್ದು.'

ಗುರು ಯಾವ ಮಾತನ್ನೂ ಆಡಲಿಲ್ಲ. ಶ್ಯಾಮಲಾಂಬೆ 'ಗುರುಪತ್ನಿ ನನಗೆ ಆಶೀರ್ವಾದಮಾಡಿ ತನ್ನ ಮೈಮೇಲಿದ್ದ ವಸ್ತುಗಳಲ್ಲಿ ಮೂರನ್ನು ಕೊಟ್ಟರು' ಎಂದು ಮೂರು ಒಡವೆಯನ್ನು ತೋರಿಸಿದಳು. ಗುರು ಸ್ವಲ್ಪ ಹೊತ್ತು ಸ್ತಬ್ಧವಾಗಿ ಕುಳಿತಿದ್ದು 'ಎಲ್ಲ ಜೀವಕ್ಕೂ ಒಂದೊಂದು ದಾರಿ ನಿಯಮಿತವಾಗಿದೆ. ಆಯಾ ಜೀವ ಅದರದರ ದಾರಿ ನಡೆದು ಗುರಿಯನ್ನು

ಮುಟ್ಟಬೇಕು. ನಮ್ಮ ದಾರಿ ಹೀಗೆ ಆಗುವುದಿತ್ತು. ನಿಮ್ಮ ದಾರಿ ಸುಖವಾಗಲಿ' ಎಂದರು.

ಹೊರಗಡೆ ರಾಮಚಂದ್ರ ಆಡುತ್ತಿದ್ದನು. ಗುರು ಅವನನ್ನು ಕರೆದು 'ಅಣ್ಣಯ್ಯ, ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಂ ಹೇಳು' ಎಂದರು. ರಾಮಚಂದ್ರನು ಆ ಸ್ತೋತ್ರವನ್ನು ಸುಸ್ವರವಾಗಿ ಹಾಡಿದನು. ಇವರೆಲ್ಲ ಅದನ್ನು ಸಂತೋಷದಿಂದ ಕೇಳಿದರು.

ಗುರುಪತ್ನಿಯ ಜೊತೆಗೆ ಬಂದಿದ್ದ ಸೇವಕಿ ಮಾರನೆಯ ದಿನ ಬಂದು ಗುರುಗಳಿಗೆ ಅಡ್ಡಬಿದ್ದು, ಅಪ್ಪಣೆ ಪಡೆದು ತನ್ನ ಊರ ಕಡೆ ಹೊರಟಳು.

೩

ಮನಸ್ಸಿನಲ್ಲಿ ಇಷ್ಟು ಕಥೆ ನಡೆಯುವ ವೇಳೆಗೆ ನಾನೂ ಸ್ವಲ್ಪ ಕ್ಷಣ್ಣ ನಾಗಿದ್ದೆನು. ನಾನು ಎಲ್ಲಿ ಕುಳಿತಿದ್ದೇನೆಂದು ನೋಡಿದೆನು. ಅದು ಹೊಂಡದ ಪಕ್ಕದ ಒಂದು ಅರಳಿಯ ಮರದ ಅಡಿ. ದೇವಾಲಯದ ಕಡೆ, ಹೊಂಡದ ಕಡೆ, ಊರ ಕಡೆ ನೋಡಿದೆನು. ಮುಳುಗುವ ಯೋಚನೆಯಲ್ಲಿದ್ದ ಸೂರ್ಯನ ಬೆಳಕು ಶತಮಾನಗಳ ಚರಿತ್ರೆಯ ಮೇಲೆ, ಮೊಟ್ಟೆಗೆ ಕಾವು ಕೊಡುವ ಹಕ್ಕಿಯ ರಕ್ಕೆಯಂತೆ, ಕೋಟ್ಯಂತರ ಜೀವದ ಬದುಕನ್ನು ಹೊದೆದಿರುವ ಕಡಲ ತೆರೆಯಂತೆ, ಕವಿದು ತೊಳಗುತ್ತಿತ್ತು. ಯಾವುದೋ ಮೂಕ ಯಾತನೆ, ಯಾವುದೋ ಮೂಕ ಆಸೆ, ನನ್ನ ಮನಸ್ಸನ್ನು ಕಲಕಿದ್ದವು. ಒಬ್ಬ ಯತಿ, ಒಬ್ಬ ಸುಮಂಗಲಿ; ಒಬ್ಬ ಭಕ್ತ, ಅವನ ಪತ್ನಿ, ಇವರ ಮಗ; ಇವರ ಮೂರ್ತಿಗಳನ್ನು ಕಲ್ಪಿಸಿಕೊಳ್ಳುತ್ತ ನಾನು ಆ ಸ್ಥಳದಿಂದ ಕದಲಿ ಬಂದೆನು.

# ಕವಿಯ ಬಾಳ ಕೊನೆಯ ದಿನ

ಗಯಟೇ ಮಹಾಕವಿ ತನ್ನ ಫೌಸ್ಟ್ ಗ್ರಂಥದ ಎರಡನೆಯ ಭಾಗವನ್ನು ಮುಗಿಸಿದಾಗ ತನ್ನ ತರುಣ ಮಿತ್ರನಿಗೆ 'ನಾನು ಬದುಕಿನಲ್ಲಿ ಮಾಡಬೇಕಾಗಿದ್ದ ಕೆಲಸವನ್ನೆಲ್ಲ ಮುಗಿಸಿ ಆಯಿತು. ಇನ್ನು ನನಗೆ ಉಳಿದಿರುವ ದಿನಗಳು ಅದು ನನಗೆ ಕೊಟ್ಟ ಕೊಸರು' ಎಂದನು. ಇದಾದ ಮೇಲೆ ಆತನು ಕೆಲವು ತಿಂಗಳು ಸುಖವಾಗಿಯೇ ಇದ್ದನು. ಚಳಿಯ ದಿನಗಳು ಬಂದವು. ದೇಹದಲ್ಲಿ ಶಕ್ತಿ ಕಡಮೆಯಾಗಿದ್ದದರಿಂದ ಅವನಿಗೆ ಚಳಿ ಸಹಿಸುವುದು ಕಷ್ಟವಾಯಿತು. ಆದರೂ ಅವನು ಆ ಕಾಲವನ್ನು ಹೇಗೋ ಕಳೆದನು. ಆದರೆ ಕೊನೆ ಕೊನೆಗೆ ಒಂದು ದಿನ ಮೈಗೆ ಶೀತವಾಗಿ ಅವನು ನೆಗಡಿ ಜ್ವರದಿಂದ ಹಾಸಿಗೆ ಹಿಡಿದನು. ಮೂರು ದಿನ ಹೀಗೆ ಇದ್ದು ಒಂದು ದಿನ ಜ್ವರ ಕೆರಳಿ, ಒಂದು ದಿನ ಗುಣವಾದಂತೆ ತೋರಿ, ಕೊನೆಯ ದಿನವೆಲ್ಲ ಮಂಪರದಲ್ಲಿ ಇದ್ದು, ಅವನು ದೇಹವನ್ನು ಬಿಟ್ಟನು.

ಆ ಕೊನೆಯ ದಿನ ಅವನಿಗೆ ರೋಗದ ನೋವು ಆಯಾಸ ಏನೂ ಇರಲಿಲ್ಲ. ಮಂಪರದಲ್ಲಿದ್ದರೂ ತಾನು ತೀರಿಕೊಳ್ಳುತ್ತಿದೇನೆಂದು ಅವನಿಗೆ ತೋರಲಿಲ್ಲ. ಮಂಪರ ಮೊದಲಾಗುವ ಮುನ್ನ ಕವಿ ಬಳಿಗೆ ಬಂದ ವೈದ್ಯನಿಗೆ 'ನಾಳೆ ನಾಳಿದ್ದರಲ್ಲಿ ಸರಿಹೋಗುತ್ತದೆ' ಎಂದು ಹೇಳಿದನು; ಬಳಿಗೆ ಬಂದ ಸೇವಕನನ್ನು ವಿಶ್ವಾಸದಿಂದ ಮಾತನಾಡಿಸಿದನು; ಹಾಸಿಗೆಯನ್ನು ಸರಿ ಮಾಡಿದ ಊಳಿಗದ ಹೆಣ್ಣನ್ನು ಕನಿಕರ ಕೃತಜ್ಞತೆಯಿಂದ ನೋಡಿದನು; ಸೊಸೆ ಬಳಿಗೆ ಬರಲು ಮೆಲುನಗೆಯಿಂದ ಅವಳನ್ನು ಮಾತನಾಡಿಸಿ ಮನೆಯ ಮಾತನ್ನು ವಿಚಾರಿಸಿ ತನ್ನ ವಿಷಯ ಚಿಂತೆಗೆ ಕಾರಣವಿಲ್ಲ ಎಂದು ಧೈರ್ಯ ಹೇಳಿದನು. ಇದಾದ ಸ್ವಲ್ಪದರಲ್ಲೇ ಎಂಭತ್ತು ವರ್ಷ ಬಾಳಿದ ಆ ಜೀವದ ಕರಣಗಳು ಸೋತು ಮೆದುವಾದ ಒಂದು ರೀತಿಯ ಮಂಕು ಆ ಮನಸ್ಸನ್ನು ಕವಿಯಿತು. ಕಣ್ಣು ತೆರೆಯುವ ಪ್ರವೃತ್ತಿ ಇಲ್ಲ. ಆದರೂ ಕಣ್ಣು ಮುಚ್ಚಿದ ಕಾರಣದಿಂದ ನಿದ್ರೆ ಎನ್ನುವಂತೆಯೂ ಇಲ್ಲ. ಕವಿ ಈ ಸ್ಥಿತಿಯಲ್ಲಿ ತನ್ನ ಬಾಳನ್ನೆಲ್ಲ ನೆನೆದುಕೊಳ್ಳುತ್ತ ಅರವತ್ತುಗಳಿಗೆಯಲ್ಲಿ ಎಂಭತ್ತು ವರ್ಷವನ್ನು ಮತ್ತೊಮ್ಮೆ ಬಾಳಿದನು. ಆ ಎಂಭತು ವರ್ಷದ ಅನೇಕ ಚಿತ್ರಗಳು

ಅವನ ಕಣ್ಣ ಮುಂದೆ ಹರಿದು ಅವನು, ತಾನೇ ರಂಗದಲ್ಲಿ ಆಡುತ್ತ ತಾನೇ ಪ್ರೇಕ್ಷಕನಾಗಿ ನೋಡುವಂತೆ, ಆ ಚಿತ್ರಗಳ ವಿಷಯದಲ್ಲಿ ಅಸಕ್ತವಾದ ಆಸಕ್ತಿಯಿಂದ ವಿಲಕ್ಷಣವಾದ ಒಂದು ಅನುಭವವನ್ನು ಪಡೆದನು.

....ಆ ತಾಯಿ ಎಷ್ಟು ಒಳ್ಳೆಯವಳು. ಆ ತಂದೆ, ಆತನೂ ಒಳ್ಳೆಯವನೇ, ಆದರೆ ಮಗನು ತನ್ನ ಇಷ್ಟದಂತೆ ಬೆಳೆಯಬೇಕೆಂದು ಹಠಮಾಡಿ ತಾನೂ ಬೇಸರಪಟ್ಟು ಮಗನನ್ನೂ ಬೇಸರಗೊಳಿಸಿದನು. ತಾಯ ವಿಶ್ವಾಸದಿಂದ ಆ ಬಾಲ್ಯದ ಕಷ್ಟ ಬಹುಮಟ್ಟಿಗೆ ಕಡಮೆಯಾಗಿತ್ತು. ತನ್ನ ಅಜ್ಜಿ ತನಗೆ ಕೊಟ್ಟ ಆ ಸೂತ್ರದ ಗೊಂಬೆಗಳಿಂದ ತಾನು ನಾಟಕ ಗಳನ್ನು ಆಡಿ ಎಷ್ಟು ಸುಖ ಪಟ್ಟಿದ್ದನು! ಆಮೇಲೆ ಕೂಡ ಅವನಿಗೆ ನಾಟಕ ವೆಂದರೆ ತುಂಬಾ ರುಚಿ. ಅಜ್ಜಿ ಕೊಟ್ಟ ಆ ಗೊಂಬೆಗಳ ದೆಸೆಯಿಂದ ಇವನಿಗೆ ಈ ರುಚಿ ಹುಟ್ಟಿತೋ, ಇಲ್ಲ ಸಹಜವಾಗಿ ಇದ್ದ ಅಭಿರುಚಿಯನ್ನು ತಿಳಿದು ಅಜ್ಜಿ ಗೊಂಬೆಗಳನ್ನು ಕೊಟ್ಟಳೋ, ಇಲ್ಲ ಯಾವುದೋ ಪುಣ್ಯದಿಂದ ಅಭಿರುಚಿ ಇದ್ದು ಉದ್ದೇಶವಿಲ್ಲದೆ ಗೊಂಬೆ ಬಂದು ಸೇರಿತೋ, ಅಂತೂ ಎಳೆಯನ ಬೆಳವಣಿಗೆಗೆ ಅನುಕೂಲವಾದ ಆ ಗೊಂಬೆಗಳು ಚಿಕ್ಕಂದಿನಲ್ಲೇ ಅವನ ಜೀವನ ರಂಗಕ್ಕೆ ಬಂದವು. ತಾನು ಪುಣ್ಯಶಾಲಿ. ಹುಟ್ಟಿದ ಊರು ಒಳ್ಳೆಯದು. ಹುಟ್ಟಿದ ಮನೆ ಒಳ್ಳೆಯದು. ಆಮೇಲೆ ಕೂಡ ಅವನ ಬದುಕು ಪುಣ್ಯಶಾಲಿಯ ಬದುಕೇ ಆಗಿದ್ದಿತು. ವಿರಾಮವಾಗಿ ಕುಳಿತು ಲಲ್ಲೆಹೊಡೆಯುವ ವಿಲಾಸಜೀವನ ಆಗಲಿಲ್ಲ. ಉದ್ದಕ್ಕೂ ದುಡಿಯುವುದೇ ಅವನ ಪಾಲಿಗೆ ಬಂದಿತ್ತು. ಆದರೆ ಆ ದುಡಿತದಲ್ಲಿ ಸುಖ ಇದ್ದಿತ್ತು; ಅದರಿಂದ ಪ್ರಯೋಜನವಾಗಿತ್ತು; ಯಶಸ್ಸು ಬಂದಿತ್ತು. ವಿಲಾಸವಾದರೂ ತೀರ ಇಲ್ಲದೆ ಹೋಗಿರಲಿಲ್ಲ. ಒಟ್ಟಿನಲ್ಲಿ ತಾನು ಪುಣ್ಯಶಾಲಿಯೇ ಸರಿ....

ಆ ತಂಗಿ ಪಾಪ, ಅವಳು ತನ್ನಷ್ಟು ಪುಣ್ಯಶಾಲಿ ಆಗಲಿಲ್ಲ....

ಆ ಹುಡುಗಿ. ತಾನು ಅವಳನ್ನು ಪ್ರೇಯಸಿ ಎಂದು ಎಣಿಸಿದನು. ಅವಳು ಇವನನ್ನು ಪ್ರಿಯನೆಂದು ಕಂಡಂತೆ ನಟಿಸಿದಳು. ಅವಳಿಗಿಂತ ಎಷ್ಟೋ ಚಿಕ್ಕವನಾದ ಮೋಸು ಹರೆಯದ ಪೋರ ಅವಳಿಗೆ ಎಣೆಯೆ? ಹೆಣ್ಣೇ ಹೀಗೆ. ಗಂಡು ಏನನ್ನೂ ಅರಿಯದ ಹುಡುಗನಾಗಿರುವಂದಿನಿಂದ

ಎಲ್ಲವನ್ನೂ ಅರಿತೆನೆಂಬ ವೃದ್ಧನಾಗುವವರೆಗೆ ಯಾವ ಹೊತ್ತಿನಲ್ಲೂ ಹೆಣ್ಣಿನ ಸ್ವಭಾವವನ್ನು ಅರಿತೆನೆನ್ನುವಂತಿಲ್ಲ. ತಾನೂ ಹೆಣ್ಣೆಂದರೆ ಬಾಯಿಬಿಡುವ ಸ್ವಭಾವದ ಮನುಷ್ಯ. ಅಲ್ಲಿ ವಿಶ್ವವಿದ್ಯಾಲಯದಲ್ಲಿ ಓದುವುದಕ್ಕೆ ಮೊದಲು ಹೋದಾಗ ಆ ಫಲಾಹಾರ ಮಂದಿರದ ಆ ಯಜಮಾನನ ಆ ಮಗಳು. ತುಂಬ ವಿಶ್ವಾಸ. ಮದುವೆಯಾದೇನೆಂದು ತನಗೂ ತೋರಿತು. ಅವಳೂ ಒಪ್ಪುವಂತಿದ್ದಳು. ಆದರೆ ಮದುವೆಯಲ್ಲಿ ಸಿಕ್ಕಿಬೀಳುವುದಕ್ಕೆ ತನಗೆ ಇಷ್ಟವಿಲ್ಲ. ಆಮೇಲೆ ಊರಿನಲ್ಲಿ ಇನ್ನೊಬ್ಬ ಹುಡುಗಿ. ಮುಖ ನೋಡಿದರೆ ತನಗೆ ಪ್ರೇಮದ ಅಮಲು ಏರುವುದು. ಮದುವೆಯಾಗಲು ಕೆಲವು ಅಡ್ಡಿ. ಎಲ್ಲಕ್ಕೂ ಮಿಗಿಲಾಗಿ ಮದುವೆಯಾಗುವ ಮನಸ್ಸಿಲ್ಲ. ಮತ್ತೊಂದು ವಿಶ್ವವಿದ್ಯಾಲಯ. ಅಲ್ಲಿ ಓದುವ ಕಾಲದಲ್ಲಿ ಒಂದು ಹಳ್ಳಿಗೆ ಹೋಗಿ, ಪಾಪ, ಆ ಸಾತ್ವಿಕ ಸಂಸಾರದ ಪರಿಚಯ ಆಯಿತು. ಫ್ರೆಡರಿಕೆ ಎಂಥ ಸರಳ ಜೀವಿ! ಅವಳ ಸ್ವಭಾವ ದ್ರಾಕ್ಷೆಯ ಸ್ವಭಾವ. ಅದರಲ್ಲಿ ತೆಗೆದು ಹಾಕಬೇಕಾದ ಭಾಗವೇ ಇಲ್ಲ. ಅದು ಸಂಪೂರ್ಣವಾಗಿ ತನ್ನನ್ನು ತೆತ್ತು ಕೊಳ್ಳುವ ಸ್ವಭಾವ. ಮದುವೆಯಾಗುವೆನೆಂಬ ಯೋಚನೆಯಿಲ್ಲದ ತಾನು ಅವಳೊಂದಿಗೆ ಸರಸವನ್ನು ಅತಿದೂರ ಕೊಂಡುಹೋದನು. ತಾನು ತೊರೆದು ಬಂದುಬಿಟ್ಟಾಗ ಅವಳು ಸಾಯುವಂತೆ ಆದಳು. ಸದ್ಯ ಸಾಯಲಿಲ್ಲ. ಕೆಲವು ವರ್ಷದಮೇಲೆ ಬೇರೊಬ್ಬನನ್ನು ಮದುವೆಯಾಗಿ, ಮಕ್ಕಳನ್ನು ಪಡೆದು ಸಂಸಾರಿಯಾಗಿ ಬಾಳಿದಳು. ತಾನು ಇದನ್ನು ನೋಡಿದ್ದರಿಂದ ತನ್ನ ನಡತೆಯ ವಿಷಯದಲ್ಲಿ ಪಶ್ಚಾತ್ತಾಪಕ್ಕೆ ಕಾರಣ ಕಡಮೆ ಯಾಯಿತು....

ಈ ಸ್ಥಳಗಳಲ್ಲೆಲ್ಲ ತನಗೆ ಎಂಥ ಎಂಥ ಮಿತ್ರರು ದೊರೆತರು! ವಯಸ್ಸಿನಿಂದ, ಅನುಭವದಿಂದ, ತಿಳಿವಳಿಕೆಯಿಂದ, ತನಗಿಂತ ಎಷ್ಟೋ ಹಿರಿಯರು. ತನ್ನನ್ನು ಎಷ್ಟು ವಿಶ್ವಾಸದಿಂದ ಕಂಡರು! ತಾನು ಅವರನ್ನು ಎಷ್ಟೇ ಗೌರವದಿಂದ ಕಂಡರೂ ಮಾತು ನಡತೆಯಲ್ಲಿ ಸಮಾನನೆಂಬಂತೆಯೇ ಇರುತ್ತಿದ್ದನು. ತನ್ನದು ಯಾವಾಗಲೂ ಸ್ವಾಭಿಮಾನದ ಸ್ವಭಾವ. ಅವರು ಇದನ್ನು ಲಕ್ಷ್ಯಮಾಡದೆ ಎಷ್ಟೋ ವಿಶ್ವಾಸದಿಂದ ನಡೆದುಕೊಂಡರು. ತನ್ನ ಕೃತಿಗಳನ್ನು ಕೇಳಿ ಮೆಚ್ಚಿದರು, ಹೊಗಳಿದರು. ಮುಂದಕ್ಕೆ ಕೆಲಸಮಾಡುವಂತೆ

ಉತ್ತೇಜನ ಕೊಟ್ಟರು. ದೊಡ್ಡ ಜೀವಗಳು. ದೊಡ್ಡ ರೀತಿಯಲ್ಲಿ ನಡೆದು ಕೊಂಡವು....

ಬದುಕನ್ನು ಕಾಡಿಗೆ ಎಳೆಯುವ ಪ್ರವೃತ್ತಿಗಳು ಮನುಷ್ಯನಲ್ಲಿ ಎಷ್ಟು? ಅದನ್ನು ಉಳಿಸುವ ಪ್ರಚೋದನ ಎಷ್ಟು? ತನ್ನ ಯೌವನದ ಕಾಲ ಈ ಎರಡೂ ಮನೋಧರ್ಮದಿಂದ ರಣರಂಗವಾಗಿತ್ತು. ತನಗೆ ಅವಳನ್ನು ಕಂಡರೆ ಪ್ರೀತಿ. ಅವಳು ಕೆಸ್ಟ್ನರನ್ನು ಮದುವೆಯಾಗ ಒಪ್ಪಿರುವ ಹೆಣ್ಣು. ಅವನು ಒಳ್ಳೆಯ ಮನುಷ್ಯ. ತಾನೂ ಪ್ರೇಮ ತೋರಿಸಿದರೂ ತಪ್ಪು ಏನನ್ನೂ ಮಾಡಲಿಲ್ಲ. ಆದರೆ ಅದೊಂದು ನರಕಯಾತನೆ. ಆ ಇನ್ನೊಬ್ಬ ಚೆಲುವೆ. ತಾನು ಹೋಗುವುದು, ಬರುವುದು, ನಗುವುದು, ನುಡಿಯುವುದು. ಮದುವೆಯ ಮಾತನ್ನು ಎತ್ತಲಿಲ್ಲ. ಬೇರೆ ಯಾವನೋ ಬಂದು ಅವಳನ್ನು ಮದುವೆಯಾಗುವುದಾಗಿ ಗೊತ್ತುಮಾಡಿಕೊಂಡನು. ಆಮೇಲೆ ತನ್ನ ಸ್ಥಾನವೇನು? ಆದರೆ ಬಿಡುವ ಇಷ್ಟವಿಲ್ಲ. ಸರಿ, ಆ ಬಂದವನೊಂದಿಗೆ ತನಗೆ ಮನಸ್ತಾಪ. ಮಾನವಂತರೆಂಬ ಈ ಸಾಮಾನ್ಯ ಜನದಲ್ಲಿ ತನ್ನಂಥ ಮನುಷ್ಯನಿಗೆ ಸ್ಥಳವಿಲ್ಲ. ಪ್ರೇಮೋಪಾಸಕರೆಂದು ಇಷ್ಟ ಬಂದಂತೆ ಆಡುತ್ತಿದ್ದ ಆ ಇನ್ನೊಂದು ಗುಂಪು ಇನ್ನೊಂದು ಕಡೆ ಅತಿರೇಕಕ್ಕೆ ಹೋಗುತ್ತಿತ್ತು. ಕ್ಯಾರೊಲೀನ್ ತನ್ನ ಸ್ನೇಹಿತನ ಪ್ರೇಯಸಿ; ಅಷ್ಟರಲ್ಲೇ ಅವನನ್ನು ಮದುವೆಯಾಗಲಿದ್ದಳು. ಆದರೂ ತನ್ನ ವಿಷಯದಲ್ಲಿ ಅವಳದು ಅದೆಷ್ಟು ಧಾರಾಳ! ಹತ್ತು ಜನ ಕುಳಿತಿರುವ ಕಡೆ ತಾನು ಹೋದರೆ ಎದ್ದು ಬಂದು ಎಲ್ಲರೆದುರಿಗೇ ತನ್ನನ್ನು ಅಪ್ಪಿಕೊಳ್ಳುವಳು, ಮುದ್ದಿಡುವಳು. ಇದು ತನಗೆ ಆಗ ಚೆನ್ನಾಗಿಯೇ ಇತ್ತು. ಚೆನ್ನಾಗಿದ್ದರೂ, ಸರಿಯೆ ಎಂದು ಒಂದೊಂದು ಸಲ ತೋರುತ್ತಿತ್ತು. ಸ್ನೇಹಿತನಿಗಂತೂ ಇದರಿಂದ ಅಸಮಾಧಾನವೇ. ಆದರೆ ಆ ಮಳೆ ಬಂದ ದಿನ ಇವರು ಕಾಡಿನಲ್ಲಿ ಸಿಕ್ಕಿಕೊಂಡು ತಾನು ಹಾಡಿದ್ದು, ತನ್ನ ಜೊತೆಗಾರರು ಕೇಳಿದ್ದು, ಅವೆಲ್ಲ ಎಂಥ ಆನಂದದ ದಿನಗಳು....

ತನ್ನ ಅನುಭವವನ್ನು ಮುಖ್ಯ ವಿಷಯವಾಗಿಟ್ಟುಕೊಂಡು ಬರೆದ ಗ್ರಂಥದಿಂದ ತನಗೆ ಎಂಥ ಕೀರ್ತಿ ಬಂದಿತು! ಆಮೇಲಾದರೂ ಹೀಗೆ ತನ್ನ ಆಯಾ ಕಾಲದ ಅನುಭವವನ್ನು ಗ್ರಂಥದಲ್ಲಿ ರೂಪುಗೊಳಿಸಿಯೇ

ತಾನು ಸುಖಪಟ್ಟಿದ್ದನು. ಲೋಕವೂ ಅದರಿಂದ ಸುಖಪಟ್ಟಿನೆಂದು ತಿಳಿಯಿತು. ಎಷ್ಟು ಜನ ತನ್ನನ್ನು ಮೆಚ್ಚಿದರು! ತನ್ನನ್ನು ಮಂತ್ರಿಯಾಗಿ ಮಾಡಿಕೊಂಡ ಮಂಡಲೇಶ್ವರ ಕುಮಾರನು; ಕೊನೆ ಕೊನೆಗೆ ನೆಪೋಲಿಯನ್, ಬೈರನ್, ಸ್ಕಾಟ್, ಕಾರ್ಲೈಲ್. ಆಹಾ, ಈ ಇಂಗ್ಲಿಷು ಜನ ಎಂತಹ ಗುಣಪಕ್ಷಪಾತಿಗಳು! ಅವರ ಪುಣ್ಯ ಬಹು ದೊಡ್ಡದು. ಹಾಗಿಲ್ಲದಿದ್ದರೆ ಅವರ ಕಾವ್ಯಪ್ರಪಂಚದಲ್ಲಿ ಷೇಕ್ಸ್‌ಪಿಯರ್ ಬರುತ್ತಿದ್ದನೇ?....

ಕವಿಗೆ ಮಂಕು ಸ್ವಲ್ಪ ಹೆಚ್ಚಾಯಿತು. ಯೋಚನೆ, ಯೋಚನೆಯಾಗಿ ಹರಿಯುವುದು ತಪ್ಪಿ, ಘನಿಸಿ ಸ್ವಪ್ನವಾಯಿತು. ಅವನ ಪಕ್ಕದಲ್ಲಿ ಒಬ್ಬ ವ್ಯಕ್ತಿ ಬಂದು ಕುಳಿತಂತೆ ಅವನಿಗೆ ಭಾಸವಾಯಿತು. ಆಂಗ್ಲವ್ಯಕ್ತಿ. ಉದ್ದವಾದ ಮುಖ; ಉದ್ದವಾದ ಮೂಗು; ವಿಲಕ್ಷಣವಾದ ಹೊಳಪಿನ ಕಣ್ಣು. ಕವಿ 'ನೀನು ಷೇಕ್ಸ್‌ಪಿಯರ್' ಎಂದನು. ವ್ಯಕ್ತಿ 'ಅಹುದು' ಎಂದನು. ಕವಿ ಷೇಕ್ಸ್‌ಪಿಯರ ಹೆಸರನ್ನು ಬರೆಯುವುದಕ್ಕೆ ಕೈ ಎತ್ತಿದನು. ತನ್ನ ಬಟ್ಟೆಯಮೇಲೆ W ಅಕ್ಷರವನ್ನು ತಿದ್ದಿದನು. ಷೇಕ್ಸ್‌ಪಿಯರ ಜೊತೆಯಲ್ಲಿ ಸುಮ್ಮನೆ ಕುಳಿತಿರುವುದೇ ಅವನಿಗೆ ತುಂಬಾ ಸಮಾಧಾನವನ್ನು ತಂದಿತು. ಅವನು ಆ ಮುಖವನ್ನು ತೃಪ್ತಿಯಿಲ್ಲದೆ ನೋಡುತ್ತ ಹೊತ್ತು ಕಳೆದನು. ನಿದ್ದೆ ಮತ್ತಷ್ಟು ಆಳವಾಗಿ ಸ್ವಪ್ನಸೀಮೆ ಹಿಂದುಳಿದು ಹೋಯಿತು. ಅದರೊಂದಿಗೆ ಷೇಕ್ಸ್‌ಪಿಯರ್ ರೂಪವೂ ಮರೆತು ಹೋಯಿತು. ಎಷ್ಟೋ ಹೊತ್ತು ನಿದ್ದೆ ಆದಮೇಲೆ ಎಚ್ಚರಗೊಳ್ಳುತ್ತಿರಬೇಕಾದರೆ ಮತ್ತೆ ಸ್ವಪ್ನದ ಸೀಮೆಯಲ್ಲಿ ಯಾವುದೋ ದೇಶದ ಮುಖ ಬೇರೆ ಒಂದು ಕಂಡಿತು. ಕವಿ ಆ ಮುಖವನ್ನು ನೋಡಿದನು; ಅಪೂರ್ವವಾದ ಅದರ ಭಾವದಿಂದ ತೀರ ಕೌತುಕಗೊಂಡನು. 'ನೀನು ಯಾರು?' ವ್ಯಕ್ತಿ ಮಾತನಾಡಲಿಲ್ಲ. 'ಹಾಫೀಸೇ?' ಉತ್ತರವಿಲ್ಲ. 'ಛೆ ಏನು ಕೇಳುತ್ತಿದೇನೆ? ನೀನು ಕಾಳಿದಾಸ.' ವ್ಯಕ್ತಿ ಮಾತನಾಡಲಿಲ್ಲ; ಸಕ್ಕು ಸಮ್ಮತಿಯನ್ನು ಸೂಚಿಸಿತು. ಪಾಪ, ಜರ್ಮನ್ ಭಾಷೆ ಅರಿಯದವನು ತನ್ನ ಮಾತಿಗೆ ಉತ್ತರ ಹೇಗೆ ಕೊಡುವುದು? ತಾನು ಕೇಳಿದ ಮಾತು ಅವನಿಗೆ ತಿಳಿದೂ ಇರಲಾರದು. ಆದರೆ ಇದು ಏನು ಕಣ್ಣು! ಷೇಕ್ಸ್‌ಪಿಯರ ನೋಟ ಬೇಸರಪಡದೆ ಲೋಕವನ್ನು ವಿವರ ವಿವರವಾಗಿ ನೋಡುವ

ನೋಟ. ಈ ನೋಟ ಒಂದೊಂದು ಸಲ ಎವೆ ತೆರೆದು ಎವೆ ಮುಚ್ಚುವ ಹೊತ್ತಿನಲ್ಲಿ ಲೋಕವನ್ನೆಲ್ಲ ಒಂದು ಸಲಕ್ಕೆ ತುತ್ತುವ ನೋಟ. ಈ ಪೂರ್ವ ದೇಶೀಯರೇ ಹೀಗೆ. ನಿಷ್ಕ್ರಿಯೆಯಿಂದ ಎಲ್ಲ ಕರ್ಮದ ಫಲವನ್ನು ಸಾಧಿಸುವೆವೆನ್ನುವರು. ಒಂದು ದೃಷ್ಟಿಯಿಂದ ಇದು ಸರಿ. ಇನ್ನೊಂದು ದೃಷ್ಟಿಯಿಂದ ಇದರಂಥ ಅವಿವೇಕ ಉಂಟೆ? ಇದರಿಂದಲೇ ಇವರ ಲೋಕ, ಭಾವದಲ್ಲಿ ಎಷ್ಟೋ ಸತ್ಯವನ್ನು ಮುಟ್ಟಿ, ಬದುಕಿನಲ್ಲಿ ಮಾತ್ರ ದರಿದ್ರವಾಗಿದೆ. ಆದರೂ ಈ ಬುದ್ಧಿಯು ನಿಲುಕು ಬಹು ದೂರದ್ದು. ಕವಿ ಮತ್ತೆ ವ್ಯಕ್ತಿಯ ಕಡೆ ನೋಡಿದನು. ಮೂರ್ತಿ ಮೊದಲಿನಂತೆಯೇ ಮುಖದಮೇಲೆ ಯಾವ ಭಾವವನ್ನೂ ತೋರಿಸದೆ ಸುಮ್ಮನೆ ಕುಳಿತಿತ್ತು. 'ನಾನು ನಿನ್ನ ಶಾಕುಂತಲ ವನ್ನು ಕುರಿತು ಒಂದು ಶ್ಲೋಕವನ್ನು ಬರೆದೆನು. ನೀನು ಬಲ್ಲೆಯಾ?' ವ್ಯಕ್ತಿ ಬಲ್ಲೆನೆಂಬಂತೆ ಮುಖದಲ್ಲಿ ತೋರಿಸಿತು. ಕವಿ ಹೇಳಿದನು: 'ವಸಂತದ ಹೂಗೊಂಚಲಿನಿಂದ ಹೇಮಂತದ ಬರಿಗೈಯವರೆಗೆ, ಹಸುಳೆಯ ಅರಿಯುಮೆಯಿಂದ ಮುಪ್ಪಿನ ಅರಿವಿನವರೆಗೆ, ಭೂಮಿಯ ಚೆಲುವುಗಳಿಂದ ಸ್ವರ್ಗದ ಆನಂದದವರೆಗೆ, ಎಲ್ಲವನ್ನೂ ನೀನು ಒಂದು ಮಾತಿನಲ್ಲಿ ನೋಡ ಬೇಕೆನ್ನುವೆಯಾ? ಹಾಗಿದ್ದರೆ ನಾನು ಶಕುಂತಲಾ ಎಂದು ಉಸುರುತ್ತೇನೆ. ಆ ಒಂದು ಹೆಸರಿನಲ್ಲಿ ಎಲ್ಲವೂ ಅಡಗಿದೆ. ಇದು ನಾನು ಬರೆದ ಶ್ಲೋಕದ ಅರ್ಥ' ಎಂದನು. ವ್ಯಕ್ತಿ ಸ್ವಲ್ಪ ನಕ್ಕು ಸಂತೋಷವನ್ನು ಸೂಚಿಸಿತು. ಮತ್ತೆ ಇದ್ದಹಾಗೆಯೇ ಅದೇ ಬೇರೆ ಒಂದು ವ್ಯಕ್ತಿಯಂತೆ ಕಂಡಿತು. ಕವಿ 'ನೀನು ಯಾರು?' ಎಂದನು. ಮತ್ತೆ ವ್ಯಕ್ತಿ ಮಾತನಾಡಲಿಲ್ಲ. 'ನೀನು ಹಾಫೀಸ್.' ಮೂರ್ತಿ 'ಅಹುದು' ಎಂದು ಸನ್ನೆ ಮಾಡಿತು. ಹಾಫೀಸ್, ಹಾಫೀಸ್, ಎನ್ನುತ್ತ ಕವಿ ಭಾವಸರಸಿಯಲ್ಲಿ ಮುಳುಗಿದನು....

ಹಾಫೀಸನಂತೆ ತನ್ನಿಂದ ಕಾವ್ಯ ಬರೆಯಿಸಿದವಳು ವಿಲ್ಲಿಮರ್ ಸುಂದರಿ. ಜುಲೈಕ ಎಂಬ ಹೆಸರಿನಿಂದ ತನ್ನನ್ನು ಕುರಿತು ಪ್ರೇಮಕೃತಿ ಗಳನ್ನು ಬರೆದಳು. ಎಂಥ ಹೆಣ್ಣು! ಏನು ಬುದ್ಧಿ ಅವಳದು! ಎಷ್ಟು ಗುಣ! ಅವಳೂ, ಅವಳ ಗಂಡನೂ, ತಾನೂ ನದೀತೀರದ ಆ ಊರಿನಲ್ಲಿ ಎಂಟು ದಿನ ಎಷ್ಟು ಆನಂದದಲ್ಲಿ ಕಳೆದರು! ಅವಳು ಅಷ್ಟೇನೂ ಸುಂದರಿ ಯಲ್ಲ; ಆದರೆ ಬೆಡಗಿನಿಂದ, ವಿಲಾಸದಿಂದ, ಇನ್ನೆಂಥ ಸುಂದರಿಯರಿಗೂ

ಸಾಧ್ಯವಲ್ಲದ ರೀತಿಯಲ್ಲಿ ಜನರನ್ನು ಮೋಹಗೊಳಿಸಿದ್ದಳು. ಜನರನ್ನೇನು, ತನ್ನನ್ನು. ಎಂಟು ದಿನ ಆ ಊರ ನದೀತೀರದ ವಿಶ್ರಾಂತಿ ಗೃಹದಲ್ಲಿ ಆ ದಂಪತಿಗಳೊಡನೆ ಇರುತ್ತ ತಾನು ಸ್ವರ್ಗ ಸುಖವನ್ನು ಭೂಮಿಯಲ್ಲಿ ಅನುಭವಿಸಿದ್ದನು. ಆದರೂ ಆಸೆ. ಅವಳಿಗೂ ಆಸೆ ಹುಟ್ಟಿರಬೇಕು. ಆ ಬೆಳದಿಂಗಳ ರಾತ್ರಿ ತಾನೂ ಅವಳೂ ಇಬ್ಬರೇ ತಾವಿದ್ದ ಮಂದಿರದ ಮಚ್ಚಿನ ಮೇಲೆ ಕುಳಿತಿರುವಾಗ ಅವಳು ಹೇಳಿದಳು, 'ಗಯಟಿ, ಇನ್ನು ನಾನೂ ನೀನೂ ಒಂದು ಕಡೆ ಇರುವುದು ಕ್ಷೇಮವಲ್ಲ' ಎಂದು. ತಾನು ಅವಳ ಕಡೆ ನೋಡಿ 'ಹೌದು' ಎಂದನು. ಇಬ್ಬರೂ ಒಡನೆಯೇ ಮಂದಿರ ದೊಳಕ್ಕೆ ಇಳಿದುಬಂದು ತಮ್ಮತಮ್ಮತ್ತ ನಡೆದರು. ತಾನು ಮಾರನೆಯ ಬೆಳಗಾಗ ಯಾರಿಗೂ ಹೇಳದೆ ಓಟಕಿತ್ತನು. ನಂಬಿದ ಮಿತ್ರನಿಗೆ ತನ್ನಿಂದ ದ್ರೋಹವಾಗಬಾರದು. ಸಲಿಗೆಯಿಂದ ಬಳಿಗೆ ಬಂದ ಹೆಣ್ಣು ತನ್ನಿಂದ ಕೆಡಬಾರದು. ಅವಳು ಸಮ್ಮತಿಸುವಂತಿದ್ದರೂ ತಪ್ಪೆಂದು ತಿಳಿಯುವುದಾದರೆ ಆ ಸಂಬಂಧ ಸರಿಯಲ್ಲ. ಯಾವ ಸತ್ವವೋ ಆ ಹೊತ್ತಿನಲ್ಲಿ ತನ್ನಿಂದ ಒಳ್ಳೆಯದನ್ನು ಮಾಡಿಸಿತು. ನೀತಿ ಎನ್ನುವುದು ಸಾರ್ಥಕವಾಗುವುದು ಇಂಥ ಅಲ್ಲಿ. ಇಂಥ ಹೊತ್ತಿನಲ್ಲೇ ಮನುಷ್ಯನು ಅರಿಯುವುದು, ಬದುಕು ಬರಿಯ ಸುಖಕ್ಕಲ್ಲ, ಧರ್ಮಕ್ಕಾಗಿ ನಮಗೆ ದೊರಕಿದೆ, ಎನ್ನುವುದನ್ನು. ಬದುಕು ಒಂದು ರಥ. ಒಂದೊಂದು ರಥದಲ್ಲಿ ಒಬ್ಬೊಬ್ಬರು ನಾವು ಕುಳಿತಿದ್ದೇವೆ. ಒಂದೊಂದು ರಥವನ್ನೂ ಕುದುರೆಗಳ ಒಂದು ಹಿಂಡು ವೇಗವಾಗಿ ಸೆಳೆಯುತ್ತಿದೆ. ನೆಲವೂ ಅಷ್ಟು ಚೆನ್ನಾಗಿಲ್ಲ. ಅಲ್ಲಲ್ಲಿ ಹಳ್ಳಕೊಳ್ಳ; ಇಲ್ಲಿ ಗುಡ್ಡ, ಇಲ್ಲಿ ನೀರು; ಮಧ್ಯೆ ದಾರಿ. ರಥದಲ್ಲಿ ಕುಳಿತ ನಾವು ನಿಲ್ಲಿಸಲಾಗದ ಈ ಕುದುರೆಗಳನ್ನು, ಹಳ್ಳಗಳ ಮಧ್ಯೆ, ಗುಡ್ಡಗಳ ತಗ್ಗಿನಲ್ಲಿ, ನೀರಿನ ಅಂಚಿನಲ್ಲಿ, ದಾರಿ ಎಲ್ಲಿದೆ ಎಂದು ನೋಡಿಕೊಂಡು ತಿರುಗಿಸುತ್ತಿರಬೇಕು. ದಾರಿ ಎತ್ತ ಹೋದರೆ ಚೆನ್ನವೆಂದು ನಾವೇನು ಬಲ್ಲೆವು? ಎತ್ತ ಎಂದು ಯೋಚಿಸುವುದಕ್ಕೂ ಹೊತ್ತಿರುವುದಿಲ್ಲ. ಸದ್ಯ ಎದುರಿಗಿರುವ ಹಳ್ಳವನ್ನು ತಪ್ಪಿಸಿದರೆ, ಗುಡ್ಡವನ್ನು ಸುತ್ತಿಸಿದರೆ, ಸಾಕು; ದಾರಿ ಒಂದನ್ನು ಹಿಡಿದರೆ ಸಾಕು. ಹೀಗೆ ಓಡಿಯಾಡಿ ಮನುಷ್ಯನು ಜೀವನವನ್ನು ಮುಗಿಸಬೇಕು....

ಹೀಗೆ ಹಳ್ಳ ದಿಣ್ಣೆಯ ಈ ದಾರಿಯಲ್ಲಿ ತಾನು ಏನೋ ಒಂದು ರೀತಿ ಉಳಿದುಕೊಂಡಿದ್ದನು. ತನ್ನ ಜೊತೆಯವರು ಎಷ್ಟು ಜನ ಆ ಹಳ್ಳ ಕೊಳ್ಳಕ್ಕೆ ತೇರನ್ನು ಬಿಟ್ಟು ಕೆಟ್ಟುಹೋದರು! ಮಂಡಲೇಶ್ವರನು ತನ್ನನ್ನು ಮಂತ್ರಿಯಾಗಿ ಕರೆದುಕೊಳ್ಳದಿದ್ದಗೆ ತಾನು ಏನಾಗಿಹೋಗುತ್ತಿದ್ದನೊ? ತಾನು ಜೊತೆಗಿಲ್ಲದಿದ್ದರೆ ಅವನಾದರೂ ಏನಾಗುತ್ತಿದ್ದನೊ? ತರುಣ, ಧನವಂತ. ಕೆಡಿಸುವ ಮಂದಿ ಹತ್ತಿರದಲ್ಲೇ ನೂರು ಜನ. ತಾನು ಬಂದು ಅವನನ್ನು ಸ್ವಲ್ಪ ಹಿಡಿತದಲ್ಲಿರಿಸಿಕೊಂಡು ಆಟದ ಹೊತ್ತಿನಲ್ಲಿ ಆಟ, ಕೆಲಸದ ಹೊತ್ತಿನಲ್ಲಿ ಕೆಲಸ, ಎಂದು ಏರ್ಪಡಿಸಿದ್ದರಿಂದ ತನಗೂ ಒಳ್ಳೆಯದಾಯಿತು, ಮಂಡಲೇಶ್ವರನಿಗೂ ಒಳ್ಳೆಯದಾಯಿತು, ರಾಷ್ಟ್ರಕ್ಕೂ ಒಳ್ಳೆಯದಾಯಿತು. ಆದರೂ ತಮ್ಮ ಅವಿವೇಕದಿಂದ ಜನಕ್ಕೆ ಸ್ವಲ್ಪ ತೊಂದರೆ ಆಗದೆ ಹೋಗಲಿಲ್ಲ. ಮಂಡಲೇಶ್ವರನು ಬೇಟೆಯ ಅಭಿರುಚಿಯಿಂದ ಹುಚ್ಚು ಹುಚ್ಚು ಆಟವಾಡಿದನು. ಜನರಿಂದ ಬರುವ ಹಣಕ್ಕೆ ಬೇರೆ ವೆಚ್ಚವಿಲ್ಲವೆ? ದೊರೆಯಾದ ಮಾತ್ರಕ್ಕೇ ಇವನ ವಿನೋದಕ್ಕಾಗಿ ಎಷ್ಟು ಅದು ಖರ್ಚು? ಇವನು ಬೇಟೆಯಾಡುವುದಕ್ಕೆ ಕಾಡುಮೃಗ ಬೇಕು; ಕಾಡುಮೃಗ ಬೆಳೆಯುವುದಕ್ಕೆ ಕಾಡು ಬೇಕು; ಕಾಡು ಬೇಕಾದ್ದರಿಂದ ಉಳುಮೆಯ ನೆಲ ಕಡಮೆಯಾಗಬೇಕು. ಬೆಳೆದು ತಿನ್ನುವ ಮಂದಿ ಏನಾಗಬೇಕು? ತನ್ನ ವಿನೋದಕ್ಕಾಗಿ ಸಾಕುವ ಹುಲಿಗೆ ತನ್ನ ರೈತನ ದನ ತೀನಿ. ಇದು ಅವನಿಗೆ ತಿಳಿಯುತ್ತಿರಲಿಲ್ಲ. ಸುಖದಲ್ಲಿರುವ ಜನಕ್ಕೆ ಬಡತನದ ಕಷ್ಟ ತಿಳಿಯುವುದಿಲ್ಲ. ಬಹು ದಿವಸ ಇಂಥ ನಡತೆಯನ್ನು ನೋಡಿ ಬೇಸತ್ತು, ತಾನು ಇಲ್ಮಿನಾವಿನಲ್ಲಿ ಮಂಡಲೇಶ್ವರನಿಗೆ ಬುದ್ಧಿ ಬರುವಂತೆ ಒಳ್ಳೆಯ ಕೆಲಸ ಮಾಡಿದನು. ಬೇಟೆ ಮುಗಿಸಿ ವಿನೋದಕ್ಕೆಂದು ಎಲ್ಲರೂ ಒಂದು ಕಡೆ ಕುಳಿತಿರುವಾಗ, ತಾನು ಒಬ್ಬ ರೈತನ ವೇಷದಲ್ಲಿ ಬಂದು ರೈತನ ಗೋಳನ್ನು ವಿವರಿಸಿದ ಒಂದು ಪದ್ಯವನ್ನು ಓದಿದನು. ಅವನೂ ಅದನ್ನು ಸಹಿಸಿಕೊಂಡನು; ತನ್ನ ಮಂತ್ರಿ ತನ್ನ ಒಳ್ಳೆಯದಕ್ಕಾಗಿ ಇದನ್ನು ಮಾಡಿದನೆಂದು ಗ್ರಹಿಸಿದನು. ಅವನು ಬಹು ಒಳ್ಳೆಯ ತರುಣ. ತನಗಿಂತ ಚಿಕ್ಕವನು. ತಾನು ಹೋದ ಮೇಲೆ ಹೋಗಬೇಕಾಗಿತ್ತು. ಅಜಾಗ್ರತೆಯ ಬಾಳನ್ನು ಬಾಳಿ ಮುಂದಾಗಿ ತೀರಿಕೊಂಡನು. ಪಾಪ. ಏನೇ ಆದರೂ ಅವನನ್ನು ತನ್ನ ಜನದ ಹಿತವನ್ನೇ

ಮುಂದುಮಾಡಿ ನಡೆದನೆಂದೇ ವರ್ಣಿಸಬೇಕು. ಆ ಸ್ಥಿತಿಯಲ್ಲಿ ಹುಟ್ಟಿದವರು ಅವನಷ್ಟು ಒಳ್ಳೆಯದನ್ನು ಮಾಡಿ ಅಷ್ಟಕ್ಕೆ ಹೆಚ್ಚಿದ ಕೆಟ್ಟದನ್ನು ಮಾಡದೆ ಇರುವವರು ತೀರ ಅಪೂರ್ವ....

ಆ ಕಾಲವನ್ನೆಲ್ಲ ವಾನ್‌ಸ್ಟೈನ್ ಪತ್ನಿ ತನಗೆ ಸುಖಮಯವಾಗಿ ಮಾಡಿದಳು. ತಾನು ಮಾಡಿದ ಸಂಬಂಧ ತಪ್ಪು ಎಂದು ಕೆಲವರು ಅಭಿಪ್ರಾಯಪಟ್ಟರು. ಬಾಳಿನಲ್ಲಿ ಈ ತಪ್ಪು ಎನ್ನುವವರ ಸರಿ ಯಾವುದೊ ಅಷ್ಟನ್ನೇ ಮಾಡಿದರೆ ಲೋಕದಲ್ಲಿ ಯಾರು ಉಳಿಯಬೇಕು? ನೀತಿ ನೀತಿ ಎಂದು ಇವರು ಹೇಳುತ್ತಲೇ ಇರುವರು. ಸಂಸಾರ ಬೆಂಗಾಡಾದರೆ ಯಾರೂ ಬಂದು ಸ್ವಲ್ಪ ಹರ್ಷಗೊಳಿಸುವುದಿಲ್ಲ. ಅವಳು ಗಂಡನೊಂದಿಗೆ ಸುಖವಾಗಿದ್ದಿದ್ದರೆ ತಾನು ಅವಳ ಗೊಡವೆಗೆ ಹೋಗಬೇಕಾಗಿರಲಿಲ್ಲ. ಹೆಂಡತಿ ಹೇಗಿದ್ದಾಳೆನ್ನುವುದು ಗಂಡನಿಗೆ ಬೇಕಿಲ್ಲ. ಮಾತುಕಥೆಯ ಸುಖಕ್ಕಾಗಿ ಅವಳು ಹೆರವನೊಂದಿಗೆ ಸರಸಮಾಡಿ ವಿಶ್ವಾಸ ಬೆಳೆದರೆ ಆ ಗಂಡನಿಗೆ ಇಲ್ಲದ ಅಡ್ಡಿ ಉಳಿದವರಿಗೆ ಏನು? ಆದರೆ ಇದೇ ಸಮಾಜ. ಆಕೆ ಬಹು ಚತುರೆ. ತನ್ನ ಅವಳ ಮನಸ್ಸು ಎಷ್ಟು ಚೆನ್ನಾಗಿ ಬೆರೆಯಿತು? ತನಗೆ ಅವಳಿಗೆ ಪರಿಚಯ ಸಾಕಾದಷ್ಟು ಬೆಳೆದಿದ್ದರೂ ಸಹವಾಸ ಮೊದಲಾಗದೆ ಇದ್ದ ದಿನ: ಒಂದು ರಾತ್ರಿ ತನಗೆ ಮಿತಿಮೀರಿ ಆಸೆ ಆಗಿ ತಾನು ಮನೆ ಬಿಟ್ಟು ಹೊರಟನು. ಅವಳ ಮನೆಯೊಳಕ್ಕೆ ಹೋಗುವುದಕ್ಕೆ ಹೊತ್ತು ಮೀರಿತ್ತು. ಆದಕಾರಣ ಒಳಗೆ ಹೋಗದೆ ಅದಕ್ಕೆ ಒಂದೆರಡು ಸುತ್ತು ಹಾಕಿ, ಹತ್ತಿರದಲ್ಲಿ ಸ್ವಲ್ಪ ಸುಳಿದು, ತನ್ನ ಮನೆಗೆ ಹೋಗಲು ಹಿಂದಿರುಗಿದನು. ನಾಲ್ಕು ಹೆಜ್ಜೆ ಹೋಗುವ ವೇಳೆಗೆ ಎದುರಿಗೆ ಅವಳು ಬರಬೇಕೆ? 'ಗಯಟೆ' ಎಂದಳು. ತಾನು 'ಹೌದು' ಎಂದನು. 'ಇದೇನು ಇಲ್ಲಿದ್ದೀಯೆ?' ತಾನು ಎಲ್ಲವನ್ನೂ ಹೇಳಿದನು. ಅವಳು, 'ಅಯ್ಯೋ ಹುಚ್ಚೇ, ಅಷ್ಟು ಅಪೇಕ್ಷೆ ಆದರೆ ಒಳಗೆ ಬರಬಾರದಾಗಿತ್ತೆ? ಹೊತ್ತಾಗಿದ್ದರೇನು?' ಎಂದಳು. ತನ್ನ ಆಸೆ ಒಂದು ಕಾಗದದಿಂದ, ಒಂದು ಆಡಿದ ಮಾತಿನಿಂದ, ದೂತನಿಂದ ಕಳುಹಿಸಿಕೊಟ್ಟ ಸಂದೇಶದಿಂದ, ಹೇಗೆ ಮುಟ್ಟಬಹುದಾಗಿತ್ತೋ ಹಾಗೆ ಇದೊಂದೂ ಇಲ್ಲದೆಯೇ ಅವಳನ್ನು ಮುಟ್ಟಿತ್ತು. ಏಕೆ ಹೊರಕ್ಕೆ ಬರುತ್ತಿದೇನೆಂದು ತಿಳಿಯದೆ ಅವಳು ಮನೆ ಬಿಟ್ಟು ಹೊರಟಿದ್ದಳು. ತನ್ನ

ಮನಸ್ಸೂ ಅವಳ ಮನಸ್ಸೂ ಇದೇ ರೀತಿ ಎಷ್ಟು ವರ್ಷ ಜೊತೆಯಾಗಿ ಹರಿದುವು! ಜೀವ ಜೀವಕ್ಕೆ ಸಹಜವಾದ ಸಂಬಂಧವಿರುತ್ತದೆ. ಅದನ್ನು ಮೀರಿ ಬಾಳುವುದು ಅಸುಖದ ದಾರಿ. ಅದನ್ನು ಅನುಸರಿಸಿ ಬಾಳುವುದೇ ನಿಜವಾದ ಸುಖದ ಉಪಾಯ. ಈ ಸಂಬಂಧವನ್ನು ಉಳ್ಳ ಗಂಡೂ ಹೆಣ್ಣೂ ಗಂಡ ಹೆಂಡತಿ ಆಗದೆಯೇ ಆ ಪ್ರೇಮವನ್ನು ಅನುಭವಿಸುತ್ತಾರೆ. ಆ ಸಂಬಂಧ ಇಲ್ಲದವರು ಗಂಡ ಹೆಂಡತಿ ಆಗಿ ಏನು ಹೆಣಗಿದರೂ ಪ್ರೇಮವನ್ನು ಅನುಭವಿಸಲಾರರು. ವಾನ್‌ಸ್ಟೈನ್ ಪತ್ನಿ ಕೊನೆಗೆ ತನ್ನಿಂದ ಅಸಾಧ್ಯ ವಾದ ನಿಷ್ಠೆಯನ್ನು ನಿರೀಕ್ಷಿಸಿದಳು. ತಾನು ವೃದ್ಧೆಯಾದ ಮೇಲೂ ತನ್ನನ್ನು ಬಿಡದೆ ಇರಬೇಕೆಂದು ಅವಳ ಎಣಿಕೆ. ಇದು ಆಗಲಿಲ್ಲ. ಅದರಿಂದ ಮನಸ್ತಾಪ. ಅವಳ ಕೊಂಕು ಮಾತೆಷ್ಟು? ಗಂಟು ಹುಬ್ಬೆಷ್ಟು? ಹೆಂಡತಿ ಯಾದುದಕ್ಕಿಂತ ಹೆಚ್ಚಾಗಿ ಅವಳು ತನ್ನನ್ನು ಪಾಡುಪಡಿಸಿದಳು....

ಈ ಮದುವೆ, ಈ ಪ್ರೇಮ, ಇದರ ಮಾತೇ ಇಷ್ಟು. ಕ್ರಿಸ್ಟೀನ್ ತನ್ನ ಮಗನನ್ನು ಹೆತ್ತಳು. ಇಪ್ಪತ್ತು ವರ್ಷ ತನ್ನ ಮನೆಯಲ್ಲಿ ಹೆಂಡತಿ ಯಾಗದೆ ಹೆಂಡತಿಯ ಬಾಳನ್ನು ಬಾಳಿದಳು. ನೆಪೋಲಿಯನನ ಸೈನಿಕರು ಮದುವೆಯಿಲ್ಲದವಳೆಂಬ ಕಾರಣದಿಂದ ಅವಳಲ್ಲಿ ತಪ್ಪುರೀತಿಯಲ್ಲಿ ನಡೆದರು. ಇಂಥ ಅವಮಾನದಿಂದ ಅವಳನ್ನು ಕಾಪಾಡಬೇಕೆಂದು ತಾನು ಅವಳನ್ನು ಶಾಸ್ತ್ರೋಕ್ತವಾಗಿ ಮದುವೆಯಾದನು. ಇದಾಗುವವರೆಗೆ ಆ ಹೆಂಗಸು ಸಮಾಜದ ಗೌರವಕ್ಕೆ ಅಧಿಕಾರಿಯಲ್ಲ; ಆ ಮಗನು ಔರಸ ಪುತ್ರನಲ್ಲ. ಸಮಾಜದ ಈ ಧೂರ್ತತೆಗೆ ಏನು ಹೇಳುವುದು? ಸ್ಕಿಲ್ಲರ್ ಇಂಥ ವಿಷಯದಲ್ಲಿ ಬಹು ಖಚಿತವಾದ ಅಭಿಪ್ರಾಯಗಳನ್ನಿಟ್ಟುಕೊಂಡಿದ್ದನು. ತನಗೂ ಅವನಿಗೂ ಇಂಥ ವಿಷಯದಲ್ಲಿ ತುಂಬ ಭೇದ....

ಸ್ಕಿಲ್ಲರ್ ಬಹಳ ಶಕ್ತ, ಧೀರ, ಧೀಮಂತ. ಅವನ ಆತ್ಮಗೌರವ ಅದ್ಭುತ ರೀತಿಯದು. ಅವನಿಗೆ ಹಣ ಬೇಕಾದಾಗ ಮಂಡಲೇಶ್ವರನು ಅದನ್ನು ಕೊಡುತ್ತೇನೆಂದನು. ಸ್ಕಿಲ್ಲರ್ ತೆಗೆದುಕೊಳ್ಳಲಿಲ್ಲ. ನಾಟಕಗಳನ್ನು ರಚಿಸಿ ಈ ಹಣವನ್ನು ನಾನು ಗಳಿಸುತ್ತೇನೆಂದನು. ಆರೋಗ್ಯವಿಲ್ಲದಿರು ವಾಗಲೂ ದೇಹವನ್ನು ದುಡಿಸಿ ಈ ಹಣವನ್ನು ಗಳಿಸುವುದರಲ್ಲಿ ಅವನು ಆಯುಸ್ಸನ್ನು ಕಡಮೆಮಾಡಿಕೊಂಡನು. ಹೀಗೆ ಬಾಳುವುದನ್ನು ಅವನು

ಸ್ವಾತಂತ್ರ್ಯವೆಂದು ಕರೆದನು. ಇದು ತನಗೆ ಒಪ್ಪಿಗೆ ಇಲ್ಲ. ಆದರೂ ಸ್ಕಿಲ್ಲರನ ಆ ತಪ್ಪು ಕೂಡ ಒಳ್ಳೆಯ ಭಾವನೆಯಿಂದ ಹೊರಟುಬಂದಿತ್ತು. ಪರಿಣಾಮ ಹೇಗಾದರೂ ಸ್ಕಿಲ್ಲರನ ಅಂತರ್ಯದಲ್ಲಿ ಇಂಥ ಎಲ್ಲ ಸಂದರ್ಭದಲ್ಲಿ ಒಳ್ಳೆಯ ಭಾವನೆ ಹೊರತು ಬೇರೆ ಏನೂ ಇರುತ್ತಿರಲಿಲ್ಲ. ಸ್ಕಿಲ್ಲರ್ ತನ್ನ ಬಾಳನ್ನು ಸದಾ ಹಿಡಿತದಲ್ಲಿಟ್ಟುಕೊಂಡಿದ್ದನು. ಅವನಿಗೆ ಚಪಲಗಳಿರಲಿಲ್ಲ. ಅಥವಾ ಇದ್ದರೆ ಅವನು ಅವಕ್ಕೆ ಎಡೆಗೊಡುತ್ತಿರಲಿಲ್ಲ. ಹೀಗೆ ಅವನು ಕ್ಷಣ ಕ್ಷಣಕ್ಕೆ ದಿನ ದಿನಕ್ಕೆ ಹೆಚ್ಚು ಹೆಚ್ಚು ಯೋಗ್ಯತೆಯನ್ನು ಗಳಿಸಿದನು. ಒಮ್ಮೆ ನೋಡಿ ಮತ್ತೊಮ್ಮೆ ನೋಡುವ ವೇಳೆಗೆ ಅವನು ಮತ್ತಷ್ಟು ಹಿರಿಯನಾಗಿರುತ್ತಿದ್ದನು. ಅವನ ತೃಣಕಾರ್ಯದಲ್ಲಿಯೂ ಹಿರಿತನದ ಬೆಳಕು ಹೊಮ್ಮುತಲಿತ್ತು. ಅವನ ನಡೆಯೊ, ಅವನ ನುಡಿಯೊ! ಹಣದ ದೃಷ್ಟಿಯಿಂದ ಸಾಮಾನ್ಯ ಸ್ಥಿತಿಯಲ್ಲಿ ಇದ್ದ ಈ ಮನುಷ್ಯನು ಮಂಡಲೇಶ್ವರ ನರಪತಿಗಳೊಂದಿಗೆ ಸಮಾನನೆಂಬಂತೆ, ಅಧಿಕನೆಂಬಂತೆ, ಗಂಭೀರವಾಗಿ ನಡೆಯುತ್ತಿದ್ದನು. ಅವನೊಬ್ಬ ಮಹಾವ್ಯಕ್ತಿ. ಬಹು ಬೇಗನೆ ತೀರಿಕೊಂಡನು. ಆದರೂ ತನ್ನ ದೇಶದ ಚರಿತ್ರೆಯಲ್ಲಿ ತನ್ನ ಪ್ರಭಾವದ ಗುರುತನ್ನಿಟ್ಟು ಹೋಗಿದ್ದನು. ಅವನ ಸ್ನೇಹ ತನ್ನ ಬಾಳನ್ನು ಎಷ್ಟು ತುಂಬಿತು? ಎಷ್ಟು ಉತ್ತಮ ಕಾರ್ಯಕ್ಕೆ ಪ್ರೇರಕವಾಯಿತು? ಸ್ಕಿಲ್ಲರ್ ಬಾರದಿದ್ದರೆ ತನ್ನ ಜೀವನದ ಮೂರು ನಾಲ್ಕು ವಸಂತಕಾಲದಲ್ಲಿ ಒಂದೊ, ಎರಡೊ ಇಲ್ಲದಾಗುತ್ತಿದ್ದವು. ಸ್ಕಿಲ್ಲರ್ ತಾನು ಕೃತಿಗಳನ್ನು ರಚಿಸಿದನು ಮಾತ್ರ ಅಲ್ಲ, ತನ್ನ ಗೆಳೆಯರು ಅವರವರ ಅನೇಕ ಕೃತಿಗಳನ್ನು ರಚಿಸುವಂತೆ ಪ್ರೇರಕನೂ ಆದನು. ಅದೊಂದು ಅಪೂರ್ವ ಜೀವ, ಉದಾತ್ತ ಜೀವ....

ಸ್ಕಿಲ್ಲರ್ ಸ್ವಭಾವದಲ್ಲಿ ಅಸೂಯೆಯೇ ಇರಲಿಲ್ಲ. ಅರಿಯದವರು ತನ್ನ ಅವನ ಯೋಗ್ಯತೆಯನ್ನು ಹೋಲಿಸಿ ತಪ್ಪು ಮಾತುಗಳನ್ನು ಹೇಳಿದರು. ಇದರಿಂದ ಅವನ ಬುದ್ಧಿ ಕೆಡಲಿಲ್ಲ. ತಾವಿಬ್ಬರೂ ವಿವೇಕಿಗಳಾದ್ದರಿಂದ ಹೊರಗಿನವರ ಇಂಥ ಮಾತಿನಿಂದ ಬರಬಹುದಾಗಿದ್ದ ವೈಮನಸ್ಯ ತಮ್ಮ ಸ್ನೇಹದಲ್ಲಿ ತಲೆದೋರಲಿಲ್ಲ. ಉಳಿದವರು 'ಗಯಟೆ ಹೀಗೆ, ಗಯಟೆ ಹಾಗೆ' ಎಂದರೆ ಅವನು 'ನಿಮಗೆ ತಿಳಿಯದು' ಎನ್ನುವನು; ಅವರು ಹೇಳಿದ ಒಳ್ಳೆಯ ಮಾತನ್ನು ತನಗೆ ಬಂದು ಹೇಳುವನು. "ಗಯಟೆ ಒಬ್ಬ

ಮನುಷ್ಯನಲ್ಲ; ಇಪ್ಪತ್ತು ಮನುಷ್ಯರು.'' ''ಗಯಟೆ ಯೂರೋಪಿನ ಸಾಹಿತ್ಯ ಸಾಮ್ರಾಜ್ಯದ ಚಕ್ರವರ್ತಿ.'' ಇಂಥ ಮಾತನ್ನು ಕೇಳಿ ಸ್ಕಿಲ್ಲರ್ ಹಿಗ್ಗುತಿದ್ದನು. ಅವನನ್ನೇ ಹೊಗಳಿದಾಗ ಅವನಿಗೆ ಅಷ್ಟು ಸಂತೋಷ ವಾಗುತ್ತಿರಲಿಲ್ಲ. ಗೆಳೆಯನನ್ನು ಹೊಗಳಿದರೆ ಅವನಿಗೆ ಅಷ್ಟು ಹೆಮ್ಮೆ....

ಎಂಥ ಗೆಳೆಯ ಅವನು! ಎಂಥ ಗೆಳೆಯ ಹಂಬೋಲ್ಟ್! ಜೆಲ್ಟರ್! ಎಷ್ಟು ಸ್ನೇಹ ಎಷ್ಟು ಕಡೆಯಿಂದ ಬಂದು ತನ್ನನ್ನು ಸುತ್ತಿಕೊಂಡು ಸಲಹಿತು....

ಸ್ಕಿಲ್ಲರ್ ನಾಟಕಗಳು ಜನರಿಗೆ ಬಹು ಮೆಚ್ಚಿಗೆಯಾದುವು....

ನಾಟಕ ಮಂದಿರದಲ್ಲಿ ತಾನು ಎಷ್ಟು ಆನಂದವನ್ನು ಪಡೆದಿದ್ದನು..

ಕಾರೋನಾ ಬಹು ಚೆಲುವೆ. ಮಿನ್ನಾ ಬಹು ಚೆಲುವೆ. ಓ ಚೆಲುವೇ; ಓ ಚೆಲುವೇ....

ಮಂಪರದಲ್ಲಿದ್ದ ಕವಿಯ ಎದುರಲ್ಲಿ ಯಾವುದೋ ಮುಖ ರೂಪು ಗೊಂಡಿತು. ಒಂದು ಹೆಣ್ಣು ಮುಖ. ಯಾರ ಮುಖ? ವಾನ್‌ಸ್ಟೈನಳ ಸಹಜ ಪ್ರೌಢಿ ಆ ಕಣ್ಣುಗಳಲ್ಲಿ ಕಾಣುತ್ತಿದೆ. ಆದರೆ ಕೊರಳ ಮೇಲೆ ಆ ತಲೆ ನಿಂತಿರುವ ರೀತಿ ಕಾರೋನಾ ರೀತಿ. ಮುಖದ ಎಳಮೆ ಮಿನ್ನಾದು. ಕಿವಿ ಫ್ರೆಡರಿಕೆಯ ಕಿವಿಯಂತೆ ಕಿರಿದು, ಮಾಟ. ಮೂಗು ಏನಂದ! ಕೆನ್ನೆ; ತುಟಿ; ನಗೆ. ಓ ಹುಬ್ಬೇ, ಯಾರೆಳೆದರು ಈ ಗೆರೆಯನ್ನು? ಓ ಚೆಲುವೇ, ಓ ನಗೆಯೇ, ಯಾರ ನಗೆ ಇದು?....

ಸುಂದರವಾದ ಈ ಮುಖವನ್ನು ನೋಡಿ ಕವಿ ನಿದ್ರೆಯಲ್ಲೇ ಮಾತ ನಾಡಿದನು. ಸೇವಕನು ಬಂದು ಬಳಿಯಲ್ಲಿ ನಿಂತನು. ಕವಿ ಮಂಪರದಿಂದ ಏಳಲಿಲ್ಲ. ತಾನೇ ಮಾತನಾಡಿಕೊಳ್ಳುತ್ತಿದ್ದನು. ಸೊಸೆ ಆಟಿಲಿ, ಮಾವ ಮಾತನಾಡಿದಂತೆ ಆಗಲು, ಏನೆಂದು ತಿಳಿಯುವುದಕ್ಕಾಗಿ ತಾನೂ ಒಳಗೆ ಬಂದಳು; ಅವನು ಮಂಪರದಲ್ಲಿರುವುದನ್ನು ಕಂಡು ಸದ್ದು ಮಾಡದೆ ಹೊರಕ್ಕೆ ನಡೆದಳು....

ಕವಿಯ ಮನದಲ್ಲಿ ಎದುರಿಗೆ ಸುಳಿದ ತಲೆ ಎದೆಯ ಮಟ್ಟದವರೆಗೂ ಮೂರ್ತಿಗೊಂಡಿತ್ತು. ಕವಿ ಈ ಆಕಾರವನ್ನು ನೋಡುತ್ತ ಮನಸೋತು ಆನಂದಿಸಿದನು. ಏನು ಭುಜ, ಏನು ಎದೆ, ಏನು ಆಕಾರ! ಬಾಲ್ಯದಲ್ಲಿ

ತಾನು ಆಶಿಸಿದ ಚೆಲುವು ಈ ಹೆಣ್ಣಲ್ಲಿ ಸ್ವಲ್ಪ, ಆ ಹೆಣ್ಣಲ್ಲಿ ಸ್ವಲ್ಪ, ಇಲ್ಲಿ ಒಂದು ಸಲ, ಅಲ್ಲಿ ಇನ್ನೊಂದು ಸಲ, ಕಂಡಂತಾಗಿ ಅವನನ್ನು ಸೆಳೆದಿತ್ತು. ಮಂಡಲೇಶ್ವರನ ಆಶ್ರಯದಲ್ಲಿ ಇವನಿಗೆ ಚೆಲುವು ಬಹು ಹತ್ತಿರ ಸಾರಿ ಸುಳಿಯಿತು. ಸವಿದದ್ದು ಸ್ವಲ್ಪ, ಸವಿಯದ್ದು ಬಹಳ. ಸವಿದು ಸಾಕಾಗದೆ ಕವಿ ರೋಂ ನಗರಕ್ಕೆ ಓಡಿದನು. ಆ ಕಾವಿನ ಭೂಮಿಯಲ್ಲಿ ಅವನು ಕಾವಿನ ಪ್ರೇಮವನ್ನು ಅರಸಿದ್ದನು, ಉಂಡಿದ್ದನು. ಇಟಲಿಯ ಶಿಲ್ಪಿಗಳು ಅಮೃತ ಶಿಲೆಯಲ್ಲಿ ಕಡೆದಿದ್ದ ಸ್ತ್ರೀಮೂರ್ತಿಗಳು ಜೀವ ಪಡೆದು ಸುಳಿಯುತ್ತಿರುವಂತೆ ಭ್ರಮೆಗೊಳಿಸಿದ ಅಲ್ಲಿಯ ಹೆಣ್ಣುಗಳನ್ನು ಅವನು ನೋಡಿದನು, ಮುಟ್ಟಿದನು, ಹಿಡಿದನು. ತಣಿದೂ ತಣಿಯದ ಆಸೆಯಿಂದ ಅಲ್ಲಿಂದ ಹಿಂತಿರುಗಿದನು. ಈ ಮೂರ್ತಿಯಲ್ಲಿ ಆ ಚೆಲುವೆಲ್ಲ ನೆರೆದಂತೆ ಕಂಡಿತು. ಅಷ್ಟಲ್ಲದೆ ಇನ್ನೇನೋ ಇರುವಂತೆ ಕಂಡಿತು. ಈ ಬೇರೆಯ ಚೆಲುವ ತಲೆ ಯಾವುದು? ಯಾರು ನೀನು? ಯಾರು? ಹೆಲೆನಾ; ಪ್ಯಾರಿಸನ ಪ್ರೇಯಸಿ; ತ್ರಿಲೋಕ ಸುಂದರಿ. ಓ, ನೀನು ಹೆಣ್ಣು ಮಾತ್ರ ಅಲ್ಲ, ಗಂಡೂ ಹೌದು. ನೀನು ಯಾರು? ಯಾರು?....

ಹೆಣ್ಣೂ ಅಹುದು, ಗಂಡೂ ಅಹುದು, ಎಂದು ಕಂಡ ಈ ಚೆಲುವು ಯಾವ ಚೆಲುವೆಂದು ಕವಿಗೆ ತಿಳಿಯಲಿಲ್ಲ. ಹಾಗೆಯೇ ಅದನ್ನು ಅವನು ನೋಡುತ್ತಿದ್ದನು. ಕಾಣುತ್ತಿರು, ಕಾಣುತ್ತಿರು, ಎಂದು ಅವನು ಆ ಮೂರ್ತಿಯನ್ನು ಬೇಡಿದನು. ಅದೂ ಕದಲದೆ ನಿಂತಿತು. ಕವಿಗೆ ಅದನ್ನು ನೋಡುವುದರಲ್ಲಿಯೇ ತೃಪ್ತಿಯಾಯಿತು. ಮುಟ್ಟುವ ಆಸೆಯಿಲ್ಲ, ಹಿಡಿಯುವ ಆಸೆಯಿಲ್ಲ. ಒಂದು ಕರಣವನ್ನು ಸೋಕಿದ ಈ ಚೆಲುವು ಎಲ್ಲ ಕರಣಗಳ ದಾಹವನ್ನೂ ಆರಿಸಿತು. ನೋಟವೇ ಸಾಕು. ಬೇರೆ ಏನೂ ಬೇಕಿಲ್ಲ. ಒಂದೇ ದೃಷ್ಟಿಯಿಂದ ನೋಡುತ್ತ ಕವಿಗೆ ಥಟ್ಟನೆ ಈ ಮೂರ್ತಿ ತಾನು ಒಮ್ಮೆ ಕಂಡದ್ದೆಂದು ತೋರಿತು. ಇದೇ ತಾನು ಮೊದಲಲ್ಲಿ ಕನಸಲ್ಲಿ ಕಂಡ ಚೆಲುವು. ಎಳೆತನದಲ್ಲಿ ಕನಸಲ್ಲಿ ಕಂಡು ಮರೆಯಾದ ಈ ಅಂದವನ್ನೇ ತಾನು ಎಲ್ಲ ಕಡೆಯಲ್ಲಿಯೂ ಅರಸಿದ್ದನು. ಕಂಡದ್ದು ಸ್ವಲ್ಪ, ಕಾಣದ್ದು ಬಹಳ, ಆಗಿ ಅತೃಪ್ತನಾಗಿದ್ದನು. ಒಂದು ಕರಣ ತಣಿದರೆ ಇನ್ನೊಂದು ತಣಿಯದೆ, ಅರೆಯೂಟಮಾಡಿದವನಂತೆ ಹಸಿವು ಆರದೆ ಎದ್ದಿದ್ದನು.

ರಾಗದ ಮೊದಲನ್ನು ಕೇಳಿ ಅದರ ಸ್ವರೂಪವನ್ನರಿಯಲು ಆಲಾಪನ ಮಾಡಿ ಆ ಸ್ವರೂಪ ಸಿಕ್ಕದೆ ಮುಕ್ತಾಯದಲ್ಲಿ ಮತ್ತೆ ಸ್ವರವನ್ನು ಸರಳಮಾಡುವ ಗಾಯಕನಂತೆ ಕವಿ ಎಂದೋ ಕಂಡ ರೂಪವನ್ನು ಇಂದು ಮತ್ತೊಮ್ಮೆ ಕಂಡನು. ಓ, ನೀನೇ, ಸರಿ, ಸರಿ, ಎಂದು ಮಂಪರದಲ್ಲಿ ನುಡಿದನು....

ಸೊಸೆ ಆಟಲಿ ಮತ್ತೆ ಬಂದಳು. ಮಂಪರ ಕಡಮೆಯಾಗಿದ್ದು ಕವಿ ಕಣ್ತೆರೆದನು. ಎದುರಲ್ಲಿ ಚಿಂತೆಯಿಂದ ನಿಂತಿರುವ ತರುಣಿಯನ್ನು ನೋಡಿ ಅವನಿಗೆ ಮರುಕವಾಯಿತು. ಪ್ರೀತಿಯಿಂದ ಅವಳನ್ನು ನೋಡುತ್ತ ಅವನು ಸ್ವಲ್ಪ ನಕ್ಕನು. ಆಟಲಿ ಮೆಲ್ಲನೆ ನಕ್ಕಳು. ಮಾವನು ಉಳಿಯುವನೋ, ಕೈಬಿಟ್ಟು ನಡೆಯುವನೋ? ಆ ಗಂಡನಿಂದ ತಾನು ಏನೊಂದು ಸುಖ ಅಥವಾ ಮರ್ಯಾದೆಯನ್ನು ಕಾಣಲಿಲ್ಲ. ಆದರೆ ಈ ಮಾವ ಒಂದು ಒಳ್ಳೆಯ ಮಾತಿನಿಂದ, ಕನಿಕರದ ಒಂದು ದೃಷ್ಟಿಯಿಂದ, ವ್ಯಥೆಯನ್ನು ತೋರಿಸುವ ಒಂದು ಕ್ಷಣದ ಮುಖ ಮುದ್ರೆಯಿಂದ, ತನ್ನ ಬದುಕನ್ನು ಸಹ್ಯವಾಗಿ ಮಾಡಿದ್ದನು. ಆಟಲಿ ಸಣ್ಣ ಹುಡುಗಿಯಾಗಿದ್ದಾಗ ಗಯಟೆ ಅವಳನ್ನು ಎತ್ತಿ ಆಡಿಸಿದ್ದನು. ಇಷ್ಟರ ಮನೆಯ ಹುಡುಗಿ, ಚತುರೆ, ಎಂದು ಅವಳನ್ನು ತನ್ನ ಮಗನಿಗೆ ತಂದುಕೊಂಡಿದ್ದನು. ಮಗನ ದುರ್ವರ್ತನೆಯಿಂದ ಅವಳ ಬದುಕು ಕಹಿಯಾಗಿತ್ತು. ತಾನು ಸಾಧ್ಯ ವಾದಷ್ಟು ವಾತ್ಸಲ್ಯದಿಂದ ನಡೆದು ಅವಳ ಬೇಸರವನ್ನು ಕಡಮೆ ಮಾಡು ವುದೇ ಅವನಿಗೆ ದೊಡ್ಡ ಗುರಿಯಾಗಿತ್ತು. ಎದುರಿಗೆ ನಿಂತು ಚಿಂತೆಯನ್ನು ನಗೆಯಿಂದ ಮರೆಸುತ್ತಲಿದ್ದ ಸೊಸೆಯನ್ನು ನೋಡಿ ಕವಿಯ ಎದೆ ಕರಗಿ ನೀರಾಯಿತು. ಆಟಲಿ ಸೊಸೆಯಾಗುವುದಕ್ಕೂ ಮೊದಲು ಮಗಳಾಗಿದ್ದಳು. ಇಂದು ಮತ್ತೆ ಅವಳು ಮಗಳಾದಳು. ಅವಳು ಅಷ್ಟೇನೂ ಚೆಲುವೆ ಅಲ್ಲ; ಆದರೆ ಚೆಲುವೆ ಅಲ್ಲದೆಯೂ ಇರಲಿಲ್ಲ. ಕನಿಕರದಿಂದ ನೋಡಿದ ಕವಿಯ ಕಣ್ಣಿಗೆ ಅಷ್ಟೇನೂ ಚೆಲುವೆ ಅಲ್ಲದಿದ್ದರೂ ಆಟಲಿಯ ಈ ಚೆಲುವು ಮಗಳ ಚೆಲುವಾಗಿ ಮನಮುಟ್ಟಿ ಸೊಗಸಿತು. ಸ್ವಲ್ಪ ಹಾಸ್ಯದಿಂದ ಅವನು 'ನನಗೆ ಕೈಮುತ್ತು ಕೊಡು' ಎಂದನು. ಆಟಲಿ ಕೈನೀಡಿದಳು. ಕವಿ ಆ ಕೈಯನ್ನು ತೆಗೆದುಕೊಂಡು ಕೈಯಿಂದ ಸವರಿ, ತುಟಿಗೆಟ್ಟಿಕೊಂಡು ಮುದ್ದಿಸಿದನು. ಇಷ್ಟೇ ಅವನಿಗೆ ಸಾಕಾಗಿ ಹೋಯಿತು. ಹಾಗೆಯೇ ಕಣ್ಮುಚ್ಚಿ ಮತ್ತೆ ಮಂಪರದಲ್ಲಿಳಿದನು.

ಮತ್ತೆ ಆ ಮುಖವೇ? ಅಲ್ಲ, ಆಟಲಿಯ ಮುಖ. ಅಲ್ಲ, ಮಗಳ ಮುಖ. ಅಲ್ಲ. ತನಗೆ ಮಗಳೆಲ್ಲಿ? ಸೊಸೆಯ ಮುಖ. ಅಲ್ಲ, ಅದೇ ಮುಖ··

ತಾನು ಅನುಭವದಲ್ಲಿ ಸುಖವನ್ನು ಹುಡುಕಿದ್ದನು. ಅದು ಅಲ್ಲಿ ಸ್ವಲ್ಪ ಸಿಕ್ಕಿತ್ತು. ಆಸೆಯನ್ನು ಹಿಡಿತದಲ್ಲಿಟ್ಟು ನೀತಿಯನ್ನು ಅಪ್ಪಿದ್ದನು. ಅದು ಆಗ ಸುಖವನ್ನು ತಂದಂತೆ ಕಾಣದಿದ್ದರೂ ಆಮೇಲೆ ಸುಖಕ್ಕೂ ಹತ್ತುಮಡಿಯ ತೃಪ್ತಿಯನ್ನು ತಂದಿತ್ತು. ತೃಪ್ತಿ ಸುಖ, ಸುಖ ತೃಪ್ತಿ. ಸುಖವನ್ನು ಮನುಷ್ಯನು ಅನುಭವದಲ್ಲಿ ಹುಡುಕಬೇಕೇ, ಬಿಡುವುದರಲ್ಲಿ ಹುಡುಕಬೇಕೇ? ಯಾವುದು ಒಳ್ಳೆಯದು? ತ್ಯಾಗವೇ, ಭೋಗವೇ? ನೇಮವೇ, ಇಚ್ಛೆಯೇ? ಆಂತರಿಕ ಸಂಬಂಧವಿದೆಯೆಂದು, ಪ್ರೇಯಸಿಯನ್ನು ಮಾಡಿಕೊಳ್ಳುವುದೇ, ನೀತಿಯೆಂಬ ಕಾರಣದಿಂದ ಏಕಪತ್ನೀವ್ರತನಾಗಿರುವುದೇ?

ಕವಿ ಈ ಯೋಚನೆಯನ್ನು ಮನಸ್ಸಿನಲ್ಲಿ ತಿರುವಿಹಾಕುತ್ತ ಸ್ವಲ್ಪ ಹೊತ್ತು ಮಲಗಿದ್ದನು. ತುಂಬ ಯೋಚನೆ ಮಾಡಿ ಮನಸ್ಸು ಸೋತಿತ್ತು. ಯಾವುದು ಸರಿ, ಯಾವುದು ಸರಿ, ಎನ್ನುವ ಪ್ರಶ್ನೆ ಅದರಲ್ಲಿ ಸುರುಳಿ ಸುತ್ತುತ್ತಿತ್ತು. ಯಾವುದು ಸರಿಯೋ? ಮನುಷ್ಯನಿಗೆ ಈಗ ಇರುವ ತಿಳಿವಿಂದ ಇದೇ ಸರಿಯೆಂದು ಹೇಳುವುದು ಕಷ್ಟ. ಇನ್ನು ಸ್ವಲ್ಪ ಬೆಳಕಿದ್ದರೆ ಯಾವುದು ಸರಿಯೆಂದು ಹೇಳಬಹುದು. ಇನ್ನು ಸ್ವಲ್ಪ ಬೆಳಕು ಬೇಕು. ಹೀಗೆ ಯೋಚಿಸುತ್ತ ಕವಿ ಒಂದು ಪಕ್ಕಕ್ಕೆ ಹೊರಳಿದನು. ಮಂಚ ಸ್ವಲ್ಪ ಕಿರುಗುಟ್ಟಿತು. ಸೇವಕನು ಬದಿಗೆ ಬಂದನು. ಇವನು ಬಂದ ಸಪ್ಪಳದಿಂದ ಇರಬೇಕು ಕವಿ ಕಣ್ತೆರೆದನು. ಅವನಿಗೆ ಕೊಟಡಿಯಲ್ಲಿ ಬೆಳಕು ಸಾಲದೆಂದು ಕಂಡಿತು. ಅವನು ಸೇವಕನನ್ನು ಕುರಿತು 'ಕಿಟಕಿ ತೆರೆ, ಇನ್ನಷ್ಟು ಬೆಳಕು ಬರಲಿ,' ಎಂದನು. ಸೇವಕನು ಹೋಗಿ ಕಿಟಕಿಯನ್ನು ಸ್ವಲ್ಪ ತೆರೆದು ಮರಳಿ ಹಾಸಿಗೆಯ ಬಳಿ ಬಂದನು. ಆ ವೇಳೆಗೇ ಕವಿಯ ಉಸಿರು ಸೋತುಹೋಗಿತ್ತು. ಗಂಟಲಲ್ಲಿ ಏನೋ ಶಬ್ದ ಕೇಳಿದಂತಾಗಿ ಸೇವಕನು ಓಡಿಹೋಗಿ ಸೊಸೆ ಆಟಲಿಯನ್ನು ಕರೆದು ಬಂದನು. ಒಂದು ಕ್ಷಣ ಬಿಟ್ಟು ಅವಳೂ ಬಂದಳು. ಆ ವೇಳೆಗೇ ಕವಿಯ ಪ್ರಾಣಪಕ್ಷಿ ನಿರಾಯಾಸವಾಗಿ ದೇಹವನ್ನು ಬಿಟ್ಟು ಬೆಳಕಿನ ಕಡೆಗೆ ಹಾರಿತ್ತು.

# ಉಗ್ರಪ್ಪನ ಉಗಾದಿ

ಶಾಮಣ್ಣನವರು ಹೇಳಿದ ರಂಗಪ್ಪನ ದೀಪಾವಳಿಯ ಕಥೆಯನ್ನು ನಾನು ಬರೆದಾಗ, ಈ ಹೊಸ ರೀತಿಯ ಬರವಣಿಗೆಯಿಂದ ಬೇಸರಗೊಂಡ ಮಿತ್ರರೊಬ್ಬರು ತಾವು ಉಗ್ರಪ್ಪನ ಉಗಾದಿಯನ್ನು ಕುರಿತು ಕಥೆ ಬರೆಯ ಬೇಕಾಗುತ್ತದೆಂದು ಹೇಳಿದರಂತೆ. ವೆಂಕಟರಾಯನ ಪಿಶಾಚವನ್ನು ವರ್ಣಿಸುತ್ತ ನಾನು ಇದಕ್ಕೆ ಪ್ರತಿಯಾಗಿ ಶ್ರೀಕಂಠಯ್ಯನ ಭೇತಾಳವನ್ನು ಯಾರಾದರೂ ಬರೆದರೆ ನನಗೆ ಸಂತೋಷ ಎಂದೆ. ಈಚೆಗೆ ಯಾರೋ ಮಿತ್ರರು ಶ್ರೀಕಂಠಯ್ಯನ ಭೇತಾಳ ಎಂದು ಹೆಸರಿಟ್ಟು ಒಂದು ಕಥೆಯನ್ನು ಬರೆದಂತೆ ಕಾಣುತ್ತದೆ. ಉಗ್ರಪ್ಪನ ಉಗಾದಿ ಇನ್ನೂ ಕಥೆಯಾಗಿ ಬಂದಿಲ್ಲ. ಇದಕ್ಕೆ ತಕ್ಕಹಾಗೆ ನಮ್ಮೂರ ಪಕ್ಕದ ಮದರಂಗಿ ಪಟೇಲನ ಹೆಸರು ಉಗ್ರಪ್ಪ. ನಾನು ಕೆಲವು ದಿನದ ಹಿಂದೆ ಅವನನ್ನು ನೋಡುವುದಕ್ಕೆ ಹೋಗಿದ್ದಾಗ ಅವನ ಜೀತದ ತಿಮ್ಮ ಅವನ ಹತ್ತಿರ ಮಾತನಾಡುತ್ತಿದ್ದನು. ಉಗ್ರಪ್ಪನಿಗೆ ಬಹಳ ಬೇಸರವಾಗಿದ್ದಂತೆ ಕಂಡಿತು. 'ಏನು, ಉಗ್ರಪ್ಪ, ತುಂಬ ಬೇಸರವಾಗಿರುವಂತೆ ಕಾಣುತ್ತದಲ್ಲಾ,' ಎಂದೆ. ಅವನು 'ಏನು ಸ್ವಾಮಿ, ಮಾಡೋದು. ಊರಾಗಿನ ಮಂದಿ ನನಗೆ ದಿನಾ ಉಗಾದಿ ಮಾಡು ತಾರೆ,' ಎಂದ. ಉಗಾದಿ ಎಂದರೆ ಊರಿಗೆಲ್ಲಾ ಹಬ್ಬ; ಮದರಂಗಿಯ ಗೌಡನಿಗೆ ಬರೀ ಆಯಾಸ. ಮನೆಯ ತಾಯಿ ಕಷ್ಟಪಟ್ಟು ಅಡಿಗೆ ಮಾಡಿ ಎಲ್ಲರಿಗೂ ಬಡಿಸಿ, ತಾನು ಆಯಾಸವನ್ನು ಮಾತ್ರ ಉಣುವಂತೆ ಮದರಂಗಿ ಯಲ್ಲಿ ಉಗ್ರಪ್ಪನ ಬಾಳು. ಬೇರೆ ಒಬ್ಬ ಉಗ್ರಪ್ಪನ ಉಗಾದಿಯನ್ನು ನಮ್ಮ ಸ್ನೇಹಿತರು ಯಾರಾದರೂ ವರ್ಣಿಸುವ ಮೊದಲು ನಾನೇ ನಮ್ಮ ಈ ಉಗ್ರಪ್ಪನ ಒಂದು ಉಗಾದಿಯನ್ನು ವರ್ಣಿಸೋಣವೆಂದು ಯೋಚಿಸಿ ದೇನೆ. ಇದು ಈಗ ಮೂವತ್ತು ವರ್ಷದ ಹಿಂದಿನ ಮಾತು.

ಅಂದು ಯುಗಾದಿ. ಉಗ್ರಪ್ಪ ಇನ್ನೂ ಹಾಸಿಗೆಯಲ್ಲಿ ಮಲಗಿದಾನೆ. ವಾಸದ ಮನೆಯ ಪಕ್ಕದಲ್ಲಿ ಕೊಟ್ಟಿಗೆ. ಅಲ್ಲಿ ದನ ಏತಕ್ಕೋ ಭಯ ಪಟ್ಟಿರುವಂತೆ ಕಂಡಿತು. ಒಂದು ಹಸು ಅಂಬಾ ಎಂದು ಕೂಗಿಕೊಂಡಿತು. ಗೌಡನು ಎದ್ದನು. ಬಾಗಿಲ ಬಳಿಗೆ ಹೋಗಿ, 'ಎಲಾ ಮಾರ, ಯಾಕೋ

ದನ ಬೆದರುತದೆ. ಚಿರತೆ, ಗಿರತೆ ಬಂತೇನೋ, ನೋಡೋ', ಎಂದು ಕೂಗಿದನು. ಮಾರನ ಸೊಲ್ಲಿಲ್ಲ. ಏನಾಯಿತೋ ಎಂದು ಉಗ್ರಪ್ಪ ತಾನೇ ಹೋಗಿ ಕೊಟ್ಟಿಗೆಯ ಬಾಗಿಲನ್ನು ತೆಗೆದು ಒಳಕ್ಕೆ ಹೋದನು. 'ಎಲಾ, ಮಾರ' ಎಂದು ಕೂಗಿದನು. ದನವೆಲ್ಲ ಮಲಗಿದ್ದವು. ಒಂದು ಕರು ಬಿಚ್ಚಿಕೊಂಡು ಓಡಾಡುತ್ತಿತ್ತು. ಅದರ ತಾಯಿ ಗೊತ್ತಿನ ಬಳಿ ನಿಂತು ಬೆದರಿ ಸುತ್ತುತ್ತಿತ್ತು. ಗೌಡನ ಧ್ವನಿ ಕೇಳಿ ಹಸು ಸುಮ್ಮನಾಯಿತು; ಕರು ಬಳಿಗೆ ಬಂದಿತು. ಗೌಡನು ಮತ್ತೆ 'ಮಾರ, ಮಾರ' ಎಂದು ಕೂಗಿದನು. ಈ ವೇಳೆಗೆ ಗೌಡನ ತಮ್ಮ ಇವನ ಧ್ವನಿಯನ್ನು ಕೇಳಿ ಮನೆಯಿಂದ ಬಂದಿದ್ದವನು 'ಏನಣ್ಣ, ಯಾಕೆ?' ಎಂದನು. ಗೌಡನು 'ನೋಡು ಇಲ್ಲೆಲ್ಲಾದರೂ ಚಿರತೆ, ಗಿರತೆ ಬಂದಿತ್ತೇನೊ. ಹೋದವರ್ಷ ಎರಡು ದನ ಕಳೆದುಕೊಂಡದ್ದಾಯಿತು. ಈ ಸಲ ಉಗಾದೀಗೇನೇ ಒಂದು ಜೀವ ಬಲಿ ಕೊಡೊ ಹಂಗಾದೀತು. ಆ ಮಾರ ಎಲ್ಲಿ?' ಎಂದನು. ತಮ್ಮ 'ಮಾರ ಎಲ್ಲಿ? ಮಾರ ಆ ಲಿಂಗಿ ಮನೇಲಿ! ದನ ಏನಾದರೆ ಅವನಿಗೇನು? ನಿವಾಳಿಸ್ತೀನಿ. ಆಗ ತಿಳೀತದೆ' ಎಂದನು. ಕೊಟ್ಟಿಗೆಯ ಯೋಗಕ್ಷೇಮವನ್ನು ತಮ್ಮನು ನೋಡಿಕೊಳ್ಳುತ್ತಾನೆಂದು ಉಗ್ರಪ್ಪ ಮನೆಯ ಮುಂದೆ ಬಂದನು.

ಬೆಳಕು ಹರಿಯುವುದಕ್ಕೆ ಮೊದಲಾಗಿತ್ತು. ನೀರಗಂಟಿ ಮುನಿಯು ಬಂದನು. 'ಏನಪ್ಪ, ಈ ಚಿನ್ನಪ್ಪನ ತಂಟೆ ಬಾಳ ಆಯ್ತು. ಇವನ ಗದ್ದೆಗೆ ಒಂದು ದಿನ, ರಾಮಪ್ನ ಗದ್ದೆಗೆ ಒಂದು ದಿನ, ನೀರು ಕೊಡೋದು ಅಂತ ಹೇಳಿದ್ಯಲ್ಲ. ನೆನ್ನೆ ಸಂಜೆಯಾಗ ಇವನ ಗದ್ದೆಗೆ ನೀರು ನಿಲ್ಲಿಸಿ ರಾಮಪ್ಪನ ಗದ್ದೆಗೆ ತಿರಿವಿದೆ. ಬೆಳಗಾಗ ಹೋಗೋ ವೇಳೆಗೆ ಇವನ ಗದ್ದೆಗೇ ನೀರು ಹರೀತಾ ಅದೆ. ಅಲ್ಲೇ ನಿಂತಿದ್ದೆ. ಚಿನ್ನಪ್ಪ ಬರ್ತಾನೆ, ನನ್ನ ನೋಡಿ, ಇದೇನಯ್ಯ ಸರತಿ ತಪ್ಪಿ ನನ್ನ ಗದ್ದೆಗೇ ನೀರು ಬಿಟ್ಟು ಬಿಟ್ಟಿದ್ದೀಯಲ್ಲ, ಅಂತಾನೆ. ನಾ ಬಿಟ್ಟೆನೋ ನೀ ಬಿಟ್ಟೆಯೋ ಅಂತ ನಾ ಅಂದೆ. ನೀರಗಂಟಿ ಬಿಡದೀರ ನೀರು ಹರೀತದೆಯೇನೊ ಅಂತ ತನ್ನ ಗದ್ದೆಗೆ ಹೋಗೋ ನೀರ ನಿಲ್ಲಿಸಿದ. ಇವನಿಗೆ ನ್ಯಾಯ ಅಂತನ್ನೋದು ಲೆಕ್ಕ ಇಲ್ಲ. ನೀರು ಬಿಡೋದು ಹಾಳೇವು ಆಯಿತು. ಹಿಂಗಾದ ಮೇಲೆ ನಾಯಾಕೆ ನೀರಗಂಟಿ. ಈ ಉತ್ತುಮರೇ ನೀರಗಂಟಿಗಳಾಗಲಿ' ಎಂದ.

ಉಗ್ರಪ್ಪ 'ಆಗಲಿ ಕೇಳೋಣಂತೆ' ಎಂದ. ಕೆರೆಯ ಕಡೆ ಹೋಗಿ ಕೈಕಾಲು ತೊಳೆದುಕೊಂಡು ಬರಬೇಕು ಎಂದು ಹೊರಟ. ಮೂರು ಮನೆಯಾಚೆ ಮರಿಯನ ಮನೆ. ಮರಿಯ ಆಗತಾನೆ ಹೊರಕ್ಕೆ ಬಂದನು. ಬಂದು ಗೌಡನಿಗೆ 'ಉಗ್ರಪ್ಪ, ಈ ಚಿರತೆ ಹಾವಳಿ ಬಾಳ ಆಯ್ತು. ಗುಡ್ಡದ ಮೇಲೆ ಮರಿ ಕಟ್ಟಿಸಿ ಬೋನಿಕ್ಕಬೇಕು. ಒಸಿ ಹೊತ್ತಿನಾಗೆ ಚಿರತೆ ಕೊಟ್ಟಿಗೆ ತಾವಕೆ ಬಂದಿತ್ತು,' ಎಂದ. ಗೌಡನು 'ನಿನ್ನ ಕೊಟಗೆ ತಾವಕ್ಕೆ ಬಂದಿತ್ತಾ, ನಮ್ಮ ಕೊಟಗೇಲಿ ದನ ಬೆದರಿದವು, ಯಾಕೆ ಎಂತ ಹೋಗಿ ನೋಡಿದೆ, ತಿಳೀಲಿಲ್ಲ. ಚಿರತೆ ಇರಬಹುದು ಅಂತ ಅಂದು ಕೊಂಡೆ. ಬಂದಿತ್ತಾ, ಬೊಡ್ಡೀಮಗನ್ದು,' ಎಂದನು. ಈ ಚಿರತೆಗಳನ್ನು ಏನು ಮಾಡುವುದು ಅಂತ ಗೌಡನಿಗೆ ತಿಳಿಯಲಿಲ್ಲ. ಊರ ಹತ್ತಿರಲೇ ದೇವರು ಒಂದು ಗುಡ್ಡ ಮಾಡಿದ್ದಾನೆ. ಏನು ಮಾಡುವುದು? ಗುಡ್ಡ ಎಂದಮೇಲೆ ಚಿರತೆ ಇದ್ದೇ ಇರುತ್ತದೆ. ವರ್ಷಕ್ಕೆ ಒಂದು ಸಲ ಇವರು ಒಂದು ಚಿರತೆಯನ್ನು ಹಿಡಿದು ಪಾರ್ವಾಟ ಮಾಡಿ ಮುಗಿಸುವುದು. ಮೂರು ತಿಂಗಳಲ್ಲಿ ಇನ್ನೊಂದು ಚಿರತೆ ಗುಡ್ಡಕ್ಕೆ ಬರುವುದು. ಗೌಡ 'ಮದರಂಗಿ ದನ ಚಿರತೆಗೆ ಪಾಟ ಆಗಿಬಿಟ್ಟಿದೆ. ಬೇರೆ ದನ ಇಷ್ಟು ರುಚಿ ಇಲ್ಲವೇನೊ' ಎಂದ.

ಮದರಂಗಿಯ ಊರ ಮುಂದಿನ ಕೆರೆ ಬಹು ಅಂದದ ಕೆರೆ. ಅದರ ಕಟ್ಟೆಯ ಕೊನೆಗೆ ಒಂದು ಅರಳಿಯ ಮರ. ಗೌಡನು ಕೈ ಕಾಲು ತೊಳೆದು ಕೊಂಡು ಬಂದು, ಅರಳಿಯ ಮರಕ್ಕೆ ಕೈ ಮುಗಿದು, ಪ್ರದಕ್ಷಿಣೆಹಾಕಿ, ತಣ್ಣನೆ ಬೀಸುತ್ತಿದ್ದ ಗಾಳಿಗೆ ಮೈಕೊಟ್ಟು, ಸೂರ್ಯನು ಹುಟ್ಟುವುದನ್ನು ನೋಡುತ್ತ ಕುಳಿತನು. ತಣ್ಣನೆ ಗಾಳಿ ಬಲಗಡೆಯಿಂದ ಹೊಸಹಳ್ಳಿಯ ತೋಟಗಳಮೇಲೆ ಹಾಯ್ದು ಬರುತ್ತಿತ್ತು. ಅರಳಿಯ ಮರದ ಎಲೆ ಇನ್ನೂ ಎಳೆಯದು. ಗಾಳಿಯಲ್ಲಿ ಮರ ಮಾಡುತ್ತಿದ್ದ ಶಬ್ದ ತೀರ ಮೆದುವಾಗಿತ್ತು. ಇನ್ನೂ ಕೆಂಪಾಗಿದ್ದ ತಳಿರು ಗಾಳಿ ಸೋಕಿದರೂ ಶಬ್ದ ಮಾಡುತ್ತಿರಲಿಲ್ಲ. ಭಾವವಿದ್ದರೂ ಮಾತನ್ನರಿಯದ ಹಸುಳೆಯಂತೆ. ಕಟ್ಟೆಯ ಆಚೆಯ ಕೊನೆಗೆ ಒಂದು ತೋಪು. ಅದರಲ್ಲಿ ಮಾವು, ಇಪ್ಪೆ, ತುಂಬ ಹಸುರೊಡೆದು ರಮ್ಯವಾಗಿದ್ದವು. ಕೆಲವು ಮಾವು ಕಾತಿದ್ದವು, ಕೆಲವದರಲ್ಲಿ ಇನ್ನೂ ಹೂವು. ಇಪ್ಪೆಯ ಹೂವಿನ ಕಂಪು ಗಾಳಿಯಲ್ಲಿ ಆಗಾಗ ಬಂದಂತೆ

ಆಗುತ್ತಿತ್ತು. ಅದು ಎದುರ ಆ ತೋಪಿನ ಇಪ್ಪೆಯದಿರಲಾರದು. ಬಲ ಗಡೆಯ ಹೊಸಹಳ್ಳಿಯ ತೋಪಿನ ಇಪ್ಪೆಯದು ಇರಬೇಕು. ತಗ್ಗಿನಲ್ಲಿ ಹೊಂಗೆಯ ಸಾಲು; ಎಲೆ ಬಣ್ಣ ಬಣ್ಣ, ಕೆಳಗೆ ಹೂವಿನ ಹಾಸು. ಕೆರೆಯಲ್ಲಿ ನೀರು ಕಡಮೆಯಾಗುತ್ತಾ ಬಂದಿತ್ತು. ಇರುವಷ್ಟನ್ನು ಜತನ ದಿಂದ ಬಳಸಿಕೊಂಡು ಮಳೆ ಬರುವವರೆಗೆ ದನಕರುವನ್ನು ಕಾದುಕೊಳ್ಳಬೇಕು.

ಮೂಡಲು ಕೆಂಪೇರಿತು. ಬೆಳಗಾಯಿತು. ಸೂರ್ಯನು ನೆಲದ ಅಂಚಿನಿಂದ ಮೆಲ್ಲನೆ ಮೇಲೆದ್ದನು. ಅವನ ಚಕ್ರದ ಒಂದು ರೇಖೆ ಆ ಅಂಚಿನಿಂದ ಎದ್ದು ಕಂಡ ಕ್ಷಣವೇ ಉಗ್ರಪ್ಪ ಎದ್ದು ಕೈಜೋಡಿಸಿ ನಿಂತನು. ಮಂಡಲ ಸಂಪೂರ್ಣನಾಗಿ ಕಾಣುವವರೆಗೆ ಹಾಗೆಯೇ ನಿಂತಿದ್ದು ನಂತರ ಕಟ್ಟೆಯಮೇಲೆ ನಡೆಯುತ್ತ ಹೊರಟನು.

ನೀರಗಂಟಿ ಮುನಿಯ ಇದುವರೆಗೆ ಅಲ್ಲಿಯೇ ಎಲ್ಲೊ ದೂರದಲ್ಲಿ ಇದ್ದು, ಗೌಡನು ಕಟ್ಟೆಯಮೇಲೆ ಹೊರಟ ಒಡನೆ ಬಂದು ಹಿಂದೆ ನಡೆದನು. ಗೌಡ 'ನೀರು ಜತನವಾಗಿ ನೋಡಿಕೊಳ್ಳಬೇಕೊ ಮುನಿಯ' ಎಂದನು. ಮುನಿಯ 'ಹೌದಪ್ಪ, ಆ ಚಿನ್ನಪ್ಪನಿಗೆ ಸ್ವಲ್ಪ ಹೇಳು' ಎಂದನು.

ಚಿನ್ನಪ್ಪನ ಗದ್ದೆ ದೂರದಲ್ಲಿ ಕಾಣುತಿತ್ತು. ಗೌಡ ಅದರ ಕಡೆ ನೋಡಿದನು. ಅದರ ತೆವರಿನಮೇಲೆ ಒಂದು ಗರುಡಪಕ್ಷಿ ಕುಳಿತಿತ್ತು. ಇವನು ಅತ್ತ ನೋಡುವ ಹೊತ್ತಿಗೆ ಸರಿಯಾಗಿ ಅದು ಮೇಲೆದ್ದು ಒಂದು ಸುತ್ತು ಹಾಕಿ ಗದ್ದೆಯ ಬಯಲಿನಲ್ಲಿ ಬೇರೊಂದು ಕಡೆ ಇಳಿಯಿತು. ಗೌಡನು ಕ್ಷೇಮಕಾರಿಯ ದರ್ಶನ ಇಷ್ಟು ಬೇಗನೆ ಆಗುತ್ತದೆಂದು ಎಣಿಸಿರ ಲಿಲ್ಲ. ಅವನಿಗೆ ಬಹು ಸಂತೋಷವಾಯಿತು. ಅವನು ಪಕ್ಷಿಗೆ ಕೈ ಮುಗಿದನು. 'ಪಕ್ಷಿರಾಜಾಯತೇ ನಮಃ' ಎಂದು ಮೂರು ಸಲ ಮಂತ್ರ ದಂತೆ ಉಸುರಿದನು. ಪಕ್ಷಿ ಆಕಾಶದಲ್ಲಿ ಸುತ್ತುವುದನ್ನು ಮುಗಿಸಿ ನೆಲಕ್ಕೆ ಇಳಿಯುವವರೆಗೆ ಅದನ್ನು ನೋಡುತಿದ್ದು ಆಮೇಲೆ ಕಟ್ಟೆಯ ಮೇಲೆ ಮುಂದೆ ಸಾಗಿದನು.

ಎದುರಿಗೆ ರಾಮಾಶಾಸ್ತ್ರಿಗಳು ಬಂದರು. ಗೌಡನು ಅವರಿಗೆ ನಮಸ್ಕಾರ ಮಾಡಿದನು. ಶಾಸ್ತ್ರಿಗಳು 'ಏನು ಉಗ್ರಪ್ಪ, ಕಟ್ಟೆ ನೋಡ್ತಾ ಇದೀಯಲ್ಲ. ಈ ಸಲದ್ದು ಮಣ್ಣಿನ ಕೆಲಸ ಇನ್ನೂ ತೊಡಗಿಲ್ಲ' ಎಂದರು.

ಗೌಡ 'ಆಯಿತು. ನೀರು ಇನ್ನು ಸ್ವಲ್ಪ ಇಳಿದಮೇಲೆ ಆಗ ಬೇಕಾಗಿರುವ ಸ್ವಲ್ಪ ಕೆಲಸ ಮಾಡಿಬಿಡ್ತಾರೆ' ಎಂದನು.

ಶಾಸ್ತ್ರಿಗಳು: 'ಏನೋ ನಮ್ಮೂರ ಪುಣ್ಯ. ಇಂಥ ಕೆಲಸ ಸುಲಭ ವಾಗಿ ಆಗ್ತಾ ಇದೆ. ಮಾದಾವರದ ಕೆರೆ ಕೆಲಸಕ್ಕೆ ಏನು ತೊಂದರೆ ಯಾಗಿದೆ, ನೋಡಬೇಕು. ಗ್ರಾಮದವರು ಮಾಡಲಿಲ್ಲ ಅಂತ ಸರ್ಕಾರ ದವರೇ ಮಾಡಿಸಿ ಖರ್ಚನ್ನ ದಂಡ ವಸೂಲು ಮಾಡತಾರಂತೆ.'

'ನಮ್ಮೂರಲ್ಲಿ ಇಂಥ ಮಾತು ಆದರೆ ನಾವು ಉಳಿಯೋದು ಹೇಗೆ? ಮಾದಾವರದವರು ಪುಣ್ಯವಂತರು. ಪುಂಡು ಮಾಡಬಹುದು. ಬಡತನ ದೂರು ಕಂದಾಯ ಕೊಡೋದೆ ಕಷ್ಟ. ಇನ್ನು ದಂಡ ಏನನ್ನ ತೆತ್ತು ಬದುಕೋದು?' ಎಂದ ಗೌಡ.

ಶಾಸ್ತ್ರಿಗಳೂ ಗೌಡನೂ ಆ ಮಾತು ಈ ಮಾತು ಸ್ವಲ್ಪ ಹೊತ್ತು ಆಡಿದರು. ಅಮೇಲೆ ಶಾಸ್ತ್ರಿಗಳು 'ನಮ್ಮ ಮಗಳನ್ನ ಗಂಡನ ಮನೆಗೆ ಕಳುಹಿಸಬೇಕಾಗಿದೆ. ನಮ್ಮ ಬೀಗಿತಿಗೆ ಮೈಯಲ್ಲಿ ಚೆನ್ನಾಗಿಲ್ಲವಂತೆ. ಅಳಿಯಂದಿರು ಹೇಳಿಕಳುಹಿಸಿದಾರೆ. ಬಂದು ಕರಕೊಂಡು ಹೋಗಿದ್ದರೆ ಆಗಿತ್ತು, ಬರಲಿಲ್ಲ. ಈ ಹುಡುಗಿ, ಬೇಗನೆ ಹೋಗಬೇಕಪ್ಪಾ, ಇಲ್ಲದೇ ಇದ್ದರೆ ಕೋಪ ಮಾಡ್ತಾರೆ ಎಂತ ಹೇಳ್ತಾ ಇದೆ' ಎಂದರು. ಗೌಡ 'ಹುಡುಗಿ ಹಂಗೆ ತಾನೆ ಅನ್ನಬೇಕು, ಕಳುಹಿಸಬಹುದಲ್ಲ' ಎಂದನು. ಶಾಸ್ತ್ರಿ, 'ಊರಲ್ಲಿ ಇರೋ ನಾಲ್ಕು ಗಾಡಿ ಅತ್ತ ಇತ್ತ ಬಾಡಿಗೆ ಹೊಡೀತಾ ಇವೆ. ನನಗಾಗಿ ಅವರು ಬಾಡಿಗೆ ಬಿಡೋಹಾಗಿಲ್ಲ. ನನಗೆ ಎಂತ ಅವರು ಒಂದು ದಿನ ಬಂದರೆ ಅವರು ಬಿಡೋ ಬಾಡಿಗೆ ನಾನು ಕೊಡೋ ಹಾಗಿಲ್ಲ. ಹುಡುಗಿ ಬೇರೆ ಬಸುರಿ ಎಂತ ಕಾಣ್ತದೆ. ಇರಮ್ಮ ಗೌಡನ್ನ ಕೇಳಿ ಒಂದು ದಿನ ಕುದುರೆ ತಕ್ಕೋತೇನೆ, ಹೋಗೋಣಂತೆ, ಎಂತ ಅವಳಿಗೆ ಹೇಳಿದೆ. ನೀನು ಸ್ವಲ್ಪ ಮನಸ್ಸು ಮಾಡಿದರೆ ಅವಳನ್ನು ಅವಳ ಮನೆಗೆ ಸೇರಿಸ ಬಹುದು' ಎಂದರು. ಗೌಡ 'ಅದಕ್ಕೇನಂತೆ, ಎಂದು ಬೇಕಾದರೂ ತಕ್ಕೊಳ್ಳಿ, ಮದರಂಗಿ ಹೆಣ್ಮಗಳು ಗಂಡನ ಮನೆಗೆ ಹೋಗಬೇಕಾದರೆ ಕುದುರೆ ಇಲ್ಲವೆ? ನನ್ನ ಮಾತು ಹೇಗಾದರೂ ಆಗ್ತದೆ' ಎಂದನು. ಶಾಸ್ತ್ರಿ 'ಏನೋ ಅಪ್ಪ, ನೀನು ಗೌಡನಾಗಿ ಇರೋ ಹೊತ್ತಿಗೆ ನಮಗೆಲ್ಲ

ಧೈರ್ಯ. ಕಷ್ಟಕ್ಕೆ, ನಿಷ್ಠೂರಕ್ಕೆ ಅಗ್ತೀಯ' ಎಂದರು. ಗೌಡ 'ಯಾರ ಧರ್ಮಕ್ಕೆ ಮಾಡಿಯೇನು? ಮದರಂಗಿಯ ಗೌಡ ಒಳ್ಳೇವನು ಅಂತಾರಲ್ಲ. ಕುದುರೆ ಇಲ್ಲ ಅಂದರೆ ಅವನೂ ಎಲ್ಲರ ಹಂಗಾದ. ನಿಮ್ಮ ತೋಟಕ್ಕೂನು ನುಗ್ಗಿರತದೆ ನಮ್ಮ ಕುದುರೆ ಒಂದಲ್ಲ ಒಂದು ದಿನ. ಶಾರದಮ್ಮನ್ನ ಬೆನ್ನಮೇಲೆ ಕೂರಿಸಿಕೊಂಡು ತೊಂಡುಮೇಯ್ದು ಸಾಲ ತೀರಿಸ್ತದೆ' ಎಂದನು. ರಾಮಾಶಾಸ್ತ್ರಿ ನಕ್ಕು ಮುಂದರಿದನು. ಗೌಡನು ಕೆರೆಯ ಆಚೆ ತೋಪಿನಲ್ಲಿ, ಅದರಾಚೆಯ ಮಾಳದಲ್ಲಿ ಸ್ವಲ್ಪ ಹೊತ್ತು ತಿರುಗಿ ಸುತ್ತ ನೋಡಿ ಊರ ಕಡೆಗೆ ಮರಳಿ ತಿರುಗಿದನು. ಆ ದಿವಸ ಯುಗಾದಿ, ಎಣ್ಣೆ ಹಚ್ಚಿಕೊಳ್ಳ ಬೇಕು, ಎಂದು ಅವನ ಹೆಂಡತಿ ಅವನಿಗೆ ಹಿಂದಿನ ರಾತ್ರಿ ಎಚ್ಚರಿಕೆ ಹೇಳಿದ್ದಳು. ದಸ ಬೆದರದಿದ್ದರೆ ಅವನು ಇನ್ನು ಸ್ವಲ್ಪಹೊತ್ತು ಹಾಸಿಗೆ ಯಲ್ಲಿ ಇದ್ದು ಪ್ರಾಯಶಃ ಎದ್ದ ಒಡನೆ ಸ್ನಾನ ಮುಗಿಸುತ್ತಿದ್ದನು. ಚಿರತೆ ಬಂದು ಅದು ತಪ್ಪಿತ್ತು. ಮನೆಗೆ ಹೋಗಿ ಸ್ನಾನ ಮುಗಿಸೋಣವೆಂದು ಅವನು ಸ್ವಲ್ಪ ಬೇಗನೆ ನಡೆದನು. ಊರಮುಂದೆ ಬರುವ ವೇಳೆಗೆ ತಾಲ್ಲೂಕಿನ ತೈನಾತಿ ಜವಾನನೊಬ್ಬ ಅವನನ್ನು ಎದುರುಗೊಂಡನು. ಗೌಡ ಅವನನ್ನು 'ಏನು ಮೂಕಣ್ಣ, ಹಬ್ಬದ ದಿನ ಬಂದೆ' ಎಂದನು. ಜವಾನ "ಈ ಸಲ ಸುಬೇದಾರರು ಯುಗಾದಿ ಬೆಲ್ಲ ಕೊಡೋದಕ್ಕೆ ಗುರುಸಂದ್ರದ ಪಟೇಲ ಬೆಲ್ಲ ಕಳಿಸ್ತೇನೆ ಎಂತ ಹೇಳಿದ್ದ. ಗ್ರಾಮದಲ್ಲಿ ಎತ್ತಿದ ಬೆಲ್ಲ ಶಾನುಭೋಗರ ಮನೇಲಿ ಇಟ್ಟರು. ಶಾನುಭೋಗರು ತಿಳೀದ ಹಾಗೆ ಮನೆ ಪ್ರಸ್ತದಲ್ಲಿ ಅರ್ಧ ಬಳಸಿಬಿಟ್ಟರಂತೆ. ಹತ್ತು ಮುದ್ದೆ ಬೆಲ್ಲ ಕಡಮೆ ಬಂದಿದೆ. ಶೇಕದಾರ್ರು 'ಎಲಾ ಮದರಂಗಿಗೆ ಹೋಗಿ ಉಗ್ರಪ್ಪನವರ್ನ ಕೇಳಿ ಹತ್ತು ಮುದ್ದೆ ಬೆಲ್ಲ ತೆಗೆಸಿಕೊಂಡು ಬಾ ಅಂದರು'" ಎಂದನು.

ಗೌಡನು 'ಹೌದಪ್ಪ, ನಮ್ಮ ಊರು ಚಿಕ್ಕ ಊರೇ, ನಮ್ಮ ಸರತಿ ಬೆಲ್ಲ ಕೊಡೋದೇ ನಮಗೆ ಕಷ್ಟವಾಗ್ತದೆ. ಬೇರೆಯವರ ಸರ್ತಿಗೆ ಏನು ಮಾಡುವುದು' ಎಂದು ಹೇಳುತ್ತ 'ಹತ್ತು ಮುದ್ದೆ ಸಾಕೊ. ಶೇಕದಾರರಿ ಗೇನಾನ ಸ್ವಲ್ಪ ಬೇಕೊ,' ಎಂದನು. ಸೇವಕನು 'ಅದೆಲ್ಲಾ ನಿಮ್ಮಿಷ್ಟ, ನಿಮಗೆ ತಿಳಿಯದೆ' ಎಂದನು.

ಗೌಡನು ಊರೊಳಗೆ ಹೋಗಿ ಚಾವಡಿಯಲ್ಲಿ ಕುಳಿತನು. ಅಲ್ಲಿ ಬಂದ ಯಾರನ್ನೋ ಕರೆದು ನಾಲ್ಕು ಕುಳಗಳ ಹೆಸರನ್ನು ಹೇಳಿ ಅವರನ್ನು ಸ್ವಲ್ಪ ಬರಹೇಳು ಎಂದನು. ತೈನಾತಿಯವನು ಚಾವಡಿಯ ಒಂದು ಕಡೆ ಕುಳಿತನು. ಅಷ್ಟು ಹೊತ್ತಿಗೆ ರಾಮಪ್ಪನೂ ಚಿನ್ನಪ್ಪನೂ ಕೂಗಾಡುತ್ತ ರಂಪುಮಾಡುತ್ತ ಚಾವಡಿಯ ಬಳಿಗೆ ಬಂದರು. ರಾಮಪ್ಪ 'ಇಕೊ, ಗೌಡರು ಇಲ್ಲಿಯೆ ಇದ್ದಾರೆ. ಹೇಳು, ನ್ಯಾಯ ತೀರಿಸಲಿ' ಎಂದನು. ಈ ವೇಳೆಗೆ ರಾಮಾಶಾಸ್ತ್ರಿಯೂ, ಪುರೋಹಿತ ಶ್ಯಾಮಭಟ್ಟರೂ ಚಾವಡಿಗೆ ಬಂದರು. ಗೌಡನು ಹೇಳಿಕಳುಹಿಸಿದ್ದ ಕುಳಗಳು ಒಂದೊಂದಾಗಿ ಬಂದವು.

ರಾಮಪ್ಪ ಚಿನ್ನಪ್ಪ ತಮ್ಮ ನ್ಯಾಯದ ಮಾತನ್ನು ಎತ್ತಿದರು. ಗೌಡನು 'ಸ್ವಲ್ಪ ಇರಿ' ಎಂದು ಅವರಿಗೆ ಹೇಳಿ, ಸುಬೇದಾರರು ದಾನ ಮಾಡುವುದಕ್ಕೆ ಹತ್ತು ಮುದ್ದೆ ಬೆಲ್ಲ ಬೇಕಾಗಿದೆ ಎಂದೂ, ಶೇಕದಾರ್ರಿಗಾಗಿ ಎರಡು ಮುದ್ದೆ ಕಳುಹಿಸುವುದು ಚೆನ್ನ ಎಂದೂ ಹೇಳಿ ಆ ನಾಲ್ವರೂ ಮೂರು ಮೂರು ಮುದ್ದೆ ಬೆಲ್ಲ ತರಬೇಕಾಗಿ ಏರ್ಪಾಡು ಮಾಡಿದನು. ಅವರು ಸುಮ್ಮನೆ ಒಪ್ಪಲಿಲ್ಲ. ಸರತಿಯ ವರ್ಷದಲ್ಲಿ ಕೊಟ್ಟಿದ್ದಾಯಿತು, ತಿರಿಗಿ ಇದೇನು ಸುಲಿಗೆ, ಎಂದು ಗೊಣಗಿದರು. ಗೌಡನು ಇನ್ನು ಸ್ವಲ್ಪ ಮಾತನಾಡಿ ಅವರು ಎರಡೆರಡು ಮುದ್ದೆ ತರಬೇಕೆಂದೂ ತಾನು ನಾಲ್ಕು ಮುದ್ದೆ ಕೊಡುವುದಾಗಿಯೂ ಇತ್ಯರ್ಥ ಮಾಡಿದನು. ಮುನಿಯನನ್ನು ಕರೆದು 'ಮನೆಗೆ ಹೋಗಿ ನಾಲ್ಕು ಮುದ್ದೆ ಬೆಲ್ಲ ತೆಗೆದುಕೊಂಡು ಬಾ' ಎಂದು ಹೇಳಿದನು.

ಬೆಲ್ಲದ ವ್ಯವಸ್ಥೆ ಆದಮೇಲೆ ಶಾಸ್ತ್ರಿಗಳು 'ನೀನು ಕೊಡ್ತೀಯಾ ಅಂತ ಇವರು ಮಾತಿಗೆ ಮುಂಚೆ ನಿನಗೆ ಹೇಳಿಕಳುಹಿಸ್ತಾರೆ' ಎಂದರು. ಪುರೋಹಿತರು 'ಗೌಡ ಅವರಂತೆ ನಡಕೊಳ್ಳುತ್ತಿರುವುದರಿಂದ ಊರನ್ನೂ ಅವರು ಬಾಳಿಸ್ತಾ ಇದಾರೆ. ಮುನ್ನೂರು ಗ್ರಾಮದ ಧಣಿಗಳು ಈ ವರ್ಷ ಮದರಂಗಿಗೆ ಬಾವಿ ಮಾಡಿಕೊಟ್ಟರು. ಎಲ್ಲಾ ಊರಿಗೂ ಕೊಟ್ಟರೆ? ಊರವರೇ ಬಾವೀ ತೆಗೀಬೇಕು ಎಂದರೆ ಹತ್ತು ಮುದ್ದೆ ಬೆಲ್ಲದಲ್ಲಿ ಆಗ್ತದೆಯೆ?' ಎಂದರು. ಶಾಸ್ತ್ರಿಗಳು 'ಮುನ್ನೂರು ಗ್ರಾಮದ ದಣಿಗಳು ಬಾವೀನ ತಮ್ಮ ಸಂಬಳದಿಂದ ಮಾಡಿಸಿದರೇ? ಸರ್ಕಾರದ ದುಡ್ಡಿನಲ್ಲಿ

ಮಾಡಿಸಿದರು' ಎಂದರು. ಗೌಡ 'ಸರ್ಕಾರದ ದುಡ್ಡು ಬಂದು ನಮ್ಮೂರಲ್ಲಿ ಬಾವಿ ಆಗಬೇಕಾದದ್ದು ಏನಿತ್ತು? ಮೋಡ ಏಳ್ತದೆ. ನೀರು ಹೊತ್ತು ನಿಲ್ತದೆ. ಗಾಳಿ ಎತ್ತಲಾಗಿ ಬೀಸಿ ಅದನ್ನು ಒಯ್ತುದೋ ಅತ್ತಲಾಗೆ ಬಂದು ಸುರೀತದೆ. ಗಾಳೀನ ನಮ್ಮ ಕಡೆ ಮಾಡಿಕೋಬೇಕು. ಹತ್ತು ಮುದ್ದೆ ಬೆಲ್ಲದ ಮುಖ ನೋಡಿ ಧಣಿಗಳನ್ನ ಮೇಲೆ ಹಾಕಿಕೊಳ್ಳೋದೆ' ಎಂದನು. ಆಮೇಲೆ ಚಿನ್ನಪ್ಪನನ್ನು ಕುರಿತು 'ಏನಯ್ಯ ಚಾವಡೀಲಿ ಕೂತು ಮಾಡಿದ ನ್ಯಾಯಾನ ನೀ ಒಬ್ಬ ಮುರಿದೆಯಂತೆ. ಊರು ಹ್ಯಾಗೆ ಬಾಳೋದು' ಎಂದನು. ಮೊದಲಲ್ಲಿ ಚಿನ್ನಪ್ಪ ತಾನು ಹಾಗೇನೂ ಮಾಡಲಿಲ್ಲ, ಮುನಿಯ ತನ್ನ ಗದ್ದೆಗೆ ಹರಿಯುತ್ತಿದ್ದ ನೀರನ್ನು ನಿಲ್ಲಿಸದೆ ಮರೆತಿರಬೇಕು, ಎಂದು ಸಾಧಿಸಿದನು; ಮುನಿಯನು ಇದು ತೀರ ಸುಳ್ಳು ಎಂದು ಒದರಿದ ಮೇಲೆ, ಕಟ್ಟೆ ತಾನಾಗಿಯೇ ಎಲ್ಲೋ ಹರಿದಿರಬೇಕು ಎಂದು ಸೂಚನೆ ಮಾಡಿದನು; ಮುನಿಯನು ಇದೂ ಸುಳ್ಳು ಎಂದ ಮೇಲೆ, ತನ್ನ ಆಳು ಎಲ್ಲಿಯೋ ತಿಳುವಳಿಕೆಯಿಲ್ಲದೆ ನೀರು ಬಿಟ್ಟಿರಬೇಕು ಎಂದು ತಪ್ಪನ್ನು ಅರ್ಧ ಮನಸ್ಸಿನಿಂದ ಒಪ್ಪಿಕೊಂಡನು. ಗೌಡನು 'ಇದೆಲ್ಲ ಬಹು ದೊಡ್ಡ ಮಾತಾಯಿತು. ಚಾವಡಿಯಲ್ಲಿ ಕುಳಿತು ಮಾಡಿದ ನ್ಯಾಯಾನ ಒಬ್ಬ ಬೇಸಾಯಗಾರ ಮುರೀಬಹುದಾದರೆ ಚಾವಡಿಯಾಕೆ?' ಎಂದನು. ಚಿನ್ನಪ್ಪ 'ಚಾವಡಿಯಾಕೆ? ರೈತರ ಮನೆ ಮುರಿಯೋಕೆ' ಎಂದನು. ಗೌಡನು 'ಯಾಕಯ್ಯ, ಬಹಳ ಮಾತನಾಡ್ತೀ' ಎಂದನು. ಚಿನ್ನಪ್ಪನಿಗೆ ಈ ವೇಳೆಗೆ ಕೋಪದಿಂದ ಬುದ್ಧಿ ಕೆಟ್ಟುಹೋಗಿತ್ತು. ಅವನು 'ಯಾತರ ಗೌಡಿಕೆ ಇದು, ಮುಟ್ಠಾಳ ಗೌಡಿಕೆ. ತನಗೆ ಮೂರೆಕರೆ ಬೆಳೆಗೆ ನೀರು ಬೇಕು. ರಾಮಪ್ಪನಿಗೆ ಎರಡು ಎಕರೆಗೆ. ಆದರೂ ಒಂದು ದಿನ ತನಗೆ, ಒಂದು ದಿನ ರಾಮಪ್ಪನಿಗೆ ಎಂತ ಗೌಡ ನ್ಯಾಯ ಮಾಡಿದ್ದ. ಇದು ಹ್ಯಾಗೆ ಸರಿ? ರಾಮಪ್ಪನಿಗೆ ಗೌಡನಿಗೆ ಸ್ವಲ್ಪ ಸಂಬಂಧ ಇತ್ತು. ಅದಕ್ಕಾಗಿ ಗೌಡ ಪಕ್ಷಪಾತ ಮಾಡಿದ್ದನು. ಗೌಡ, ಗೌಡ ಅಂತ ಕರಸಿಕೊಳ್ಳುವುದು ಸುಲಭ. ಗೌಡಿಕೇನ ಸರಿಯಾಗಿ ನಡೆಸಿಕೊಳ್ಳಬೇಕಾದರೆ ಕಷ್ಟ,' ಎಂದನು. ಗೌಡ ಇದಕ್ಕೆ ಒಂದು ಮಾತನ್ನು ಹೇಳಿದನು. 'ಗೌಡಿಕೆ ನೀನೇ ಮಾಡುತೀ ಯೇನಯ್ಯ?' ಚಿನ್ನಪ್ಪ: 'ಅದು ಯಾರು ಹೇಳಿದರು?' 'ಅಲ್ಲ ಮತ್ತೆ

ಐದು ದಿವಸದ ಹಿಂದೆ ಎಲ್ಲರೆದುರಿಗೆ ನ್ಯಾಯಕ್ಕೆ ಒಪ್ಪಿಕೊಂಡು ಈವತ್ತು ಪಕ್ಷಪಾತ ಅಂತೀಯಲ್ಲ. ನನ್ನ ಗೌಡಿಕೆ ಮುಟ್ಟಾಳ ಗೌಡಿಕೆ ಆದಮೇಲೆ ನೀನೆ ಮಾಡಬೇಕು ರುಸ್ತುಂ ಗೌಡಿಕೆ.' ಈ ವೇಳೆಗೆ ಶಾನುಭೋಗರು ಬಂದು ಈ ಮಾತು ಆ ಮಾತು ಎಲ್ಲವನ್ನೂ ಕೇಳಿದರು. ಚಿನ್ನಪ್ಪನೊಂದಿಗೆ ತಾವು ಮಾತನಾಡಿ ಕೊನೆಗೆ ಅವನಿಂದ ತನ್ನ ಮಾತು ತಪ್ಪು ಎಂದು ಒಪ್ಪಿಸಿದರು. ಗೌಡನನ್ನು ಕುರಿತು ಸಿಕ್ಕಾಬಟ್ಟೆ ಮಾತನಾಡಿದ್ದಕ್ಕೆ ಪ್ರಾಯಶ್ಚಿತ್ತವಾಗಿ ಗೌಡನು ಕೊಡಬೇಕಾದ ನಾಲ್ಕು ಮುದ್ದೆ ಬೆಲ್ಲವನ್ನು ಚಿನ್ನಪ್ಪನು ಕೊಡಬೇಕೆಂದು ನ್ಯಾಯವಾಯಿತು. ಗೌಡನು 'ಇವನು ಬುದ್ಧಿಯಿಲ್ಲದೆ ಮಾತನಾಡಿದರೆ ನಾಲ್ಕು ಮುದ್ದೆ ಬೆಲ್ಲ ನಾ ಇವನಿಂದ ತಕ್ಕೊಳ್ಳಲಾ? ಸುಬೇದಾರರು ಬೆಲ್ಲಾನ ಬ್ರಾಹ್ಮಣರಿಗೆ ದಾನಮಾಡ್ತಾರೆ. ಆ ಪುಣ್ಯದಲ್ಲಿ ಒಸಿ ನನಗಿರಲಿ. ನಾನು ಈ ಹೊತ್ತು ಸ್ನಾನಮಾಡಿ ಇಲ್ಲಿ ಬೆಲ್ಲ ಹಂಚೋಲ್ಲವೆ? ನಮ್ಮದೇ ಬೆಲ್ಲ ಅಲ್ಲೂ ಹಂಚಲಿ' ಎಂದನು. ಎಲ್ಲ ಮಾತೂ ಆದ ಮೇಲೆ ಊರಿನ ದೇವಾಲಯದಲ್ಲಿ ರಾಮನವಮಿಯ ಉತ್ಸವ ದಲ್ಲಿ ಪಾನಕದ ಸೇವೆ ಚಿನ್ನಪ್ಪನದು ಎಂದು ನಿರ್ಧರವಾಯಿತು.

ಈ ವೇಳೆಗೆ ಹನ್ನೆರಡು ಮುದ್ದೆ ಬೆಲ್ಲ ಚಾವಡಿಗೆ ಬಂದಿತ್ತು. ಗೌಡನು ತೈನಾತಿಯವನನ್ನು ಕರೆದು ಇದನ್ನು ಲೆಕ್ಕಕೊಟ್ಟು ಊರ ಇಬ್ಬರು ತರುಣರ ಮೇಲೆ ಹೊರಿಸಿ ಅವನ ಹಿಂದೆ ಕಳುಹಿಸಿದನು. ಅವರು ಹೊರಡುವ ಮೊದಲು ಶೇಕದಾರರಿಗೆಂದು ಕೊಟ್ಟ ಎರಡು ಮುದ್ದೆಯಲ್ಲಿ ಸಣ್ಣದನ್ನು ತೈನಾತಿಯವನು ಇಟ್ಟುಕೊಳ್ಳಬಹುದೆಂದು ಅವನಿಗೆ ಹೇಳಿದನು. ಅವನು 'ನಾನು ಕೇಳೋಣ ಅಂತ ಇದ್ದೆ, ನೀವೇ ಹೇಳಿದಿರಿ' ಎಂದು ಸಂತೋಷ ಪಟ್ಟನು; ಬೆಲ್ಲವನ್ನು ಹೊರಿಸಿಕೊಂಡು ಹೋದನು.

ಶಾಸ್ತ್ರಿಗಳು 'ಇದರಲ್ಲಿ ಸುಬೇದಾರರಿಗೆ ಸೇರೋದೆಷ್ಟೋ, ಬಿಡೋ ದೆಷ್ಟೊ' ಎಂದರು. ಪುರೋಹಿತರು 'ಜೇನು ಹಿರಿದೋರು ಕೈನೆಕ್ಕದೆ ಇರ್ತಾರೆಯೆ? ಇವನಿಗಿಷ್ಟು, ಶೇಕದಾರರಿಗಷ್ಟು ಆದಮೇಲೆ ಉಳಿದದ್ದು ಸುಬೇದಾರರ ಮನೆ ಮುಟ್ಟುತದೆ' ಎಂದರು.

ಶಾಸ್ತ್ರಿ 'ಮುಟ್ಟೆತೊ ಇಲ್ಲವೋ ಉಗ್ರಪ್ಪ ಏನೂ ಕೇಳೋ ಹಾಗಿಲ್ಲ' ಎಂದರು. ಶಾನುಭೋಗರು 'ಉಗ್ರಪ್ಪ ಹಾಗೆಲ್ಲ ಬಿಡೋದಿಲ್ಲ. ತಿರಿಗಿ

ಸುಬೇದಾರರನ್ನ ಕಂಡಾಗ, ಬೆಲ್ಲ ಅಷ್ಟೇನು ಹಸನಾಗಿರಲಿಲ್ಲ, ಮೊದಲೇ ತಿಳಿದಿದ್ದರೆ ಒಳ್ಳೇದು ಕಳಿಸ್ತಾ ಇದ್ದೆ, ಅಂತಾನೆ. ಆಗ ಗೊತ್ತಾಗುತ್ತೆ ಮುಟ್ಟಿದ್ದು ಇಲ್ಲದ್ದು' ಎಂದರು.

ಗೌಡನು ಮೆಲ್ಲನೆ ನಕ್ಕನು. ಈ ವೇಳೆಗೆ ಗೌಡನ ಮನೆಯಿಂದ ಮಕ್ಕಳು ಬಂದು ನೀರು ಕಾದಿದೆಯೆಂದು ಹೇಳಿದರು. ಗೌಡನು ಪುರೋಹಿತ ನನ್ನು ಕುರಿತು 'ಭಟ್ಟರೆ, ಬೇಳೆ ಬೆಲ್ಲ ಮನೆಗೆ ಬಂತೊ' ಎಂದು ಕೇಳಿದನು. ಪುರೋಹಿತರು 'ಬಂದಿರಬೇಕು, ನಾನು ನೋಡಲಿಲ್ಲ' ಎಂದರು. ಗೌಡನು ಮಕ್ಕಳಿಗೆ 'ಎಲಾ, ಮನೆಗೆ ಓಡಿಹೋಗಿ ಭಟ್ಟರ ಮನೆಗೆ ಬೇಳೆ ಬೆಲ್ಲ ಹೋಯಿತೆ ಅಮ್ಮನ್ನ ಕೇಳಿಕೊಂಡು ಬನ್ನಿ' ಎಂದನು. ಅವರು ಮನೆಗೆ ಹೋಗಿ ತಾಯನ್ನು ಕೇಳಿ ಓಡಿ ಬಂದು 'ಆಗಲೇ ಕಳಿಶಿದರಂತೆ' ಎಂದರು.

ಶಾನುಭೋಗರು ಆಮೇಲೆ ಊರಿನ ಕಂದಾಯದ ಮಾತನ್ನು ಎತ್ತಿದರು. 'ಎರಡು ಕಂತು ಮುಗಿಯಿತು. ಇದು ಮೂರನೆಯ ಕಂತು. ಹದಿನೈದು ಕುಳ ಬಾಕಿ ಬಿದ್ದಿದೆ. ಈ ಸಲ ಏನಾದರೂ ಮಾಡಬೇಕು' ಎಂದರು. ಗೌಡನು ಅದು ಯಾರೆಂದು ಹೆಸರುಗಳನ್ನು ವಿಚಾರಿಸಿ, ಅವರಲ್ಲಿ ಯಾರು ಯಾರು ಇದ್ದರೆ ಅವರನ್ನ ಕರೆತರಬೇಕೆಂದು ನೀರಗಂಟಿಯನ್ನ ಅಟ್ಟಿದನು. ಅವರಲ್ಲಿ ಎಂಟು ಜನ ಬಂದರು. ಅವರಿಗೆ ಶಾನುಭೋಗರು ಲೆಕ್ಕಹೇಳಿ, ಅವರು ತೆತ್ತಿದ್ದ ಹಣಕ್ಕೆಲ್ಲ ವಿವರ ತಿಳಿಸಿ, ಮಾತು ಮುಗಿಯುವ ವೇಳೆಗೆ ಮಧ್ಯಾಹ್ನವಾಯಿತು. ಇದೆಲ್ಲ ಆದಮೇಲೆ ಶಾನುಭೋಗರು 'ಅಯ್ಯ, ಗೌಡರು ಹಬ್ಬದ ದಿನ ಕರೆಯುವುದು ಬೇಡ ಎಂದರೂ ಕರೆದು ಈ ಮಾತು ಮುಗಿಸಿದ್ದಾಗಿದೆ. ಈ ಸಲ ಕಂತು ತೆರದೆ ಇದ್ದರೆ ಕಚೇರಿ ಯಿಂದ ನೋಟೀಸಾದೀತು ಜೋಕೆ' ಎಂದರು. ಅವರಲ್ಲಿ ರಾಜಪ್ಪ 'ಅದೇನೋ ಸರಿ ಅನ್ನಿರ, ನಮಗೆ ನೀವು ಉಗಾದಿ ಮಾಡದೀರ ಇದ್ದರೆ ಸರ್ಕಾರ ನಿಮಗೆ ಉಗಾದಿ ಮಾಡ್ತಾರೆ. ಲೋಟೀಸ್, ಗೀಟೀಸ್ ಆಗೋದಕ್ಕೆ ಬಿಡಬೇಡಿರ' ಎಂದನು.

ಗೌಡನು 'ನೋಟೀಸ್ ಮಾಡಿಸಿಕೊಂಡು ಕಂದಾಯ ತೆರೋಕೆ ಮದರಂಗಿ ಏನು ಮಾದಾವರ ಆಯಿತೆ? ಒಂದು ನೋಟೀಸ್ ಆದರೆ ನನಗೆ ಈ ಗೌಡಿಕೆ ಬೇಡ' ಎಂದನು.

ಗೌಡನು ಮನೆಗೆ ಹೋಗಿ ಇನ್ನುಮೇಲೆ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಬೇಕು. ಚಾವಡಿಯಲ್ಲಿ ಚಿನ್ನಪ್ಪ ಏನೋ ಕೂಗಾಡುತ್ತಿದ್ದನೆಂದೂ ಗೌಡ ಸಮಾಧಾನವಾಗಿ ಮಾತನಾಡುತ್ತಿದ್ದನೆಂದೂ ಹೆಂಡತಿಗೆ ಆಗಲೇ ತಿಳಿದಿತ್ತು. ಗಂಡನು ಬಂದೊಡನೆ ಅವಳು 'ಏನು ನಿನಗೆ, ಹಬ್ಬ ಹುಣ್ಣಿಮೆ ಏನೂ ಇಲ್ಲವೊ? ಊರೆಲ್ಲ ಹಬ್ಬ. ತಲೆಗೆ ಈಸು ಎಣ್ಣೆ ಹಚ್ಚಿಕೊಂಡು ಮಿಂದು ಹೋಗುವುದು ಬಿಟ್ಟು ವರ್ಷದ ಗೌಡಿಕೆಯೆಲ್ಲ ಒಂದೇ ದಿನಕ್ಕೆ ಮುಗಿಸಬೇಕೊ? ಮಕ್ಕಳೆಲ್ಲ ಕಾದವೆ. ಅಪ್ಪಾಜಿ ಬರಲಿ ಅಂತ. ಹೊತ್ತು ನೆತ್ತಿಗೆ ಏರಿತು' ಎಂದಳು.

ಗೌಡ 'ನಾ ಏನ ಮಾಡಲಿ. ಬೆಳಗಾಗ ಎದ್ದು ಚಿರತೆ ಬಂದಿತ್ತು. ಆಮೇಲೆ ಮುನಿಯ ಚಿನ್ನಪ್ಪನ ಮೇಲೆ ದೂರು ತಂದ. ತೈನಾತಿ ಮೂಕ ಬೆಲ್ಲ ಅಂತ ಬಂದ. ಶಾನುಭೋಗರು ಬಾಕಿ ಮಾತು ತಂದರು. ಅಂತು ಇಂತು ಚಾವಡಿ ಬಿಡೋದು ನಡುಮುದ್ಯಾನ ಆಯ್ತು' ಎಂದ.

ಹೆಂಡತಿ 'ಅದೇನು ಆ ಚಿನ್ನಪ್ಪ ನಿನ್ನ ಪೂರಾ ಬಯ್ದನಂತೆ. ನೀನು ಸುಮ್ಮನಿದ್ಯಂತಲ್ಲ. ಬೇಕು ಅಂದೋರು ಬೈಬಹುದೋ ನಿನ್ನ ಗೌಡಿಕೇನ?' ಎಂದಳು.

ಗೌಡನು 'ಬೈಯೋವಾಗ ಬೈದ, ಆಮೇಲೆ ತಂಪುಮಾಡೋಕೆ ಒಪ್ಕೊಂಡ. ರಾಮನವಮಿ ಪಾನಕ ಈ ಸಲ ಅವನದು' ಅಂದ.

ಹೆಂಡತಿ 'ಹಂಗಾದರೇನು, ಒಂದು ಪಾನಕ ಪಣ್ಯಾರ ಮಾಡೋರೆಲ್ಲ, ಗೌಡನ್ನ ಒಂದು ಸಲ ಬೈಬಹುದು. ಒಳ್ಳೆ ಗೌಡಿಕೆ ಇದು' ಎಂದಳು.

ಗೌಡನು 'ಉಗಾದಿ ಮಜ್ಜನ ನೀ ನನಗೆ ಮಾತಿನಾಗೆ ಮಾಡ್ತೀಯೋ, ಎಣ್ಣೆ ಗಿಣ್ಣೆ ಹಚ್ತೀಯೊ?' ಎಂದನು.

ಹೆಂಡತಿ ಈ ವೇಳೆಗೆ ಒಂದು ಕಡೆ ಮಣೆ ಹಾಕಿ ಎಣ್ಣೆಯನ್ನಿಟ್ಟಿದ್ದಳು. 'ಅಕೊ ಅಲ್ಲಿ ಮಣೆ ಹಾಕಿ' ಎಂದು ಒಳಗೆ ಹೋಗಿ ಸ್ವಲ್ಪ ಅರಿಸಿನ ತಂದು ಅಲ್ಲಿಟ್ಟುಕೊಂಡು ನಿಂತಳು. ಗೌಡ ಬಂದು ಮಣೆಯ ಮೇಲೆ ಕುಳಿತನು. ಗೌಡಿತಿ ಎಣ್ಣೆಯನ್ನು ಮುಟ್ಟಿ ಕೈ ಅರಿಸಿನ ಮಾಡಿಕೊಂಡು ಗೌಡನ ತಲೆಗೆ ಸ್ವಲ್ಪ ಎಣ್ಣೆಯನ್ನಿಟ್ಟಳು. ಮಧೆ 'ಮಾತಿನಾಗೆ ಮಜ್ಜನ ಮಾಡಿಸೋದು ಅಂತೀಯಲ್ಲ. ಯಾವೋನೋ ಚಿನ್ನಪ್ಪ ಬೈಬಹುದಂತೆ ಕೈ ಹಿಡಿದ ಹೆಂಡತಿ

ಬೈದರೆ ಕೊಡದಾ? ಬೇಕಾದರೆ ನಾನೂ ತಂಪುಮಾಡಿಸ್ತೇನೆ' ಎಂದಳು. ಗೌಡನು 'ಬುದ್ಧಿಕೆಟ್ಟ ಯಾವನೋ ಮುಟ್ಠಾಳ ಬೈದ ಅಂತ ನಾನೇನು ಮಾಡೋಕಾಗ್ತದೆ' ಎಂದನು. ಗೌಡಿತಿ 'ಏನು ಮಾಡೋಕಾಗ್ತದೆ, ಗ್ರಾಚಾರ ಬಿಡಿಸಬೇಕು. ಎಷ್ಟು ಅವನ ಪೊಗರು, ಗೌಡನ್ನ ಬೈಯೋಕೆ? ಯಾಕೋ ಕತ್ತೆ ಅಂತ ಚಂಪೆಗೆ ಎರಡು ಕೊಡಬೇಕಾಗಿತ್ತು' ಎಂದಳು. ಗೌಡನು 'ನಮ್ಮೊಗ ನನ್ನ ಕೆನ್ನೇಗೆ ಹೊಡೆದಾಂತ ನಾನೂ ಬದಲಿಗೆ ಹೊಡೆದರೆ ಆದೀತಾ. ಮೊಗ ಹೊಡೆದರೆ ನಾ ತಡಕೋತೀನಿ, ನಾ ಹೊಡೆದರೆ ಮಗ ತಡದಾತ?' ಎಂದನು. ಗೌಡಿತಿ 'ಚಿನ್ನಪ್ಪನ್ನ ನಿನಗೆ ಯಾವ ಹೆಂಡರು ಹೆತ್ತಳು' ಎಂದಳು. ಗೌಡನು 'ರೈತ ಕೋಪಮಾಡಿ ಗೌಡ ಕೆಡೋಲ್ಲ, ಗೌಡ ಕೋಪಮಾಡಿ ರೈತ ಉಳಿದಾನೆ? ಹಬ್ಬದ ದಿನ. ಬದುಕಿ ಕೊಳ್ಳಲಿ ಬಿಡು' ಎಂದನು. ಆಮೇಲೆ ಮಜ್ಜನ. ಇದಾದ ಮೇಲೆ ಮಕ್ಕಳು ಮರಿಯೊಂದಿಗೆ ನಿಂತು ದೇವರೆದುರಿಗೆ ಧೂಪ ಹಾಕಿ, ನಾಲ್ಕು ಮನೆಗೆ ಬೆಲ್ಲ ಹಂಚಿಕೆ ಮಾಡಿಸಿ, ಅಯ್ಯನವರು ಕಳುಹಿಸಿಕೊಟ್ಟ ಬೇವಿನ ಚಿಗುರು ಬೆಲ್ಲ ತಿಂದು, ಊಟಮಾಡಿ ಗೌಡನು ಕುಳಿತನು.

ಒಂದು ಗಳಿಗೆ ಕೂಡಲಿಲ್ಲ. ಊರ ತಳವಾರ ಬಂದು ಗೋಮಾಳದಲ್ಲಿ ದನ ಮೇಯುತ್ತಿರುವಾಗ ಒಂದು ಚಿರತೆ ಬಂದಿತೆಂದೂ, ದನ ಕಾಯುವ ರಂಗ ಹೋಗಿ ಅದರ ಮೇಲೆ ಬಿದ್ದು ಮೊಣ್ಣೆಯಿಂದ ಹೊಡೆದನೆಂದೂ, ಅದು ಸತ್ತಿತೆಂದೂ ಹೇಳಿದನು. ಚಿರತೆಯ ಹೆಣವನ್ನು ಚಾವಡಿಯ ಮುಂದೆ ಹಾಕಿದ್ದರು. ಗೌಡನು ಅಲ್ಲಿ ಹೋದನು. ಊರ ಜನವೆಲ್ಲ ಸೇರಿತ್ತು. ವರ್ಷದ ಮೊದಲ ದಿನ ಚಿರತೆ ಸತ್ತಿತೆಂದು ಜನರ ಸಂಭ್ರಮ ಹೇಳತೀರದು. 'ಗೌಡನ ಕಣ್ಣಿಗೆ ಬಿದ್ದಾಗಲೇ ಅದರ ಕೆಲಸ ಮುಗೀತು' ಎಂದು ಮುನಿಯ ಹೇಳಿದನು. ಮರಿಯಪ್ಪನ ಕಣ್ಣಿಗೆ ಬಿದ್ದದ್ದು ಲೆಕ್ಕಕ್ಕೇ ಬರಲಿಲ್ಲ. ಗೌಡ ಎದ್ದು ಹೋಗಿ ಕೊಟ್ಟಿಗೆಯಲ್ಲಿ ನಿಂತಾಗ ಚಿರತೆ ಪೌಳಿಯ ಗೋಡೆಯ ಮೇಲೆ ಕುಳಿತಿತ್ತೆಂದೂ, ಅದರ ಎರಡು ಕಣ್ಣು ಎರಡು ಪುಷ್ಯರಾಗದಂತೆ ಮಿನುಗುತ್ತಿತ್ತೆಂದೂ, ಗೌಡನನ್ನು ಕಂಡು ಅದು ಹೊರಕ್ಕೆ ಧುಮುಕಿ ಓಡಿ ಹೋಯಿತೆಂದೂ ಊಹಾವಂತನಾದ ಪಿಳ್ಳಪ್ಪ ಆಗಲೇ ಕಥೆಯನ್ನು ಕಟ್ಟಿದ್ದನು. ಪುಷ್ಯರಾಗ ಹೇಗಿದೆಯೆಂದು ಮುನಿಯ ಕೇಳಿದ. 'ಆ ಚಿರತೆ

ಕಣ್ಣು ನೋಡು ಅದರ ಹಂಗಿರ್ತದೆ' ಎಂದು ಪಿಳ್ಳಪ್ಪ ಹೇಳಿದನು. ಮುನಿಯನು 'ಸತ್ತ ಚಿರತೆ ಕಣ್ಣು ಏನು ನೋಡೋದು ಬಿಡಪ್ಪ' ಎಂದನು. ಈ ವೇಳೆಗೆ ಎಲ್ಲರೂ ರಂಗನನ್ನು ಹೊಗಳಿದ್ದೂ ಹೊಗಳಿದ್ದೇ. ಚಾವಡಿಯ ಕೆಳಗೆ ಒಂದು ಕಲ್ಲಿನ ಮೇಲೆ ಅವನನ್ನು ಕೂರಿಸಿ ಅವನ ಎಡದ ಕಾಲಿನ ಹತ್ತಿರಕ್ಕೆ ಚಿರತೆಯ ತಲೆಯಿರುವಂತೆ ಅದರ ಮೈಯನ್ನು ಎಳೆದುಹಾಕಿ ಅವನ ಜೊತೆಯವರೂ ಊರ ತರುಣರೂ ಅವನನ್ನು ದೊಡ್ಡವನನ್ನು ಮಾಡಿ ಆರಾಧಿಸುತ್ತಿದ್ದರು. ಗೌಡನು ಬಂದಾಗ ಜನ ಅವನಿಗೆ ದಾರಿ ಕೊಟ್ಟಿತು. ಚಿರತೆಯನ್ನು ಕೊಂದು ರಂಗನು ಪಡೆದಷ್ಟು ಮರ್ಯಾದೆ ಚಿರತೆಯನ್ನು ನೋಡಿದನೆಂಬ ಕಾರಣದಿಂದ ಗೌಡನಿಗೂ ಬಂದಿತ್ತು. ಗೌಡನ ಅನುಮತಿಯನ್ನು ಪಡೆದು ರಂಗನಿಗೆ ಚಿರತೆಗೆ ಅಲಂಕಾರ ಮಾಡಿ ಊರಿನಲ್ಲಿ ಮೆರವಣಿಗೆ ಮಾಡಿದರು. ಮೆರವಣಿಗೆ ಪಕ್ಕದ ಎರಡು ಊರುಗಳಿಗೂ ಹೋಗಿಬರಬೇಕೆಂದೂ ಆಮೇಲೆ ಸರ್ಕಾರದ ಇನಾಮು ತರುವುದಕ್ಕೆ ತಾಲ್ಲೂಕು ಕಚೇರಿಗೆ ಹೋಗಬೇಕೆಂದೂ ಏರ್ಪಾಡಾಯಿತು. ಚಿರತೆಯ ಮೆರವಣಿಗೆ ಪಕ್ಕದ ಊರಿಗೆ ಹೊರಟಿತು.

ಗೌಡನಿಗೆ ಸಾಕಾಗಿತ್ತು. ಅವನು ಚಿಕ್ಕಂದು ತೆಳ್ಳಗೇ ಇದ್ದನು. ಒಂದು ಕಾಲದಲ್ಲಿ ಕೋವಿಯಿಂದ ಒಂದು ಚಿರತೆಯನ್ನು ಕೊಂದು ತಾನೂ ಮೆರವಣಿಗೆ ಮಾಡಿಸಿಕೊಂಡಿದ್ದನು. ಆಗ ಅವನ ಮೊದಲ ಮಗ ಎರಡು ವರ್ಷದ ಮಗು. ಈಗ ಆ ಮಗನಿಗೆ ಹದಿನಾರು ವರ್ಷ ಆಗಿತ್ತು. ಗೌಡನಿಗೆ ಮಧ್ಯ ವಯಸ್ಸು. ಹೊಟ್ಟೆ ಸ್ವಲ್ಪ ಬೆಳೆದಿತ್ತು. ಇಂಥ ಮೈಯನ್ನು ಎರಡು ಗಂಟೆಯ ಬಿಸಿಲಲ್ಲಿ ಮೆರವಣಿಗೆ ತೆಗೆದುಕೊಂಡು ಹೋಗುವುದು ಜೀವಕ್ಕೆ ಕಷ್ಟವೆಂದು ಅವನಿಗೆ ತೋರಿತು. ಮೆರವಣಿಗೆಯ ಅಷ್ಟು ಗುಂಪಿನಲ್ಲಿ ಕಷ್ಟ ಪಡದೆ ಇದ್ದದ್ದು ಎಂದರೆ ಚಿರತೆಯ ಹೆಣ ಒಂದೇ. ಈ ಭಾವ ಮನಸ್ಸಿನಲ್ಲಿ ಅಸ್ಪಷ್ಟವಾಗಿ ಮೂಡುತ್ತಿರಲು ಗೌಡ ಮನೆಗೆ ಬಂದನು. ಅವನ ತಾಯಿ ಅವನ ಮೇಲೆ ಕೋಪಿಸಿದಳು. 'ಹಬ್ಬದ ದಿನ ಅಂದರೂ ಚಾವಡಿಯಲ್ಲಿ ಕೂಡೋದು. ಎಣ್ಣೆ ಹಚ್ಚಿಕೊಳ್ಳೋದು ನಡು ಮಧ್ಯಾನ. ಚಿರತೆ ಬಂತು ಅಂತ ಈ ಬಿಸಿಲಾಗೆ ಊರು ಮೆರೀಬೇಕಿತ್ತೇ? ಹೈದನ್ನ ಕಳಿಸಿದ್ದರೆ ಆಗತಿರಲಿಲ್ಲವೇ' ಎಂದಳು. 'ನಿನ್ನ ಮಗ ಒಣಗತಾನೆ ಅಂತ ನೀ ಸೊರಗತೀಯ,

ನಾ ಹೋಗಲ್ಲ ಅಂತ ಹೈದನ್ನ ಕಳಿಶಿದ್ದರೆ ನಿನ್ನ ಸೊಸೆ ಸುಮ್ಮನಿರೋಳೆ? ಗಾಚಾರ ಬಿಡಿಸಿರೋಳು' ಎಂದು ಗೌಡ ಸ್ವಲ್ಪ ಮಲಗಿಕೊಂಡನು. ಆ ವೇಳೆಗೆ ಪುರೋಹಿತ ಶಾಮಭಟ್ಟರು ಗೌಡನನ್ನು ನೋಡುವುದಕ್ಕೆ ಬಂದನು. ಗೌಡನು ಭಟ್ಟರಿಗೆ ಮಣೆ ಹಾಕಿಸಿ ಕುಳ್ಳಿರಿಸಿ ತಾನೂ ಕುಳಿತನು. ಭಟ್ಟರು 'ಏನು ಉಗ್ರಪ್ಪ, ಸಾಕಾಗಿದೆಯೆ,' ಎಂದು ಕೇಳಿದನು. ಗೌಡನಿಗೆ ಸಾಕಾಗಿದೆ ಎಂದು ಹೇಳುವುದಕ್ಕೆ ಇಷ್ಟವಿಲ್ಲ. 'ಏನು ಅಂಥದೇನೂ ಇಲ್ಲ, ಏನು ಬಂದಿರಿ ಹೇಳಿ, ಸಂಜೆಗೆ ಓದೋಕೆ ಏರ್ಪಾಡಾಗಿದೆಯಲ್ಲ' ಎಂದನು. ಭಟ್ಟನು ಒಂದು ಕೆಲಸಕ್ಕಾಗಿಯೇ ಬಂದಿದ್ದನು. ಆದರೆ ಗೌಡನ ಸ್ಥಿತಿಯನ್ನು ನೋಡಿ ಆ ಮಾತನ್ನು ಎತ್ತಲಿಲ್ಲ. ಕುಚೇಲನ ಕಥೆಯನ್ನು ಹೇಳಿದನು. ಭಟ್ಟನು ಕಥೆಯನ್ನು ಮೊದಲುಮಾಡಿದ ಒಡನೆಯೇ ಮನೆ ಮಕ್ಕಳೆಲ್ಲ ಬಂದು ಗೌಡನ ಸುತ್ತ ಕುಳಿತರು. ಗೌಡನ ತಾಯಿ, ಗೌಡಿತಿ ಅಲ್ಲಲ್ಲೆ ಕುಳಿತರು. ಭಟ್ಟನು ಹೇಳಿದ ಕಥೆ ಅವರಿಗೆ ಹೊಸದಲ್ಲ. ಅಥವಾ ಹೊಸ ತಾಗಿದ್ದರೆ ಬಹು ಕಿರಿಯ ಮಕ್ಕಳಿಗೆ. ಹಿರಿಯರಿಗೆ ಕೇಳಿ ಮರೆತಿದ್ದ ಕಾರಣ ದಿಂದ ಹೊಸತಾಗಿ ಇದ್ದಿರಬಹುದು. ಏನಾದರೂ ಕತೆ ಯಾರಿಗೂ ಹಳೆಯದು ಎನಿಸಲಿಲ್ಲ. ಕೃಷ್ಣನು ಎಂದಿಗೂ ಹೊಸಬ, ಅವನ ಕಥೆ ಯಾವ ಕಾಲಕ್ಕೂ ನೂತನ. ಶಾಮಭಟ್ಟರು ಕುಚೇಲನ ಕಥೆಯನ್ನು ಸಾವಧಾನ ವಾಗಿ ಹೇಳುತ್ತಿರಲು ಮಾದಾವರದಿಂದ ದೇವಾಲಯದ ಅರ್ಚಕನು ಬಂದನು. ಅಂದಿನ ಸಂಜೆಗೆ ಮುದರಂಗಿಯ ದೇವಾಲಯದಲ್ಲಿ ಪೂಜೆ ನಡೆಯಬೇಕು. ಅದು ವಾಡಿಕೆಯಂ ಗೌಡನಿಂದ ನಡೆಯತಕ್ಕದ್ದು. ಶಾಮಭಟ್ಟನು ಕಥೆಯನ್ನು ಮುಗಿಸಿದನು. ಸಂಜೆಗೆ ಪಂಚಾಂಗ ಶ್ರವಣ ವನ್ನು ಸ್ವಲ್ಪ ಮುಂದಾಗಿಯೇ ಆರಂಭಿಸಿದರೆ ಒಳ್ಳೆಯದು ಎಂದು ಹೇಳಿ ಮನೆಗೆ ಹೊರಟನು. ಇದಾದ ಮೇಲೆ ಅರ್ಚಕನಿಗೆ ಪೂಜೆಯ ಸಾಮಗ್ರಿ ಗಳನ್ನು ಕೊಡುವ ಕೆಲಸ. ಗೌಡಿತಿಯದು ಸ್ವಲ್ಪ ಹಿಡಿತದ ಕೈ. ಆದ್ದರಿಂದ ಅರ್ಚಕನು ಅದನ್ನೆಲ್ಲಾ ಗೌಡನ ಎದುರಿಗೇ ವಸೂಲು ಮಾಡಿಕೊಂಡನು. ಇದೆಲ್ಲ ಆಗುವ ವೇಳೆಗೆ ಹೊತ್ತು ಇಳಿಯುತ್ತ ಬಂದಿತ್ತು. ಗೌಡನ ತಾಯಿ ಅವನಿಗೆ 'ಹಬ್ಬದ ದಿನ, ಸಂಜೆಯಲ್ಲಿ ಮಲಗಬಾರದು' ಎಂದಳು. ಗೌಡನಿಗೆ ಸ್ವಲ್ಪ ವಿಶ್ರಾಂತಿ ಬೇಕು, ಆದರೆ ದಾರಿಯಿಲ್ಲ. ಎದ್ದು ಅವನು

ಚಾವಡಿಯ ಕಡೆ ಹೊರಟನು. ಚಿರತೆಯ ಜೊತೆಗೆ ಮೆರವಣಿಗೆ ಹೋಗದೆ ಇದ್ದ ಹಿರಿಯರಾದ ಊರಜನ ಕೆಲವರು ಬಂದು ಚಾವಡಿಯಲ್ಲಿ ಅವನ ಜೊತೆಗೆ ಕುಳಿತರು. ಈ ಮಾತು ಆ ಮಾತು ಆಡುತ್ತ ಸಂಜೆ ಆಯಿತು. ಊರಿಗೆ ದನ ಬಂದವು. ದನಕಾಯುವ ಹುಡುಗರ ಆನಂದದ ಕೂಗಾಟ ದೂರದಿಂದಲೇ ಕೇಳಬಂದಿತು. 'ದೇವರ ಕೃಪೆಯಿಂದ ಊರ ದನ ಉಗಾದಿ ದಿವಸ ಚಿರತೆಗೆ ತುತ್ತಾಗಲಿಲ್ಲ. ನಮ್ಮ ಗೌಡನ ಪುಣ್ಯ' ಎಂದು ಹಿರಿಯರೆಲ್ಲ ಹೇಳಿದರು. ಇದು ಪ್ರೀತಿಯ ಮಾತೆಂದು ಗೌಡನು ಬಲ್ಲನು. ಆದರೂ ಅವನಿಗೆ ಇದನ್ನು ಕೇಳಿ ಸಂತೋಷ. ಅವನೂ ಜೊತೆಗೆ ಕೆಲವರೂ ಕೆರೆಯ ಕಡೆ ಹೋಗಿ ಕೈಕಾಲು ತೊಳೆದುಕೊಂಡು ದೇವಾಲಯದ ಬಳಿಗೆ ಬಂದರು.

ಪೂಜೆ ಸ್ವಲ್ಪ ಹೊತ್ತೇ ಆಯಿತು. ಊರ ಯುವಕರೆಲ್ಲ ಚಿರತೆಯ ಹಿಂದೆ ಹೋಗಿದ್ದದ್ದರಿಂದ ಅವರು ಬರಲೆಂದು ಕಾಯುವುದರಲ್ಲೇ ಕಾಲ ಕಳೆಯಿತು. ಗೌಡನ ಮನೆಯ ಉತ್ಸವವಾದ್ದರಿಂದ ಯಾರನ್ನೂ ಬಿಟ್ಟು ಅದನ್ನು ಮುಗಿಸುವಂತಿಲ್ಲ. ಹಾಗೆ ಯಾರನ್ನಾದರೂ ಬಿಟ್ಟರೆ 'ನಮ್ಮ ಗೌಡ ನಡೆಸುವ ಉತ್ಸವಕ್ಕೆ ಬರೋದು ಬೇಡ ಅನ್ನೋ ಪರದೇಶಿಯೆ ನಾನು' ಎಂದು ರಾದ್ಧಾಂತವಾಗುವುದು. ಒಂದಲ್ಲ ಒಂದು ಕಾರಣದಿಂದ, ಪೂಜೆ ಮಂಗಳಾರತಿ ಮುಗಿದು ಚರುಪು ಹಂಚಿ ಎಲ್ಲಾ ಮನೆಗಳಿಗೆ ಹೊರಡುವ ವೇಳೆಗೆ ಹೊತ್ತೇ ಆಯಿತು. ಎಲ್ಲರೂ ಬೇಗನೆ ಊಟ ಮುಗಿಸಿಕೊಂಡು ಪಂಚಾಂಗ ಶ್ರವಣಕ್ಕೆ ಚಾವಡಿಗೆ ಬರಬೇಕೆಂದು ಮನೆಗಳಿಗೆ ಹೊರಟರು.

ಪಂಚಾಂಗ ಶ್ರವಣ ಅದಷ್ಟು ಹೊತ್ತು. ಸಂಕ್ರಾಂತಿ ಪುರುಷನ ವರ್ಣನೆ, ಮಳೆ ಬೆಳೆ ಹೇಗೆ ಎಂದು ವಿಚಾರ, ಒಬ್ಬೊಬ್ಬ ರೈತನೂ ತನ್ನ ಕಂದಾಯವನ್ನು ಕೇಳುವುದು, ಇಷ್ಟು ಆಗುವ ಹೊತ್ತಿಗೆ ಮಕ್ಕಳೆಲ್ಲ ಚಾವಡಿಯಲ್ಲಿ ಇದ್ದಲ್ಲಿಯೇ ಮಲಗಿ ನಿದ್ರಿಸುತ್ತಿದ್ದರು. ವಯಸ್ಸಾದವರು ಆಕಳಿಸುತ್ತಿದ್ದರು. ಗೌಡನು ಇನ್ನು ಹೋಗಿ ಮಲಗಬೇಕು ಎಂದು ಎಲ್ಲರೊಡನೆ ಎದ್ದು ಮನೆಗೆ ಹೊರಟನು.

ಪುರೋಹಿತನು, ತನಗೆ ಬಂದಿದ್ದ ದವಸ ಧಾನ್ಯವನ್ನು ತೆಗೆದುಕೊಂಡು ಮನೆಗೆ ಹೋಗಿ ಎಂದು ಮಕ್ಕಳಿಗೆ ಹೇಳಿ, ಗೌಡನ ಹಿಂದೆಯೇ ಬಂದನು.

ಗೌಡನು 'ಏನು ಭಟ್ಟರೇ, ಏನಾದರೂ ಹೇಳುವುದಿತ್ತಾ' ಎಂದನು.

ಭಟ್ಟನು 'ಹೌದು, ಉಗ್ರಪ್ಪ, ಮಧ್ಯಾಹ್ನ ಹೇಳೋಣ ಎಂತ ಬಂದೆ, ನಿನಗೆ ಸಾಕಾಗಿತ್ತು. ನಾಳೆ ನಾಡಿದ್ದು ಹೇಳೋಣ ಅಂದರೆ ನಮ್ಮ ಮನೆಯವಳು ಹೇಳ್ತಾಳೆ, ಹಬ್ಬದ ದಿವಸವೇ ಕೇಳಿ, ಬೆಲ್ಲ ದಾನ ಮಾಡಿದ ದಿನವೇ ಬ್ರಾಹ್ಮಣ್ಯ ದಾನಮಾಡಲಿ ಅಂತ. ಅದೂ ಸರಿ ಅಂತ ಈ ಹೊತ್ತೇ ಕೇಳೋದಕ್ಕೆ ಬಂದಿದೇನೆ' ಎಂದನು.

ಗೌಡನು 'ಆಗಲೇಳಿ, ಇದಕ್ಕೇನು? ಎಷ್ಟು ವರ್ಷ ಮಕ್ಕಳಿಗೆ?' ಎಂದನು.

ಪುರೋಹಿತನು 'ಆಯಿತಪ್ಪ ಹತ್ತು ವರ್ಷ. ಹೋದ ವರ್ಷವೇ ಮೂರೆಳೆ ಹಾಕಬೇಕಾಗಿತ್ತು. ಬೆಳೆ ಚೆನ್ನಾಗಿರಲಿಲ್ಲ. ನಿನ್ನ ಹ್ಯಾಗೆ ಕೇಳೋದು ಅಂತ ಸುಮ್ಮನಾದೆ. ಈ ವರ್ಷ ಮಾಡದೇ ಇದ್ದರೆ ತುಂಬ ತಪ್ಪಾಗ್ತದೆ. ಹುಡುಗ ಬೆಳೆದುಬಿಟ್ಟ. ಬ್ರಹ್ಮೋಪದೇಶ ಇಲ್ಲದೆ ಕೆಟ್ಟಾನು ಅಂತ ಭಯ. ಏನು ವೇದ ಹೇಳದೆ ಇದ್ದರೂನು ಬ್ರಾಹ್ಮಣ ಎಂದಮೇಲೆ ಒಂದು ಗಾಯತ್ರಿಯಾದರೂ ದಿನಾ ಹೇಳದೆ ಇದ್ದರೆ ಏನು ಸಾರ್ಥಕ?' ಎಂದನು.

ಗೌಡನು 'ಅದುಂಟು ಭಟ್ಟರೆ. ಹುಡುಗ ಕೆಡೋದು ಹಂಗಿರಲಿ, ಬ್ರಾಹ್ಮಣರ ಹೈದ ದಾರ ಇಲ್ಲದೆ ಇರೋದು ಊರಿಗೆ ಒಳ್ಳೇದಲ್ಲ. ಮಾಡಿ ಬಿಡಿ. ನಾಲ್ಕು ಜನ ಸೇರಿ ಹೆಂಗಾದರೂ ನಡೆಸ್ತಾರೆ' ಎಂದನು. ಈ ಮಾತನ್ನೆಲ್ಲ ಆಡುತ್ತ ಇವರ ಮನೆಗೆ ಬಂದು ಭಟ್ಟನು 'ಹೊತ್ತಾಯಿತು ಬರ್ತೇನೆ' ಎಂದು ತನ್ನ ಮನೆಗೆ ಹೊರಟನು.

ಗೌಡ ತೊಟ್ಟಿಯ ಪಕ್ಕದ ಅಂಗಳದಲ್ಲಿ ಮಲಗಿದನು. ಹೆಂಡತಿ ಎಳೆಯ ಮಕ್ಕಳೊಂದಿಗೆ ಅಂಗಳದ ಒಂದು ಕಡೆಗೆ ಮಲಗಿದಳು. ಗೌಡನ ತಾಯಿ ಆ ಮೊದಲೇ ಪಡಸಾಲೆಯಲ್ಲಿ ಹಾಸಿಗೆ ಹಾಕಿದ್ದಳು. ಮಗ ಬಂದು ಅಂಗಳದಲ್ಲಿ ಮಲಗಿದೊಡನೆ ಬಂದು ಹತ್ತಿರ ಕುಳಿತಳು. 'ಏನಪ್ಪ, ವರ್ಷ ಬಂತು. ಈ ಅಮಾವಾಸ್ಯೆ ಮುಗೀಲಿ ಕೇಳೋಣ ಅಂತ ಇದ್ದೆ. ನಾ ಕಣ್ಮುಚ್ಚೋ ಮೊದಲು ನನ್ನಾಸೆ ನೀನು ಮಾಡಿಕೊಡಬೇಕು' ಎಂದಳು.

ಗೌಡನು 'ಆಗಲಿ, ನಾಳೆ ಮಾತಾಡೋಣಂತೆ, ಅಮ್ಮ' ಎಂದನು. ತಾಯಿ, 'ನಾಳೆ ಯಾರೋ, ನಾಯಾರೋ. ಹಬ್ಬದ ದಿನ ಈ ಹೊತ್ತೇ

ಆಗಲಿ ಅನ್ನು. ಹೈದ ಎದವಿದಾನೆ. ಹುಡುಗಿ ಚೆಂದಾಗದೆ. ಕುದುರೆ ಮರೀ ಹಂಗೆ ನಡೀತದೆ. ನಿನ್ನ ಹೆಂಡತಿ ಅವಳ ಅಣ್ಣನ ಮಗಳನ್ನ ತರ ಬೇಕು ಅಂತಾಳೆ ಅದೋ ಕಡ್ಡೀ ಇದ್ದ ಹಂಗದೆ. ಈಗೇನಾದರೂ ನನ್ನ ಮಾತು ಅಂತ ನೀ ನಡಿಸಿದರೆ ನಡೀತು. ತಪ್ಪಿದರೆ ನಾ ಹೋದಮೇಲೆ ಇದಾಗೋಲ್ಲ ಹೋಗೋಲ್ಲ' ಎಂದಳು. ಗೌಡನ ಹೆಂಡತಿ ಅಂಗಳದ ಕೊನೆಯಲ್ಲಿ ಮಲಗಿದ್ದವಳು 'ಹಬ್ಬದ ದಿನ ಹೋಗೋ ಮಾತು ಬರೋ ಮಾತು ಆಡುತ್ತ ಯಾಕ ಅಮಂಗಳ ನುಡೀತಿ. ನಿನ್ನ ಮಗ ಎಂದಿದ್ದರೂ ನಿನ್ನ ಮಾತು ನಡೆಸಿದಾನ ಹೊರತು ನನ್ನ ಮಾತು ನಡೆಸಿದ್ದು ಎಂದು? ಅಮ್ಮ ಮಗ, ಮಗ ಅಮ್ಮ. ನನ್ನ ಅಣ್ಣನ ಮಗಳು ಕಡ್ಡಿ ಆಗಲಿ. ನಿನ್ನ ಮೊಮ್ಮಗಳು ಚೆಲುವಿ ಇರಲಿ. ನನ್ನ ಮಗಗೆ ಒಳ್ಳೇ ಹೆಣ್ಣು ಬರಲಿ ಅಂತ ನನಗಿಲ್ಲೇನು? ನಿನ್ನ ಚೆಲುವು ಬೊಂಬೀನೆ ತಂದು ಮಾಡು, ಯಾರು ಬೇಡಾ ಅಂದ್ರು. ಅಣ್ಣ ಕೇಳ್ವಾಗ ನಿನ್ನ ಹಠಕ್ಕಾಗಿ ಹಿಂಗಾಯಿತು ಅಂದರಾಯಿತು, ಕಟ್ಟಿಕೋ ಕೀರ್ತೀನ' ಎಂದಳು.

ಮುದುಕಿ 'ಏನಪ್ಪ ನಿನ್ನ ಹೆಂಡರೂ ಒಪ್ಪಿದಳು, ನೀನೂ ಊ ಅಂತೀಯೋ' ಎಂದಳು.

ಗೌಡನು 'ಆಗಲೇಳಮ್ಮ, ನಿನ್ನ ಸೊಸಿ ನಿನಗೇನು ದೂರಾನಾ. ನಿನ್ನ ಅಣ್ಣನ ಮಗಳು ಅಂತ ನೀನು ಅವಳನ್ನು ತಂದುಕೊಂಡಿ; ತನ್ನ ಅಣ್ಣನ ಮಗಳನ್ನು ತಂದುಕೊಳ್ಳಬೇಕು ಅಂತ ಅವಳೂ ಅಂದಳು. ನೀ ಬೇಡ ಅಂದರೆ ಅವಳು ಬೇಕು ಅಂದಾಳ' ಎಂದನು. ಗೌಡನ ತಾಯಿ 'ನನಗೆ ಈವತ್ತು ಚೆನ್ನಾಗಿ ನಿದ್ದೆ ಬರ್ತದೆ' ಎಂದು ಹೇಳುತ್ತ ಎದ್ದು ಪಡಸಾಲೆಗೆ ಹೋಗಿ ಮಲಗಿದಳು.

ಅತ್ತೆ ಅತ್ತ ಹೋಗುತ್ತಲೆ ಗೌಡಿತಿ ಗಂಡನ ಬಳಿ ಬಂದು ಕುಳಿತಳು. ತನ್ನ ಮಡಲಲ್ಲಿ ಇಟ್ಟುಕೊಂಡಿದ್ದ ಎಲೆ ಅಡಕೆಯನ್ನು ಗೌಡನಿಗೆ ಕೊಟ್ಟಳು. ಗೌಡನು ಅದನ್ನು ಮೆಲ್ಲುತ್ತ 'ಬೇಕಾದ ಹುಡುಗೀನ ತಗೊಳ್ಳೋದು ತಗೊಳ್ತಾ ಅಣ್ಣನ ದೂರಿಗೆ ನಮ್ಮಮ್ಮನ ಒಡ್ಡಿದಿ. ನೀ ಒಳ್ಳೆ ಚದುರಿ' ಎಂದನು.

ಗೌಡಿತಿ 'ನಾ ಬೇಡ ಅಂದ್ರೆ ನೀ ತಂಗಿ ಮಗಳ ಬಿಟ್ಟೇಯ? ಎಲ್ಲಾ ದೂರು ಅಮ್ಮಗೆ ಬೇಡ ಅಂದ್ರೆ ನೀ ಅರ್ಧ ತಕೊ' ಎಂದಳು. ಗೌಡನು 'ನಿನ್ನ ಪಾಲೂ ನನಗೇ ಇರಲೋ?' ಎಂದು ಆಟಕ್ಕೆಂದು ಅವಳ ಕೆನ್ನೆಯನ್ನು ತಟ್ಟಿದನು. ತಂಬುಲದಿಂದ ಉಬ್ಬಿದ್ದ ಆ ಕೆನ್ನೆಯ ಮೇಲೆ ಆ ಏಟು ಬಹು ಮುದ್ದಾಗಿ ಬಿದ್ದಿತು. ಇವರು ಹೀಗಿರಲಾಗಿ ಉಗಾದಿಯ ರಾತ್ರಿ ತಂಪಾಗಿ ಬೆಳೆಯಿತು.

1045–58. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಸಿ. ವಾಸುದೇವರಾಯರವರು ಮುದ್ರಿಸಿರುವರು.

# ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ಸುಬ್ಬಣ್ಣ (ಕತೆ)
ವಿಮರ್ಶೆ ೧, ೨, ೩, ೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೪, ೫, ೬
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೧, ೨, ೩, ೪, ೫ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವ ನಾಯಕ (ಕಾದಂಬರಿ)
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)
ಚಿಂತನ (ವಿಚಾರ)
ಮಾಸತಿ (ದೃಶ್ಯ)
ಅನಾರ್ಕಲಿ ,,
ಚಿಕವೀರ ರಾಜೇಂದ್ರ
ಕನ್ನಡ ಲೆಂಕ (ಭಾಷಣ)
ಆರು ಸಣ್ಣ ಕತೆ
ಹ್ಯಾಮ್‌ಲೆಟ್ } ಭಾಷಾಂತರಗಳು
ಚಂಡಮಾರುತ } ಭಾಷಾಂತರಗಳು

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು
ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ,
ಕನ್ನಡ ಬುಕ್ ಡಿಪೋ, ರಾಯಚೂರು